# ಕನ್ನಡ ವಾರ್ಷಿಕ - ೧೯೯೪



ಸಂಪಾದಕರು

ಡಾ. ರಹಮತ್ ತರೀಕೆರೆ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ - ಹಂಪಿ

ವಿದ್ಯಾರಣ್ಯ - ೫೮೩ ೨೭೬

KANNADA VARSHIKA 94 : Compiled and Edited by Dr.Rahamath Tarikere, Reader, Dept. of Kannada Language and Literature, Kannada University; Published by Dr.Karigowda Beechanahalli, Director, Prasaranga, Kannada University - Hampi, Vidyaranya, Kamalapura - 583 221, Karnataka.

Pages: xvi · 350. First Impression 1995. Rs. 90.



ಪ್ರಕಾಶಕರು
ಡಾ. ಕರೀಗೌಡ ಬೀಚನಹಳ್ಳಿ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧

ಬೆಲೆ: ೯೦-೦೦

ಮುದ್ರಕರು
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
೮/೨ ಮಾರೇನಹಳ್ಳಿ, ಮೊದಲ ಅಡ್ಡರಸ್ತೆ
೨೩ನೇ ಮುಖ್ಯರಸ್ತೆ, ಬೆಂಗಳೂರು - ೫೬೦ ೦೭೮
ಫೋನ್ : ೬೬೪೨೧೦೨

# ನಿವೇದನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ- ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ.

ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ ಎಂದರೂ ತಪ್ಪಲ್ಲ. ಈ ದೃಷ್ಟಿಯಿಂದ ಕೆಲವು ಮಹತ್ವದ ಪ್ರಕಟಣೆಗಳು ಹೊರಬರಲಿವೆ.

'ಕನ್ನಡ ವಾರ್ಷಿಕ' ಆಯಾಯಾ ವರ್ಷದ ಕರ್ನಾಟಕದ ಸಂಸ್ಕೃತಿಯ ಸಾಧನೆಗಳನ್ನು ಸೂಕ್ಷ್ಮವಾಗಿ ಗುರುತಿಸುವ ಗುರಿಯನ್ನು ಹೊಂದಿದೆ. ಪ್ರತಿವರ್ಷ ಪ್ರಕಟವಾಗುವ 'ಕನ್ನಡ ವಾರ್ಷಿಕ' ಕೇವಲ ಸಾಧನೆಗಳ ಅಭಿವ್ಯಕ್ತಿಗಳ ಪಟ್ಟಿ ಮಾತ್ರವಾಗದೆ, ಆಯಾಯಾ ವರ್ಷದ ಸಾಧನೆಗಳ ಹಿಂದಿರುವ ಸಾಂಸ್ಕೃತಿಕ ನೆಲೆಗಳನ್ನೂ ಸಾಹಿತ್ಯಕ ಅನನ್ಯತೆಯನ್ನೂ ಅರಿಯುವ ಪ್ರಯತ್ನವಾಗಿದೆ.

ಪ್ರಸ್ತುತ 'ಕನ್ನಡ ವಾರ್ಷಿಕ ೧೯೯೪' ಕೃತಿಯನ್ನು ನಮ್ಮ ವಿಶ್ವವಿದ್ಯಾಲಯದ ಕನ್ನಡಭಾಷೆ ಮತ್ತು ಸಾಹಿತ್ಯ ವಿಭಾಗದ ರೀಡರ್ ಡಾ. ರಹಮತ್ ತರೀಕೆರೆ ಅವರು ಸಂಪಾದಿಸಿ ಕೊಟ್ಟಿದ್ದಾರೆ. ಕನ್ನಡ ವಾರ್ಷಿಕ ಯೋಜನೆಯ ಹಿಂದಿರುವ ಆಶಯವನ್ನು ಅವರು ಸಮರ್ಥವಾಗಿ ಗ್ರಹಿಸಿ ಈ ಕೃತಿಯನ್ನು ಸಿದ್ಧಪಡಿಸಿದ್ದಾರೆ. ಕರ್ನಾಟಕದ ಒಂದು ವರ್ಷದ ಸಾಹಿತ್ಯಕ ಸಾಧನೆ ಮತ್ತು ಸಾಂಸ್ಕೃತಿಕ ಅಭಿವ್ಯಕ್ತಿಗಳನ್ನು ಗುರುತಿಸಿ ಅವುಗಳನ್ನು ಕುರಿತು ವಿವಿಧ ತಜ್ಞರಿಂದ ಬರೆಯಿಸಿ, ಸಂಯೋಜಿಸಿ ಕೊಡುವ ಕೆಲಸ ಕಡಿಮೆಯದ್ದಲ್ಲ; ಡಾ. ರಹಮತ್ ತರೀಕೆರೆ ಈ ಕಷ್ಟವನ್ನು ನಿಭಾಯಿಸಿ, ತಮ್ಮ ಶ್ರದ್ಧೆ ಹಾಗೂ ಪರಿಶ್ರಮದಿಂದ 'ಕನ್ನಡ ವಾರ್ಷಿಕ ೧೯೯೪' ಕೃತಿಯನ್ನು ಅಚ್ಚುಕಟ್ಟಾಗಿ ರೂಪಿಸಿದ್ದಾರೆ. ಅವರಿಗೆ ಕನ್ನಡದ ಪ್ರಖ್ಯಾತ ಲೇಖಕರು, ವಿದ್ವಾಂಸರು ಲೇಖನ ನೀಡಿ ಈ ಕೃತಿಯ ಯಶಸ್ಸಿಗೆ ಕಾರಣರಾಗಿದ್ದಾರೆ. ಅವರೆಲ್ಲರಿಗೂ ನನ್ನ ಕೃತಜ್ಞತೆಗಳು.

**ಚಂದ್ರಶೇಖರ ಕಂಬಾರ**<br>
**ಕುಲಪತಿಯವರು**

## ಸಂಪಾದಕರ ಮಾತು

ಕನ್ನಡ ವಿಶ್ವವಿದ್ಯಾಲಯವು ತಾನು ಆರಂಭವಾದಂದಿನಿಂದಲೂ 'ಕನ್ನಡ ವಾರ್ಷಿಕ'ಗಳನ್ನು ಪ್ರಕಟಿಸುತ್ತಾ ಬಂದಿದೆ. ವಿಶ್ವವಿದ್ಯಾಲಯ ಹಮ್ಮಿಕೊಂಡಿರುವ ನಿರಂತರ ಯೋಜನೆಯಿದು. ಪ್ರಸ್ತುತ ಸಂಪುಟವು 'ಕನ್ನಡ ವಾರ್ಷಿಕ'ಗಳ ಮಾಲೆಯಲ್ಲಿ ನಾಲ್ಕನೆಯದಾಗಿದೆ.

ಒಂದು ವರ್ಷದ ಅವಧಿಯೊಳಗೆ ಕನ್ನಡಕ್ಕೆ, ಕರ್ನಾಟಕಕ್ಕೆ ಸಂಬಂಧಿಸಿದಂತೆ ಘಟಿಸಿದ ಮುಖ್ಯ ಆಗುಹೋಗುಗಳನ್ನು ಸಾಂಸ್ಕೃತಿಕ ಆಯಾಮದಲ್ಲಿ ವಿಶ್ಲೇಷಿಸುವುದು 'ವಾರ್ಷಿಕ'ಗಳ ಉದ್ದೇಶವಾಗಿದೆ. ಈ ವಿಶ್ಲೇಷಣೆಯ ಪರಿಯು, ಆಯಾ ವರ್ಷದ ತುದಿಗೆ ಪತ್ರಿಕೆಗಳು ಘಟನೆಗಳನ್ನು ದಾಖಲಿಸುವ ಪರಿಗಿಂತ ಭಿನ್ನವಾದುದು. ನಿರ್ದಿಷ್ಟ ಘಟನೆಯು ಯಾಕಾಗಿ ಸಂಭವಿಸಿತು? ನಾಡಿನ ಬದುಕಿನ ಮೇಲೆ ಇದರಿಂದ ಯಾವ ಪರಿಣಾಮಗಳುಂಟಾದವು? ಈ ಪರಿಣಾಮಗಳ ಮುಂದಿನ ದಿಕ್ಕು ಯಾವುದು? - ಇವೇ ಮುಂತಾದ ಪ್ರಶ್ನೆಗಳನ್ನು ಹಾಕಿಕೊಂಡು, ಕಾಳಜಿಯಿಂದ ಚಿಂತನೆ ಮಾಡುವುದು ' ಕನ್ನಡ ವಾರ್ಷಿಕ'ಗಳ ಒಳಹಂಬಲವಾಗಿದೆ.

ಒಂದು ನಾಡಿನ ಆಗುಹೋಗುಗಳು ಎಂದರೆ ಯಾವುವು? ಅವು ಜನರ ಬದುಕನ್ನು ಪರಿವರ್ತನೆಗೆ ಈಡು ಮಾಡುತ್ತಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ಸಂಭವಗಳು ಮಾತ್ರವಲ್ಲ; ಇಂಥ ಸಂಭವಗಳ ಫಲಶೃತಿಯಾದ ಸಾಂಸ್ಕೃತಿಕ ಸನ್ನಿವೇಶದೊಳಗೆ ನಿಂತು, ತಮ್ಮ ಅನುಭವಗಳಿಗೆ ರೂಪಕೊಡುವ ಕಲಾವಿದರ ಸೃಜನಶೀಲ ಪ್ರಯತ್ನಗಳೂ ಹೌದು. ಪ್ರಶ್ನೆಯೆಂದರೆ ಮೇಲಿನವುಗಳಲ್ಲಿ ಯಾವುದು ಮುಖ್ಯ, ಯಾವುದು ಮೊದಲು ಎಂಬುದಲ್ಲ; ಯಾವುದರ ಮೂಲಕ ಯಾವುದನ್ನು ನೋಡಿದರೆ ಬದಲಾಗುತ್ತಿರುವ ನಾಡಿನ ಬಾಳುವೆಯ ನಿಜದ ನೋಟಸಿಗುತ್ತದೆ ಎಂಬುದು; ರಾಜಕೀಯವಾದ ಒಂದು ಘಟನೆ, ಸಾಹಿತ್ಯ ಕೃತಿಯೊಂದರ ಸುತ್ತ ಏಳುವ ವಿವಾದ, ಮತದಕಾರಣದಿಂದಲೊ ಭಾಷೆಯ ಕಾರಣದಿಂದಲೊ ಭುಗಿಲೇಳುವ ಗಲಭೆ, ಪರಿಸರದ ಕಳಕಳಿಯಿಂದ ಉದ್ಭವಿಸುವ ಒಂದು ಚಳುವಳಿ, ಜನರ ದೈನಿಕ ಸಮಸ್ಯೆಗಳ ನೆಪದಿಂದ ನಡೆದ ಆಂದೋಲನ - ಹೀಗೆ ವಿಭಿನ್ನವಾದ ಸಂಗತಿಗಳನ್ನು ಒಂದೇ ಬೊಗಸೆಯಲ್ಲಿಟ್ಟು ನೋಡುವ ಈ ಪ್ರಯತ್ನ ಭಿನ್ನ ಅನುಭವವನ್ನು ಕೊಟ್ಟೀತು. ಎಂತಲೇ ಅನೇಕ ಕ್ಷೇತ್ರಗಳ ಸಂಗತಿಗಳನ್ನು ಒಂದರ ಪಕ್ಕ ಒಂದರಂತೆ ಈ ಕೃತಿಯಲ್ಲಿ ಸಂಯೋಜಿಸಿದೆ. ಈ ಸಂಯೋಜನೆಯು ಹೊಸತೊಂದು ಕಾಣ್ಕೆಯನ್ನು ಪಡೆವತ್ತ ನಮ್ಮನ್ನು ಕರೆದೊಯ್ಯಬಲ್ಲದು. ಹೀಗೆ ಪಡೆಯಬಹುದಾದ ಕಾಣ್ಕೆಗೂ ನಾಡಿನ ಸಾಂಸ್ಕೃತಿಕ ಬದುಕಿನೊಳಗೆ ಅನೇಕ ನೆಲೆಗಳಲ್ಲಿ ಪ್ರವೇಶಿಸಲು ಹವಣಿಸುತ್ತಿರುವ ಕನ್ನಡ ವಿಶ್ವವಿದ್ಯಾಲಯದ ಆಶಯಕ್ಕೂ ಒಳಸಂಬಂಧವಿದೆ.

ಒಬ್ಬ ವ್ಯಕ್ತಿಗೆ ಬಾಳಿರುವಂತೆ ಒಂದು ನಾಡಿಗೂ ಬಾಳಿದೆಯಷ್ಟೆ. ಕಾಲದ

ನಿರಂತರ ಹರಿವಿನಿಂದ ಒಂದು ವರ್ಷವೆಂಬ ಅವಧಿಯನ್ನು ಕತ್ತರಿಸಿ ಅದರ ಇರುಕಿನಲ್ಲಿ ನಾಡಿನ ಬಾಳನ್ನು ಇಟ್ಟು ಪರಿಶೀಲಿಸುವುದು, ಬೆಲೆಗಟ್ಟುವುದು ನಿಜಕ್ಕೂ ಇಕ್ಕಟ್ಟಿನ ಸಂಗತಿಯೇ ನಿಜ. ಯಾಕೆಂದರೆ ಇಟ್ಟು ತೆಗೆದ ಹೆಜ್ಜೆಯ ಗುರುತು, ಇಡುತ್ತಿರುವ ಹೆಜ್ಜೆ ಹಾಗೂ ಇಡಬಹುದಾದ ಗುರುತುದೋರಿರದ ಹೆಜ್ಜೆಯ ಸುಳಿವು - ಇವು ಮೇಲುನೋಟಕ್ಕೆ ಬಿಡಿಬಿಡಿ ಸಂಗತಿಗಳಾದರೂ ಒಂದೇ ನಡಿಗೆಯ ಭಾಗಗಳು. ಆದರೆ ಇಟ್ಟ ಹೆಜ್ಜೆಯ ಆಧಾರದಲ್ಲೇ ನಡೆದುಬಂದ ಹಾಗೂ ನಡೆದು ಸಾಗಬಹುದಾದ ಹಾದಿಗಳ ಹೊಳಹನ್ನು ಪಡೆಯುವುದು ಸಾಧ್ಯವಿದೆ. ಹೀಗಾಗಿ ಕರ್ನಾಟಕದ ಕಥೆಯನ್ನು ಜನವರಿ ೧ ರಿಂದ ಡಿಸೆಂಬರ್ ೩೧ರ ವರೆಗೆ ಎಂದು ಆಯ್ದುಕೊಂಡಿದ್ದರೂ ಇದು ಕಳೆದ ಅನೇಕ ಹಿಂದಣ ವರ್ಷಗಳ ಘಟನೆಗಳ ಒತ್ತಾಸೆಯಿಂದ ಮೂಡಿರುವ ಹಾಗೂ ಮುಂದಣ ವರ್ಷಗಳಲ್ಲಿ ಫಲಿತಗೊಳ್ಳುವ ಕಥನವಾಗಿದೆ. ಮತ್ತೊಂದೆಂದರೆ, ಒಂದು ನಾಡಿನ ಜನಜೀವನವು ಪ್ರಾದೇಶಿಕವಾದ ಗಡಿಗಳ ಒಳಗೆ ಜರುಗುವ ಚಟುವಟಿಕೆಗಳಿಂದಷ್ಟೆ ತನ್ನ ರೂಪ ಬದಲಿಸಿಕೊಳ್ಳುವುದಿಲ್ಲ. ಒಟ್ಟಾರೆ ದೇಶದಲ್ಲಿ ಮತ್ತು ವಿಶ್ವದಲ್ಲಿ ಜರುಗುವ ಸಂಗತಿಗಳ ಪ್ರಭಾವಕ್ಕೊಳಗಾಗುತ್ತದೆ. ಈ ಎರಡು ಅರಿವು ಎಚ್ಚರಗಳಲ್ಲಿ ೧೯೯೩ರ ಕರ್ನಾಟಕವನ್ನು ವಿಶ್ಲೇಷಣೆಗೊಳಪಡಿಸಲು ಇಲ್ಲಿನ ಬರೆಹಗಳು ಪ್ರಯತ್ನಿಸಿವೆ. 'ವಿದ್ಯಮಾನ' ಭಾಗದ ಕೆಲವು ಬರೆಹಗಳನ್ನು ಈ ದೃಷ್ಟಿಯಿಂದ ನೋಡಬೇಕು. ಅವು ಎತ್ತುತ್ತಿರುವ ಪ್ರಶ್ನೆಗಳು ಕೂಡ ತುಂಬ ಮುಖ್ಯವಾಗಿವೆ.

೧೯೯೩ರಲ್ಲಿ ಕರ್ನಾಟಕವು ಅನೇಕ ದುಃಖದ ಮತ್ತು ಎಷ್ಟೋ ಸಂತೋಷದ ಗಳಿಗೆಗಳನ್ನು ಕಂಡಿತು; ಬದಲಾವಣೆಯ ಹೊತ್ತಿನ ಬಿರುಸು, ಸಂಕಟ, ಹುರುಪುಗಳನ್ನು ಕಂಡಿತು; ಧರ್ಮ - ಭಾಷೆಗಳ ಹೆಸರಿನಲ್ಲಿ ಅಮಾಯಕರ ರಕ್ತ ಹರಿದುಹೋಗಿದ್ದು ಒಂದು ಮುಖವಾದರೆ, ಬಹುರಾಷ್ಟ್ರಗಳಿಂದ ಹೊಸವೇಷಗಳಲ್ಲಿ ಅವತರಿಸುತ್ತಿರುವ ವಸಾಹತುಶಾಹಿ ರೂಪಧಾರಿಗಳನ್ನು ಪ್ರತಿರೋಧಿಸಿದ್ದು ಇನ್ನೊಂದು ಮುಖ. ಭಾವನಾತ್ಮಕ ತಪ್ಪುಗ್ರಹಿಕೆಯಿಂದಲೊ ರಾಜಕಾರಣದ ಹುನ್ನಾರದಿಂದಲೊ ಭುಗಿಲೇಳುವ ಗಲಭೆಗಳಿಗೂ ನಾಡಿನ ಜನರ ಭವಿಷ್ಯದ ಕಾಳಜಿಗಳಿಂದ ತಲ್ಲಣಗೊಂಡು ಹುಟ್ಟುವ ಹೋರಾಟಗಳಿಗೂ ಇರುವ ತಾತ್ವಿಕ ವ್ಯತ್ಯಾಸವನ್ನು ಇಲ್ಲಿಯೇ ಬೇರೆಮಾಡಿ ನೋಡಬೇಕಾಗಿದೆ.

ಈ ಸಲ, ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಟ್ಟದ ಪ್ರಶಸ್ತಿಗಳನ್ನು ಆಯಾ ಕ್ಷೇತ್ರಗಳಲ್ಲಿ ದುಡಿದ ಸಾಧಕರು, ಪ್ರತಿಭಾವಂತರು ತಂದುಕೊಟ್ಟಿದ್ದಾರೆ. ಆದರೆ ಚಲನಚಿತ್ರ, ಸಂಗೀತ, ಸಾಹಿತ್ಯದಂಥ ಆಕರ್ಷಕ ಕ್ಷೇತ್ರಗಳಲ್ಲಿರುವವರಿಗೆ ಪ್ರಶಸ್ತಿ ಬಂದಾಗ ಅಂಥವರಿಗೆ ಸಿಗುವ ಜನ ಮನ್ನಣೆ - ಪ್ರಚಾರಗಳು, ಸಮಾಜಸೇವೆ, ಪರಿಸರ ಚಳುವಳಿ, ರಂಗಭೂಮಿಗಳಲ್ಲಿ ಪ್ರಶಸ್ತಿ ಪಡೆದವರಿಗೆ ಸಿಗುವ ಪ್ರಸಿದ್ಧಿಗೆ ಹೋಲಿಸಿದಾಗ ಸ್ವಲ್ಪ ಹೆಚ್ಚು ಅನಿಸುತ್ತದೆ. ಇದಕ್ಕೆ ಅಕ್ಷರಸ್ಥರ ಆಲೋಚನಾ ವಿಧಾನಕಾರಣವೋ ಮಾಧ್ಯಮಗಳ ಸುದ್ದಿಹರಡುವ ವಿಧಾನಕಾರಣವೋ ಹೇಳಲಾಗದು. ಕರ್ನಾಟಕಕ್ಕೆ ಕೀರ್ತಿ ತಂದವರಲ್ಲಿ 'ಗ್ಲಾಮರ್' ಇಲ್ಲದ ಕ್ಷೇತ್ರಗಳನ್ನಾಯ್ದುಕೊಂಡು ಮನುಕುಲಕ್ಕಾಗಿ

ಮೌನವಾಗಿ ದುಡಿದವರು ಇದ್ದಾರೆ ಎಂಬುದು ಈ ಸಲದ ಪ್ರಶಸ್ತಿಗಳ ಹೆಚ್ಚುಗಾರಿಕೆಯಾಗಿದೆ. ಇದೇ ಹೊತ್ತಲ್ಲಿ ಕರ್ನಾಟಕಕ್ಕೆ ಅನೇಕ ಬಗೆಯಲ್ಲಿ ದುಡಿದ ಮಹನೀಯರು ತೀರಿಹೋಗಿದ್ದಾರೆ. ಮುಖ್ಯವಾಗಿ ಈ ಶತಮಾನದ ಬಹುದೊಡ್ಡ ಸಾಂಸ್ಕೃತಿಕ ವ್ಯಕ್ತಿತ್ವವಾದ ಕುವೆಂಪು ಅವರು ದೇಹಬಿಟ್ಟರು. ಅವರ, ಅವರಂಥ ಅನೇಕರ ಭೌತಿಕ ದೇಹಗಳ ಇರುವಿಕೆ ಇಲ್ಲವಾಗಿದೆಯೇ ಹೊರತು ಅವರ ಚೈತನ್ಯಶೀಲ ವ್ಯಕ್ತಿತ್ವಗಳಲ್ಲ ಎಂಬುದು, ಮುಂದೆ ಬಾಳುವ ಜನಾಂಗಗಳ ಭರವಸೆಯಾಗಿದೆ.

'ಪ್ರತಿಭೆ' ಹಾಗೂ 'ನೆನಪು' ಭಾಗದ ವ್ಯಕ್ತಿತ್ವಗಳ ಬಗ್ಗೆ ಧೇನಿಸುವಾಗ ಇವು 'ಪ್ರಾತಿನಿಧಿಕ'ವಾದವು ಮಾತ್ರ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಯಾಕೆಂದರೆ ಪ್ರಶಸ್ತಿಗಳನ್ನು ಪಡೆಯದ ಅನಂತ ಮನಸ್ಸುಗಳು ಒಂದು ನಾಡಿನ ಸಂಸ್ಕೃತಿಯ ರೂಪಿಸುವಿಕೆಯಲ್ಲಿ ಕ್ರಿಯಾಶೀಲವಾಗಿರುತ್ತವೆ. ಇಂಥ 'ಹೆಸರಿಲ್ಲದ ಹೂಗಳು' ಮಾಡುವ ಕೆಲಸಗಳಾಗಲೀ ಇವುಗಳ ಸಾವಾಗಲಿ ಸುದ್ದಿಗಳಾಗುವುದಿಲ್ಲ. ಬಹುಶಃ ಇದು ಮಾಧ್ಯಮಗಳನ್ನೇ ನೆಚ್ಚಿ ತಿಳಿವಳಿಕೆಯನ್ನು ರೂಢಿಸಿಕೊಳ್ಳುವ ನಮ್ಮ ಪರಿಮಿತಿ ಇದ್ದೀತು. ಇರುವ ಸವಾಲೆಂದರೆ, ಇಂಥ ಪರಿಮಿತಿಗಳನ್ನು ದಾಟಿಕೊಂಡು, ಚರಿತ್ರೆಯನ್ನು ಹೊಸದಿಟ್ಟಿಯಲ್ಲಿ ಅರ್ಥೈಸಿಕೊಳ್ಳುವ ಸಾಧ್ಯತೆಗಳತ್ತ ಹರಡಿಕೊಳ್ಳುವುದು.

'ಕನ್ನಡ ವಾರ್ಷಿಕ'ದ ಈ ಸಂಪುಟವನ್ನು ಸಿದ್ಧಪಡಿಸುವಲ್ಲಿ ಕಾರಣಕರ್ತರಾದ ಮಹನೀಯರನ್ನು ನೆನೆಯಬೇಕಾಗಿದೆ. ಇದರ ಹೊಣೆಯನ್ನು ನನಗೆ ವಹಿಸಿದ ಮಾನ್ಯ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರಿಗೆ, ಇದರ ರೂಪುರೇಷೆಗಳನ್ನು ಚರ್ಚಿಸಿ ಸಲಹೆಗಳನ್ನು ನೀಡಿದ ಡಾ. ಎಚ್. ಎಸ್. ರಾಘವೇಂದ್ರರಾವ್, ಡಾ. ಕರೀಗೌಡ ಬೀಚನಹಳ್ಳಿ, ಡಾ. ಕೆ. ವಿ. ನಾರಾಯಣ ಹಾಗೂ ಪ್ರೊ. ಹಿ.ಚಿ. ಬೋರಲಿಂಗಯ್ಯ ಅವರಿಗೆ, ನನ್ನೊಡನೆ ಶ್ರಮಿಸಿದ ಡಾ. ಎಫ್. ಟಿ. ಹಳ್ಳಿಕೇರಿಯವರಿಗೆ; ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಲ್ಲಿನ ಲೇಖನಗಳನ್ನು ಬರೆದುಕೊಟ್ಟ ವಿದ್ವಾಂಸರಿಗೆ, ವಿಶ್ವವಿದ್ಯಾಲಯದ ನನ್ನೆಲ್ಲ ಸಹೋದ್ಯೋಗಿ ಮಿತ್ರರಿಗೆ, 'ಕನ್ನಡ ವಾರ್ಷಿಕ'ಕ್ಕೆ ಫೋಟೋಗಳನ್ನು ಹಾಗೂ ಚಿತ್ರಗಳನ್ನು ಒದಗಿಸಿದ ಎಲ್ಲರಿಗೆ ವಿಶೇಷವಾಗಿ ಎನ್. ಮರಿಶಾಮಾಚಾರ್, ಶ್ರೀ ರುಕ್ಮೋಜಿ, ಗಣೇಶಯಾಜಿ ಅವರಿಗೆ ಹಾಗೂ ಮುದ್ರಿಸಿದ ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್ ಅವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ರಹಮತ್ ತರೀಕೆರೆ<br>ಸಂಪಾದಕ

## ಪರಿವಿಡಿ

ಭಾಗ ೩ : ಅಭಿವ್ಯಕ್ತಿ

# ಕನ್ನಡ ವಿಶ್ವವಿದ್ಯಾಲಯ - ೧೯೯೪

*ಜೈನುಲ್ಲಾ ಬಳ್ಳಾರಿ*

ಕನ್ನಡ ವಿಶ್ವವಿದ್ಯಾಲಯಕ್ಕೆ ಈಗ ಮೂರುವರ್ಷಗಳು ತುಂಬಿದವು. ತನ್ನ ಮೂರು ವರ್ಷಗಳ ಆಯಸ್ಸಿನಲ್ಲಿ ಕನ್ನಡವಿಶ್ವವಿದ್ಯಾಲಯವು ತುಂಗಭದ್ರೆಯ ಪ್ರವಾಹಜಲದಲ್ಲಿ ಮುಳುಗೆದ್ದ ಘಾತದಿಂದ ಹಿಡಿದು, ಕಾಮಲಾಪುರದ ತನ್ನ ಹೊಸನೆಲೆಮನೆಗೆ ಪ್ರಸ್ಥಾನಗೈದ ಸಡಗರದ ತನಕ; ಜನರ ಪ್ರೀತಿ-ಮೆಚ್ಚುಗೆಗಳಿಂದ ಹಿಡಿದು ಕಟುಟೀಕೆಗಳ ತನಕ - ಏನೆಲ್ಲ ಅನುಭವಗಳನ್ನುಂಡು ಬೆಳೆದಿದೆ? ಹಾಗೆ ಕಂಡರೆ ಇದು ಇನ್ನೂ ಬೆಳವಣಿಗೆಯ ಹಲವು ಅವಸ್ಥೆಗಳನ್ನು ದಾಟುತ್ತಿರುವ ಸಂಸ್ಥೆಯಾಗಿದೆ. ನಾಡಿನ ಜನರ ಅನೇಕ ಪ್ರತಿಕ್ರಿಯೆಗಳನ್ನು, ತನ್ನೊಳಗಿನ ಆಲೋಚನೆಗಳೊಂದಿಗೆ ಬೆಸೆದು, ಹೊಸಹೊಸ ಕಾರ್ಯವಿಧಾನಗಳನ್ನು ಕಂಡುಕೊಳ್ಳುತ್ತ, ತನ್ನ ನಿಜಸ್ವರೂಪವನ್ನು ಖಚಿತಪಡಿಸಿಕೊಳ್ಳುತ್ತಿರುವ ಸಂಸ್ಥೆಯಾಗಿದೆ. ಈ ದಿಸೆಯಲ್ಲಿ ಕನ್ನಡ ವಿಶ್ವವಿದ್ಯಾಲಯ ಮಾಡುತ್ತಿರುವ ಕೆಲಸಗಳನ್ನು ಎರಡು ಬಗೆಯಲ್ಲಿ ಕಾಣಬಹುದು: ಮೊದಲನೆಯದಾಗಿ ಅದರ ಕಟ್ಟಡಗಳ, ಕ್ಯಾಂಪಸ್ಸಿನ ರಚನೆಯೇ ಮುಂತಾದ ಭೌತಿಕ ರೂಪದಲ್ಲಿ; ಎರಡನೆಯದಾಗಿ ಈ ಕಟ್ಟಡಗಳ ಒಳಗೆ ನೆಲೆಸಿ, 'ನಾಡಿನ ಭಾಷೆ-ಸಂಸ್ಕೃತಿಗಳಿಗಾಗಿ ಉಪಯುಕ್ತವಾದ ಏನನ್ನು ಮಾಡಬೇಕು, ಹೇಗೆ ಮಾಡಬೇಕು' ಎಂದು ಶೋಧಿಸುತ್ತಿರುವ ಅಧ್ಯಯನ ವಿಧಾನಗಳಲ್ಲಿ. ಈ ಎರಡನೆಯ ಬಗೆಯ ಪ್ರಯತ್ನಗಳು ಸೂಕ್ಷ್ಮಸ್ತರಗಳಲ್ಲಿ ಜರುಗುತ್ತಿರುತ್ತವೆ. ಇದನ್ನು ವಿಶ್ವವಿದ್ಯಾಲಯವು ಹಮ್ಮಿಕೊಳ್ಳುವ ಅನೇಕ-ಯೋಜನೆಗಳಲ್ಲಿ, ಈ ಸಂಬಂಧವಾಗಿ ನಡೆಸುವ ವಿಚಾರ ಮಂಥನ-ಚರ್ಚೆಗಳಲ್ಲಿ, ಈ ಕಾರಣಕ್ಕಾಗಿ ಕರೆಯಿಸುವ ವಿದ್ವಾಂಸರಲ್ಲಿ, ತಾನು ನಾಡೊಳಗೆ ಸುತ್ತಿಪಡೆಯುವ ಕ್ಷೇತ್ರಕಾರ್ಯದ ಅನುಭವದಲ್ಲಿ ಹಾಗೂ ಅಂತಿಮವಾಗಿ ಪ್ರಕಟಿಸುವ ಪತ್ರಿಕೆ - ಪುಸ್ತಕಗಳಲ್ಲಿ ಗುರುತಿಸಬೇಕಾಗುವುದು. ಸಾಂಸ್ಕೃತಿಕ ಉದ್ದೇಶಗಳಿಗೆಂದೇ ಹುಟ್ಟಿರುವ ಸಂಸ್ಥೆಯೊಂದರ ಅಂತಃಸತ್ವದ ಕೇಂದ್ರವು ರೂಪುಗೊಳ್ಳುವುದೇ ಹೀಗೆ. ಇದು ಒಮ್ಮೆಲೇ ರೂಪುಗೊಳ್ಳುವಂಥದಲ್ಲ. ಬದಲಿಗೆ ಹಲವು ಮನಸ್ಸುಗಳು ಸೇರಿ, ಹಲವು ಕನಸುಗಳು ಕೂಡಿ, ಶ್ರದ್ಧೆಯಿಂದ ಮಾಡುವ ನಿರಂತರ ಪ್ರಯತ್ನಗಳಲ್ಲಿ ಹುಟ್ಟುವ ಕಾಣ್ಕೆಯಾಗಿರುತ್ತದೆ. ಇದರ ಫಲಶೃತಿಗಳು ಕೆಲವೊಮ್ಮೆ ತಕ್ಷಣಕ್ಕೆ ಸಿಗದೆ ಮುಂದೆ ದಕ್ಕುವಂತಹವಾಗಿರಬಹುದು. ಇಂಥ ನಿರಂತರ ಕ್ರಿಯೆಯಲ್ಲಿ ನಡುವೆ ಹಾಯುವ ಒಂದು ವರ್ಷವೆಂಬ ಅವಧಿಯೊಳಗೆ ಜರುಗಿದ ಚಟುವಟಿಕೆಗಳನ್ನು ಸಂಕ್ಷಿಪ್ತವಾಗಿ ದಾಖಲಿಸುತ್ತ, ವಿಶ್ವವಿದ್ಯಾಲಯವು ಬೆಳೆಯುತ್ತಿರುವ ದಿಸೆಯನ್ನು ಸೂಚಿಸುವ ಕೆಲಸವನ್ನು ಇಲ್ಲಿ ಮಾಡಲಾಗಿದೆ.

## I: ಹೊಸಕಟ್ಟಡಗಳು

ಕನ್ನಡ ವಿಶ್ವವಿದ್ಯಾಲಯದ ಬದುಕಿನಲ್ಲಿ ೧೯೯೪ ತುಂಬ ಮುಖ್ಯವಾದ ವರ್ಷ; ಹಂಪಿಯ ತುಂಗಭದ್ರೆಯ ದಡದಲ್ಲಿ ಎರಡು ವರ್ಷಗಳನ್ನು ಕಳೆದನಂತರ, ತನ್ನ ಸ್ವಂತ ಹಕ್ಕಿಗೆ ತೆರಳುವ ಸಂಭ್ರಮದ ಸಂದರ್ಭ. ಹಂಪಿಯಿಂದ ಆರು ಕಿ.ಮೀ. ದೂರದಲ್ಲಿ, ಕಮಲಾಪುರದ ಬಳಿ, ಮೈಚೆಲ್ಲಿಕೊಂಡಿರುವ ವಿಸ್ತಾರವಾದ ಬಯಲಲ್ಲಿ, ಬಂಡೆ-ಬಾನು-ಹಸಿರು-ಕೆರೆಯನೀರುಗಳ ನಡುವೆ ಮೂಡಿನಿಂತ ಅಧ್ಯಯನಾಂಗದ ಕಟ್ಟಡಗಳ ಉದ್ಘಾಟನೆ ಆಗಸ್ಟ್ ೮ ರಂದು ನಡೆಯಿತು. 'ವಿದ್ಯಾರಣ್ಯ' ಕನ್ನಡ ವಿಶ್ವವಿದ್ಯಾಲಯದ ಕ್ಯಾಂಪಸ್ಸಿನ ಹೆಸರು. 'ಕಾಯಕದ ಮನೆ', 'ಕೂಡಲ ಸಂಗಮ', 'ತುಂಗಭದ್ರಾ' 'ತ್ರಿಪದಿ'- ಇವು ಕಟ್ಟಡಗಳ ಹೆಸರುಗಳು. ವಿಜಯನಗರ ಶೈಲಿಯಲ್ಲಿ ಕಟ್ಟಿರುವ ಕಲ್ಲಿನಕಂಬ-ಮಂಟಪ-ಭಾವಣಿಗಳಿಂದ ಕೂಡಿದ ಆಕರ್ಷಕ ವಿನ್ಯಾಸದ ಈ ಕಟ್ಟಡಗಳು, ಕುಲಪತಿಗಳ ಶ್ರದ್ಧೆಯಿಂದ, ಪ್ರತಿಭಾವಂತ ವಾಸ್ತುಶಿಲ್ಪಿಗಳಿಂದ, ಸಾವಿರಾರು ದುಡಿಮೆದಾರರ ಶ್ರಮದಿಂದ ಎದ್ದುನಿಂತಿವೆ. ಈ ಕಟ್ಟಡಗಳನ್ನು 'ಕವಿರಾಜಮಾರ್ಗ' 'ದೇಸಿಮಾರ್ಗ' 'ಗಿರಿಜಾಡು' ಎಂಬ ಹೆಸರಿನ ಹಾದಿಗಳು ಸೇರಿಸುತ್ತವೆ.



ಕನ್ನಡ ವಿಶ್ವವಿದ್ಯಾಲಯದ ಕುಲಾಧಿಪತಿಗಳಾಗಿದ್ದ ಮುಖ್ಯಮಂತ್ರಿ ಶ್ರೀ ವೀರಪ್ಪಮೊಯಿಲಿ ಅವರು, 'ತ್ರಿಪದಿ' ಹಾಗೂ 'ಕೂಡಲಸಂಗಮ'ಗಳನ್ನು ಸಮಾಜಕಲ್ಯಾಣ ಸಚಿವರಾದ ಶ್ರೀ ಕಾಗೋಡು ತಿಮ್ಮಪ್ಪನವರು 'ತುಂಗಭದ್ರಾ' ಹಾಗೂ 'ಗಿರಿಸೀಮೆ'ಗಳನ್ನು ಉದ್ಘಾಟಿಸಿದರು. 'ಗಿರಿಸೀಮೆ'ಯೆಂಬುದು, 'ವಿದ್ಯಾರಣ್ಯ' ಆವರಣದ ದಕ್ಷಿಣದ ತುದಿಗೆ, ಗುಡ್ಡಗಳ ಇಳಿಜಾರಿನ ಕೆಳಗೆ ನಿರ್ಮಾಣವಾಗಿರುವ ಬುಡಕಟ್ಟು ಜನರ ಮನೆಗಳ ಮಾದರಿಯ ಕಟ್ಟಡಗಳ ಗುಚ್ಛ; "ಕನ್ನಡ ಸಿರಿವಂತಿಕೆಯನ್ನು ಬೆಳೆಸುವಂಥ ಕನ್ನಡ ವಿಶ್ವವಿದ್ಯಾಲಯವು ಇಲ್ಲಿನ ನಿಸರ್ಗಕ್ಕೆ ತಕ್ಕನಾಗಿ ತನ್ನ ಬೆಳವಣಿಗೆಯನ್ನು ಕಂಡುಕೊಳ್ಳುತ್ತಿದೆ. ಕಲ್ಲಿನಲ್ಲಿ ಸೌಂದರ್ಯವನ್ನು ಕಟೆಯುತ್ತಿದೆ. ನಾಡಿನ ಸಂಸ್ಕೃತಿಯ ದ್ಯೋತಕವಾಗಿರುವ ಈ ಕಟ್ಟಡಗಳು ಸಾವಿರಕಾಲ ನಿಲ್ಲಲಿ" ಎಂದು ಕುಲಾಧಿಪತಿಗಳು ಹಾರೈಕೆ ನುಡಿದರು. "ತುಂಗಭದ್ರೆಯು ಮಲೆನಾಡು-ಬಯಲುಸೀಮೆಗಳ ಕೊಂಡಿಯಾಗಿರುವಂತೆ, ಈ ನದಿಯ ದಡದಮೇಲಿರುವ ವಿಶ್ವವಿದ್ಯಾಲಯವು, ನಾಡಿನ ಅನೇಕ ಸಂಸ್ಕೃತಿಗಳ ಸಂಗಮದ ಜಾಗವಾಗಲಿ" ಎಂದು ಸಮಾಜಕಲ್ಯಾಣ ಸಚಿವರು ಬಯಸಿದರು. ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರು, "ಒಂದು ದೊಡ್ಡ ಸಾಮ್ರಾಜ್ಯ ಮೆರೆದ ನೆಲದಲ್ಲಿ ಈಗ ಸಾಂಸ್ಕೃತಿಕವಾದ ಸಾಮ್ರಾಜ್ಯವಾಗಿ ಬೆಳೆಯಬೇಕೆಂಬ ಹಂಬಲವಿಟ್ಟುಕೊಂಡಿರುವ ವಿಶ್ವವಿದ್ಯಾಲಯವು ತಲೆಯೆತ್ತಿದೆ" ಎಂದು ನುಡಿದು, ವಿಶ್ವವಿದ್ಯಾಲಯವು ರೂಪುಗೊಳ್ಳುತ್ತಿರುವ ಪರಿಯನ್ನು ವಿವರಿಸಿದರು.

ವಿಶ್ವವಿದ್ಯಾಲಯಕ್ಕೆ ೧೯೯೪ರ ಸೆಪ್ಟೆಂಬರ್ ೧೮, ಮತ್ತೊಂದು ಮಹತ್ವದ ದಿನ. ವಿಶ್ವವಿದ್ಯಾಲಯದ ಹೃದಯಭಾಗವೂ ಜ್ಞಾನಸೌಧವೂ ಆದ 'ಅಕ್ಷರ'ದ ಉದ್ಘಾಟನೆ. ನಮ್ಮ ಗ್ರಂಥಾಲಯದ ಹೆಸರು 'ಅಕ್ಷರ'. ಅತ್ಯಂತ ಬೃಹತ್ ಕಟ್ಟಡ, ಸುತ್ತಲೂ ದೊಡ್ಡದಾದ ಕಂಬಗಳು, ಒಳಮಧ್ಯಭಾಗದಲ್ಲಿ ಕಾರಂಜಿಯ ಹೊಂಡ, ಉತ್ತರ ಪಶ್ಚಿಮದ ದಿಕ್ಕುಗಳಿಂದ ಪ್ರವೇಶಿಸಲು ಎರಡು ಹೆಬ್ಬಾಗಿಲು, ಚಿತ್ತಾಕರ್ಷಕ ಮೆಟ್ಟಿಲುಗಳು ಮುಂತಾದ ವಿಶೇಷ ರಚನೆಗಳಿಂದ ಈ ಬೃಹತ್ ಕಟ್ಟಡ ನಿರ್ಮಾಣಗೊಂಡಿದೆ. ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರಾಗಿದ್ದ ಶ್ರೀ ಅರ್ಜುನ್‌ಸಿಂಗ್ ಅವರು ಈ ಕಟ್ಟಡವನ್ನು ಉದ್ಘಾಟಿಸಿ, "ಗ್ರಂಥಾಲಯ ಕಟ್ಟಡಕ್ಕೆ 'ಅಕ್ಷರ'ವೆಂಬ ಔಚಿತ್ಯಪೂರ್ಣ ಹೆಸರನ್ನು ಕೊಟ್ಟಿದ್ದೀರಿ. ಅಕ್ಷರ ಜ್ಞಾನದ ಸಂಕೇತ. ಎಲ್ಲ ದೇಶಭಾಷೆಗಳಲ್ಲೂ ಅಕ್ಷರದ ಸಮಾನ ಬಳಕೆಯಿದ್ದು, ಅರ್ಥವೂ ಒಂದೇ ಆಗಿದೆ. ಈ ಸಂಗತಿ ಸಾಂಕೇತಿಕವಾದದ್ದು, ಅರ್ಥಪೂರ್ಣವಾದದ್ದು ಹಾಗೂ ಏಕತೆಯ ಸತ್ಯತೆಯನ್ನು ಸೂಚಿಸುವಂಥದ್ದು" ಎಂದು ವಿಶ್ಲೇಷಿಸಿದರು. ವಿನೂತನ ನಿರ್ಮಾಣ, ವಾಸ್ತುರಚನಾವೈವಿಧ್ಯಗಳ ಅವಲೋಕಿಸಿದ ಕೇಂದ್ರ ಸಚಿವ ಅರ್ಜುನ್‌ಸಿಂಗರು, ಕನ್ನಡ ವಿಶ್ವವಿದ್ಯಾಲಯ ಹೊಂದಿರುವ ವಿದ್ಯೆಯ ಪರಿಕಲ್ಪನೆಯ ಬಗೆಗೂ ಗಮನ ಸೆಳೆದು, "ಈ ಬಗೆಯ ವಿದ್ಯೆಯ ಪರಿಕಲ್ಪನೆ, ಸಾಂಸ್ಕೃತಿಕ ಆಶಯಗಳು ಮತ್ತು ಅವನ್ನು ಕಾರ್ಯರೂಪಕ್ಕೆ ತರುತ್ತಿರುವ ವಿಧಾನಗಳು ನಮ್ಮ, ಹಿಂದಿನ ಆದರ್ಶಗಳನ್ನು ನಿಜಗೊಳಿಸುತ್ತಿರುವುದಕ್ಕೆ ಅತ್ಯಂತ ಪ್ರಬಲವಾದ ಉಪಕರಣಗಳಾಗಿವೆ.

ಇಂತಹ ವಿದ್ಯಾಸಂಸ್ಥೆಗಳಿಂದ ನಮ್ಮ ವಿದ್ಯಾಭ್ಯಾಸದ ಉನ್ನತ-ಪರಂಪರೆ ಮುಂದುವರಿಯಲು ಸಾಧ್ಯ'' ಎಂದು ಆಶಯವನ್ನು ವ್ಯಕ್ತಪಡಿಸಿದರು. ಕನ್ನಡ ವಿಶ್ವವಿದ್ಯಾಲಯದ ರೂವಾರಿ, ಕುಲಪತಿ ಡಾ. ಚಂದ್ರಶೇಖರ ಕಂಬಾರರು ಕನ್ನಡ ವಿ.ವಿ. ಗ್ರಂಥಾಲಯದ ಪರಿಕಲ್ಪನೆಯನ್ನು ತಮ್ಮ ಸ್ವಾಗತ-ಭಾಷಣದಲ್ಲಿ ವಿವರಿಸುತ್ತಾ,'' ಗ್ರಂಥಾಲಯವೆಂದರೆ ಕೇವಲ ಪುಸ್ತಕಗಳ ಸಂಗ್ರಹವಲ್ಲ, ಒಂದು ಉದ್ದೇಶಪೂರ್ಣವಾದ ಸಂಸ್ಥೆ. ಅದು ವಿಶ್ವವಿದ್ಯಾಲಯದ ಮೆದುಳು ಇದ್ದಂತೆ. ಗ್ರಂಥಾಲಯದ ಮೂಲಕವಾಗಿ ವಿಶ್ವವಿದ್ಯಾಲಯ ಯೋಚಿಸುತ್ತದೆ, ವಿಚಾರ ಮಾಡುತ್ತದೆ. ಗ್ರಂಥದಿಂದ ಗ್ರಂಥಗಳು ಹುಟ್ಟುತ್ತವೆ ಎಂದು ಹೇಳುತ್ತಾರೆ, ನಿಜ. ಶಾಸ್ತ್ರ ಬೆಳೆಯುವುದೇ ಹೀಗೆ. ನಮ್ಮ ಗ್ರಂಥಾಲಯ ಇನ್ನುಮುಂದೆ ತಿಳಿವಳಿಕೆಗೆ ಮುಕ್ತದ್ವಾರ'' ಎಂದರು.



ಇದೇ ಸಂದರ್ಭದಲ್ಲಿ ಗಿರಿಸೀಮೆಯ 'ಚಾವಡಿ'ಯನ್ನೂ ಶಿಲೆಗಳಲ್ಲೇ ಅರಳಿರುವ 'ಶಿಲ್ಪವನ'ವನ್ನೂ ಕುಲಾಧಿಪತಿಗಳಾಗಿದ್ದ ಮುಖ್ಯಮಂತ್ರಿ ಶ್ರೀ ವೀರಪ್ಪಮೊಯ್ಲಿ ಉದ್ಘಾಟಿಸಿದರು. ಕೇಂದ್ರ ಸರ್ಕಾರದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯ ಸಚಿವೆ ಶ್ರೀಮತಿ ಬಸವರಾಜೇಶ್ವರಿಯವರು 'ಬ್ಯಾಟಿಬೀರನ ಹಾಡಿ'ಯನ್ನು ಹೊಸಪೇಟೆ ಕ್ಷೇತ್ರದ ಶಾಸಕ ಶ್ರೀ ರತನ್‌ಸಿಂಗ್ ಅವರು 'ಮಾಹಿತಿ ಕೇಂದ್ರ'ವನ್ನು ಉದ್ಘಾಟಿಸಿದರು.

ವಿಶ್ವವಿದ್ಯಾಲಯದ ಹೊಸ 'ಅತಿಥಿಗೃಹ'ಕ್ಕೆ ರಾಜ್ಯಕಂದಾಯ ಸಚಿವ ಶ್ರೀಧರ್ಮಸಿಂಗ್ ಅವರು ಅಡಿಗಲ್ಲನ್ನಿಟ್ಟು, ವಿಶ್ವವಿದ್ಯಾಲಯದ ಪ್ರಗತಿಗೆ ಹಾರೈಸಿದರು.

## II: ಕಾರ್ಯಕ್ರಮಗಳು

(ಅ) ಕಮ್ಮಟ-ಶಿಬಿರಗಳು (ಆ) ವಿಚಾರಸಂಕಿರಣಗಳು (ಇ) ವಿಶೇಷ ಉಪನ್ಯಾಸಗಳು ಈ) ಪುಸ್ತಕ ಪ್ರಕಟಣೆ

### (ಅ) ಕಮ್ಮಟ-ಶಿಬಿರಗಳು:

ಕನ್ನಡ ವಿಶ್ವವಿದ್ಯಾಲಯವು ಮೊದಲಿನಿಂದಲೂ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಶಿಬಿರ- ಕಮ್ಮಟಗಳನ್ನು ಏರ್ಪಡಿಸುತ್ತಾ ಬಂದಿದೆ. ಇವು ಸಂಶೋಧನ ಕಾರ್ಯಕ್ಕೆ ತೊಡಗಿರುವ ಸಂಶೋಧಕರಿಗೆ ಉಪಯುಕ್ತವಾದವು. ವಿಶ್ವವಿದ್ಯಾಲಯದ ವಿವಿಧ ನಿಕಾಯಗಳ ಆಶ್ರಯದಲ್ಲಿ ನಡೆದ ಈ ಬಗೆಯ ಚಟುವಟಿಕೆಗಳ ವಿವರ ಇಲ್ಲಿದೆ:

#### ರಂಗ ತರಬೇತಿ ಶಿಬಿರ

'ನೀನಾಸಂ'ನ ರಂಗಶಿಕ್ಷಣ ಕೇಂದ್ರದ ಪ್ರಾಚಾರ್ಯ ಶ್ರೀ ಚಿದಂಬರರಾವ್ ಜಂಬೆ ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯವು ೧೯೯೩ರ ಡಿಸೆಂಬರ್ ತಿಂಗಳಿನಲ್ಲಿ 'ರಂಗತರಬೇತಿ ಶಿಬಿರ'ವನ್ನು ಏರ್ಪಡಿಸಿತ್ತು. ಡಿಸೆಂಬರ್ ೨೦ ರಂದು ಆರಂಭವಾದ ಈ ಶಿಬಿರವು ಒಂದು ತಿಂಗಳ ಕಾಲ ನಡೆದು, ೧೯೯೪ರ ಜನವರಿ, ೧೯



ರಂದು ಕೊನೆಗೊಂಡಿತು. ಸಮಾರೋಪದ ಅಂಗವಾಗಿ 'ಇಂದಿನ ಕನ್ನಡ ರಂಗಭೂಮಿ' ಎಂಬ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿತ್ತು. ನಮ್ಮ ರಂಗಭೂಮಿಯ ಸ್ಥಿತಿಗತಿಗಳನ್ನು ಅರಿಯಲು ಇದು ಅತ್ಯಂತ ಸಹಾಯಕವಾಯಿತು. 'ರಂಗಾಯಣ'ದ ನಿರ್ದೇಶಕರಾದ ಶ್ರೀ ಬಿ.ವಿ. ಕಾರಂತರು, ರಾಷ್ಟ್ರೀಯ ನಾಟಕ ಶಾಲೆಯ (ಎನ್.ಎಸ್.ಡಿ) ಪ್ರಾಧ್ಯಾಪಕರಾದ ಡಾ. ಅನುರಾಧ ಕಪೂರ್, ಕರ್ನಾಟಕ ನಾಟಕ ಅಕಾಡೆಮಿಯ ಶ್ರೀನಿವಾಸ ಕಪ್ಪಣ್ಣ, ಕನ್ನಡ ಚಲನಚಿತ್ರನಟ ಶ್ರೀ ಲೋಹಿತಾಶ್ವ ಹಾಗೂ ಶ್ರೀ ಚಿದಂಬರರಾವ್ ಜಂಬೆ ಅವರು ಈ ವಿಚಾರ ಸಂಕಿರಣದಲ್ಲಿ ಪಾಲ್ಗೊಂಡು, ನಮ್ಮ ರಂಗಭೂಮಿ ಪ್ರಸಕ್ತ ಎದುರಿಸುತ್ತಿರುವ ಅನೇಕ ಸಮಸ್ಯೆ, ಸವಾಲುಗಳ ಬಗೆಗೆ ಚರ್ಚಿಸಿದರು. ಕುಲಪತಿ ಡಾ. ಚಂದ್ರಶೇಖರ ಕಂಬಾರರು ಸಮಾರೋಪ ಭಾಷಣ ಮಾಡಿದರು. ರಂಗಭೂಮಿಯಲ್ಲಿ ಪರಿಶ್ರಮವುಳ್ಳ ಚಿಂತಕರಾದ ಶ್ರೀ ಎಂ.ಪಿ. ಪ್ರಕಾಶ್ ಅವರು ಅಧ್ಯಕ್ಷತೆ ವಹಿಸಿದ್ದರು. ಅಂದು ಸಂಜೆ ಸಂಸರ 'ಬಿರುದಂತೆಂಬರ ಗಂಡ' ಮತ್ತು ಮಾಸ್ತಿಯವರ 'ಕಾಕನ ಕೋಟೆ' ನಾಟಕಗಳ ಪ್ರದರ್ಶನವಿತ್ತು.

**ಮಣ್ಣಿನ ಕಲಾಕೃತಿ ರಚನಾ ಶಿಬಿರ**

ಮಣ್ಣಿನಿಂದ ಬಗೆಬಗೆಯ ವಸ್ತುಗಳನ್ನು, ಕಲಾಕೃತಿಗಳನ್ನು ತಯಾರಿಸುವ ಪರಂಪರೆ ಬಹಳ ಹಿಂದಿನಿಂದಲೂ ನಡೆದುಬಂದಿದೆ. ಆದರೆ ಇದು ಆಸಕ್ತರ ಕೈಗೆ ಅಷ್ಟಾಗಿ



ಏಟುಕುತ್ತಿಲ್ಲ. ಈ ಕಲೆಯನ್ನು ಕಲಿಸಿಕೊಡುವ ಪ್ರಯತ್ನಗಳು ಹೆಚ್ಚಾಗಿ ನಡೆಯುತ್ತಿಲ್ಲ ಕೂಡ. ಹೀಗಾಗಿ ನಶಿಸಿ ಹೋಗಬಹುದಾದ ಈ ಪರಂಪರೆಯನ್ನು ಮತ್ತೆ ಜೀವಂತಗೊಳಿಸುವ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಲಯವು ಹಲವು ಬಗೆಯ ಪ್ರಯೋಗಗಳನ್ನು ನಡೆಸಿದೆ. ೧೯೯೪ರ ಜನವರಿ ೨೬ ರಿಂದ ೩೦ ರವರೆಗೆ ಕಾಮಲಾಪುರದಲ್ಲಿ ನಡೆದ ಮಣ್ಣಿನ ಕಲಾಕೃತಿ ರಚನಾಶಿಬಿರವು ಈ ಪೈಕಿ ಒಂದು. ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯವು ಐದು ದಿನಗಳ ಕಾಲ ನಡೆಸಿದ ಈ ಶಿಬಿರದಲ್ಲಿ ರಾಜ್ಯದ ವಿವಿಧ ಕಡೆಗಳಿಂದ ಬಂದ ೨೬ಕ್ಕೂ ಹೆಚ್ಚು ಶಿಬಿರಾರ್ಥಿಗಳು ಭಾಗವಹಿಸಿದ್ದರು. ಈ ಶಿಬಿರದ ವಿಶೇಷ ಅನುಭವವೆಂದರೆ, ಕಾಮಾಲಾಪುರದ ಶ್ರೀ ಕುಂಬಾರ ಮಹದೇವಪ್ಪನವರು ಪಾಲ್ಗೊಂಡಿದ್ದುದು. ಇವರು ತಮ್ಮ ಕಸುಬಿನ ಸಲಕರಣೆಯ ಮೂಲಕ ಅನೇಕ ವಸ್ತುಗಳನ್ನು ಹೇಗೆ ತಯಾರಿಸಬಹುದೆಂಬುದನ್ನು ಪ್ರತ್ಯಕ್ಷ ತೋರಿಸಿಕೊಟ್ಟರು. ಅವರು ನೀಡಿದ ಈ ನೆರವು ಶಿಬಿರಕ್ಕೆ ಕಳೆತಂದಿತ್ತು.

ಕಾಮಾಲಾಪುರ, ಹಂಪಿ ಸುತ್ತಮುತ್ತಲಿನ ಪ್ರದೇಶಗಳನ್ನು ವೀಕ್ಷಿಸಿ, ಅಲ್ಲಿಂದ ಪಡೆದ ಪ್ರೇರಣೆ ಮೂಲಕ ಶಿಬಿರಾರ್ಥಿಗಳು ಹಲವು ಬಗೆಯ ಕಲಾಕೃತಿಗಳನ್ನು ನಿರ್ಮಿಸಿದರು. ಬೆಂಗಳೂರು ಕೆನ್‌ಕಲಾಶಾಲೆಯ ಕಲಾವಿದ ಶ್ರೀ ಜೆ. ಎಂ. ಎಸ್. ಮಣಿ ಶಿಬಿರದ ನಿರ್ದೇಶನ ಹೊತ್ತಿದ್ದರು. ಕನ್ನಡ ವಿ.ವಿ. ಕಲಾವಿಭಾಗದ ಅಧ್ಯಾಪಕ ಶ್ರೀ ಜಿ. ಜಯಕುಮಾರ್ ಶಿಬಿರದ ನೇತೃತ್ವ ವಹಿಸಿದ್ದರು.

**ಸಮೂಹ ಶಿಲ್ಪ ಶಿಬಿರ**

ಕನ್ನಡ ವಿ.ವಿ.ಯ ಲಲಿತ ಕಲೆಗಳ ನಿಕಾಯವು ತಂಜಾವೂರಿನ ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರದ ಸಹಯೋಗದೊಂದಿಗೆ ಮೂರುತಿಂಗಳಕಾಲ ನಡೆಸಿದ 'ಸಮೂಹ ಶಿಲ್ಪ ಶಿಬಿರ' ವು ವಿಶ್ವವಿದ್ಯಾಲಯದ ಮತ್ತೊಂದು ಮುಖ್ಯಕಾರ್ಯಕ್ರಮ. ೧೯೯೩ ರ ಡಿಸೆಂಬರ್ ೧೫ ರಂದು ಹಂಪಿಯಲ್ಲಿ ಈ ಶಿಬಿರವನ್ನು ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಉದ್ಘಾಟಿಸಿದರು. ಮೂರುತಿಂಗಳ ಅವಧಿಯ ಈ ಶಿಬಿರವು ೧೯೯೪ ರ ವರ್ಷದಲ್ಲೂ ಯಶಸ್ವಿಯಾಗಿ ಮುಂದುವರೆಯಿತು. ಕರ್ನಾಟಕದ ವಿವಿಧ ಜಿಲ್ಲೆಗಳಿಂದ ೧೬ ಮಂದಿ ಶಿಲ್ಪಿಗಳು ಇದರಲ್ಲಿ ಪಾಲ್ಗೊಂಡರು. ಕಲಾವಿಭಾಗದ ಶ್ರೀ ಜಿ. ಜಯಕುಮಾರ್ ಶಿಬಿರದ ನಿರ್ದೇಶಕರಾಗಿದ್ದರು. ಇಲ್ಲಿ ನಡೆಸಿದ ಪ್ರಯೋಗದಿಂದ ವಿಶ್ವವಿದ್ಯಾಲಯದ ಹೊಸ ಆವರಣದ ಬೆಟ್ಟಗುಡ್ಡಗಳಲ್ಲಿ 'ಶಿಲ್ಪವನ' ರೂಪುಗೊಂಡಿತು.

**ಸಂಶೋಧನ ಕಮ್ಮಟ**

ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ., ವಿದ್ಯಾರ್ಥಿಗಳಿಗಾಗಿ ೧೯೯೪ರ ಮಾರ್ಚ್ ೧೬ ರಂದು ಹಂಪಿಯಲ್ಲಿ ಸಂಶೋಧನ ಕಮ್ಮಟವನ್ನು ಏರ್ಪಡಿಸಲಾಗಿತ್ತು.



ಇದು ತನ್ನ ಸ್ವರೂಪದಲ್ಲಿ ಎರಡನೆಯ ಕಮ್ಮಟ. ಪ್ರಾಧ್ಯಾಪಕರೂ ಸಂಶೋಧಕರೂ ಆದ ಡಾ. ಹಂಪ ನಾಗರಾಜಯ್ಯನವರು ಕಮ್ಮಟವನ್ನು ಉದ್ಘಾಟಿಸಿದರು. "ಸೃಜನಶೀಲ ಸಾಹಿತ್ಯ ಬಗ್ಗೆ ಅನೇಕ ಕಮ್ಮಟಗಳು ನಡೆಯುತ್ತಿವೆ. ಆದರೆ ಸಂಶೋಧನ ಕ್ಷೇತ್ರದಲ್ಲಿ ಇವು ಹೆಚ್ಚಾಗಿ ನಡೆಯುತ್ತಿಲ್ಲ. ಈ ಕ್ಷೇತ್ರದಲ್ಲಿ ಹೊಸಹೊಸ ಅಧ್ಯಯನ ವಿಧಾನಗಳ ಕೊರತೆಯಿದೆ. ಇದನ್ನು ನಿವಾರಿಸಲು ಇಂತಹ ಕಮ್ಮಟಗಳು ಹೆಚ್ಚಾಗಬೇಕು. ಸಂಶೋಧನ ಪ್ರವೃತ್ತಿ ಬಡವಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಈ ಕ್ಷೇತ್ರಕ್ಕೆ ಆಕ್ಸಿಜನ್ ಕೊಡಬೇಕಾಗಿದೆ" ಎಂದು ನುಡಿದರು. ಡಾ. ವಿಲ್ಯಂ ಮಾಡ್ತ, ಶ್ರೀ ಆರ್. ವೈ. ಕುಲಕರ್ಣಿ ಅವರು ಸಂಶೋಧಕರಿಗೆ ಹಲವು ಉಪಯುಕ್ತ ಮಾತುಗಳನ್ನು ಹೇಳಿದರು.

## ಜಾನಪದ ಅಧ್ಯಯನ ಶಿಬಿರ

ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನ ನಿಕಾಯವು ೧೯೯೪ರ ಅಕ್ಟೋಬರ್‌ನಲ್ಲಿ ಜಾನಪದ ಅಧ್ಯಯನ ಶಿಬಿರವನ್ನು ಏರ್ಪಡಿಸಿತ್ತು. ಬುಡಕಟ್ಟು ಜನಾಂಗಗಳ ಅಧ್ಯಯನ ಕೇಂದ್ರವಾದ 'ಗಿರಿಸೀಮೆ' ಯ ಚಾವಡಿಯಲ್ಲಿ ೧೯ ದಿನಗಳ ಕಾಲ ಈ ಶಿಬಿರ ನಡೆಯಿತು. ಉಡುಪಿಯ ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರದ ನಿರ್ದೇಶಕರಾದ ಪ್ರೊ. ಕು.ಶಿ. ಹರಿದಾಸಭಟ್ಟರು ದಿ. ೩.೧೦.೯೪ರಂದು ಇದನ್ನು ಉದ್ಘಾಟಿಸಿದರು. "ಜಾನಪದ ಕಲೆಗಳನ್ನು ಸಂವಹನ ಮಾಡುವ ಕಾರ್ಯ



ನಡೆಯಬೇಕಾಗಿದೆ. ಸಕಲ ಬ್ರಹ್ಮಾಂಡವನ್ನು ಅರಿತುಕೊಳ್ಳುವ ಕಲೆ ಜಾನಪದ . ಇದರ ಪ್ರಜ್ಞಾಪರಿಸರವನ್ನು ವಿಸ್ತರಿಸಬೇಕಾಗಿದೆ. ಭಾಷೆ, ಜಾನಪದದ ದ್ರವ್ಯಗುಣಕ್ಕೆ ತೊಂದರೆಯನ್ನುಂಟು ಮಾಡುತ್ತಿದೆ. ಇಂತಹ ಸಂಗತಿಗಳ ಬಗ್ಗೆ ವ್ಯಾಪಕ ಚರ್ಚೆ ನಡೆಯಬೇಕಿದೆ'' ಎಂದು ಒತ್ತಿಹೇಳಿದರು.

ದಿ. ೨೧.೧೦.೯೪ ರಂದು ಶಿಬಿರದ ಸಮಾರೋಪಸಮಾರಂಭ ಏರ್ಪಾಡಾಗಿತ್ತು. ಕನ್ನಡ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾದ ಡಾ. ದೇವೇಂದ್ರಕುಮಾರ ಹಕಾರಿಯವರು ಸಮಾರೋಪ ಭಾಷಣಮಾಡುತ್ತಾ, ''ಜಾನಪದದ ಮೂಲಕ ನಮ್ಮದೇ ಆದ ಸಂಸ್ಕೃತಿಯ ಉಜ್ವಲ ಮುಖಗಳ ಅನ್ವೇಷಣೆ ಸಾಧ್ಯ. ಆದರೆ ಇಂಥ ಕೆಲಸಗಳನ್ನು ನಿರ್ವಹಿಸಲು. ಜಾನಪದ ವಿದ್ವಾಂಸರಿಗೆ ಮುಕ್ತವಾದ ತೆರೆದ ಮನಸ್ಸು ಇರಬೇಕಾಗುತ್ತದೆ'' ಎಂದು ಸೂಚಿಸಿದರು. ಖ್ಯಾತ ಜಾನಪದ ತಜ್ಞರಾದ ಶ್ರೀ. ಟಿ. ಎಸ್. ಸತ್ಯನಾಥ್(ದೆಹಲಿ ವಿಶ್ವವಿದ್ಯಾಲಯ) ಹಾಗೂ ಜಾನಪದ ವಿಭಾಗದ ಮುಖ್ಯಸ್ಥರಾದ ಡಾ. ಪುರುಷೋತ್ತಮ ಬಿಳಿಮಲೆ ಶಿಬಿರದ ನಿರ್ದೇಶಕರಾಗಿದ್ದರು. ಈ ಶಿಬಿರದಲ್ಲಿ ಡಾ. ವಿಲ್ಲಿ ಆರ್. ಡಿಸಿಲ್ವ, ಡಾ. ಎಂ. ಬಿ. ನೇಗಿನಹಾಳ, ಡಾ. ತೀ.ನಂ. ಶಂಕರನಾರಾಯಣ, ಡಾ. ಬಸವರಾಜಕಲ್ಗುಡಿ. ಡಾ. ಕಾಳೇಗೌಡನಾಗವಾರ, ಶ್ರೀ. ಸತ್ಯಕಾಮ, ಡಾ. ದೇವೇಂದ್ರಕುಮಾರ ಹಕಾರಿ, ಡಾ. ಹೈಡ್ರೂನ್ ಬ್ರೂಕ್ನರ್,ಪ್ರೊ. ಸುಮಿಯೋ

ಮೊರಿಜಿರಿ, ಡಾ. ಕಿಕ್ಕೇರಿ ನಾರಾಯಣ, ಡಾ. ಶೋಭಾಸತ್ಯನಾಥ್, ಡಾ. ಟಿ. ಆರ್. ಎಸ್. ಶರ್ಮ ಮೊದಲಾದ ಬಾಹ್ಯವಿದ್ವಾಂಸರು ವಿಶೇಷ ಉಪನ್ಯಾಸಗಳನ್ನು ನೀಡಿದರು. ಕನ್ನಡ ವಿಶ್ವವಿದ್ಯಾಲಯದ ಡಾ. ಎಚ್. ಎಸ್. ರಾಘವೇಂದ್ರರಾವ್, ಪ್ರೊ. ಓ. ಎಲ್. ನಾಗಭೂಷಣಸ್ವಾಮಿ, ಡಾ. ಕೆ.ವಿ ನಾರಾಯಣ. ಪ್ರೊ. ಹಿ. ಚಿ. ಬೋರಲಿಂಗಯ್ಯ, ಪ್ರೊ. ಲಕ್ಷ್ಮಣತೆಲಗಾವಿ, ಎಸ್. ಎಸ್. ಹಿರೇಮಠ, ಶ್ರೀ. ಎ. ವಿ. ನಾವಡ ಅವರು ವಿಭಿನ್ನ ವಿಷಯಗಳ ಮೇಲೆ ಪ್ರಬಂಧಗಳನ್ನು ಮಂಡಿಸಿದರು. ಶಿಬಿರದ ಅಂಗವಾಗಿ ಮೈಲಾರದಲ್ಲಿ ಕ್ಷೇತ್ರಕಾರ್ಯ ನಡೆಸಲಾಯಿತು.

**ಸಾಹಿತ್ಯ ಬೋಧನ ಶಿಬಿರ**

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗವು ಅಕ್ಟೋಬರ್ ೨೪ರಿಂದ ೨೮ರ ತನಕ ಕನ್ನಡದ ಅಧ್ಯಾಪಕರಿಗಾಗಿ ಸಾಹಿತ್ಯಬೋಧನ ಶಿಬಿರವನ್ನು ಏರ್ಪಡಿಸಿತ್ತು. ಕನ್ನಡದ ಪ್ರಸಿದ್ಧ ವಿಮರ್ಶಕರೂ ಹಾಗೂ ಕನ್ನಡ ವಿ.ವಿ. ಯ ಸಂದರ್ಶಕ ಪ್ರಾಧ್ಯಾಪಕರೂ ಆದ




ಪ್ರೊ. ಜಿ. ಎಚ್. ನಾಯಕ ಅವರು ಶಿಬಿರವನ್ನು ಉದ್ಘಾಟಿಸಿದರು. "ಸಾಹಿತ್ಯ ಕೃತಿಯು ಲೇಖಕನ ವಿಶಿಷ್ಟ ಅನುಭವ, ವಿಶಿಷ್ಟಭಾಷಾಬಳಕೆ ಹಾಗೂ ಪ್ರತಿಭೆಗಳಿಂದ ನಿರ್ಮಿತವಾಗಿರುತ್ತದೆ. ಅದು ಹಲವುಕಾಲ, ದೇಶ, ಸಂದರ್ಭಗಳಲ್ಲಿ ನಿಂತು

ನೋಡುವಾಗಲೂ ಹಲವು ಅರ್ಥಗಳನ್ನು ಕೊಡಬಲ್ಲಂತೆ ಅನನ್ಯವಾಗಿರುತ್ತದೆ. ಇಂಥ ಅನನ್ಯ ಸಾಹಿತ್ಯಕೃತಿಯನ್ನು ಬೋಧಿಸುವಾಗ ತರಗತಿಗಳಲ್ಲಿ ಅಧ್ಯಾಪಕರು ತೆರೆದ ಮನಸ್ಸಿನವರಾಗಿರಬೇಕಾಗುತ್ತದೆ. ತಾವು ಕಂಡುಕೊಂಡ ಅರ್ಥವೊಂದೇ ನಿಜವಾದ ಅರ್ಥವೆಂದು ತಿಳಿಯಬಾರದು ಹಾಗೂ ಅದನ್ನು ವಿಧ್ಯಾರ್ಥಿಗಳ ಮೇಲೆ ಬಲವಂತರಾಗಿ ಹೇರಬಾರದು'' ಎಂದು ನುಡಿದು, ಸಾಹಿತ್ಯಕೃತಿಯನ್ನು ಮುಖಾಮುಖಿ ಮಾಡುವ ಕುರಿತ ವಾಗ್ವಾದಕ್ಕೆ ಅವಕಾಶ ಕಲ್ಪಿಸಿಕೊಟ್ಟರು. ಆರು ದಿನಗಳ ಕಾಲ ನಡೆದ ಈ ಶಿಬಿರದಲ್ಲಿ ಕರ್ನಾಟಕದ ವಿವಿಧ ಕಾಲೇಜುಗಳಿಂದ ಬಂದಿದ್ದ ಕನ್ನಡ ಅಧ್ಯಾಪಕರು ಪಾಲ್ಗೊಂಡಿದ್ದರು. ಬದಲಾಗುತ್ತಿರುವ ಶೈಕ್ಷಣಿಕ ವಾತಾವರಣದಲ್ಲಿ ಸಾಹಿತ್ಯ ಬೋಧನೆಯಲ್ಲಿ ಎದುರಾಗುತ್ತಿರುವ ಅನೇಕ ತೊಡುಕುಗಳ ಬಗ್ಗೆ, ಕಾವ್ಯ, ಕತೆ, ಕಾದಂಬರಿ, ನಾಟಕ, ಶಾಸ್ತ್ರ ಹಾಗೂ 'ಸಾಹಿತ್ಯೇತರ' ಪಠ್ಯ ಬೋಧನೆಯ ಬಗ್ಗೆ ಗಹನ ಚರ್ಚೆ ನಡೆಯಿತು. ಡಾ. ಚಂದ್ರಶೇಖರ ಕಂಬಾರ, ಡಾ. ಬಸವರಾಜ ಕಲ್ಗುಡಿ, ಡಾ. ಕೆ. ವಿ. ನಾರಾಯಣ, ಪ್ರೊ. ಓ. ಎಲ್. ನಾಗಭೂಷಣಸ್ವಾಮಿ, ಪ್ರೊ. ಎಚ್. ಎಸ್. ರಾಘವೇಂದ್ರರಾವ್, ಡಾ. ಪುರುಷೋತ್ತಮ ಬಿಳಿಮಲೆ, ಶ್ರೀ. ಮಲ್ಲೇಪುರಂ ಜಿ. ವೆಂಕಟೇಶ್, ಡಾ. ರಹಮತ್ ತರೀಕೆರೆ ಮೊದಲಾದವರು ಉಪನ್ಯಾಸಗಳನ್ನು ನೀಡಿದರು.

### ಆ) ವಿಚಾರ ಸಂಕಿರಣಗಳು

೧೯೯೪ ರಲ್ಲಿ ನಡೆದ ವಿಚಾರಸಂಕಿರಣಗಳಲ್ಲಿ ಕನ್ನಡದಲ್ಲಿ ವಿಜ್ಞಾನ ಬೋಧನೆಯ ತೊಡಕುಗಳು, ಕರ್ನಾಟಕ ಪರಿಸರ ಮತ್ತು ಕುವೆಂಪುನಮನ ಕಾರ್ಯಕ್ರಮಗಳು ಮುಖ್ಯವಾದವು.



## ವಿಜ್ಞಾನ ಬೋಧನೆಯ ತೊಡಕುಗಳು

ವಿಜ್ಞಾನ ಬೋಧನೆಯ ಸಮಸ್ಯೆಗಳನ್ನು ಕುರಿತು ಸಂಕಲನ ವಿಭಾಗವು ಸೆಪ್ಟಂಬರ್ ತಿಂಗಳಿನಲ್ಲಿ ಉಪಯುಕ್ತವಾದ ವಿಚಾರ ಸಂಕಿಣವೊಂದನ್ನು ನಡೆಸಿತು. ಕರ್ನಾಟಕ ವಿಶ್ವವಿದ್ಯಾಲಯ ರಸಾಯನಶಾಸ್ತ್ರ ವಿಭಾಗದ ವಿಶ್ರಾಂತ ಪ್ರಾಧ್ಯಾಪಕ ಡಾ. ವಿ. ವಿ. ಬಡಿಗೇರ ಅವರು ದಿ. ೧೨.೯.೯೪ರಂದು ಈ ವಿಚಾರ ಸಂಕಿರಣವನ್ನು ಉದ್ಘಾಟಿಸಿದರು. ''ಕನ್ನಡದಲ್ಲಿ ವಿಜ್ಞಾನದ ವಿಷಯಗಳನ್ನು ಬೋಧಿಸುವುದು ಅಷ್ಟು ಕಠಿಣವಲ್ಲ; ಅದು ತೊಡಕು ಕೂಡ ಅಲ್ಲ. ವಿಜ್ಞಾನ ಶಿಕ್ಷಕರು ಮನಸ್ಸು ಮಾಡಿದ್ದೇ ಆದರೆ ಸಮರ್ಥವಾಗಿ ಇದನ್ನು ನಿಭಾಯಿಸಬಹುದು. ಯಾವುದೇ ವಿಷಯವನ್ನು ಒಂದು ಭಾಷೆಯಲ್ಲಿ ಹೇಳಲಿಕ್ಕೆ ಸಾಧ್ಯವಾಗುವುದಾದರೆ, ಕನ್ನಡದಲ್ಲೂ ಅದನ್ನು ಮಾಡಬಹುದಲ್ಲವೆ? ಅಂತಹ ಸಾಮರ್ಥ್ಯ ಕನ್ನಡಕ್ಕಿದೆ'' ಎಂದು ಡಾ. ಬಡಿಗೇರರು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಕುಲಪತಿ ಡಾ. ಕಂಬಾರರು, ''ಜ್ಞಾನ ನಮ್ಮ ಮಟ್ಟಿಗೆ ಮಾತ್ರ ಸಾಕ್ಷಾತ್ಕಾರವಾಗಬಾರದು. ಕನ್ನಡದಲ್ಲಿ ಹೇಳಲಿಕ್ಕೆ ಆಗದು, ಬರೆಯಲಿಕ್ಕೆ ಬಾರದು, ಯೋಚಿಸಲಿಕ್ಕೆ ಸಾಧ್ಯವಾಗದು ಎಂಬ ನೆಪಗಳನ್ನು ತೊರೆಯಬೇಕು. ಬೋಧನೆಯೂ ಸೃಜನಶೀಲಕ್ರಿಯೆಯಾದಾಗ ಅನೇಕ ಸಾಧ್ಯತೆಗಳು ಹುಟ್ಟಬಲ್ಲವು. ವಿಜ್ಞಾನ ಬೋಧಿಸುವವರು ಬರೀ ಅನುವಾದ ಪ್ರಯೋಗವನ್ನು ಅವಲಂಬಿಸದೆ, ಸ್ವಂತ ಆಲೋಚನೆಗೆ ಒತ್ತುಕೊಡಬೇಕು. ವಸಾಹತುಶಾಹಿಯ ಮಾರಕ ಪ್ರಭಾವಗಳಿಂದ ತಪ್ಪಿಸಿಕೊಳ್ಳಲು ಕನ್ನಡದ ಮನಸ್ಸುಗಳು ಹೀಗೆ ಸ್ವಂತಿಕೆಯಿಂದ ಕೆಲಸ ಶುರು ಮಾಡಬೇಕಾಗಿದೆ'' ಎಂದು ಕರೆನೀಡಿದರು. ಎರಡು ದಿನಗಳವರೆಗೆ ನಡೆದ ಈ ವಿಚಾರ ಸಂಕಿರಣದಲ್ಲಿ ರಾಜ್ಯದ ವಿವಿಧ ಹೈಸ್ಕೂಲು, ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಿಂದ ಬಂದ ಶಿಕ್ಷಕರು ಪಾಲ್ಗೊಂಡಿದ್ದರು. ಸಂಕಲನ ವಿಭಾಗದ ಮುಖ್ಯಸ್ಥರಾದ ಡಾ. ಎಚ್. ಎಸ್. ಶ್ರೀಮತಿ ಅವರು ಶಿಬಿರದ ನೇತೃತ್ವ ವಹಿಸಿದ್ದರು.

## ಕರ್ನಾಟಕ ಪರಿಸರ:ವಿಚಾರ ಸಂಕಿರಣ

ಕನ್ನಡ ವಿ. ವಿ. ಯ 'ಮಾಹಿತಿ ಕೇಂದ್ರ'ವು ಕರ್ನಾಟಕದ ಪರಿಸರ ಕುರಿತು ಅಕ್ಟೋಬರ್‌ನಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣವು ಕರ್ನಾಟಕದ ನೆಲ-ಜಲಗಳ ಭವಿಷ್ಯ ದೃಷ್ಟಿಯಿಂದ ಮಹತ್ವದ್ದು ಎನಿಸಿದೆ. ಈ ತನಕ ಇಂಗ್ಲಿಷ್ ಭಾಷೆಯಲ್ಲಿ ವಿಜ್ಞಾನ, ಪರಿಸರ ವಿಷಯಗಳನ್ನು ಕುರಿತು ಬರೆಯುತ್ತಿದ್ದ ಅನೇಕ ಪ್ರಜ್ಞಾವಂತರು, ಈ ವಿಚಾರ ಸಂಕಿರಣದಲ್ಲಿ ತಮ್ಮ ಅನುಭವ ಮತ್ತು ಚಿಂತನೆಗಳನ್ನು ಕನ್ನಡದ ಮೂಲಕವೇ ಹಂಚಿಕೊಳ್ಳಲು ಪ್ರಯತ್ನಿಸಿದ್ದು ಈ ಸಂಕಿರಣದ ವಿಶಿಷ್ಟತೆ. ಕರ್ನಾಟಕದ ಪರಿಸರವನ್ನು ಸಮಗ್ರವಾಗಿ ಅಧ್ಯಯನ ಮಾಡಿರುವ ಪರಿಸರವಾದಿಗಳು, ಒಂದೆಡೆ ಸೇರಿ, ನಮ್ಮ ಪರಿಸರ ಸಂರಕ್ಷಿಸಿಕೊಳ್ಳುವ ಕುರಿತು ಗಂಭೀರವಾಗಿ ಚರ್ಚಿಸಿದರು.

ಖ್ಯಾತ ಪರಿಸರವಾದಿ, ಹಿರಿಯಸಾಹಿತಿ ಡಾ. ಕೆ. ಶಿವರಾಮ ಕಾರಂತರು ಇಲ್ಲಿಗೆ ಆಗಮಿಸಿ, ವಿಚಾರ ಸಂಕಿರಣವನ್ನು ಉದ್ಘಾಟಿಸಿ (೨೬.೧೦.೯೪)ನಿರ್ಭೀತಿಯಿಂದ ತಮ್ಮ

ವಿಚಾರಗಳನ್ನು ಮಂಡಿಸಿದ್ದು, ಈ ವಿಚಾರ ಸಂಕಿರಣದ ಗಾಂಭೀರ್ಯತೆಗೆ ಮೆರಗು ನೀಡಿತು. "ವಿಜ್ಞಾನಿಗಳು, ಪರಿಸರ ತಜ್ಞರು ನೀಡುವ ಎಚ್ಚರಿಕೆಗಳನ್ನು ಅಲಕ್ಷಿಸಿ, ಪರಿಸರವನ್ನು ನಾವಾಗಿಯೇ ನಾಶಪಡಿಸುವ ಯತ್ನದಲ್ಲಿ ತೊಡಗಿದ್ದೇವೆ. ಎಲ್ಲಿಯವರೆಗೆ



ನಮ್ಮನ್ನಾಳುವ ಚುನಾಯಿತ ಪ್ರತಿನಿಧಿಗಳಿಗೆ ವಿಜ್ಞಾನ ಮತ್ತು ಪರಿಸರ ಕುರಿತು ತಿಳಿವಳಿಕೆ, ಅರಿವು ಮೂಡುವುದಿಲ್ಲವೋ ಅಲ್ಲಿಯ ತನಕ ಈ ನಮ್ಮ ದೇಶ, ನಮ್ಮ ಬದುಕು ಅಪಾಯದ ಅಂಚಿನಲ್ಲಿರುತ್ತದೆ" ಎಂದು ಕಾರಂತರು ಎಚ್ಚರಿಕೆ ನುಡಿದರು.

ರಾಜ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ವಿಶೇಷ ಕಾರ್ಯದರ್ಶಿ ಶ್ರೀ ಅ.ನ. ಯಲ್ಲಪ್ಪರೆಡ್ಡಿ ಪ್ರಾಸ್ತಾವಿಕ ಭಾಷಣಮಾಡಿದರು. ರಾಜ್ಯ ಪ್ರಧಾನ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಎಸ್. ಪರಮೇಶ್ವರಪ್ಪನವರು ಮುಖ್ಯ ಅತಿಥಿಯಾಗಿ ಪಾಲ್ಗೊಂಡಿದ್ದರು. ಕುಲಪತಿ ಡಾ. ಚಂದ್ರಶೇಖರ ಕಂಬಾರರು ಕಾರ್ಯಕ್ರಮದ ಅಧ್ಯಕ್ಷತೆವಹಿಸಿದ್ದರು.

ಅನಂತರ ನಡೆದ ಗೋಷ್ಠಿಗಳಲ್ಲಿ ಕರ್ನಾಟಕದ ಗಣಿಗಾರಿಕೆ ಬಗ್ಗೆ ಶ್ರೀ ಟಿ. ಎಸ್. ಚನ್ನೇಶ್, ಭೂಕಂಪನ ಮತ್ತು ಪರಿಸರ ಬಗ್ಗೆ ಪ್ರೊ. ನಿಜಗುಣಪ್ಪ, ಪರಿಸರ ವಿಜ್ಞಾನದ ಬಗ್ಗೆ ಡಾ. ರಾಜಶೇಖರ ನೀರಮಾನ್ವಿ ಹಾಗೂ ಜೀವ ವೈವಿಧ್ಯ ಮತ್ತು ಪರಿಸರದ ಬಗ್ಗೆ ಶ್ರೀ ಜಿ. ಎಸ್. ಜಯದೇವ ಅವರು ಉಪನ್ಯಾಸಗಳನ್ನು ನೀಡಿದರು. ಪರಿಸರದ ವಿಜ್ಞಾನಿ

ಡಾ. ಎ. ಎನ್. ನಾಗರಾಜ್ ಅಧ್ಯಕ್ಷತೆವಹಿಸಿದ್ದರು. ಶ್ರೀ ಆ. ನ. ಯಲ್ಲಪ್ಪರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆದ ೨ನೇ ಗೋಷ್ಠಿಯಲ್ಲಿ ಪ್ರೊ. ಮುದ್ದುಕವಿ ಅವರು ನದಿಮಾಲಿನ್ಯ ಮತ್ತು ಪರಿಸರ ಕುರಿತು, ಪ್ರೊ. ಕೆ. ಎಸ್. ಮಂಜ ಅವರು ಮಾರಕ ಸೂಕ್ಷ್ಮಾಣು ಜೀವಿಗಳಿಂದ ಪರಿಸರ ಮಾಲಿನ್ಯ ಮತ್ತು ಹತೋಟಿ ಕುರಿತು, ಡಾ. ಮುರಾರಿ ಬಲ್ಲಾಳ ಅವರು ಪರಿಸರ ಮತ್ತು ಸಹಜ ಕೃಷಿ ಕುರಿತು ಹಾಗೂ ಡಾ. ಎ. ಪಿ. ರಾಧಾಕೃಷ್ಣ ಅವರು ವಿಕಿರಣ ಪಟುಧಾತು ಮತ್ತು ಪರಿಸರದ ಕುರಿತು ಪ್ರಬಂಧಗಳನ್ನು ಮಂಡಿಸಿದರು.

ಶ್ರೀ ಎಸ್. ಪರಮೇಶ್ವರಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ೩ನೇ ಗೋಷ್ಠಿಯಲ್ಲಿ ಕರ್ನಾಟಕದ ಅಣುಸ್ಥಾವರಗಳು ಮತ್ತು ಪರಿಸರ ಕುರಿತು ಡಾ. ಎ. ಎನ್. ನಾಗರಾಜ್, ಕರ್ನಾಟಕದಲ್ಲಿ ಪರಿಸರ ಶಿಕ್ಷಣ ಕುರಿತು ಶ್ರೀ ಎಚ್. ಆರ್. ಕೃಷ್ಣಮೂರ್ತಿ, ಕರ್ನಾಟಕದ ಜಲವಿದ್ಯುತ್ ಯೋಜನೆಗಳು ಮತ್ತು ಪರಿಸರದ ಬಗ್ಗೆ ಶ್ರೀ ನಾಗೇಶ ಹೆಗಡೆ ಹಾಗೂ ಪಶ್ಚಿಮ ಘಟ್ಟದ ಪರಿಸರದ ಬಗ್ಗೆ ಶ್ರೀ ಕಲ್ಕುಳಿ ವಿಠಲಹೆಗಡೆ ಅವರು ತಮ್ಮ ಚಿಂತನೆಗಳನ್ನು ಹಂಚಿಕೊಂಡರು.

ಶ್ರೀ ಎಚ್. ಆರ್. ಕೃಷ್ಣಮೂರ್ತಿ ಅವರ ಅಧ್ಯಕ್ಷತೆಯಲ್ಲಿ ೪ನೇ ಗೋಷ್ಠಿ ನಡೆಯಿತು. ಡಾ. ಎ. ಎನ್. ಮಧ್ಯಸ್ಥ ಅವರು ಪಶ್ಚಿಮ ಘಟ್ಟದ ಪಕ್ಷಿಗಳು ಮತ್ತು ಪರಿಸರದ ಬಗ್ಗೆ, ಶ್ರೀ ನಾಗಭೂಷಣ ಅವರು ಪರಿಸರ ಸಂರಕ್ಷಣೆಯಲ್ಲಿ ಸ್ಥಳೀಯ ಪರಿಸರ ಸಂಘಟನೆಗಳ ಪಾತ್ರದ ಬಗ್ಗೆ ಹಾಗೂ ಡಾ. ಎಸ್. ಶಂಕರ ಭಟ್ ಅವರು ಉತ್ತಮ ಪರಿಸರ ನಿರ್ಮಿಸುವಲ್ಲಿ ಸಸ್ಯಶಾಸ್ತ್ರದ ಪಾತ್ರ ಕುರಿತು ಉಪನ್ಯಾಸಗಳನ್ನು ನೀಡಿದರು. ೫ನೇ ಗೋಷ್ಠಿ ಡಾ. ಎಸ್. ಶಂಕರಭಟ್ಟರ ಅಧ್ಯಕ್ಷತೆಯಲ್ಲಿ ಜರುಗಿತು. ಕರ್ನಾಟಕದಲ್ಲಿ ವಾಯುಮಾಲಿನ್ಯದ ಕುರಿತು ಡಾ.ಕೆ.ಜಿ. ಸೋಮಶೇಖರಪ್ಪ, ಪ್ರಾಣಿಸಂಕಲದ ಬಗ್ಗೆ ಡಾ. ಎಲ್. ಸಿದ್ದವೀರೇಗೌಡ ಪ್ರಬಂಧಗಳನ್ನು ಮಂಡಿಸಿದರು.

ದಿ. ೧೭.೧೦.೯೪ ರಂದು ಸಮಾರೋಪ ಸಮಾರಂಭ ನಡೆಯಿತು. ಅರಣ್ಯಾಧಿಕಾರಿ ಶ್ರೀ ಎಸ್. ಪರಮೇಶ್ವರಪ್ಪನವರು ಸಮಾರೋಪ ಭಾಷಣ ಮಾಡಿದರು. ಆಹ್ವಾನಿತ ಭಾಷಣಕಾರರ ಪರವಾಗಿ ಶ್ರೀ ನಾಗೇಶ ಹೆಗಡೆ ಮಾತನಾಡುತ್ತ, ಕರ್ನಾಟಕದ ವಿವಿಧ ಇಲಾಖೆ, ಸಂಸ್ಥೆಗಳಲ್ಲಿ, ಕ್ಷೇತ್ರಗಳಲ್ಲಿ ಹಂಚಿಹೋದ ಪರಿಸರ ತಜ್ಞರೆಲ್ಲ ಒಂದೆಡೆ ಸೇರಿ, ಅರ್ಥಪೂರ್ಣ ಚರ್ಚೆಮಾಡಿದ್ದು ಒಂದು ಅಪರೂಪದ ಸಂದರ್ಭ ಎಂದು ಅವರು ಬಣ್ಣಿಸಿದರು.

**ಕುವೆಂಪು ನಮನ: ವಿಚಾರ ಸಂಕಿರಣ**

ವಿಶ್ವಮಾನವತತ್ವದ ದ್ರಷ್ಟಾರರೂ, ಈ ಶತಮಾನದ ದೊಡ್ಡಬರಹಗಾರರೂ ಆದ ಕುವೆಂಪು ಅವರು, ಕರ್ನಾಟಕದ ಸಾಂಸ್ಕೃತಿಕ ಲೋಕಕ್ಕೆ ನೀಡಿದ ಬಹುಮುಖಿ ಕೊಡುಗೆಗಳನ್ನು, ಅವರ ಕೃತಿಗಳ ಗಂಭೀರ ಚರ್ಚೆಯ ಮೂಲಕ ಶ್ರದ್ಧೆಯಿಂದ ನೆನೆಯುವ 'ಕುವೆಂಪು ನಮನ' ಕಾರ್ಯಕ್ರಮವನ್ನು ಕನ್ನಡ ವಿ. ವಿ. ನಡೆಸಿತು.

ಡಿಸೆಂಬರ್ ೨೯ ಹಾಗೂ ೩೦ ರಂದು, ಎರಡು ದಿನಗಳ ಕಾಲ ನಡೆದ ಈ ವಿಚಾರ ಸಂಕಿರಣವನ್ನು ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಹಾಗೂ ಕುವೆಂಪು ಅವರ ನಿಕಟವರ್ತಿ ಡಾ. ದೇ. ಜವರೇಗೌಡರು, ಕುವೆಂಪು ಜನ್ಮದಿನವಾದ ಡಿಸೆಂಬರ್ ೨೯ ರಂದು ಉದ್ಘಾಟಿಸಿ, ''ಈ ಶತಮಾನದ ಕಾವ್ಯದೃಷ್ಟಿಯನ್ನೇ ಬದಲಿಸಿದ ರಾಷ್ಟ್ರಕವಿ ಕುವೆಂಪು ಅವರ ವೈವಿಧ್ಯಮಯ ಸಾಹಿತ್ಯ ಕುರಿತು ಸಮಗ್ರ ಅಧ್ಯಯನ ನಡೆಯಬೇಕಿದೆ''ಎಂದು ಹೇಳಿದರು.

ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಯು. ಆರ್. ಅನಂತಮೂರ್ತಿ ಅವರು ಮುಖ್ಯ ಅತಿಥಿಯಾಗಿ ಮಾತನಾಡುತ್ತಾ''ಕನ್ನಡದ ಲೇಖಕರಲ್ಲಿ ಆಧ್ಯಾತ್ಮಿಕನೊಬ್ಬ ಕವಿಯಾಗಿ ಪರಿವರ್ತನೆಯಾಗುವ ಎಲ್ಲ ವೈರುಧ್ಯ, ಸಂಕಟಗಳನ್ನು ಕುವೆಂಪು ಅವರು ಎದುರಿಸಿದ್ದಾರೆ, ದಾಖಲಿಸಿದ್ದಾರೆ. ಆದ್ದರಿಂದ ಈ ಕಾಲಕ್ಕೆ ಅವರು ನಾಯಕತ್ವದ ಸಾಹಿತಿಯಾಗುತ್ತಾರೆ '' ಎಂದು ಬಣ್ಣಿಸಿದರು. ಕುವೆಂಪು ಅವರ ಪ್ರಿಯಶಿಷ್ಯರಾಗಿದ್ದ ಡಾ. ಜಿ. ಎಸ್. ಶಿವರುದ್ರಪ್ಪನವರು ಕಾರ್ಯಕ್ರಮದ ಅಧ್ಯಕ್ಷತೆ



ವಹಿಸಿದ್ದರು. ತಮ್ಮ ನೆನಪುಗಳನ್ನು ಮೆಲುಕುಹಾಕಿದ ಡಾ. ಜಿ.ಎಸ್.ಎಸ್. ಅವರು, ''ಕುವೆಂಪುರವರ ಆಧ್ಯಾತ್ಮಿಕ ಜೀವನದ ಇನ್ನೊಂದು ಮುಖ ಗಾಂಧೀಜಿಯವರ ಸರ್ವೋದಯದ ಮಂತ್ರವಾಗಿತ್ತು. ಅವರೊಬ್ಬ ದೊಡ್ಡ ಸಾಧಕರು. ಕುಮಾರವ್ಯಾಸನ

ನಿಷ್ಠೆ ಅವರಲ್ಲಿತ್ತು. ಅವರ ಕಾದಂಬರಿಗಳು ಸಾಂಸ್ಕೃತಿಕ ದಾಖಿಲೆಗಳು'' ಎಂದು ವಿವರಿಸಿದರು. ಕುಲಪತಿ ಡಾ. ಚಂದ್ರಶೇಖರ ಕಂಬಾರರು ಆರಂಭದಲ್ಲಿ ಸ್ವಾಗತ ಭಾಷಣಮಾಡಿದರು.

ಮಹಾಕವಿ ಕುವೆಂಪು ಕುರಿತು ಹಿರಿಯ ಕವಿ ಶ್ರೀ ಚೆನ್ನವೀರ ಕಣವಿ, ಡಾ. ಕಾಳೇಗೌಡ ನಾಗವಾರ, ಶ್ರೀ ದೇವನೂರ ಮಹಾದೇವ, ಡಾ. ಬೆಸಗರಹಳ್ಳಿ ರಾಮಣ್ಣ, ಡಾ. ಎಸ್. ಚಂದ್ರಶೇಖರ, ಡಾ. ಶ್ರೀನಿವಾಸ ಕುಲಕರ್ಣಿ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದರು. ಈ ಪ್ರತಿಕ್ರಿಯೆ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊ. ಕೀರ್ತಿನಾಥ ಕುರ್ತಕೋಟಿ ವಹಿಸಿದ್ದರು. ಡಾ. ಎಚ್. ಜೆ. ಲಕ್ಕಪ್ಪಗೌಡ, ಎಂ. ಎಚ್. ಕೃಷ್ಣಯ್ಯ, ಶ್ರೀ ಬಿ. ಆರ್. ನಾರಾಯಣ, ಶ್ರೀಮೊಗಳ್ಳಿಗಣೇಶ ಮುಂತಾದವರು ಹಾಗೂ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು ತಂತಮ್ಮ ಸೃಜನಶೀಲ, ವಿಮರ್ಶಕ ಹಾಗೂ ವೈಚಾರಿಕ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದರು.

ಮೂರನೇ ಗೋಷ್ಠಿ'ಕುವೆಂಪು:ಪ್ರಕ್ರಿಯಾತ್ಮಕ ದಶಕಗಳು' ಕುರಿತಾಗಿತ್ತು. ಇದರಲ್ಲಿ ಪಾಲ್ಗೊಂಡ ಡಾ. ಕೆ. ವಿ. ನಾರಾಯಣ ಅವರು 'ಕುವೆಂಪು ಮೂಲಕ ಕನ್ನಡ ನವೋದಯ' ವನ್ನು ಹಾಗೂ ಡಾ. ಡಿ. ಆರ್. ನಾಗರಾಜ ಅವರು 'ಸಾಮಾಜಿಕ ನವೋದಯ'ವನ್ನು ವಿಶ್ಲೇಷಿಸಿದರೆ, ಡಾ. ಬಸವರಾಜ ಕಲ್ಗುಡಿ ಅವರು 'ಕುವೆಂಪು ಕೃತಿಗಳ ಮೂಲಕ ಸಾಹಿತ್ಯಕ ನವೋದಯ' ವನ್ನು ವಿವರಿಸಿದರು. ಡಾ. ಗಿರಡ್ಡಿ ಗೋವಿಂದರಾಜ ಗೋಷ್ಠಿಯ ಅಧ್ಯಕ್ಷತೆವಹಿಸಿದ್ದರು.

'ಕುವೆಂಪು:ಪ್ರತಿಕ್ರಿಯಾತ್ಮಕ ದಶಕಗಳು' ಈ ಕುರಿತು ನಡೆದ ಗೋಷ್ಠಿಯಲ್ಲಿ ಶ್ರೀ ಟಿ. ಪಿ. ಅಶೋಕ, ಶ್ರೀ ಕೆ. ಎಸ್. ಭಗವಾನ್ ಪಾಲ್ಗೊಂಡು, ಅನುಕ್ರಮವಾಗಿ 'ಕುವೆಂಪು-ಆಧುನಿಕತೆಯ ಪ್ರಶ್ನೆ' ಮತ್ತು ' ಕುವೆಂಪು-ಅಳವಡಿಕೆ ಕುರಿತು ವಿಚಾರಗಳನ್ನು ಮಂಡಿಸಿದರು. ಗೋಷ್ಠಿಯ ಅಧ್ಯಕ್ಷತೆವಹಿಸಿದ್ದ ಪ್ರೊ. ಜಿ. ಎಚ್. ನಾಯಕ ಅವರು 'ಕುವೆಂಪು-ಪರಿಷ್ಕಾರ'ದ ಕುರಿತು ತಮ್ಮ ಚಿಂತನೆಯನ್ನು ಹಂಚಿಕೊಂಡರು. ದಿ. ೩೦.೧೨.೯೪ ರಂದು ಈ ಕಾರ್ಯಕ್ರಮದ ಸಮಾರೋಪ ಸಮಾರಂಭ ನಡೆಯಿತು. ಡಾ. ಬೆಸಗರಹಳ್ಳಿ ರಾಮಣ್ಣನವರು ಸಮಾರೋಪ ಭಾಷಣ ಮಾಡಿದರು. ಈ ಎರಡು ದಿನಗಳ ಕಾಲ ಕುವೆಂಪು ಕುರಿತ ಸಾಕ್ಷ್ಯಚಿತ್ರ ಮತ್ತು ಭಾವಚಿತ್ರಗಳನ್ನು ಪ್ರದರ್ಶಿಸಲಾಯಿತು.

## 'ಮಂಟಪ'ದ ವಿಶೇಷ ಉಪನ್ಯಾಸಗಳು

ಬೇರೆಬೇರೆ ಕ್ಷೇತ್ರಗಳಲ್ಲಿ ಕೆಲಸಮಾಡುತ್ತಿರುವ ಕನ್ನಡದ ಸಾಹಿತಿ, ವಿದ್ವಾಂಸ ಹಾಗೂ ಸಂಶೋಧಕರನ್ನು ಬರಮಾಡಿಕೊಂಡು, ಅವರ ಚಿಂತನೆಗಳನ್ನು ಹಂಚಿಕೊಳ್ಳುವ 'ಮಂಟಪ'ದ ಉಪನ್ಯಾಸಗಳ ಯೋಜನೆಯು ವಿಶ್ವವಿದ್ಯಾಲಯದಲ್ಲಿ ಮೊದಲಿನಿಂದಲೂ

ನಡೆಯುತ್ತಿದೆ. ೧೯೯೪ ರಲ್ಲಿ ನಮ್ಮಲ್ಲಿಗೆ ಬಂದು, ಮೌಲಿಕ ವಿಚಾರಗಳನ್ನು ಹಂಚಿಕೊಂಡವರ ವಿವರವಿದು:

**೧.ಡಾ. ವಿಲ್ಯಂಮಾಡ್ತ**

'ಕಿಟೆಲ್ ಕೋಶ'ಕ್ಕೆ ನೂರುವರ್ಷ ತುಂಬುವ ಸಂದರ್ಭದಲ್ಲಿ ವಿಶ್ವವಿದ್ಯಾಲಯವು ದಿ ೩೦.೩.೯೫ ರಂದು 'ಕಿಟೆಲ್ಲರ ಕೋಶರಚನೆ' ಕುರಿತು ವಿಶೇಷ ಉಪನ್ಯಾಸನೀಡಿದರು. ''ಕಿಟೆಲ್‌ರಂತಹ ಕ್ರೈಸ್ತ ಮಿಷನರಿಗಳು ಕೈಯಲ್ಲಿ ಲೇಖನಿ ಹಿಡಿಯುವ ಬದಲು, ಬೈಬಲ್ ಹಿಡಿದು ಮತಾಂತರ ಕಾರ್ಯದಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿದ್ದರೆ, ಕನ್ನಡಿಗರು ಕಿಟಲರನ್ನೊಳಗೊಂಡಂತೆ ಅವರಲ್ಲಿ ಯಾರನ್ನೂ ಸ್ಮರಿಸುತ್ತಿರಲಿಲ್ಲ. 'ಕಿಟಿಲ್‌ಕೋಶ'ದ ಪುಟ ಪುಟಗಳಲ್ಲಿ ಅವರ ಅಪಾರ ವಿದ್ವತ್ತು, ಶ್ರದ್ಧೆ, ತಾಳ್ಮೆ ಪುಟಿದು ಕಾಣುತ್ತದೆ. ಇದು ಕೇವಲ ಶಬ್ದಕೋಶವಾಗಿರದೆ ಕನ್ನಡ ಸಾಂಸ್ಕೃತಿಕ ಕೋಶವೂ ಆಗಿದೆ- ಎಂದು ಮಾಡ್ತಾ ಅವರು ವಿವರಿಸಿದರು.

**೨. ಪ್ರೊ. ಎನ್. ಜಿ. ಮಹದೇವಪ್ಪ**

ಷಟ್ ಸ್ಥಲಗಳಲ್ಲಿ 'ಪ್ರಸಾದ'ಕ್ಕೆ ಒಂದು ಮಹತ್ವದ ಸ್ಥಾನವಿದೆ. ಅರ್ಪಿಸಿ ಪಡೆದ ಪವಿತ್ರವಾದ ನೈವೇದ್ಯವೇ ಪ್ರಸಾದ. ಪ್ರಸನ್ನತೆ ಎಂಬುದು ಇದರ ಅರ್ಥ. ಪ್ರಸಾದವನ್ನು ಸ್ವೀಕರಿಸುವುದರಿಂದ ಶ್ರೇಷ್ಠತೆ ಉಂಟಾಗುತ್ತದೆ. ಒಂದರ್ಥದಲ್ಲಿ ಇಡೀ ಪ್ರಪಂಚವೇ ಪ್ರಸಾದ. ಅದು ಪರಸ್ಪರ ಸಂಬಂಧವನ್ನು ಉಂಟುಮಾಡುವಂಥದ್ದು- ಎಂದು ಎನ್. ಜಿ. ಮಹದೇವಪ್ಪನವರು ದಿ. ೨.೨.೯೪ ರಂದು ನಡೆದ ಉಪನ್ಯಾಸದಲ್ಲಿ ವಿಶ್ಲೇಷಿಸಿದರು.

**೩. ವೆಂಕಟೇಶ ಕುಲಕರ್ಣಿ**

ಧಾರವಾಡದ ಖ್ಯಾತನ್ಯಾಯವಾದಿ ಶ್ರೀ ವೆಂಕಟೇಶ್ ಅವರು ದಿ. ೧೩.೪.೯೪ ರಂದು, ಕಾನೂನು ನೆರವು ಯೋಜನೆ ಯಾವ ರೀತಿ ಕೆಲಸಮಾಡುತ್ತಿದೆ ಎಂಬುದರ ಬಗ್ಗೆ ಉಪನ್ಯಾಸಕೊಟ್ಟರು. ಕಾನೂನು ಎಲ್ಲರಿಗೆ ಸರಿಸಮಾನವಾದದ್ದು. ಕಾನೂನುಪಾಲನೆ ಜೊತೆಗೆ ಕರ್ತವ್ಯಗಳನ್ನು ನಿರ್ವಹಿಸಬೇಕಾದುದು ಎಲ್ಲರ ಜವಾಬ್ದಾರಿ. ಕಾನೂನಿನ ದುರುಪಯೋಗವೆಂದರೆ ಕರ್ತವ್ಯದ ದುರುಪಯೋಗವೇ ಹೌದು-ಎಂದು ಅವರು ವಿವರಿಸಿದರು.

**೪. ಡಾ. ವಿ. ಎಸ್. ಪೆಂಡಕೂರು**

ಬಳ್ಳಾವಿ ಜಿಲ್ಲೆಯವರಾದ ಡಾ. ವಿ. ಎಸ್. ಪೆಂಡಕೂರ್ ಅವರು ಕೆನಡಾದ ವ್ಯಾಂಕೂವರ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು. ದಿ. ೨೦.೭.೯೪ ರಂದು ಕನ್ನಡ ವಿಶ್ವವಿದ್ಯಾಲಯಕ್ಕೆ ಭೇಟಿ ನೀಡಿದ್ದ ಶ್ರೀಯುತರು, '೨೧ನೇ ಶತಮಾನಕ್ಕೆ ಪೂರ್ವಸಿದ್ಧತೆಯನ್ನು ಯಾವ ರೀತಿ ಮಾಡಿಕೊಂಡಿರಬೇಕೆಂಬುದನ್ನು ಕುತೂಹಲಕರ ಅಂಶಗಳೊಂದಿಗೆ ವಿವರಿಸಿದರು.

**೫. ಡಾ. ಜಿ. ರಾಮಕೃಷ್ಣ**

ಕನ್ನಡ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾದ ಡಾ. ಜಿ. ರಾಮಕೃಷ್ಣ ಅವರು, ಪ್ರಾಚೀನ ಭಾರತ ಮತ್ತು ಕರ್ನಾಟಕದಲ್ಲಿ ವಿಜ್ಞಾನಕ್ಕೆ ಸಂಬಂಧಪಟ್ಟ ಅಧ್ಯಯನದ ಬೆಳವಣಿಗೆ ಕುರಿತು ಉಪನ್ಯಾಸ ನೀಡಿದರು.

**೬. ಡಾ. ದೇವೇಂದ್ರಕುಮಾರ ಹಕಾರಿ**

ಕನ್ನಡ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾದ ಡಾ. ಹಕಾರಿ ಅವರು, ೧.೧೦.೯೪ ರಂದು 'ಬುಡಕಟ್ಟು ಜಾನಪದ ಅಧ್ಯಯನ' ಕುರಿತು ವಿಶೇಷ ಉಪನ್ಯಾಸ ಮಾಡಿದರು. ಆಧುನಿಕ ನಾಗರಿಕ ಸಂಸ್ಕೃತಿಕೆಯು ಮೂಲಸಂಸ್ಕೃತಿಯ ಮೇಲೆ ಹೇಗೆ ದಾಳಿ ನಡೆಸಿದೆ ಹಾಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಬುಡಕಟ್ಟು ಜನಪದ ಸಮುದಾಯಗಳು ಯಾವ ರೀತಿ ಹೋರಾಟ ನಡೆಸಿವೆ ಎಂಬುದನ್ನು ಅವರು ವಿವರಿಸಿದರು.

**೭. ಡಾ. ಗುರುಲಿಂಗಕಾಪಸೆ**

ಕನ್ನಡ ವಿಶ್ವವಿದ್ಯಾಲಯದ ಇನ್ಫೋರ್ವ ಸಂದರ್ಶಕ ಪ್ರಾಧ್ಯಾಪಕ ವಿದ್ವಾಂಸರಾದ ಡಾ. ಗುರುಲಿಂಗಕಾಪಸೆ ಅವರು ದಿ. ೧.೧೦.೯೪ ರಂದು ಉಪನ್ಯಾಸನೀಡುತ್ತಾ, ಕರ್ನಾಟಕದ ಜಾನಪದ ಲೋಕಕ್ಕೆ ಹಲಸಂಗಿ ಗೆಳೆಯರು ನೀಡಿದ ಸೇವೆಯನ್ನು ವಿಶ್ಲೇಷಿಸಿದರು.

**೮. ಡಾ. ಬಸವರಾಜಸಬರದ**

ಗುಲ್ಬರ್ಗ ವಿಶ್ವವಿದ್ಯಾಲಯ ರಾಯಚೂರು ಸ್ನಾತಕೋತ್ತರ ಕೇಂದ್ರದ ಕನ್ನಡ ವಿಭಾಗದ ರೀಡರ್ ಡಾ. ಬಸವರಾಜ ಸಬರದ ಅವರು, ೨೩.೧೧.೯೪ ರಂದು ಇಲ್ಲಿಗೆ ಆಗಮಿಸಿ, ಗುಲ್ಬರ್ಗ ಜಿಲ್ಲೆಯ ಅನುಭಾವಿ ಕವಿಗಳನ್ನು ಕುರಿತು ಉಪನ್ಯಾಸನೀಡಿದರು.

**೯. ಡಾ. ಟೋಲ್ ಸ್ಕುಟ್ನಾಬ್ ಕಾಂಗಾಸ್ ಮತ್ತು ರಾಬರ್ಟ್ ಫಿಲಿಪ್ಸನ್**

ಡೆನ್ಮಾರ್ಕಿನ ಖ್ಯಾತ ಭಾಷಾಶಾಸ್ತ್ರಜ್ಞರಾದ ಡಾ. ಟೋಲ್ ಸ್ಕುಟ್ನಾಬ್ ಕಾಂಗಾಸ್ ಮತ್ತು ಡಾ. ರಾಬರ್ಟ್ ಫಿಲಿಪ್ಸನ್ ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ೧೧.೧೨.೯೪ ರಂದು ಭೇಟಿ ನೀಡಿದ್ದರು. ಜಗತ್ತಿನಾದ್ಯಂತ ಅಲ್ಪಸಂಖ್ಯಾತರ ಭಾಷೆಗಳು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಡಾ. ಕಾಂಗಾಸ್ ಅಧ್ಯಯನ ಮಾಡಿರುವರು. ಭಾಷಾ ಸಂಗೋಪನೆ ಹಾಗೂ ಭಾಷಾನಾಶಗಳ ವಿವಿಧ ಮಾದರಿಗಳನ್ನು ಶೋಧಿಸುತ್ತಿರುವ ಡಾ. ಫಿಲಿಪ್ಸನ್, ಭಾಷಾ ಕಲಿಕೆಯ ಬಗ್ಗೆ ಅಧ್ಯಯನಶೀಲರು. ಬಹುಭಾಷಿಕ ವಾತಾವರಣದ ಈ ಎಲ್ಲ ಸಂಕೀರ್ಣತೆಗಳನ್ನು ಈ ಇಬ್ಬರು ವಿದ್ವಾಂಸರು, ತಮ್ಮ ಉಪನ್ಯಾಸಗಳಲ್ಲಿ ಚರ್ಚಿಸಿದರು. ಒಂದೇ ವಿಷಯದ ವಿವಿಧ ಮುಖಗಳನ್ನು ಇವರಿಬ್ಬರೂ ಒಟ್ಟಾಗಿ ಉಪನ್ಯಾಸಗಳಲ್ಲಿ ಮಂಡಿಸುತ್ತಿದ್ದುದು ವಿಶಿಷ್ಟವಾಗಿತ್ತು.



**‘ದಿನಮಾತು’-‘ಹೊಸ ಓದು’**

ಮೇಲಿನ ಕಾರ್ಯಕ್ರಮಗಳ ಜತೆಗೆ ಉಲ್ಲೇಖಿಸಬೇಕಾದವೆಂದರೆ, ‘ದಿನಮಾತು’ ಮತ್ತು ‘ಹೊಸ ಓದು’ ಕಾರ್ಯಕ್ರಮಗಳು. ಕನ್ನಡ ವಿಶ್ವವಿದ್ಯಾಲಯದ ವಿದ್ವಾಂಸರು ‘ದಿನಮಾತು’ ಕಾರ್ಯಕ್ರಮದಲ್ಲಿ ಪ್ರತಿದಿನ ಬೆಳಿಗ್ಗೆ ಒಂದೊಂದು ವಿಷಯ ಕುರಿತಂತೆ ಉಪನ್ಯಾಸ ನೀಡುತ್ತಾರೆ. ಹಾಗೆಯೇ ಪ್ರತಿಶನಿವಾರ ವಿಶ್ವವಿದ್ಯಾಲಯದ ಸಹೋದ್ಯೋಗಿಯೊಬ್ಬರು ತಾವು ಓದಿದ ಹೊಸಕೃತಿಯ ಬಗ್ಗೆ ‘ಹೊಸ ಓದು’ ಕಾರ್ಯಕ್ರಮದಲ್ಲಿ, ತಮ್ಮ ಅನುಭವ ಹಂಚಿಕೊಳ್ಳುತ್ತಾರೆ. ಅನಂತರ ಈ ಕಾರ್ಯಕ್ರಮದಲ್ಲಿ ಕೂಡುಚರ್ಚೆ ನಡೆಯುತ್ತದೆ.

**ಈ. ಪುಸ್ತಕ ಪ್ರಕಟಣೆ**

‘ಕನ್ನಡ ವಿಶ್ವವಿದ್ಯಾಲಯವು ವಿದ್ಯೆಯನ್ನು ಕಲಿಯಲು ಅನುವುಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ವಿದ್ಯೆಯ ಸೃಷ್ಟಿ ಇದರ ಮುಖ್ಯ ಗುರಿ. ಹೊಸ ಬಗೆಯ ಸಂಶೋಧನೆಗೆ ಅನುಕೂಲವನ್ನು ಅವಕಾಶವನ್ನು ಮಾಡಿಕೊಟ್ಟಿರುವ ಕನ್ನಡ ವಿಶ್ವವಿದ್ಯಾಲಯವು ‘ಪ್ರಸಾರಾಂಗ’ದ ಮೂಲಕ ತಾನು



ಸೃಷ್ಟಿಸುತ್ತಿರುವ ಸಾಹಿತ್ಯವನ್ನು ಪ್ರಕಟಿಸುವ ಜೊತೆ ಜೊತೆಗೆ, ನಾಡಿನ ತಜ್ಞರಿಂದಲೂ ಗ್ರಂಥಗಳನ್ನು ಬರೆಯಿಸಿ, ಮುದ್ರಿಸಿ ಓದುಗರ ವಲಯಕ್ಕೆ ನೀಡುತ್ತಿದೆ. ಲೋಕದಲ್ಲಿನ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೆ ಕೊಡುವ ವಿಶಿಷ್ಟ ಪ್ರಕ್ರಿಯೆ ಇದು.'

ಮೇಲಿನ ಆಶಯಗಳೊಂದಿಗೆ ೧೯೯೯ರಲ್ಲಿ ಪ್ರಸಾರಾಂಗವು ಹಲವು ಗ್ರಂಥಗಳನ್ನು ಪ್ರಕಟಿಸಿತು. ಗ್ರಂಥಗಳ ಬಿಡುಗಡೆಯ ಸಮಾರಂಭವು ೧೯೯೯ ರ ಫೆಬ್ರವರಿ ೮ ರಂದು ಬೆಂಗಳೂರಿನಲ್ಲಿ ಜರುಗಿತು. ಕನ್ನಡ ನಾಡು, ನುಡಿ ಮತ್ತು ಸಂಸ್ಕೃತಿಯ ಸಮಗ್ರ ಪರಿಚಯವನ್ನು ಮಾಡಿಕೊಡುವ'ಕಿರಿಯರ ಕರ್ನಾಟಕ' ಕೋಶದ ಬಿಡುಗಡೆ ಕಾರ್ಯಕ್ರಮವದು. ಬಿಡುಗಡೆ ಮಾಡಿದವರು ಅಂದಿನ ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ಶ್ರೀ ಎಚ್. ವಿಶ್ವನಾಥ್ ಅವರು; ಉನ್ನತ ಶಿಕ್ಷಣ ಸಚಿವರಾಗಿದ್ದ ಶ್ರೀ ಎಫ್. ಎಂ. ಯಾಹ್ಯಾ ಅವರು 'ಸಾಮಾನ್ಯ ಶಸ್ತ್ರವೈದ್ಯದ ಕಾಯಿಲೆಗಳು' ಗ್ರಂಥವನ್ನು, ವಯಸ್ಕರ ಶಿಕ್ಷಣ ಸಚಿವರಾಗಿದ್ದ ಶ್ರೀ ಪ್ರಭಾಕರ ರಾಣೆಯವರು, ನವಸಾಕ್ಷರರಿಗಾಗಿ ಪ್ರಸಾರಾಂಗ ಹೊರತಂದ ೫೦ ಪುಸ್ತಕಗಳ ಕಂತನ್ನು ಬಿಡುಗಡೆಮಾಡಿದರು.

'ಕನ್ನಡ ಸಾಹಿತ್ಯ-ಈ ಶತಮಾನದ ನೋಟ' ಎಂಬ ಮಾಲಿಕೆಯಲ್ಲಿ ಕನ್ನಡದ ಮಹತ್ವದ ಬರಹಗಾರರನ್ನು ಕುರಿತಂತೆ ಸಂಪುಟಗಳನ್ನು ಕನ್ನಡ ವಿಶ್ವವಿದ್ಯಾಲಯ ಸಿದ್ಧಪಡಿಸುತ್ತಿದೆ. ಈ ಮಾಲಿಕೆಯ ಮೊದಲ ಕೃತಿ ಶ್ರೀ ಟಿ. ಪಿ. ಅಶೋಕ ಅವರು

ಸಂಪಾದಿಸಿದ 'ಶಿವರಾಮಕಾರಂತ' ಪುಸ್ತಕವನ್ನು, ಹಿರಿಯಕವಿ ಡಾ. ಜಿ. ಎಸ್. ಶಿವರುದ್ರಪ್ಪನವರು ಬಿಡುಗಡೆಮಾಡಿದರು. ಕನ್ನಡದ ನಾಟಕಕಾರ ಶ್ರೀ ಗಿರೀಶ್ ಕಾರ್ನಾಡ್ ಅವರು, 'ಶ್ರೀ ರಂಗರ ಸಂಪುಟ-೧'ಗ್ರಂಥವನ್ನು ಬಿಡುಗಡೆಮಾಡಿದರು. ಕನ್ನಡನಾಡು, ನುಡಿ, ಸಂಸ್ಕೃತಿ ಕುರಿತು ಅತ್ಯಂತ ಅಭಿಮಾನದಿಂದ ಸ್ಪಂದಿಸಿರುವ ಅನೇಕ ಕವಿಗಳ ಕವನ ಸಂಗ್ರಹವಾದ 'ಕನ್ನಡ ತಾಯಿಗೆ ನುಡಿನಮನ' ಗ್ರಂಥವನ್ನು (ಸಂ. ಪ್ರೊ, ಎಲ್. ಎಸ್. ಶೇಷಗಿರಿರಾವ್) ಕವಿ ಡಾ. ಸಿದ್ಧಲಿಂಗಯ್ಯ ಬಿಡುಗಡೆ ಮಾಡಿದರು.

ನವಸಾಕ್ಷರ ಪುಸ್ತಕ ಮಾಲೆ' ಯ ಎರಡನೇ ಕಂತಿನ ೬೦ ಪುಸ್ತಕಗಳ ಬಿಡುಗಡೆ ಸಮಾರಂಭ ೬.೪.೯೪ ರಂದು ಬೆಂಗಳೂರಿನಲ್ಲಿ ನಡೆಯಿತು. ಶಿಕ್ಷಣ ಇಲಾಖೆಯ ಆಯುಕ್ತರಾಗಿದ್ದ ಶ್ರೀಮತಿ ಥೆರೆಸಾ ಭಟ್ಟಾಚಾರ್ಯ ಅವರು ಪುಸ್ತಕಗಳನ್ನು ಬಿಡುಗಡೆ ಮಾಡಿದರು. ಲೋಕ ಶಿಕ್ಷಣ ನಿರ್ದೇಶನಾಲಯದ ನಿರ್ದೇಶಕ ಶ್ರೀ ಲೂಕೋಸ್ ವಲ್ಲತ್ತರೈ ಅವರು ಮುಖ್ಯ ಅತಿಥಿಯಾಗಿ ಆಗಮಿಸಿ, ಬಹು ಕಡಿಮೆ ಅವಧಿಯಲ್ಲಿ ನವಸಾಕ್ಷರ ಮಾಲೆಯ ೧೧೦ ಪುಸ್ತಕಗಳನ್ನು ಪ್ರಕಟಿಸಿಕೊಟ್ಟ ಕನ್ನಡ ವಿಶ್ವವಿದ್ಯಾಲಯಕ್ಕೆ ಅಭಿನಂದನೆ ಹೇಳಿದರು. ಅಧ್ಯಕ್ಷತೆ-ವಹಿಸಿದ ಕುಲಪತಿ ಡಾ. ಚಂದ್ರಶೇಖರ ಕಂಬಾರರು ಮಾತನಾಡಿ, "ಬೌದ್ಧಿಕ ಮಟ್ಟದಲ್ಲಿ ಇಂಗ್ಲಿಷ್ ಭಾಷೆಯನ್ನು ಎದುರಿಸಬೇಕಾಗಿರುವುದರಿಂದ ಕನ್ನಡ ಭಾಷೆಗೆ ಆ ಸಾಮರ್ಥ್ಯವನ್ನು ಕಲ್ಪಿಸಿಕೊಡಬೇಕಾದ ಅಗತ್ಯವಿದೆ "ಎಂದು ಪ್ರತಿಪಾದಿಸಿದರು.



'ಕರ್ನಾಟಕದ ಕೈಫಿಯತ್ತುಗಳು' ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಮಹತ್ವಾಕಾಂಕ್ಷೆಯಿಂದ ಪ್ರಕಟಿಸಿದ ಬೃಹತ್‌ಗ್ರಂಥ. ಈ ಗ್ರಂಥದ ಬಿಡುಗಡೆ ಸಮಾರಂಭ ನಡೆದದ್ದು ಬಳ್ಳಾರಿ ಜಿಲ್ಲೆಯ ಖನಿಜ- ವನಸಿರಿಗಳ ಕೇಂದ್ರದಲ್ಲಿರುವ ಸೊಂಡೂರಿನಲ್ಲಿ;ಕರ್ನಾಟಕ ಇತಿಹಾಸ ಅಕಾಡೆಮಿಯು ೧೯೯೪ ರ ಜುಲೈ, ೮ ರಂದು ಸೊಂಡೂರಿನಲ್ಲಿ ಏರ್ಪಡಿಸಿದ್ದ ವಾರ್ಷಿಕ ಸಮ್ಮೇಳನದ ಸಂದರ್ಭದಲ್ಲಿ ಈ ಕೃತಿಯನ್ನು ಮಾಜಿ ಅರ್ಥಸಚಿವರಾದ ಎಂ. ವೈ. ಘೋರ್ಪಡೆಯವರು ಬಿಡುಗಡೆ ಮಾಡಿದರು. ಗ್ರಂಥದ ಸಂಪಾದಕರಾದ ಡಾ. ಎಂ. ಎಂ. ಕಲಬುರ್ಗಿ, ಇತಿಹಾಸ ಅಕಾಡೆಮಿಯ ಅಧ್ಯಕ್ಷ ಪ್ರೊ. ಜಿ. ಎಸ್. ದೀಕ್ಷಿತ್ ಮತ್ತಿತರ ಗಣ್ಯರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ವಿಶ್ವವಿದ್ಯಾಲಯದ ಇನ್ನೆರಡು ಗ್ರಂಥಗಳ ಬಿಡುಗಡೆ ಸಮಾರಂಭವು ೧೯೯೪ ರ ಮಾರ್ಚ್ ೧೬ ರಂದು ಹಂಪಿಯ 'ನವರತ್ನಮಂಟಪ'ದಲ್ಲಿ ನೆರವೇರಿತು. ಡಾ. ವಿಲ್ಯಂ ಮಾಡ್ತ ಮತ್ತು ಶ್ರೀ ಆರ್. ವೈ. ಕುಲಕರ್ಣಿ ಅವರು ಬರೆದ 'ನಿಘಂಟು ರಚನಾ ವಿಜ್ಞಾನ' ಮತ್ತು ಶ್ರೀ ರಂ. ಶಾ. ಲೋಕಾಪುರ ಅವರು ಬರೆದ 'ಹಳಗನ್ನಡ ಮತ್ತು ಮರಾಠಿ' ಗ್ರಂಥವನ್ನು ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದ ಡಾ. ಹಂಪ ನಾಗರಾಜಯ್ಯ ಬಿಡುಗಡೆಮಾಡಿದರು. ''ನಿಘಂಟು ರಚನಾ ವಿಜ್ಞಾನದ ಬಗ್ಗೆ ಬಂದ ಮೊದಲ ಕನ್ನಡಗ್ರಂಥವಿದು, ನಿಘಂಟು ಕ್ಷೇತ್ರಕ್ಕೆ ಹೆಬ್ಬಾಗಿಲು ತೆರೆದಂತಾಗಿದೆ. 'ಹಳಗನ್ನಡ ಮತ್ತು ಮರಾಠಿ' ಗ್ರಂಥವು ನಮ್ಮ ನಡುವಿನ ಭಾಷಿಕ ಬಾಂಧವ್ಯವನ್ನು ವಿವರಿಸುವ ಉಪಯುಕ್ತ ಕೃತಿ'' ಎಂದು ಡಾ. ಹಂಪನಾ ಹೇಳಿದರು.

**ಪುಸ್ತಕ ಸಂಸ್ಕೃತಿ ಯಾತ್ರೆ**

ಕನ್ನಡದ ಪುಸ್ತಕಗಳನ್ನು ಕೊಂಡುಓದುವ ಅಭಿರುಚಿಯನ್ನೂ ಪುಸ್ತಕ ಪ್ರೇಮವನ್ನೂ ಬೆಳೆಸುವ, ಹಾಗೂ ಕನ್ನಡಿಗರ ಸಾಂಸ್ಕೃತಿಕ ಆಲೋಚನೆಗಳನ್ನು ವಿನಿಮಯಮಾಡಿಕೊಳ್ಳುವ ಉದ್ದೇಶದಿಂದ ಕನ್ನಡ ವಿಶ್ವವಿದ್ಯಾಲಯವು ಪ್ರತಿವರ್ಷ ಕರ್ನಾಟಕ ರಾಜ್ಯಾದಂತ 'ಪುಸ್ತಕ ಸಂಸ್ಕೃತಿ ಯಾತ್ರೆ' ಕಾರ್ಯಕ್ರಮವನ್ನು ನಡೆಸುತ್ತಿದೆ; ೧೯೯೩ ರ ಕರ್ನಾಟಕ ರಾಜ್ಯೋತ್ಸವ ದಿನದಂದು ಆರಂಭವಾದ ಈ ವಿಶಿಷ್ಟ ಯಾತ್ರಾ ಕಾರ್ಯಕ್ರಮ ಮಂಡ್ಯದಲ್ಲಿ ನಡೆದ ೬೩ ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದವರೆಗೆ ಯಶಸ್ವಿಯಾಗಿ ನೆರವೇರಿತು. ೧೯೯೪ ರಲ್ಲೂ ಈ ಕಾರ್ಯಕ್ರಮವನ್ನು ವಿಶ್ವವಿದ್ಯಾಲಯವು ಮುಂದುವರೆಸಿತು. 'ಪುಸ್ತಕ ಸಂಸ್ಕೃತಿಯಾತ್ರೆ' ಬೆಳಗಾವಿ, ಹೊನ್ನಾವರ, ಧಾರವಾಡ, ಶಿವಮೊಗ್ಗ, ಬಿ. ಆರ್. ಪ್ರಾಜೆಕ್ಟ್, ತೀರ್ಥಹಳ್ಳಿ, ಕುಂದಾಪುರ, ಮರವಂತೆ, ಉಡುಪಿ, ಸುರತ್ಕಲ್, ಮಂಗಳೂರು, ಹಾಸನ ಈ ಮುಂತಾದ ಊರುಗಳಲ್ಲಿ ನಡೆಯಿತು. ಪುಸ್ತಕಗಳ ಪ್ರದರ್ಶನದ ಜೊತೆಗೆ ಪುಸ್ತಕ ಮಾರಾಟವು ಪರಿಣಾಮಕಾರಿಯಾದದ್ದು ಒಂದು ವಿಶೇಷ. ಅಲ್ಲದೆ ಪ್ರತಿ ಕಾರ್ಯಕ್ರಮದಲ್ಲೂ ವಿಚಾರ



ಸಂಕಿರಣ-ಕವಿಗೋಷ್ಠಿಗಳನ್ನು ಜೋಡಿಸಲಾಗಿತ್ತು. ಶಾಲಾ- ಕಾಲೇಜುಗಳಿಂದ 'ಪುಸ್ತಕಯಾತ್ರೆ'ಗೆ ಸಿಕ್ಕಿದ ಸ್ವಾಗತವು ವಿಶೇಷ ಒಂದು ಅನುಭವವಾಗಿತ್ತು.

**'ಬಿತ್ತರ'ದ ಬೆಳವಣಿಗೆ**

ಕನ್ನಡದ ಸಣ್ಣಪತ್ರಿಕೆಗಳ ಬೆಳವಣಿಗೆಗಾಗಿ ಕನ್ನಡ ವಿಶ್ವವಿದ್ಯಾಲಯ ಆರಂಭಿಸಿದ ಉಪಯುಕ್ತ ಯೋಜನೆ 'ಬಿತ್ತರ'. ೧೯೯೩ ರ ಜನವರಿಯಲ್ಲಿ ಸುರುವಾದ ಈ ಕಾರ್ಯಕ್ರಮವು ಈಗ ಎರಡನೇ ವರ್ಷವನ್ನು ಪೂರೈಸಿತು. ೧೯೯೪ ಮುಕ್ತಾಯದವರೆಗೆ ಸುಮಾರು ೩೦೦ ಚಿಕ್ಕ ಮತ್ತು ಮಧ್ಯಮ ವರ್ಗದ ಕನ್ನಡ ಪತ್ರಿಕೆಗಳು 'ಬಿತ್ತರ' ದ ಪ್ರಯೋಜನವನ್ನು ಪಡೆಯಲು ಮುಂದೆ ಬಂದಿರುವುದು ಗಮನಾರ್ಹ ವಿಷಯ. ಈಗ ಮದರಾಸು, ಕಾಸರಗೋಡು, ಮುಂಬಯಿ ಪಟ್ಟಣಗಳ ಕನ್ನಡಿಗರಿಗೂ 'ಬಿತ್ತರ' ತಲುಪುತ್ತಿದೆ.

ಕನ್ನಡದ ಲೇಖಕರಿಂದ ಲೇಖನಗಳನ್ನು ಬರೆಸಿ, ಅವನ್ನು ಚಿಕ್ಕಪತ್ರಿಕೆಗಳಿಗೆ ಒದಗಿಸಿಕೊಡುವ ಇಂತಹ ಯೋಜನೆ ವಿನೂತನ ಮಾತ್ರವಲ್ಲ, ರಾಷ್ಟ್ರದ ಯಾವುದೇ ವಿಶ್ವವಿದ್ಯಾಲಯದಲ್ಲೂ ಇಲ್ಲ. ಈ ಕಾರ್ಯಕ್ಕಾಗಿ ವಿಶ್ವವಿದ್ಯಾಲಯವು ಯಾವುದೇ ರೀತಿಯ ಸಂಭಾವನೆಯನ್ನು ಕೊಡುವುದಿಲ್ಲ ಹಾಗೂ ಪತ್ರಿಕೆಗಳಿಂದ ಪಡೆಯುವುದಿಲ್ಲ. ಸಣ್ಣ ಪತ್ರಿಕೆಗಳ ಬೆಳವಣಿಗೆಯಲ್ಲಿ ನಮ್ಮೆಲ್ಲರ ಜವಾಬ್ದಾರಿಯೂ ಇರಬೇಕೆಂದು

ವಿಶ್ವವಿದ್ಯಾಲಯ ಭಾವಿಸಿ, ಈ ಯೋಜನೆಯನ್ನು ಮುಂದುವರಿಸಿದೆ. ಲೇಖಕರ, ಪತ್ರಿಕೆಗಳ ಹಾಗೂ ಸ್ಥಳೀಯ ಓದುಗರ ನಡುವೆ ತಿಳುವಳಿಕೆಯನ್ನು ಪಡೆಯುವ ಮತ್ತು ಕೊಡುವ ಸಂಪರ್ಕಸೇತುವೆಯಾಗಿ' ಬಿತ್ತರ' ಕಾರ್ಯನಿರ್ವಹಿಸುತ್ತಿದೆ.

## III: ಹೊಸ ಟಿಸಿಲುಗಳು

### (೧) ಕಾವ್ಯ ಕೇಂದ್ರ

ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ವಿಭಾಗವು 'ಕಾವ್ಯಕೇಂದ್ರ'ವನ್ನು ಆರಂಭಿಸಿದೆ. ವಿಶ್ವದ ಉತ್ತಮ ಕಾವ್ಯವೆಲ್ಲ ಕನ್ನಡದಲ್ಲಿ ಲಭ್ಯವಾಗಬೇಕು. ಕನ್ನಡದ ಉತ್ತಮ ಕಾವ್ಯ ಭಾರತದ ಭಾಷೆಗಳಲ್ಲಿ ಮತ್ತು ವಿಶ್ವದ ಮುಖ್ಯಭಾಷೆಗಳಲ್ಲಿ ದೊರೆಯುವಂತಾಗಬೇಕು. ಇದು ಕಾವ್ಯಕೇಂದ್ರದ ಮುಖ್ಯ ಉದ್ದೇಶ. ಕಾವ್ಯದ ಕೊಳು-ಕೊಡುಗೆ ಅನನ್ಯವಾಗಿ ನಡೆಯಬೇಕೆಂಬುದೇ ಈ ಕೇಂದ್ರದ ಮುಖ್ಯ ಅಪೇಕ್ಷೆ.

ಈ ಮಹತ್ವಾಕಾಂಕ್ಷೆಯ 'ಕಾವ್ಯಕೇಂದ್ರ'ವನ್ನು ಡಾ. ಯು.ಆರ್. ಅನಂತಮೂರ್ತಿ ಅವರು ೨೮.೧೨.೯೪ ರಂದು ಉದ್ಘಾಟಿಸಿದರು. ''ಕಾವ್ಯ ಕಾಲಬದ್ಧವಲ್ಲದ್ದು, ಕಾಲಾತೀತವಾದುದು. ಹೊಸನಾಗರಿಕತೆಯನ್ನು ಸೃಷ್ಟಿಸಬಲ್ಲ ಶಕ್ತಿ ಕಾವ್ಯಕ್ಕಿದೆ. ಕವಿತೆಯನ್ನು ಬಲ್ಲವ ಮಾತ್ರ ವಿಮರ್ಶಕನಾಗಬಲ್ಲ. ಕಾವ್ಯದ ಸಂಪೂರ್ಣ



ಅರಿವುಳ್ಳವ ಸರಿಯಾದ ವಿಮರ್ಶೆಮಾಡಬಲ್ಲ. ಕಾವ್ಯವನ್ನು ಪ್ರೀತಿಸಲಾರದವ ದೊಡ್ಡ ಕಾದಂಬರಿಕಾರ, ನಾಟಕಕಾರ ಆಗಲಾರ. ಕಾವ್ಯ ಎನ್ನುವುದು ಎಲ್ಲ ಕೃತಿಗಳಲ್ಲಿ ಇರಬಹುದಾದ ಅಂಶ'' ಎಂದು ಹೇಳಿದ ಅನಂತಮೂರ್ತಿಯವರು, ''ಕನ್ನಡ ಭಾಷೆಗೆ ಇನ್ನೂ ಅಪೂರ್ವವಾದ ಶಕ್ತಿ ಇದೆ. ೮೦೦ ವರ್ಷದ ಕಾವ್ಯಕ್ಕೆ, ಭಾಷೆಗೆ ನಾವು ಹತ್ತಿರ ಇದ್ದೇವೆ. ಬಸವಣ್ಣ, ಕುಮಾರವ್ಯಾಸರಂತಹ ಕವಿಗಳು, ಸಾಹಿತಿಗಳು ನಮಗೆ ಹತ್ತಿರದವರಾಗಿದ್ದಾರೆ. ಹಳೆಯ ಸಾಹಿತ್ಯ- ಸಾಹಿತಿಗಳ ಕುರಿತು ಇಂದಿಗೂ ಚರ್ಚಿಸುತ್ತೇವೆ, ಮಾತನಾಡುತ್ತೇವೆ. ಆದರೆ ಐರೋಪ್ಯ ಭಾಷೆಗಳಿಗೆ ಇಂತಹ ನಿಕಟತೆ ಇಲ್ಲ. ಅವು ಹಿಂದಿನ ನೂರುವರ್ಷಕ್ಕೂ ಹತ್ತಿರವಾಗಿಲ್ಲ'' ಎಂದು ವಿವರಿಸಿದರು. ''ನಮ್ಮ ಮಹತ್ವಾಕಾಂಕ್ಷೆಯ ಈ ಕಾವ್ಯಕೇಂದ್ರವನ್ನು ವಿಶ್ವವ್ಯಾಪಿಯಾಗಿ ಬೆಳೆಸುವ ಆಲೋಚನೆ ಇದೆ'' ಎಂದು ಅಧ್ಯಕ್ಷತೆ ವಹಿಸಿದ್ದ ಕುಲಪತಿ ಡಾ. ಚಂದ್ರಶೇಖರ ಕಂಬಾರರು ತಿಳಿಸಿದರು. ಕಾವ್ಯಕೇಂದ್ರದ ಉದ್ದೇಶಕ್ಕೆ ಪೂರಕವಾಗಿ, ಆ ಸಂದರ್ಭದಲ್ಲಿ ಹಿರಿಯ ಕವಿ ಶ್ರೀ ಚೆನ್ನವೀರಕಣವಿ, ಡಾ. ಅನಂತಮೂರ್ತಿ, ಹಾಗೂ ಕಂಬಾರರು ತಮ್ಮ ಸ್ವರಚಿತ ಕವನಗಳನ್ನು ವಾಚಿಸಿದರು. ಕಾವ್ಯಕೇಂದ್ರದ ನಿರ್ದೇಶಕರಾದ ಪ್ರೊ. ಓ.ಎಲ್.ನಾಗಭೂಷಣ ಸ್ವಾಮಿ ಕೇಂದ್ರದ ಉದ್ದೇಶವನ್ನು ವಿವರಿಸಿದರು.

### (೨) ನ್ಯಾಸ

'ವಿದ್ಯಾರಣ್ಯ'ದ 'ಅಕ್ಷರ' ಕನ್ನಡ ವಿಶ್ವವಿದ್ಯಾಲಯದ ದೊಡ್ಡ ಗ್ರಂಥಾಲಯವಾದರೆ, 'ನ್ಯಾಸ' ಭಾಷಾನಿಕಾಯದ ಪುಟ್ಟ ಗ್ರಂಥಾಲಯ. ದೈನಂದಿನ ಸಂಶೋಧನೆಗೆ ತಕ್ಷಣ ಗ್ರಂಥ ಸೌಲಭ್ಯವನ್ನು ಒದಗಿಸಿಕೊಳ್ಳುವುದು ಇದರ ಮುಖ್ಯ ಉದ್ದೇಶ. ವಿಶ್ವವಿದ್ಯಾಲಯದ ಅಧ್ಯಾಪಕರು ತಮ್ಮ ವೈಯಕ್ತಿಕ ಪುಸ್ತಕ ಸಂಗ್ರಹಗಳಿಂದ ಮುಖ್ಯವಾದ ಪುಸ್ತಕಗಳನ್ನು ಇಲ್ಲಿ ನ್ಯಾಸವಾಗಿಟ್ಟು, ಪುಸ್ತಕಗಳನ್ನು ಪರಸ್ಪರರ ಅಗತ್ಯಕ್ಕೆ ದೊರಕಿಸುವುದು ಇದರ ಕಾರ್ಯವಿಧಾನವಾಗಿದೆ. ಡಾ. ಜಿ.ಎಸ್. ಶಿವರುದ್ರಪ್ಪನವರು ೨೯.೧೨.೯೫ ರಂದು 'ನ್ಯಾಸ'ವನ್ನು ಉದ್ಘಾಟಿಸಿದರು. ಡಾ. ದೇ.ಜವರೇಗೌಡರು ಅಧ್ಯಕ್ಷತೆ ವಹಿಸಿದ್ದರು.

### (೩) ಪಿಎಚ್.ಡಿ. ಯ ಮೌಖಿಕ ಮೌಲ್ಯಮಾಪನ

'ವಿದ್ಯಾರಣ್ಯ' ಆವರಣದ 'ತ್ರಿಪದಿ'ಯ ಹೊರಾಂಗಣದ ಹಸಿರು ಹುಲ್ಲ ಹಾಸಿನಲ್ಲಿ ೨೮.೧೨.೯೪ ರಂದು ಸಂಜೆ ನಡೆದ ಕಾರ್ಯಕ್ರಮ ಅಪರೂಪದ ಕಾರ್ಯಕ್ರಮವಾಗಿತ್ತು. ಪ್ರೊ. ಕೀರ್ತಿನಾಥ ಕುರ್ತಕೋಟಿಯವರ ಮಾರ್ಗದರ್ಶನದಲ್ಲಿ 'ಬೇಂದ್ರೆ ಮತ್ತು ಕನ್ನಡ ಭಾವಗೀತೆಗಳ ಸ್ವರೂಪ' ಎಂಬ ವಿಷಯದ ಬಗ್ಗೆ ಮಹಾಪ್ರಬಂಧವನ್ನು ಸಿದ್ಧಪಡಿಸಿಕೊಟ್ಟ ಶ್ರೀಕೃಷ್ಣಕಟ್ಟಿಯವರು ಈ ಸಂದರ್ಭದಲ್ಲಿ ಮೌಖಿಕ ಪರೀಕ್ಷೆಗೆ ಒಡ್ಡಿಕೊಂಡಿದ್ದರು. ಕನ್ನಡ ವಿಶ್ವವಿದ್ಯಾಲಯದ ಮೊಟ್ಟಮೊದಲ ಪಿಎಚ್.ಡಿ. ಪದವಿಗೆ ಹೀಗೆ ಮುಕ್ತ ಮೌಖಿಕ ಮೌಲ್ಯಮಾಪನ ಅಂದು ನಡೆಯಿತು. ಎಲ್ಲೆದುರಿನಲ್ಲಿ ಬಹಿರಂಗ ಚರ್ಚೆಯ ಮೂಲಕ ಪಿಎಚ್.ಡಿ., ಮೌಖಿಕ ಮೌಲ್ಯಮಾಪನ



ನಡೆಸುವ ಈ ಪ್ರಯತ್ನವು ಹೊಸ ಪ್ರಯೋಗವಾಗಿತ್ತು, ಪರಂಪರೆ ಹಾಕಿಕೊಡುವುದಾಗಿತ್ತು. ವಿಶ್ವವಿದ್ಯಾಲಯದ ಸಂಶೋಧಕರು, ಪಿಎಚ್.ಡಿ. ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ಪ್ರಶ್ನೆಗಳನ್ನು ಕೇಳಿ ಪ್ರಬಂಧಕಾರರನ್ನು ಒರೆಗೆ ಹಚ್ಚಿದರು. ಮಹಾಪ್ರಬಂಧದ ಮೌಲ್ಯಮಾಪಕರಾಗಿದ್ದ ಡಾ. ಯು.ಆರ್.ಅನಂತಮೂರ್ತಿ ಹಾಗೂ ಶ್ರೀಕೆ.ವಿ.ಸುಬ್ಬಣ್ಣ, ಮಾರ್ಗದರ್ಶಕರಾಗಿದ್ದ ಪ್ರೊ. ಕೀರ್ತಿನಾಥ ಕುರ್ತಕೋಟಿ, ಕುಲಪತಿ ಡಾ. ಚಂದ್ರಶೇಖರ ಕಂಬಾರ- ಮೊದಲಾದವರ ಉಪಸ್ಥಿತಿಯಲ್ಲಿ ಚರ್ಚೆ ನಡೆಯಿತು.

(೪) ದಿನ ದಿನ

ವಿಶ್ವವಿದ್ಯಾಲಯದ ಕನ್ನಡ ಭಾಷಾಭಿವೃದ್ಧಿ ವಿಭಾಗವು ೧೯೯೪ರಲ್ಲಿ ಒಂದು ಹೊಸ ಪ್ರಕ್ರಿಯೆಯನ್ನು ಆರಂಭಿಸಿತು. ಕನ್ನಡಭಾಷೆ ದಿನೇದಿನೇ ಹೇಗೆ ಬದಲಾವಣೆಗಳನ್ನು ಪಡೆದುಕೊಳ್ಳುತ್ತಾ ಬೆಳವಣಿಗೆಯನ್ನು ಸಾಧಿಸುತ್ತಿದೆ ಎಂಬುದನ್ನು ದಾಖಲಿಸುವ ಪ್ರಯತ್ನವನ್ನು ಮಾಡಲಾಯಿತು. ಅದುವೇ 'ದಿನದಿನ'. ಜನವರಿ ೧ ರಿಂದ ಡಿಸೆಂಬರ್ ೩೦ ರವರೆಗೆ ಪ್ರತಿದಿನ ವಿಶ್ವವಿದ್ಯಾಲಯದ ಸೂಚನಾಫಲಕದಲ್ಲಿ ಒಂದು ಹೊಸ ಪದ, ಪದರಚನೆ, ವಾಕ್ಯ ಪ್ರಯೋಗವನ್ನು ಲಗತ್ತಿಸಿ, ಸಹೋದ್ಯೋಗಿಗಳೆಲ್ಲರ ಗಮನಕ್ಕೆ ತರುತ್ತಾ, ಈ ಬಗ್ಗೆ ಪ್ರತಿಕ್ರಿಯೆಗಳನ್ನು ಸಂಗ್ರಹಿಸುತ್ತಾ ಬರಲಾಯಿತು. ಈಗ ಅದೊಂದು ಪುಟ್ಟಕೋಶವಾಗಿದೆ. ಭಾಷೆಯ ಬೆಳವಣಿಗೆಯ ದಿಕ್ಕನ್ನು ಗುರುತಿಸುವ ಈ

ಬಗೆಯ ಪ್ರಗತಿಯನ್ನು ಶ್ರೀ ಸುಜ್ಞಾನಮೂರ್ತಿಯವರು ಡಾ. ಕೆ.ವಿ. ನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

**(೫) ನಿಯತಕಾಲಿಕೆಗಳು**

ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸುತ್ತಿರುವ 'ಚೆಲುವ ಕನ್ನಡ' 'ಪುಸ್ತಕಮಾಹಿತಿ', 'ವಿಜ್ಞಾನ ಸಂಗಾತಿ', 'ಕನ್ನಡ ಅಧ್ಯಯನ'- ಈ ನಿಯತ ಕಾಲಿಕೆಗಳ ಸಾಲಿಗೆ ೧೯೯೪ರಲ್ಲಿ 'ನಮ್ಮ ಕನ್ನಡ', 'ಕ.ವಿ.ಕಣಜ', ಎಂಬ ಮತ್ತೆರಡು ಪತ್ರಿಕೆಗಳು ಸೇರ್ಪಡೆಯಾದವು.

**ನಮ್ಮ ಕನ್ನಡ**

ಆಧುನಿಕಗೊಳ್ಳುತ್ತಿರುವ ಕನ್ನಡ ಭಾಷೆಯಲ್ಲಿ ದಿನದಿನವೂ ಸೇರ್ಪಡೆಯಾಗುತ್ತಿರುವ ಶಬ್ದ ಹಾಗೂ ಪದ ರಚನೆಗಳನ್ನು ಕನ್ನಡ ವಿಶ್ವವಿದ್ಯಾಲಯದಲ್ಲಿ ನಿರಂತರವಾಗಿ ದಾಖಲು ಮಾಡಲಾಗುತ್ತಿದೆ. ವಿವಿಧ ವಲಯಗಳಲ್ಲಿ ಕನ್ನಡ ಬಳಕೆಯ ಸ್ವರೂಪವನ್ನು ಕುರಿತು ನಡೆಯುತ್ತಿರುವ ವಿಶಿಷ್ಟವಾದ ಯೋಜನೆಯಿದು. ವಿಶ್ವವಿದ್ಯಾಲಯದ ಭಾಷಾಭಿವೃದ್ಧಿ ವಿಭಾಗವು ಈ ಯೋಜನೆಯನ್ನು ನಡೆಸುತ್ತಿದೆ. ಇದರ ಒಂದು ಭಾಗವಾಗಿ ಜುಲೈ ೯೪ ರಿಂದ 'ನಮ್ಮ ಕನ್ನಡ' ಪತ್ರಿಕೆ ಪ್ರತಿತಿಂಗಳೂ ಪ್ರಕಟವಾಗುತ್ತಿದೆ.

**ಕವಿಕಣಜ**

ಕರ್ನಾಟಕದ ಸಮಗ್ರ ಮಾಹಿತಿಯನ್ನು ಕಲೆಹಾಕುವ ಸಲುವಾಗಿ ವಿಶ್ವ ವಿದ್ಯಾಲಯ 'ಮಾಹಿತಿ ಕೇಂದ್ರ' ವನ್ನು ತೆರೆದಿದೆಯಷ್ಟೆ. ಈ ಕೇಂದ್ರದಿಂದ ಪ್ರಕಟವಾಗುವ ಪತ್ರವೇ 'ಕ.ವಿ.ಕಣಜ'. ೧೯೯೪ರ ಸೆಪ್ಟೆಂಬರ್‌ನಿಂದ ಇದು ಪ್ರಕಟವಾಗುತ್ತಿದೆ. ತಾನು ಸಂಗ್ರಹಿಸಿದ ಮಾಹಿತಿಯನ್ನು ಸಂಶೋಧಕರಿಗೆ ಆಸಕ್ತರಿಗೆ ದೊರಕಿಸಿಕೊಡುವುದೇ 'ಕಣಜ' ಮುಖ್ಯ ಆಶಯ.

## IV ಸಮ್ಮಾನ, ಅಭಿನಂಧನೆ - ಭೇಟಿ

ದೊಡ್ಡ ಸಾಧನೆಗಳನ್ನು ಮಾಡಿದ ಕನ್ನಡದ ಹಿರಿಯ ಸಾಹಿತಿಗಳನ್ನು, ಕಲಾವಿದರನ್ನು ಕರೆದು ಗೌರವಿಸುವ ಪರಂಪರೆಯನ್ನು ಕನ್ನಡ ವಿಶ್ವವಿದ್ಯಾಲಯ ಮುಂದುವರಿಸಿಕೊಂಡು ಬಂದಿದೆ. ಈ ವರ್ಷ ನಮ್ಮ ಸಮ್ಮಾನವನ್ನು ಪಡೆದವರು ಇವರು.

**(೧) ಡಾ. ಚದುರಂಗರಿಗೆ**

ಕನ್ನಡ ಸಾಹಿತ್ಯ ಸಮ್ಮೇಳನಗಳಿಗೆ ಅಧ್ಯಕ್ಷರಾದವರನ್ನು, ಸಮ್ಮೇಳನಕ್ಕೆ ಮೊದಲೇ ಕರೆಸಿ ವಿಶ್ವವಿದ್ಯಾಲಯದ ಗೌರವ ಸಮರ್ಪಣೆ ಮಾಡುವುದು ಒಂದು ಸಂಪ್ರದಾಯವಾಗಿದೆ. ೬೩ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ

ಅಧ್ಯಕ್ಷರಾದ ಹಿರಿಯ ಲೇಖಕ ಡಾ. ಚದುರಂಗರನ್ನು, ೧೯೯೪ರ ಫೆಬ್ರವರಿ ೪ ರಂದು ಅತ್ಯಂತ ಗೌರವಪೂರ್ವಕವಾಗಿ ಸಮ್ಮಾನಿಸಲಾಯಿತು. ಕುಲಪತಿ ಡಾ. ಚಂದ್ರಶೇಖರ ಕಂಬಾರರು ಚದುರಂಗ ಅವರಿಗೆ ಶಾಲುಹೊದಿಸಿ, ಶ್ರೀಗಂಧದ ಮಾಲೆ ಹಾಕಿ, ನೆನಪಿನ ಕಾಣಿಕೆ ನೀಡಿ ಗೌರವಿಸಿದರು. "ನಮ್ಮಲ್ಲಿ ಎಷ್ಟು ತಲೆಮಾರುಗಳಿವೆಯೋ ಅಷ್ಟೂ ತಲೆಮಾರುಗಳೊಂದಿಗೆ ಸ್ನೇಹ ಸಂಪಾದಿಸಿದವರು ಚದುರಂಗರು. ಪರಂಪರೆಗಳಿಂದ ಅವರು ಕಲಿತಿದ್ದಾರೆ, ಕಲಿಸಿದ್ದಾರೆ. ಬದುಕನ್ನು ಗಾಢವಾಗಿ ಪ್ರೀತಿಸುವ ಚದುರಂಗರು ಅಜಾತ ಶತ್ರುವೇ ಹೌದು" ಎಂದು ಕಂಬಾರರು ಚದುರಂಗರನ್ನು ವಿಶ್ಲೇಷಣೆ ಮಾಡಿದರು. ಡಾ. ಕೆ.ವಿ.ನಾರಾಯಣ, ಪ್ರೊ. ಓ.ಎಲ್.ನಾಗಭೂಷಣ ಸ್ವಾಮಿ, ಡಾ. ಎಚ್.ಎಸ್. ರಾಘವೇಂದ್ರರಾವ್ ಅವರು ಚದುರಂಗನ್ನು ಅಭಿನಂದಿಸಿ ಮಾತನಾಡಿದರು.



### ೨) ಡಾ. ಯು.ಆರ್. ಅನಂತಮೂರ್ತಿಯವರಿಗೆ

ಕನ್ನಡ ಸಾಹಿತ್ಯಕ- ಸಾಂಸ್ಕೃತಿಕ ಲೋಕಕ್ಕೆ ಆರನೆಯ 'ಜ್ಞಾನಪೀಠ ಪ್ರಶಸ್ತಿ'ಯ ಹಿರಿಮೆಯನ್ನು ತಂದುಕೊಟ್ಟ ಲೇಖಕರೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಆದ ಡಾ. ಯು.ಆರ್. ಅನಂತಮೂರ್ತಿಯವರನ್ನು ಕನ್ನಡ ವಿಶ್ವವಿದ್ಯಾಲಯ ಆದರಾಭಿಮಾನಗಳಿಂದ ಸಮ್ಮಾನಿಸಿ, ಗೌರವಿಸಿತು. ೨೮.೧೨.೯೪ರಂದು ನಡೆದ ಸರಳ

ಸಮಾರಂಭದಲ್ಲಿ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರು ಅನಂತಮೂರ್ತಿಯವರಿಗೆ ಶಾಲುಹೊದಿಸಿ, ಉಗ್ರನರಸಿಂಹನ ಕಂಚಿನ ಪ್ರತಿಮೆಯನ್ನು ಕಾಣಿಕೆಯಾಗಿ ಕೊಟ್ಟು ಸಮ್ಮಾನಿಸಿದರು. ''ತಮ್ಮ ಕೃತಿಗಳ ಮೂಲಕ, ಮಾತಿನ ಮೂಲಕ, ಚಿಂತನೆಗಳ ಮೂಲಕ ತಮ್ಮ ನಂತರದ ತಲೆಮಾರಿನ ಮನಸ್ಸನ್ನು ಬೆಳೆಸಿದವರು ಅನಂತಮೂರ್ತಿಯವರು. ಇದು ಅವರ ಸಾಹಿತ್ಯ ಸಾಧನೆಯ ಜೊತೆಗೆ ಗುರುತಿಸಬೇಕಾದ ಮಹತ್ವದ ಅಂಶ. ಅವರ ಒಟ್ಟು ಸಾಹಿತ್ಯವನ್ನು ಇನ್ನಷ್ಟು ಆಳವಾಗಿ ಅಧ್ಯಯನ ಮಾಡಬೇಕು'' ಎಂದು ಡಾ. ಕಂಬಾರರು ನುಡಿದರು.

ಡಾ. ಅನಂತಮೂರ್ತಿಯವರ ಬಹುಮುಖಸಾಧನೆಯನ್ನು ಕುರಿತು ಡಾ. ಎಚ್.ಎಸ್. ರಾಘವೇಂದ್ರರಾವ್, ಕವಿ ಶ್ರೀ ಚನ್ನವೀರಕಣವಿ, ಪ್ರೊ.ಓ.ಎಲ್. ನಾಗಭೂಷಣ ಸ್ವಾಮಿ ಅವರು ಮಾತನಾಡಿ, ಕರ್ನಾಟಕದಾಚೆ ಕನ್ನಡದ ಬಗ್ಗೆ ಗೌರವ ತರುವ ಕೆಲಸ ಮಾಡುತ್ತಿರುವ ಈ ಸಾಂಸ್ಕೃತಿಕ ರಾಯಭಾರಿಗೆ ಅಭಿಮಾನವನ್ನು ಅರ್ಪಿಸಿದರು.

ಸಮ್ಮಾನಕ್ಕೆ ಕೃತಜ್ಞತೆ ವ್ಯಕ್ತಪಡಿಸಿ, ಅನಂತಮೂರ್ತಿಯವರು, ''ಜನ ಸಾಮಾನ್ಯರಲ್ಲಿ ಸಾಮಾನ್ಯನಾಗಿ ಬೆರೆತಾಗ ಮಾತ್ರ ಸಾಹಿತಿ ಸಾಹಿತಿಯಾಗಿ ಬೆಳೆಯಬಲ್ಲ. ಲೇಖಕ ಒಂದೇವಾದಕ್ಕೆ ಅಹಂಕಾರಕ್ಕೆ, ಅಂಟಿಕೊಂಡು ಆತ್ಮವಂಚನೆ



ಮಾಡಿಕೊಳ್ಳಬಾರದು. ತನಗೆ ಅನಿಸಿದ್ದನ್ನು ನೇರವಾಗಿ ಹೇಳಬೇಕು'' ಎಂದು ಹೇಳಿದರು. ಈ ಅಭಿನಂದನ ಕಾರ್ಯಕ್ರಮದಲ್ಲಿ ಶ್ರೀ ಕೆ. ವಿ. ಸುಬ್ಬಣ್ಣ, ಪ್ರೊ. ಕೀರ್ತಿನಾಥ ಕುರ್ತಕೋಟಿ ಮೊದಲಾದ ವಿದ್ವಾಂಸರು ಉಪಸ್ಥಿತರಿದ್ದರು.

**ನಮ್ಮ ಸಂದರ್ಶಕ ಪ್ರಾಧ್ಯಾಪಕರು**

೧೯೯೪ ನೇ ವರ್ಷದಲ್ಲಿ ಬೇರೆ ಬೇರೆ ಯೋಜನೆಗಳೊಂದಿಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಂದರ್ಶಕ ಪ್ರಾಧ್ಯಾಪಕರಾಗಿ ಆಗಮಿಸಿದ್ದ ಲೇಖಕರು - ವಿದ್ವಾಂಸರು ಇವರು :

೧) ಪ್ರೊ. ಜಿ.ಎಚ್. ನಾಯಕ

೨) ದೇವನೂರ ಮಹಾದೇವ

೩) ಡಾ. ದೇವೇಂದ್ರಕುಮಾರ ಹಕಾರಿ

೪) ಡಾ. ಗುರುಲಿಂಗ ಕಾಪಸೆ

೫) ಡಾ. ಜಿ. ರಾಮಕೃಷ್ಣ

೬) ಡಾ. ಬೆಸಗರಹಳ್ಳಿ ರಾಮಣ್ಣ

**ಭೇಟಿ**

ವಿಶ್ವವಿದ್ಯಾಲಯಗಳ 'ಪರಿಕಲ್ಪನೆ'ಯಲ್ಲಿ ಪ್ರತ್ಯೇಕವಾದ, ವಿಶಿಷ್ಟ ಸ್ಥಾನವನ್ನು ಕನ್ನಡ ವಿಶ್ವವಿದ್ಯಾಲಯ ಹೊಂದಿದೆ. ವಿದ್ಯೆಯ ನಿರ್ಮಾಣದಲ್ಲಿ ತೊಡಗಿರುವ ಹೊಸ ಹೊಸ ವಿಧಾನಗಳನ್ನು ಕಂಡುಕೊಳ್ಳುತ್ತಿರುವ ಈ ವಿಶ್ವವಿದ್ಯಾಲಯವು ಪ್ರಜ್ಞಾವಂತ ವಲಯದಲ್ಲಿ ಕುತೂಹಲವನ್ನು ಕೆರಳಿಸಿದೆ. ಇದು ಸಾಂಸ್ಕೃತಿಕ ಕ್ಷೇತ್ರದಲ್ಲಿ ನಡೆಸಿರುವ ವಿವಿಧ ಪ್ರಯೋಗಗಳನ್ನು ಅರಿತುಕೊಳ್ಳಲು ಹಾಗೂ ಈ ವಿಶ್ವವಿದ್ಯಾಲಯದ ಹೊಸ ಕ್ಯಾಂಪಸ್ಸನ್ನು ವೀಕ್ಷಿಸಲು ಅನೇಕಗಣ್ಯರು ಇಲ್ಲಿಗೆ ಭೇಟಿಕೊಡುತ್ತಿದ್ದಾರೆ. ಈ ವರ್ಷದಲ್ಲಿ ಹೀಗೆ ಬಂದು ಹೋದವರಲ್ಲಿ ಭಾರತ ಸರ್ಕಾರದ ಮಾನವ ಹಕ್ಕುಗಳ ಆಯೋಗದ ಸದಸ್ಯರಾದ ನ್ಯಾಯಮೂರ್ತಿ ಶ್ರೀ ವಿ.ಎಸ್. ಮಳೀಮಠ, ಎಚ್.ಎಲ್. ನಾಗೇಗೌಡ, ಪ್ರೊ. ವೃಷಭೇಂದ್ರಸ್ವಾಮಿ, ಪ್ರೊ. ಪ್ರೇಮಲತಾಶರ್ಮ, ಪ್ರೊ. ಕು.ಶಿ. ಹರಿದಾಸಭಟ್, ಶ್ರೀ ಗೊ.ರು. ಚೆನ್ನಬಸಪ್ಪ, ಶ್ರೀ ಕೆರೆಮನೆ ಶಂಭುಹೆಗಡೆ, ಶ್ರೀ ಪಿ.ಆರ್. ತಿಪ್ಪೇಸ್ವಾಮಿ, ಶ್ರೀ ಲೋಹಿತಾಶ್ವ, ಶ್ರೀ ಚಿದಂಬರರಾವ್ ಜಂಬೆ, ಶ್ರೀ ಬಿ.ವಿ. ಕಾರಂತ, ಶ್ರೀಮತಿ ಪ್ರೇಮಾಕಾರಂತ ಮುಂತಾದವರು ಸೇರಿದ್ದಾರೆ.



ಹಂಪಿಯ ನಂತರ ವಿಶ್ವವಿದ್ಯಾಲಯದ 'ವಿದ್ಯಾರಣ್ಯ' ಕ್ಯಾಂಪಸ್ಸು ಪ್ರವಾಸಿಕೇಂದ್ರವಾಗಿ ಎಲ್ಲರನ್ನು ಆಕರ್ಷಿಸುತ್ತಿರುವುದು ಗಮನಾರ್ಹ. ಹಂಪಿಗೆ ಬರುವ ಪ್ರವಾಸಿಗಳು ಹಾಗೂ ವಿದ್ಯಾರ್ಥಿಗಳು ಸಾಮಾನ್ಯವಾಗಿ ಇಲ್ಲಿಗೆ ಬಾರದೇಹೋಗರು. ವಿಜಯನಗರದ ವಾಸ್ತುಶಿಲ್ಪದ ಮಾದರಿಯನ್ನು ನೆನಪಿಸುವಂತಿರುವ ಕಟ್ಟಡಗಳನ್ನು, 'ಶಿಲ್ಪವನ' 'ಗಿರಿಸೀಮೆ'ಗಳನ್ನು ನೋಡಲು ಬರುತ್ತಿರುವವರ ಸಂಖ್ಯೆ ಬೆಳೆಯುತ್ತಿದೆ.

# ಸಾಮಾಜಿಕ ವಿದ್ಯಮಾನಗಳು

*ಜಿ. ಎಸ್. ಸದಾನಂದ*

೧೯೯೫ರಲ್ಲಿ ಕರ್ನಾಟಕದಲ್ಲಿ ನಾವು ಕಾಣಬಹುದಾದ ಸಾಮಾಜಿಕ ವಿದ್ಯಮಾನಗಳು ಹಲವಾರು. ಇವುಗಳಲ್ಲಿ ಕೆಲವು ಭಾರತದ ಒಟ್ಟಾರೆ ಸಾಮಾಜಿಕ ವಿದ್ಯಮಾನಗಳ ಪ್ರತಿಫಲನವಾಗಿದ್ದರೆ, ಇನ್ನು ಕೆಲವು ಕರ್ನಾಟಕದ ವಿಶಿಷ್ಟತೆಯಿಂದ ರೂಪುಗೊಂಡಂಥವುಗಳು. ವಾಸ್ತವವಾಗಿ ಸಮಾಜದ ಹಲವಾರು ಸಮಸ್ಯೆಗಳ ಜಟಿಲತೆಯನ್ನು ಗುರುತಿಸಿ ಅವುಗಳನ್ನು ನಿವಾರಿಸುವ ಅನಿವಾರ್ಯತೆಯ ನಿಟ್ಟಿನಲ್ಲಿ, ಜನರಲ್ಲಿ ಮೂಡಿರುವ ಪ್ರಜ್ಞೆಯನ್ನು ಇಲ್ಲಿ ನಾವು ಗುರುತಿಸಬಹುದು. ಈ ದೃಷ್ಟಿಯಿಂದ ನಾವು ಕಾಣುವ ಪ್ರಮುಖ ವಿದ್ಯಮಾನಗಳೆಂದರೆ: ದಲಿತರ ಸಂಘರ್ಷಗಳು, ರೈತಚಳುವಳಿ, ಗ್ಯಾಟ್‌ಒಪ್ಪಂದದ ವಿರುದ್ಧ ಹೋರಾಟ, ಕೋಮುಗಲಭೆಗಳು, ಮೀಸಲಾತಿಸಮಸ್ಯೆ, ಪರಿಸರವಾದಿ ಚಳುವಳಿಗಳು, ಶೋಷಣೆಯ ವಿರುದ್ಧದ ಮಹಿಳೆಯರ ಸಂಘಟನೆ- ಮೊದಲಾದವುಗಳು. ಸಮಸ್ಯೆಯೆಂದರೆ, ಹೀಗೆ ಕಳೆದುಹೋದ ವರ್ಷವೊಂದರ ಸಾಮಾಜಿಕ ವಿದ್ಯಮಾನಗಳನ್ನು ಕುರಿತು ಬರೆಯುವಾಗ, ಸಹಜವಾಗಿಯೇ ಆ ವರ್ಷದ ವೃತ್ತಪತ್ರಿಕೆಗಳು, ನಿಯತಕಾಲಿಕೆಗಳು, ವಿವಿಧ ಸಂಘಟನೆಗಳು ಪ್ರಕಟಿಸಿದ ಸುದ್ದಿ, ಲೇಖನ, ಭಿತ್ತಿಪತ್ರ ಮತ್ತು ಕರಪತ್ರಗಳನ್ನು ಆಧಾರವಾಗಿಟ್ಟುಕೊಂಡು ಬರೆಯಬೇಕಾಗುತ್ತದೆ. ಇಲ್ಲಿ ಕೆಲವು ಘಟನೆಗಳಿಗೆ ಹೆಚ್ಚು ಪ್ರಚಾರ ಸಿಕ್ಕಿರುವುದನ್ನು ಮತ್ತು ಕೆಲವಕ್ಕೆ ಕಡಿಮೆ ಪ್ರಚಾರ ಸಿಕ್ಕಿರುವುದನ್ನು ಕಾಣಬಹುದು. ಯಾವುದೇ ಘಟನೆ ಇಡೀ ಸಮಾಜದ ಮೇಲೆ ಬೀರುವ ಪ್ರಭಾವದ ಮಹತ್ವವು, ಅದಕ್ಕೆ ಸಿಕ್ಕಿರುವ ಪ್ರಚಾರದ ಮೇಲೆ ಅವಲಂಬಿತವಾಗಿರುವುದಿಲ್ಲ ಎಂಬುದನ್ನು ನಾವು ಮರೆಯಬಾರದು. 'ಪ್ರಮುಖ'ವಾದವುಗಳೆಂದು ಈ ಮೇಲೆ ಗುರುತಿಸಿರುವ ವಿದ್ಯಮಾನಗಳು, ನಮ್ಮ ಸಮಾಜದಲ್ಲಿನ ಅಸಮತೋಲನವನ್ನು, ಕೆಲವು ವರ್ಗಗಳ ಅಸಹಾಯಕತೆಯನ್ನು ಹಾಗೂ ನಾವು ಬದುಕುತ್ತಿರುವ ಸಮಾಜವನ್ನು ಹೆಚ್ಚು ನ್ಯಾಯಯುತವಾಗಿ ಬದುಕಲು ಸಹ್ಯವಾಗುವಂತೆ ಮಾಡುವಲ್ಲಿ ಕೆಲವು ಪ್ರಜ್ಞಾವಂತರಿಗಿರುವ ಕಾತರತೆಯನ್ನು ತೋರಿಸುತ್ತವೆ. ಪ್ರತಿ ವಿದ್ಯಮಾನಕ್ಕೂ ತನ್ನದೆ ಆದ ಐತಿಹಾಸಿಕ ಹಿನ್ನೆಲೆ, ಸದ್ಯದ ತುರ್ತು, ಹೊಸ ಸಮಾಜವನ್ನು ರೂಪಿಸುವ ದೃಷ್ಟಿಕೋನ, ಸಮಾಜದಲ್ಲಿನ ಕೆಲವು ಕೋಮುಗಳ ಬಗೆಗಿನ ತಪ್ಪುಗ್ರಹಿಕೆ- ಮೊದಲಾದ ಮುಖಗಳು ಇರುತ್ತವೆ. ಪ್ರಸ್ತುತ ಲೇಖನದಲ್ಲಿ 'ಸಾಮಾಜಿಕ' ವಿದ್ಯಮಾನಗಳನ್ನು ಚರ್ಚಿಸುವಾಗ, ಈ ಎಲ್ಲ ಆಯಾಮಗಳನ್ನು ಗುರುತಿಸಿ ಬರೆಯಲು ಸಾಧ್ಯವಾಗುವುದಿಲ್ಲ ಮತ್ತು ಎಲ್ಲ ವಿದ್ಯಮಾನಗಳಿಗೂ ಸಮಾನ ಮಹತ್ವವನ್ನು ಕೊಡಲು ಆಗುವುದಿಲ್ಲ.

ಆದ್ದರಿಂದ ಕೆಲವು ಪ್ರಮುಖವೆಂದು ಅನಿಸಿದ ಘಟನೆಗಳ ವಿವರಗಳನ್ನಷ್ಟೆ ಕೊಡುವ ಪ್ರಯತ್ನವನ್ನು ಇಲ್ಲಿ ಮಾಡಿದೆ. ಮೊದಲಿಗೆ ಸಾಮಾನ್ಯವಾಗಿ ಎಲ್ಲರ ಗಮನಕ್ಕೂ ಬಂದಿರ ಬಹುದಾದ ಕೆಲವು ವಿದ್ಯಮಾನಗಳ ಬಗ್ಗೆ ಬರೆಯಬಹುದು.

ಇತ್ತೀಚಿನ ಕೆಲವು ವರ್ಷಗಳಿಂದ ಹುಬ್ಬಳ್ಳಿಯ ಈದ್ಗಾ ಮೈದಾನದ ಮೇಲೆ, `ಅಂಜುಮನ್-ಇ-ಇಸ್ಲಾಂ' ಸಂಸ್ಥೆಯ ಒಡೆತನಕ್ಕೆ ಸಂಬಂಧಿಸಿದಂತೆ ವಿವಾದಗಳೆದ್ದಿದ್ದವು. ಈ ಮೈದಾನವು ' ಸಾರ್ವಜನಿಕ ಆಸ್ತಿ ' ಎಂದು ವಾದಿಸುತ್ತಿರುವ ಗುಂಪೊಂದು ಆ ಮೈದಾನದಲ್ಲಿ ರಾಷ್ಟ್ರಧ್ವಜ ಹಾರಿಸಬೇಕೆಂದು ಪಣತೊಟ್ಟಿತು. ಇದರ ಪರಿಣಾಮವಾಗಿ ಹುಬ್ಬಳ್ಳಿಯ ಶಾಂತಿ ಕದಡುವಂತೆ ಆಯಿತು. ಆಗಸ್ಟ್. ೧೫ ಹತ್ತಿರವಾಗುತ್ತಿದ್ದಂತೆ ಹುಬ್ಬಳ್ಳಿಯ ಜನರಿಗೆ ಆತಂಕ ಕಳವಳ ಜಾಸ್ತಿಯಾಗುವಂತಹ ಘಟನೆಗಳು ನಡೆದವು. ಭಾರತೀಯ ಜನತಾಪಾರ್ಟಿ ಹಾಗೂ ಅದಕ್ಕೆ ಒತ್ತಾಸೆಯಾಗಿ ಹುಟ್ಟಿದ ರಾಷ್ಟ್ರೀಯಧ್ವಜ ಗೌರವಸಂರಕ್ಷಣಾ ಸಮಿತಿಗಳು, ಈದ್ಗಾ ಮೈದಾನದಲ್ಲಿ ಕಳೆದ ಮೂರು ವರ್ಷಗಳಲ್ಲಿ ಮಾಡಿದಂತೆಯೆ ರಾಷ್ಟ್ರಧ್ವಜವನ್ನು ಹಾರಿಸುವ ಹಠ ತೊಟ್ಟವು. ಆದರೆ ಕಾನೂನಿನ ಪ್ರಕಾರ, ಈದ್ಗಾ ಮೈದಾನದ ಒಡೆತನ ಅಂಜುಮನ್ ಸಂಸ್ಥೆಯದೇ ಆಗಿದ್ದರಿಂದ ಮತ್ತು ಆ ಕಾರಣದಿಂದ ಅಲ್ಲಿ ರಾಷ್ಟ್ರಧ್ವಜವನ್ನು ಹಾರಿಸುವ ಅಥವಾ ಹಾರಿಸದೆ ಇರುವ ನಿರ್ಣಯ ಸದರಿ ಸಂಸ್ಥೆಯದು ಎನ್ನುವ ನಿಲುವು ಸರ್ಕಾರದ್ದಾಗಿತ್ತು. ಕರ್ನಾಟಕ ಸರಕಾರವು ಖಾಸಗಿಆಸ್ತಿಯ ರಕ್ಷಣೆ ಮಾಡುವ ಜವಾಬ್ದಾರಿಯನ್ನು ಹೊತ್ತು, ಅಲ್ಲಿ ರಾಷ್ಟ್ರಧ್ವಜವನ್ನು ಹಾರಿಸುವದನ್ನು ತಡೆಯಲು ಎಲ್ಲ ವಿಧದ ಬಂದೋಬಸ್ತನ್ನು ಮಾಡಲು, ಪೋಲೀಸ್ ಕಮೀಷನರ್ ನೇತೃತ್ವದಲ್ಲಿ ಸಾಕಷ್ಟು ಸಂಖ್ಯೆಯ ಪೋಲಿಸರನ್ನು ಹುಬ್ಬಳ್ಳಿಗೆ ಕಳುಹಿಸಿತು. ಮೈದಾನದ ಸುತ್ತಲು ಭಾರೀ ಬೇಲಿಯನ್ನು ನಿರ್ಮಿಸಲಾಯಿತು. ಆಗಸ್ಟ್, ೧೫ ರಂದು ಮೈದಾನಕ್ಕೆ ನುಗ್ಗಿ ಧ್ವಜಾರೋಹಣ ಮಾಡಲೆತ್ನಿಸಿದ ಹಲವರನ್ನು ಬಂಧಿಸಲಾಯಿತು.

ಕೆಲವರ ಹೇಳಿಕೆಯಂತೆ ಆಗಸ್ಟ್. ೧೫ ರಂದು ಪೋಲಿಸರು, ಯಾವ ಪೂರ್ವಸೂಚನೆಯೂ ಇಲ್ಲದೆ ಆ ಪ್ರದೇಶಕ್ಕೆ ನುಗ್ಗಿ ಅಮಾಯಕರ ಮೇಲೆ ಗುಂಡನ್ನು ಹಾರಿಸಿದ್ದರಿಂದ, ಸ್ಥಳದಲ್ಲಿಯೆ ಮೂವರು ಪ್ರಾಣತೆತ್ತರು. ಎಲ್ಲರ ಗಮನ ಈದ್ಗಾ ಮೈದಾನದಲ್ಲಿ ಕೇಂದ್ರೀಕೃತವಾಗಿದ್ದಾಗ ದೇಶಪಾಂಡೆ ನಗರದಲ್ಲಿ ನುಗ್ಗಿದ ಮೀಸಲು ಸಶಸ್ತ್ರಪಡೆಯವರಿಗೆ, ಗುಂಡು ಹಾರಿಸಲು ಯಾವ ಪ್ರಚೋದನೆಯೂ ಇರಲಿಲ್ಲ ಎನ್ನುವುದು ಅನೇಕರ ನಿಲುವು. ಪತ್ರಿಕೆಗಳಲ್ಲಿ ವರದಿಯಾದಂತೆ ಆ ಪ್ರದೇಶದ ಬಗ್ಗೆ ಏನೇನೂ ಗೊತ್ತಿಲ್ಲದ ಮೀಸಲುಪಡೆಯವರು, ಗಾಳಿಸುದ್ದಿ ಕೇಳಿ ಮನ ಬಂದಂತೆ ಗುಂಡು ಹಾರಿಸಿದರು. ಕೊನೆಗೆ ಈ ಬಗ್ಗೆ ಪೋಲಿಸಿನವರನ್ನು ಕೇಳಿದಾಗ ಅವರಲ್ಲಿ ಗುಂಡು ಹಾರಿಸಲು ಯಾವ ಸಮರ್ಥನೆಯೂ ಇರಲಿಲ್ಲ. ಉನ್ನತ ಪೋಲಿಸ್ ಅಧಿಕಾರಿಗಳಿಗೆ ಇದೊಂದು `ದುರದೃಷ್ಟಕರ' ಘಟನೆ ಎಂದಷ್ಟೆ ಹೇಳಲು ಸಾಧ್ಯವಾಯಿತು.

ಹುಬ್ಬಳ್ಳಿಯ ಈದ್ಗಾ ಮೈದಾನದ ಘಟನೆಯ ಬಗ್ಗೆ ಅಧ್ಯಯನ ಮಾಡಿದ `ಪೀಪಲ್ಸ್ ಡೆಮೋಕ್ರಟಿಕ್ ಫೋರಂ'ನ ಪ್ರಕಾರ, ಪೋಲಿಸರು ಈ ದುರಂತಕ್ಕೆ ಮುಖ್ಯ

ಕಾರಣಕರ್ತರಾದರು. ರಾಜಕೀಯ ಕಾರ್ಯಕರ್ತರ ಚಟುವಟಿಕೆಯನ್ನು ನಿಯಂತ್ರಿಸಲು ಯಾವ ತಯಾರಿಯನ್ನೂ ಅವರು ಸರಿಯಾಗಿ ಮಾಡಿರಲಿಲ್ಲ. ಬದಲಿಗೆ ಸಾಮಾನ್ಯ ಜನರ ಚಟುವಟಿಕೆಗಳಿಗೆ ತೊಂದರೆಯೂ ಆಗುವಂತಹ ಕರ್ಫ್ಯೂ ಮತ್ತಿತರ ನಿಷೇಧಾತ್ಮಕ ಆಜ್ಞೆಗಳನ್ನು ಹೇರಿದರು. ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಈದ್ಗಾ ಮೈದಾನಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ಕಾರ್ಯಕರ್ತರು ನುಗ್ಗಲು ಹೇಗೆ ಸಾಧ್ಯವಾಯಿತು ಎಂಬುದಕ್ಕೂ ಪೋಲೀಸ್ ಅಧಿಕಾರಿಗಳಲ್ಲಿ ಉತ್ತರವಿರಲಿಲ್ಲ.

'ಪೀಪಲ್ಸ್ ಡೆಮೊಕ್ರಟಿಕ್ ಫೋರಂ' ಪ್ರಕಾರ, ಧ್ವಜಾರೋಹಣದ ಬಗ್ಗೆ ಸಾಕಷ್ಟು ಪ್ರಚಾರವಾಗಿದ್ದರೂ ಸಂಬಂಧಪಟ್ಟ ಸಂಘ - ಸಂಸ್ಥೆಗಳಿಗೆ ಧ್ವಜಾರೋಹಣವಾಗಲಿ ಅಥವಾ ಅದನ್ನು ತಡೆಯುವುದಾಗಲಿ ಪ್ರಮುಖವಾದ ವಿಷಯವಾಗಿರಲಿಲ್ಲ. ಕಾನೂನಿನ ಪ್ರಕಾರ ಧ್ವಜಾರೋಹಣ ಸರಿಯಾದ ಕ್ರಮವಾಗಿರಲಿಲ್ಲ. ಸಂಬಂಧಪಟ್ಟ ಸಂಘ-ಸಂಸ್ಥೆಗಳು ಈ ವಾಸ್ತವವನ್ನು ಗುರುತಿಸಲು ವಿಫಲವಾಗಿದ್ದವು. ಒಬ್ಬರ ಸ್ವತ್ತಾಗಿರುವ ಪ್ರದೇಶದಲ್ಲಿ ಧ್ವಜಾರೋಹಣ ಮಾಡುವ ಹಕ್ಕು ಅವರಿಗಲ್ಲದೆ ಬೇರೆಯವರಿಗೆ ಇರುವುದಿಲ್ಲ. ಈದ್ಗಾ ಮೈದಾನಕ್ಕೆ ಸಂಬಂಧಪಟ್ಟಂತೆ ಮೊಕದ್ದಮೆ ಇನ್ನೂ ಇತ್ಯರ್ಥವಾಗದೆ ಇರುವುದರಿಂದ ಯಾರಿಗೂ ಕಾನೂನನ್ನು ಕೈಗೆತ್ತಿಕೊಳ್ಳುವ ಹಕ್ಕು ಇರುವುದಿಲ್ಲ. ಅಷ್ಟೇ ಅಲ್ಲದೆ, ಉಚ್ಛನ್ಯಾಯಾಲಯದ ತೀರ್ಪಿನ ಪ್ರಕಾರ ರಾಷ್ಟ್ರಧ್ವಜವನ್ನು ಯಾವುದೇ ಪ್ರದೇಶದಲ್ಲಿ ಹಾರಿಸುವುದು ಅವರವರ ಇಚ್ಛೆಗೆ ಬಿಟ್ಟದ್ದೇ ಹೊರತು, ಅದೊಂದು ಕಡ್ಡಾಯವಾಗಿ ಮಾಡಲೇಬೇಕಾದ ಕಾರ್ಯವಾಗಿರುವುದಿಲ್ಲ. ಈದ್ಗಾ ಮೈದಾನದಲ್ಲಿ ಘಟನೆಗೆ ರಾಜಕೀಯ ಆಯಾಮವಿದ್ದುದು ಮೇಲ್ನೋಟಕ್ಕೆ ಕಂಡುಬರುವ ಸತ್ಯವಾಗಿದೆ. ಒಟ್ಟಿನಲ್ಲಿ ಈ ಘಟನೆಯಿಂದ ಅನ್ಯಾಯಕ್ಕೊಳಗಾದವರೆಂದರೆ, ಯಾವುದೇ ತಪ್ಪುಮಾಡದ ಅಮಾಯಕರು.

ದೂರದರ್ಶನದಲ್ಲಿ ಕನ್ನಡ ಕಾರ್ಯಕ್ರಮಗಳ ಪ್ರಸಾರದ ಸಮಯದಲ್ಲಿಯೇ ಉರ್ದುವಿನಲ್ಲಿ ವಾರ್ತಾಪ್ರಸಾರ ಮಾಡುವ ನಿರ್ಧಾರ ತೆಗೆದುಕೊಂಡಿದ್ದು, ಜನರ ಮನಸ್ಸಿನಲ್ಲಿ ಹಲವಾರು ಸಂಶಯಕ್ಕೆಡೆ ಮಾಡಿಕೊಟ್ಟು, ಅವರಿಂದ ಭಾರಿ ಪ್ರತಿಭಟನೆಯನ್ನು ಸರಕಾರ ಎದುರಿಸಬೇಕಾಗಿ ಬಂದಿದ್ದು, ೧೯೯೪ ರ ಮತ್ತೊಂದು ಪ್ರಮುಖ ಘಟನೆ. ಚುನಾವಣೆಯ ಸಮೀಪಿಸುತ್ತಿದ್ದ ಕಾಲವಾದ್ದರಿಂದ, ಸರ್ಕಾರಕ್ಕೆ ಅಲ್ಪಸಂಖ್ಯಾತರ ಭಾಷೆಯ ಬಗೆಗಿನ ಕಳಕಳಿಗಿಂತ, ಅಲ್ಪಸಂಖ್ಯಾತರ ಓಟುಗಳಿಸುವ ಉದ್ದೇಶವೇ ಬಲವಾಗಿತ್ತೆಂದು ಅನ್ನಿಸಿದರೆ ಆಶ್ಚರ್ಯವಿಲ್ಲ. ಈದ್ಗಾ ಮೈದಾನದ ಘಟನೆಯಂತೆ ಇದೂ ಸಹ, 'ಸೆಕ್ಯುಲರ್' ಸರಕಾರದ ಅಲ್ಪಸಂಖ್ಯಾತರ ಮನವೊಲಿಸುವ ರಾಜಕಾರಣ ಹಾಗೂ ಧಾರ್ಮಿಕ ಸಮುದಾಯಗಳು ನಡುವೆ ಘರ್ಷಣೆಯನ್ನು ಹುಟ್ಟುಹಾಕಲು ಸದಾ ಹೊಂಚುಹಾಕುವ ಕೋಮುವಾದಿ ಶಕ್ತಿಗಳ ನಡುವೆ, ನಲುಗಿದ ಅಮಾಯಕರ ದುರಂತ ಕತೆಯೆಂದೇ ಹೇಳಬಹುದು.

ಕನ್ನಡ ಕಾರ್ಯಕ್ರಮಗಳ ಪ್ರಸಾರದ ಸಮಯದಲ್ಲೇ ಉರ್ದು ವಾರ್ತಾಪ್ರಸಾರ ವಾಗತೊಡಗಿದ್ದು, ದೂರದರ್ಶನದಲ್ಲಿ ಕನ್ನಡಕ್ಕೆ ಸಾಕಷ್ಟು ಸಮಯಾವಕಾಶವಿಲ್ಲ ಎಂಬ ಕನ್ನಡಿಗರ ಅಸಮಾಧಾನವನ್ನು ಸಹಜವಾಗಿ ಮತ್ತಷ್ಟು ಹೆಚ್ಚಿಸಿತು. ಹಲವಾರು ಕನ್ನಡ ಸಂಘಟನೆಗಳು ಉರ್ದು ವಾರ್ತಾಪ್ರಸಾರದ ವಿರುದ್ಧ ಚಳವಳಿಯನ್ನು ಪ್ರಾರಂಭಿಸಿದಾಗ, ಮತೀಯ ಶಕ್ತಿಗಳು ಪರಿಸ್ಥಿತಿಯ ದುರ್ಲಾಭ ಪಡೆಯತೊಡಗಿದ್ದವು. ಕನ್ನಡಪರವಾದ ಚಳವಳಿಯ ಈ ರೂಪಾಂತರವನ್ನು ನಿರ್ಲಿಪ್ತವಾಗಿ ಕಂಡ ಕನ್ನಡಪರ ಸಂಘಟನೆಗಳು, ಮುಂದಣ ದುರಂತಗಳಿಗೆ ಕಾರಣವಾದವು. ಬೆಂಗಳೂರಿನಲ್ಲಿ ಹಲವಾರು ಬಡವರ ಮನೆಗಳು ಧ್ವಂಸವಾದವು. ಕೆಲವರು ಪ್ರಾಣವನ್ನು ತೆರಬೇಕಾಯಿತು. ಕೊನೆಗೆ ಉರ್ದು ವಾರ್ತಾಪ್ರಸಾರವನ್ನು ತಡೆಹಿಡಿಯಲಾಯಿತು. ಸ್ವಾರ್ಥಪರ ರಾಜಕಾರಣ, ಕನ್ನಡಪರ ಸಂಘಟನೆಗಳ ಬೇಜವಾಬ್ದಾರಿತನ ಹಾಗೂ ಕೋಮುವಾದಿ ಶಕ್ತಿಗಳ ಫಿತೂರಿಗಳಿಂದ, ಕರ್ನಾಟಕದ ಜನತೆಯ ಮನದಲ್ಲಿ ಒಂದು ಗಾಯವಾಗಿ ನೋವು ಉಳಿಯುವಂತಾಯಿತು. ಗಮನಿಸಬೇಕಾದುದೆಂದರೆ, ಸರಕಾರವು ಉರ್ದು ಭಾಷಿಕರ ಯಾವುದೇ ಬೇಡಿಕೆಯಿಲ್ಲದೆ ಉರ್ದು ವಾರ್ತಾಪ್ರಸಾರದ ನಿರ್ಧಾರ ಮಾಡಿತು. ದುರಂತಗಳಾದಬಳಿಕ ಅದನ್ನು ಹಿಂತೆಗೆದುಕೊಂಡಿತು. ಭಾಷೆ ಅಥವಾ ಧರ್ಮದ ಹೆಸರಿನಲ್ಲಿ ಅಲ್ಪಸಂಖ್ಯಾತರ ಬೆಂಬಲಗಳಿಸುವುದು ಸಾಧ್ಯವಿಲ್ಲ ಎನ್ನುವುದು ನಂತರ ನಡೆದ ಚುನಾವಣೆಯಲ್ಲಿ ರುಜುವಾತಾಯಿತು.

ಚಿನ್ನಪರೆಡ್ಡಿ ಸಮಿತಿಯ ವರದಿಯನ್ನು ಸರಕಾರಕ್ಕೆ ಸಲ್ಲಿಸಿದಾಗಿನಿಂದಲೂ, ಅದನ್ನು ಅನುಷ್ಠಾನಗೊಳಿಸುವ ನಿರ್ಧಾರವನ್ನು ಕಾಂಗ್ರೆಸ್ ಸರಕಾರ ತನ್ನ ಆಡಳಿತ ನಾಲ್ಕೂ ವರ್ಷಗಳಕಾಲ ಮುಂದೂಡುತ್ತಾ ಬಂದಿತ್ತು. ೧೯೯೪ ರ ಜುಲೈ ತಿಂಗಳಲ್ಲಿ ವರದಿಯನ್ನು ಅನುಷ್ಠಾನಗೊಳಿಸುವ ಭರವಸೆಯನ್ನು ಮುಖ್ಯಮಂತ್ರಿ ನೀಡಿದ ಕೂಡಲೆ, ಆ ವರದಿಯ ಬಗ್ಗೆ ಚರ್ಚೆ ಸುರುವಾಯಿತು. ವರದಿಯಲ್ಲಿ ಪ್ರಮುಖವಾಗಿ ವಿವಾದಕ್ಕೊಳಗಾದ ಅಂಶವೆಂದರೆ, ರಾಜ್ಯದ ಬಲಿಷ್ಠ ಕೋಮುಗಳಾದ ಲಿಂಗಾಯತ ಮತ್ತು ಒಕ್ಕಲಿಗರನ್ನು 'ಮುಂದುವರೆದ' ಜಾತಿಯವರೆಂದು ತೀರ್ಮಾನಿಸಿದ್ದು. ಇದೇ ಅಭಿಪ್ರಾಯವನ್ನು ಹೊಂದಿದ್ದ ವೆಂಕಟಸ್ವಾಮಿ ಆಯೋಗದ ವರದಿಯ ಬಗ್ಗೆ, ಜನತಾ ಸರಕಾರದ ಆಳ್ವಿಕೆಯಲ್ಲಿ, ಇವೇ ಎರಡು ಬಲಿಷ್ಠ ಕೋಮುಗಳಿಂದ ಭಾರಿ ವಿರೋಧ ಪ್ರಕಟವಾಗಿತ್ತು. ಆಗಿನ ಹೆಗಡೆ ಸರಕಾರ ಆ ವರದಿಯ ಶಿಫಾರಸ್ಸಿನ ಬದಲಾಗಿ, ಒಂದು ಮಧ್ಯಾವಧಿ ಹೊಂದಾಣಿಕಾ ನೀತಿಯನ್ನು ರೂಪಿಸಿ ಜಾರಿಮಾಡಿತ್ತು. ಅದರ ಪ್ರಕಾರ ಒಕ್ಕಲಿಗ, ಲಿಂಗಾಯತರೂ ಸೇರಿದಂತೆ ರಾಜ್ಯದ ಶೇ. ೯೦ ಭಾಗ ಜನರನ್ನು 'ಹಿಂದುಳಿದ'ವರೆಂದು ತೀರ್ಮಾನಿಸಿ, ಶೇ. ೬೮ ರಷ್ಟು ಮೀಸಲಾತಿಯನ್ನು ನೀಡಲಾಗಿತ್ತು. ಮೀಸಲಾತಿ ಸವಲತ್ತಿನಿಂದ ವಂಚಿತರಾಗಲು ಯಾವ ಕೋಮಿನವರೂ ಸಿದ್ಧವಾಗಿರಲಿಲ್ಲ. ಇಂತಹ ಹಿನ್ನೆಲೆಯಲ್ಲಿ ಕಾಂಗ್ರೆಸ್ ಸರಕಾರ ತೆಗೆದುಕೊಂಡ ನಿರ್ಧಾರಕ್ಕೆ ಸಹಜವಾಗಿಯೆ ಒಕ್ಕಲಿಗರಿಂದ ಭಾರಿ ವಿರೋಧ ಬಂದಿತು. ಜೂನ್ ತಿಂಗಳಲ್ಲಿ, ಆದಿಚುಂಚನಗಿರಿ ಸ್ವಾಮೀಜಿಯವರ ನೇತೃತ್ವದಲ್ಲಿ ಬೆಂಗಳೂರಿನಲ್ಲಿ ಒಕ್ಕಲಿಗರ ಭಾರಿ ಸಮಾವೇಶ ನಡೆಯಿತು. ಸಮಾವೇಶವು ರೆಡ್ಡಿ ವರದಿ ಜಾರಿಗೊಳಿಸದಂತೆ

ಸರಕಾರವನ್ನು ಎಚ್ಚರಿಸಿತು. ಇದೇ ಸಮಯದಲ್ಲಿ ರಾಜಕೀಯವಾಗಿ ಶ್ರೀ ವೀರಪ್ಪ ಮೊಯಿಲಿಯವರ ನೇತೃತ್ವದ ಕಾಂಗ್ರೆಸ್ ಸರಕಾರವು ಬಹಳ ಸಂದಿಗ್ಧ ಪರಿಸ್ಥಿತಿಯಲ್ಲಿತ್ತು. ಹೀಗಾಗಿ ಮೀಸಲಾತಿಯು ಜಾತಿರಾಜಕೀಯವನ್ನು ಮತ್ತಷ್ಟು ಸಂಕೀರ್ಣಗೊಳಿಸಿತು. ಶ್ರೀ ಮೊಯಿಲಿಯವರ ನಾಯಕತ್ವಕ್ಕೆ ಪಕ್ಷದೊಳಗೆ ವಿರೋಧ ಇದ್ದುದರಿಂದ, ಲಿಂಗಾಯತ ಮತ್ತು ಒಕ್ಕಲಿಗ ನಾಯಕರು ಪರಿಸ್ಥಿತಿಯ ಲಾಭವನ್ನು ಪಡೆಯಲು ಸಿದ್ಧರಿದ್ದರು. ಈಗ ಸರಕಾರಕ್ಕೆ ಮೀಸಲಾತಿಯ ಬಗೆಗಿನ ತನ್ನ ನಿಲುವನ್ನು ಬದಲಾಯಿಸುವುದು ಅನಿವಾರ್ಯವಾಯಿತು. ಕರ್ನಾಟಕದ .ವಿವಿಧ ಜಾತಿ - ಕೋಮುಗಳನ್ನು ಮೂರು ಪ್ರಧಾನ ವರ್ಗಗಳಾಗಿ ವಿಂಗಡಿಸಿ ಶೇ. ೮೦ ರಷ್ಟು ಮೀಸಲಾತಿ ನೀಡಿಕೆಯು ಸಂವಿಧಾನಬಾಹಿರ ಎನ್ನುವ ತೀರ್ಮಾನವನ್ನು ಸುಪ್ರೀಂಕೋರ್ಟು ನೀಡಿತು. ಹೀಗಾಗಿ ಮೀಸಲಾತಿಯ ಶೇಕಡವಾರನ್ನು ಮತ್ತೆಮತ್ತೆ ಇಳಿಸಲಾಯಿತು. ಎಷ್ಟೋ ವಿದ್ಯಾರ್ಥಿಗಳು ತೊಂದರೆಯನ್ನು ಎದುರಿಸಬೇಕಾಗಿ ಬಂದಿತು.

ಕುವೆಂಪು ಮತ್ತು ಗುಲ್ಬರ್ಗಾ ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯಪುಸ್ತಕವಾಗಿದ್ದ ಶಿವಪ್ರಕಾಶರ ' ಮಹಾಚೈತ್ರ' ನಾಟಕದ ಸುತ್ತ ಎದ್ದ ವಿವಾದವು, ಈ ವರ್ಷದ ಮತ್ತೊಂದು ವಿದ್ಯಮಾನವಾಗಿದೆ. ಈ ಕೃತಿಯು, ಈ ಹಿಂದೆ ಮಂಗಳೂರು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳಲ್ಲೂ ಪಠ್ಯಪುಸ್ತಕವಾಗಿತ್ತು. ಆಗ ವಿರೋಧ ವ್ಯಕ್ತವಾಗಿರಲಿಲ್ಲ. ಆದರ ಬಸವದಳ ಎನ್ನುವ ಸಂಘಟನೆಯು 'ಮಹಾಚೈತ್ರ'ದಲ್ಲಿ ಬಸವಣ್ಣನವರನ್ನು ಕುರಿತಂತೆ ಅವಹೇಳನಕಾರಿಯಾದ ಮಾತುಗಳಿವೆ ಎನ್ನುವ ವಾದವನ್ನು ಹೂಡಿ, ಈ ಪಠ್ಯಪುಸ್ತಕವನ್ನು ರದ್ದುಪಡಿಸಬೇಕೆಂದು ಮುಷ್ಕರ ಪ್ರಾರಂಭಿಸಿತು.

ಈ ಕುರಿತು ಚರ್ಚಿಸಲು ಸಂಬಂಧಪಟ್ಟ ಎರಡೂ ವಿಶ್ವವಿದ್ಯಾನಿಲಯಗಳು ವಿಶೇಷ ಶೈಕ್ಷಣಿಕ ಮಂಡಳಿಯ ಸಭೆಗಳನ್ನು ಕರೆದವು. ಶೈಕ್ಷಣಿಕ ಕ್ಷೇತ್ರದ ಸ್ವಾಯ ತ್ತತೆಗೆ ಹಾಗೂ ಅಭಿವ್ಯಕ್ತಿಯ ಸ್ವಾತಂತ್ರ್ಯಕ್ಕೆ ಬಂದೊದಗಿದ ಧಕ್ಕೆಯನ್ನು ನಿವಾರಿಸುವ ಬಗ್ಗೆ ಸಾಕಷ್ಟು ಚರ್ಚೆನಡೆದವು. ' ಮಹಾಚೈತ್ರ' ಪಠ್ಯಪುಸ್ತಕವಾಗಿ ಮುಂದುವರಿಯಬೇಕು ಎಂದು ಎರಡೂ ಶಿಕ್ಷಣ ಮಂಡಳಿಗಳು ತೀರ್ಮಾನಿಸಿದವು. ಒಂದು ಕೃತಿ ಪಠ್ಯಪುಸ್ತಕವಾಗಬೇಕಾದರೆ ವಿಶ್ವವಿದ್ಯಾನಿಲಯದ ವಿದ್ವಾಂಸರಿಂದ ಕೂಡಿದ ಅಧ್ಯಯನ ಮಂಡಳಿಯ ಒಪ್ಪಿಗೆ ಬೇಕಾಗುತ್ತದೆ. ಹಾಗೆ ಒಪ್ಪಿಗೆ ಕೊಡುವ ಮೊದಲು ಕೃತಿಗೆ ಪಠ್ಯಪುಸ್ತಕವಾಗುವ ಅರ್ಹತೆ ಇದೆಯೆ ಎಂದು ಕೂಲಂಕುಷವಾಗಿ ಚರ್ಚಿಸಿ ನಿರ್ಧಾರ ತೆಗೆದುಕೊಳ್ಳುವ ಹಕ್ಕನ್ನು ಪ್ರಶ್ನಿಸುವುದು, ವಿಶ್ವವಿದ್ಯಾನಿಲಯದ ಸ್ವಾಯತ್ತತೆಯನ್ನು ಪ್ರಶ್ನಿಸಿದಂತೆಯೇ ಆಗುತ್ತದೆ. ಅಲ್ಲದೆ ಪದವಿ ತರಗತಿಗಳಲ್ಲಿ ಪಠ್ಯಪುಸ್ತಕವನ್ನು ವಿಮರ್ಶಾತ್ಮಕವಾಗಿ ಬೋಧಿಸುವುದರಿಂದ ಕೃತಿಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಹೇಳಲು ವಿದ್ಯಾರ್ಥಿಗಳನ್ನೊಳಗೊಂಡಂತೆ ಎಲ್ಲರಿಗೂ ಅವಕಾಶವಿರುತ್ತದೆ. ಆದುದರಿಂದ ಯಾರಿಗೇ ಆಗಲಿ ಒಂದು ಕೃತಿಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವಿರುತ್ತದೆಯೆ ಹೊರತು ಅದನ್ನು ಪಠ್ಯಪುಸ್ತಕವನ್ನಾಗಿ

ಮಾಡಬಾರದು ಎಂದು ಹೇಳುವ ಹಕ್ಕಿರುವುದಿಲ್ಲ ಎನ್ನುವುದು ಶಿಕ್ಷಣ ಮಂಡಳಿಗಳ ಒಟ್ಟಾರೆ ನಿಲುವಾಗಿತ್ತು. ಒಟ್ಟಿನಲ್ಲಿ 'ಮಹಾಚೈತ್ರ'ದ ಬಗೆಗಿನ ದುರದೃಷ್ಟಕರ ವಿವಾದವು, ವಿಶ್ವವಿದ್ಯಾಲಯಗಳು ಎದುರಿಸಬೇಕಾದ 'ಅಸಾಹಿತ್ಯಕ' ಒತ್ತಡಗಳನ್ನು ಹಾಗೂ ತಮ್ಮ ಸ್ವಾಯತ್ತತೆ ರಕ್ಷಿಸಿಕೊಳ್ಳಬೇಕಾದ ಜವಾಬ್ದಾರಿಯನ್ನು ತೋರಿಸಿಕೊಟ್ಟಿತು. ಎರಡೂ ವಿಶ್ವವಿದ್ಯಾನಿಲಯಗಳು ಅತ್ಯಂತ ಆರೋಗ್ಯಕರ ನಿಲುವನ್ನು ತೆಗೆದುಕೊಂಡಿದ್ದು ಒಂದು ಒಳ್ಳೆಯ ಬೆಳವಣಿಗೆಯೆಂದೇ ಹೇಳಬಹುದು. ಆದರೆ ಸರ್ಕಾರವು ಕೊನೆಗೂ ಒತ್ತಡಗಳಿಗೆ ಮಣಿದು ಕೃತಿಯನ್ನು ರದ್ದುಮಾಡಿತು.

ದುರ್ಬಲ ಸಮುದಾಯಗಳು ತಮ್ಮ ಮೇಲಿನ ದೌರ್ಜನ್ಯ ನಡೆದಂತೆಲ್ಲ, ಅವುಗಳ ವಿರುದ್ಧ ಸಂಘಟನೆ ಹಾಗೂ ಹೋರಾಟ ಮಾಡುವ ದೃಢತೆ ಪಡೆದುಕೊಳ್ಳುತ್ತವೆ. ಇದು ಬದಲಾಗುತ್ತಿರುವ ಸಾಮಾಜಿಕ ಸನ್ನಿವೇಶಗಳಲ್ಲಿ ದಮನಿತರೊಳಗೆ ಸಹಜವಾಗಿ ಬೆಳೆಯುತ್ತಿರುವ ರಾಜಕೀಯ -ಸಾಮಾಜಿಕ ಪ್ರಜ್ಞೆಯ ದ್ಯೋತಕವಾಗಿದೆ. ಮುಖ್ಯವಾಗಿ ಭೂಒಡೆತನಕ್ಕೆ ಸಂಬಂಧಿಸಿದ ಘಟನೆಗಳು ಭೂರಹಿತರ ಹಾಗೂ ದಲಿತರ ಮೇಲಿನ ದೌರ್ಜನ್ಯಗಳಿಗೆ ಕಾರಣವಾಗಿವೆ. ಹಳ್ಳಿಗಳಲ್ಲಿ ಅನೂಚಾನವಾಗಿ ನಡೆದುಬಂದಿರುವ ತಮಗೆಸಂಬಂಧಿಸಿದ ವೃತ್ತಿಗಳನ್ನು ಮಾಡಲು ದಲಿತರು ನಿರಾಕರಿಸಿದಾಗ, ಸಾಮಾಜಿಕ ಸಂಘರ್ಷಗಳು ಜರುಗುತ್ತವೆ. ಜಾತಿ ರಾಜಕಾರಣವುಳ್ಳ ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕವಾಗಿ ಸಾಮಾಜಿಕವಾಗಿ ಇರುವ ಅಸಮಾನತೆ ಹಾಗೂ ಸಾಮಾನ್ಯವಾಗಿ ವ್ಯವಸ್ಥೆಪರವಾಗಿರುವ ಪೋಲಿಸರು ಈ ಸಂಘರ್ಷಮಯ ಬದುಕಿಗೆ ಕಾರಣಕರ್ತರಾಗಿರುವುದು ಕಂಡುಬರುತ್ತದೆ. ಇದಕ್ಕೆ ಸಂಬಂಧಿಸಿದಂತೆ ೧೯೯೪ ರಲ್ಲಿ ಕೆಲವು ಘಟನೆಗಳು ನಡೆದವು. ಅವುಗಳೆಂದರೆ, ಗುಲ್ಬರ್ಗಾ ಜಿಲ್ಲೆಯ ಪೇಟೆ ಅಮ್ಮಾಪುರದಲ್ಲಿ ಅಂಬೇಡ್ಕರದಿನ ಆಚರಣೆ ಸಂದರ್ಭದಲ್ಲಿ ದಲಿತರಿಗೂ ಸವರ್ಣೀಯರಿಗೂ ನಡೆದ ಸಂಘರ್ಷ; ಕೋಲಾರ ಜಿಲ್ಲೆಯಲ್ಲಿ ಡಂಗೂರ ಸಾರಲು ನಿರಾಕರಿಸಿದ ಕಣ್ಣಪ್ಪ ಎಂಬುವನಿಗೆ ಮಲತಿನ್ನಿಸಿದರೆಂದು ವರದಿಯಾದ ಪ್ರಕರಣ; ಶಿವಮೊಗ್ಗ ಜಿಲ್ಲೆಯ ಬೆಳಗುತ್ತಿಯಲ್ಲಿ ಕೋಣಬಲಿ ಕೊಡಲು ನಿರಾಕರಿಸಿದಾಗ, ದಲಿತರ ಮೇಲೆ ಹಾಕಲಾದ ಸಾಮಾಜಿಕ ಬಹಿಷ್ಕಾರ; ಹಾಸನ ಜಿಲ್ಲೆಯ ಗಂಗೂರಿನಲ್ಲಿ ಸರ್ಕಾರವೇ ಮಂಜೂರುಮಾಡಿದ ಜಮೀನು ಕಿತ್ತುಕೊಂಡು ಜೀತಕ್ಕೆ ಹೋಗುವಂತೆ ಒತ್ತಾಯಿಸಿದ ಪ್ರಕರಣ - ಮೊದಲಾದವು. ಇವುಗಳ ಜೊತೆಗೆ, ಇಳಕಲ್ಲಿನ ಚಿತ್ತರಗಿ ಮಠದ ಮಹಾಂತಸ್ವಾಮಿ, ತಮ್ಮ ಉತ್ತರಾಧಿಕಾರಿಯಾಗಿ ದಲಿತರನ್ನು ನೇಮಿಸುವುದಾಗಿ ಪ್ರಕಟಿಸಿದಾಗ ಎದ್ದ ವಿವಾದ. ಇವೆಲ್ಲವು ಸ್ಥಿತ್ಯಂತರಗಳಹೊತ್ತಿನ ಇಂಡಿಯಾದ ಸಾಮಾಜಿಕ ಸಂದರ್ಭಗಳು ಸೃಷ್ಟಿಸಿರುವ ಮುಖಾಮುಖಿಗಳಾಗಿವೆ. ಒಂದೆಡೆ ಬದಲಾವಣೆಗೊಲ್ಲದ ವ್ಯವಸ್ಥೆ. ಮತ್ತೊಂದೆಡೆ ಬದಲಾವಣೆಗೆ ಒತ್ತಾಯಿಸುತ್ತಿರುವ ಸಮುದಾಯಗಳು. ಈ ನಡುವೆ ರಾಜಕಾರಣ, ಸರ್ಕಾರ, ಕಾನೂನು, ಪೋಲಿಸು- ಇವೆಲ್ಲ ಸೇರಿ, ಒಂದು ಜಟಿಲಪರಿಸ್ಥಿತಿಯನ್ನು ಉಂಟುಮಾಡಿವೆ. ಬಹುಶಃ ಪರಿಸ್ಥಿತಿಯ ಈ ಬೆಂಕಿಕೊಂಡವನ್ನು ನಮ್ಮ ವರ್ತಮಾನವು ಹಾಯುವುದು ಚಾರಿತ್ರಿಕವಾಗಿ ಅನಿವಾರ್ಯವಾಗಿದೆ.

ಮೇಲೆ ವಿವರಿಸಿದ ಸ್ಥಳೀಯ 'ಪ್ರಾಂತೀಯ' ಎನ್ನಲಾಗುವ ಸಂಗತಿಗಳು, ತಮಗೆ ತಾವೇ ಸ್ವತಂತ್ರವಾಗಿಲ್ಲ. ಇವುಗಳ ಲಯವನ್ನು ಭಾರತದ ರಾಜಕಾರಣ ಒಪ್ಪಿಕೊಂಡ ಆರ್ಥಿಕನೀತಿ ಹಾಗೂ ಜಾಗತಿಕ ಬೆಳವಣಿಗೆಗಳು ಪ್ರಭಾವಿಸಿವೆ. ಅದರಲ್ಲೂ ಕರ್ನಾಟಕದ ರೈತಚಳುವಳಿ ಹಾಗೂ ಪರಿಸರ ಆಂದೋಲನಗಳನ್ನು ಗಮನಿಸಬೇಕು. ಕಳೆದ ವರ್ಷಗಳಲ್ಲಿ ಒಂದು ಪ್ರಬಲ ಶಕ್ತಿಯಾಗಿ ಮೂಡಿಬಂದ ರೈತಚಳುವಳಿಯ ಚಟುವಟಿಕೆಗಳು, ೧೯೯೪ ರಲ್ಲಿಯೂ ಮುಂದುವರೆದವು. 'ಕರ್ನಾಟಕ ರಾಜ್ಯ ರೈತಸಂಘ' ಹಿಂದಿಗಿಂತ ದುರ್ಬಲ ಎಂದು ಕಂಡುಬಂದರೂ, ಸಣ್ಣ ಮತ್ತು ಮಧ್ಯಮ ವರ್ಗದ ರೈತರ ಹಿತಗಳಿಗೆ ಸಂಬಂಧಿಸಿದಂತೆ, ಒಟ್ಟಾರೆ ಗ್ರಾಮೀಣ ಜನತೆಗೆ ಆಗಿರುವ ಅನ್ಯಾಯಗಳ ವಿರುದ್ಧ ಅಲ್ಲಲ್ಲಿ ಚಳವಳಿಗಳನ್ನು ರೂಪಿಸಿತು. ರೈತಸಂಘ ಇತರ ಹಲವಾರು ಸಂಘಟನೆಗಳ ಸಹಯೋಗದೊಂದಿಗೆ ಎತ್ತಿಕೊಂಡ ಪ್ರಮುಖ ಸಮಸ್ಯೆಗಳೆಂದರೆ, 'ಗ್ಯಾಟ್ ಒಪ್ಪಂದ'ದಿಂದ ಭಾರತದ ರೈತರ ಮೇಲಾಗುವ ದುಷ್ಪರಿಣಾಮ, ಮದ್ಯಪಾನದ ಸಮಸ್ಯೆಗಳು, ಕೈಗಾರಿಕೆಗಳನ್ನು ಖಾಸಗಿಯವರಿಗೆ ವಹಿಸಿಕೊಡುವುದು ಇತ್ಯಾದಿ. ಗ್ಯಾಟ್ ಒಪ್ಪಂದ ಮತ್ತು ಡಂಕಲ್ ಪ್ರಸ್ತಾಪಗಳ ವಿರುದ್ಧ ರೈತರಿಗೆ ಅರಿವು ಮೂಡಿಸಲು ಮತ್ತು ಒಪ್ಪಂದಕ್ಕೆ ಸಹಿ ಹಾಕದಂತೆ ಸರ್ಕಾರದ ಮೇಲೆ ಒತ್ತಡ ಹೇರಲು, ರೈತಸಂಘ ಹಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿತು. ರಸ್ತೆತಡೆ ಚಳುವಳಿ, ಸರ್ಕಾರಕ್ಕೆ ಮನವಿ ಅರ್ಪಿಸುವುದು, ರಾಜ್ಯಾದ್ಯಂತ ಎಲ್ಲಾ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ರೈತರೇ ಉತ್ಪಾದಿಸಿದ ಜವಾರಿ ಬೀಜಗಳನ್ನು ತಹಸಿಲ್ದಾರರಿಗೆ, ಜಿಲ್ಲಾಧಿಕಾರಿಗಳಿಗೆ ಮತ್ತು ರೈತರಿಗೆ ಮಾರಾಟ ಮಾಡುವ ಕಾರ್ಯಕ್ರಮ, ಬಹುರಾಷ್ಟ್ರೀಯ ಸಂಸ್ಥೆಗಳ (ಉದಾ: ಬೆಂಗಳೂರಿನ ಕಾರ್ಗಿಲ್ ಸಂಸ್ಥೆಯ) ಲೆಕ್ಕಪತ್ರಗಳನ್ನು ಸುಟ್ಟು ಹಾಕುವುದು; ಇಲ್ಲವೆ ಕಟ್ಟಡಗಳನ್ನು (ಉದಾ. ಸಂಗನಕಲ್ ಎಂಬಲ್ಲಿ) ಕೆಡಹುವುದು ಹಾಗೂ ಮೂರನೆ ಜಗತ್ತಿನ ರಾಷ್ಟ್ರಗಳ ಅಂತಾರಾಷ್ಟ್ರೀಯ ಅಧಿವೇಶನವನ್ನು (ಬೆಂಗಳೂರಿನಲ್ಲಿ) ಸಂಘಟಿಸುವುದು -ಇವು ಅಂಥ ಕಾರ್ಯಕ್ರಮಗಳಲ್ಲಿ ಕೆಲವು.

ಕರ್ನಾಟಕದಲ್ಲಿ ಸಂಪೂರ್ಣ ಪಾನನಿಷೇಧವನ್ನು ಜಾರಿಗೊಳಿಸಬೇಕೆಂದು ರೈತ ಸಂಘವು ರಾಜ್ಯದ ಹಲವಾರು ಕಡೆ ಆಂದೋಳನವನ್ನು ಏರ್ಪಡಿಸಿತ್ತು. ಸರಕಾರ ತನ್ನ ಬೊಕ್ಕಸಕ್ಕೆ 'ಪಾಪದ ಹಣ' ತುಂಬಿಕೊಳ್ಳಲು ಬಡವರನ್ನು ದೋಚುತ್ತದೆ. ಆದರೆ ಇದೇ ಸರ್ಕಾರ ಮದ್ಯಪಾನವು ಒಂದು ' ಮರಣಾಂತಿಕ ಚಟ' ಎಂದು ಮಾಧ್ಯಮಗಳ ಮೂಲಕ ಜಾಹಿರಾತು ಮಾಡುತ್ತದೆ. ಸಾರಾಯಿಯನ್ನು ' ವಿಷ' ಎಂದು ಒಪ್ಪುತ್ತಲೆ, ಜನ ಬೇಡವೆಂದರೂ ಹಳ್ಳಿಗಳಲ್ಲಿ ಬಲವಂತವಾಗಿ ಸಾರಾಯಿ ಮಾರಾಟ ವ್ಯವಸ್ಥೆ ಮಾಡುತ್ತದೆ. ಈ ದ್ವಂದ್ವನೀತಿ ರೈತಸಂಘದ ವಿರೋಧಕ್ಕೆ ಕಾರಣವಾಗಿತ್ತು. ಪರಿಸರ ರಕ್ಷಣೆಯ ಮಾತಾಡುತ್ತ ರೈತರಿಗೆ ಸೇರಿದ ಜಾಗದಲ್ಲಿ ನೀಲಗಿರಿ ನೆಡುವುದರ ನೀತಿಯ ವಿರುದ್ಧ ಕೂಡ ರೈತಸಂಘ ಪ್ರತಿಭಟಿಸಿತು.

೧೯೯೪ರಲ್ಲಿ ರೈತಸಂಘದ ಆಲೋಚನೆ ಮತ್ತು ಕೆಲಸ ಮಾಡುವ ವಿಧಾನದಲ್ಲಿ ಒಂದು ಮುಖ್ಯ ಬೆಳವಣಿಗೆಯಾಯಿತು. ಅದೆಂದರೆ, ಈವರೆಗೆ ಸ್ಥಳೀಯ ಸರಕಾರ ಮತ್ತು ಸಮಸ್ಯೆಗಳ ವಿರುದ್ಧ ಹೋರಾಡುತ್ತಿದ್ದ ರೈತಸಂಘವು, ಗ್ಯಾಟ್ ಒಪ್ಪಂದ, ಡಂಕೆಲ್ ಪ್ರಸ್ತಾಪಗಳಂಥ ಜಾಗತಿಕ ವಿದ್ಯಮಾನಗಳಿಗೆ ನೇರ ಪ್ರತಿಕ್ರಿಯೆಯನ್ನು ತೋರಿಸುವ ಅನಿವಾರ್ಯತೆಯನ್ನು ಕಂಡುಕೊಂಡಿದ್ದು. ಈ ಜಾಗತೀಕರಣದ ದುಷ್ಪರಿಣಾಮಗಳ ಅರಿವನ್ನು ಜನರಲ್ಲಿ ಮೂಡಿಸುವಲ್ಲಿ ಸಂಘ ಸಾಕಷ್ಟು ಯಶಸ್ಸನ್ನು ಪಡೆಯಿತು ಕೂಡ. ಆದರೆ ಬಡರೈತರಿಗೆ, ಅದರಲ್ಲೂ ಕೃಷಿ ಕಾರ್ಮಿಕರಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಎತ್ತಿಕೊಂಡು ಹೋರಾಡುವ ವಿಷಯದಲ್ಲಿ, ರೈತಸಂಘ ಹಿಂದೆ ಬಿದ್ದಿತು. ಹೈದರಾಬಾದ್ ಕರ್ನಾಟಕದ ಪ್ರಾಂತ್ಯಗಳಲ್ಲಿ ಜನರ ಬಡತನವೂ ಜಮೀನ್ದಾರರ ದಬ್ಬಾಳಿಕೆಯೂ ಹೆಚ್ಚುತ್ತಿರುವಂತೆ, ತೀವ್ರಗಾಮಿ ನಿಲುವನ್ನು ಹೊಂದಿರುವ ನಕ್ಸಲೀಯ ಸಂಘಟನೆಗಳು ಹೆಚ್ಚು ಜನಪ್ರಿಯಗೊಂಡವು. ಈ ಸಂಘಟನೆಗಳಿಗೂ ಕರ್ನಾಟಕ ರಾಜ್ಯ ರೈತ ಸಂಘಕ್ಕೂ ಒಂದು ಪ್ರಮುಖ ತಾತ್ವಿಕ ವ್ಯತ್ಯಾಸವಿದೆ. ಈ ಸಂಘಟನೆಗಳು ಎಲ್ಲ ರೈತರನ್ನು 'ಒಂದುವರ್ಗ'ವನ್ನಾಗಿ ಪರಿಗಣಿಸುವುದಿಲ್ಲ. ಬದಲಿಗೆ ಭಾರೀ ಜಮೀನ್ದಾರರಿಂದ ಶೋಷಣೆಗೆ ಒಳಗಾಗಿರುವ ರೈತ, ಕೂಲಿಗಾರ, ಭೂಹೀನ ರೈತರ ಪರವಾಗಿ ಅವು ಆಲೋಚಿಸುತ್ತವೆ. ಉದಾ: ಕೃಷಿ ಕಾರ್ಮಿಕರಿಗೆ ಕನಿಷ್ಠವೇತನ ನೀಡಬೇಕು, ಭೂಸುಧಾರಣಾ ಕಾಯಿದೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು- ಇವೇ ಮೊದಲಾದ ಬೇಡಿಕೆಗಳನ್ನು ಮುಂದಿಟ್ಟುಕೊಂಡು ರಾಯಚೂರು, ಗುಲ್ಬರ್ಗಾ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ಈ ಸಂಘಟನೆಗಳು ಹೋರಾಟ ನಡೆಸಿದವು.

ಭೂರಹಿತರಿಗೆ ಬೇನಾಮಿ ಜಮೀನನ್ನು ಹಂಚುವ ಆಂದೋಲನ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನಡೆಯಿತು. ಆರ್.ವೈ.ಎಫ್. ಮತ್ತು ದ. ಸಂ. ಸ.ಗಳ ನೇತೃತ್ವದಲ್ಲಿ ಜಮೀನ್ದಾರರಿಗೆ ಮತ್ತು ಸರ್ಕಾರಕ್ಕೆ ಸೇರಿದ್ದ ಸಾವಿರಾರು ಎಕರೆಗಳಷ್ಟು ಜಮೀನನ್ನು ಆಕ್ರಮಿಸಿಕೊಳ್ಳಲಾಯಿತು ಎಂದು ಸದರಿ ಸಂಘಟನೆಗಳು ಹೇಳಿಕೊಂಡಿವೆ. ಈ ಚಳುವಳಿಯನ್ನು ಹತ್ತಿಕ್ಕಲು ಪೋಲಿಸರು ಹಲವರನ್ನು ಬಂಧಿಸಿದರು ಹಾಗೂ ಇದರ ವಿರುದ್ಧ ರಾಯಚೂರು ಜಿಲ್ಲಾದ್ಯಂತ ಡಿಸೆಂಬರ್ ೨೩ ರಂದು ಚಳುವಳಿಯನ್ನು ನಡೆಸಲಾಯಿತು. ರಾಯಚೂರಿನ ಡೊಂಗರಾಂಪುರದಲ್ಲಿ ಭೂಮಾಲೀಕರ ದಬ್ಬಾಳಿಕೆ ವಿರುದ್ಧ ಭೂಹೀನ ಕೃಷಿಕಾರ್ಮಿಕರನ್ನು ಸಂಘಟಿಸಿದ ಕರ್ನಾಟಕರೈತ -ಕೂಲಿ ಸಂಘದ ಕಾರ್ಯಕ್ರಮವನ್ನು ಕೂಡ ಇಲ್ಲಿ ನೆನೆಯಬಹುದು.

ಬೃಹತ್ ಕೈಗಾರಿಕೆಗಳಿಂದಲೇ ಅಭಿವೃದ್ಧಿ ಸಾಧ್ಯ ಎಂದು ನಂಬಿರುವ ಮನುಷ್ಯನಿಂದ ಪರಿಸರಕ್ಕಾಗುತ್ತಿರುವ ಹಾನಿಯ ಬಗ್ಗೆ, ಇದರಿಂದ ನಾಡಿನ ಜನರ ಮೇಲಾಗುವ ದುಷ್ಪರಿಣಾಮಗಳ ಬಗ್ಗೆ, ಪರಿಸರವಾದಿಗಳು ಜನರನ್ನು ಸಂಘಟಿಸುವುದು: ಸರಕಾರದ ಪರಿಸರ ವಿರೋಧಿ ನಿಲುವನ್ನು ಪ್ರತಿಭಟಿಸುವುದು - ಇವು, ಈಗ ಜಗತ್ತಿನ ತುಂಬ ನಡೆಯುತ್ತಿರುವ ಚಟುವಟಿಕೆಗಳಾಗಿವೆ. ಇದರಂತೆ ಸಹಜವಾಗಿ ಕರ್ನಾಟಕದಲ್ಲಿ ಕೂಡ ಈ ವರ್ಷ ಪರಿಸರದ ಚಳುವಳಿಗಳು ಪ್ರಮುಖ ವಿದ್ಯಮಾನಗಳಾದವು.

ಶೃಂಗೇರಿಯಿಂದ ಸುಮಾರು ೩೬ ಕಿ. ಮೀ. ದೂರದಲ್ಲಿರುವ ದಟ್ಟವಾದ ಕಾಡಿನಿಂದಾವೃತವಾದ ಗಂಗಡಿಕಲ್ಲು ಗುಡ್ಡದಲ್ಲಿ, ಕಬ್ಬಿಣದ ಅದಿರನ್ನು ತೆಗೆಯಲು ಸರಕಾರ ಪರವಾನಿಗೆ ನೀಡಿದ್ದರ ವಿರುದ್ಧವಾಗಿ ಜನಾಭಿಪ್ರಾಯ ಮೂಡಿಸುವ ಅಂದೋಳನ ನಡೆಯಿತು. ಶೃಂಗೇರಿ ಮತ್ತು ಶಿವಮೊಗ್ಗಗಳಲ್ಲಿ ಪ್ರಾರಂಭವಾದ ಈ ಚಳುವಳಿಯಲ್ಲಿ ಭಾಗವಹಿಸಿದವರೆಂದರೆ, ಕರ್ನಾಟಕ ವಿಮೋಚನಾ ರಂಗದ ಕಾರ್ಯಕರ್ತರು, 'ಪಶ್ಚಿಮಘಟ್ಟ ಉಳಿಸಿ' ಆಂದೋಲನದ ಪರಿಸರವಾದಿಗಳು ಹಾಗೂ ಪ್ರಗತಿಪರವಿದ್ಯಾರ್ಥಿ ಸಂಘಗಳು. ಗಂಗಡಿಕಲ್ಲು ಗುಡ್ಡದಲ್ಲಿ ಅದಿರು ತೆಗೆಯುವ ಕೆಲಸದಿಂದ ತುಂಗಾನದಿಯ ದಡದ ನೂರಾರು ಹಳ್ಳಿ-ಪಟ್ಟಣಗಳಲ್ಲಿ ಕುಡಿಯುವ ನೀರು ಕಲುಷಿತವಾಗುತ್ತದೆ. ಅದಿರನ್ನು ಸಂಸ್ಕರಿಸಿದ ನಂತರ ಉಳಿದ ಮಣ್ಣು ಜಾರುತ್ತಾ ಬಂದು, ಮಳೆಗಾಲದ ಪ್ರವಾಹದಲ್ಲಿ ನದಿಯಲ್ಲಿ ಹೂಳು ತುಂಬಿಕೊಂಡು, ಪರಿಣಾಮವಾಗಿ ನೀರು ಜಮೀನುಗಳಿಗೆ ನುಗ್ಗಿ ಬೆಳೆ ನಾಶವಾಗುವ ಸಾಧ್ಯತೆ ಇದೆ. ಹಾಲಿ ಜಲಾಶಯಗಳೂ ಹೂಳುತುಂಬಿಕೊಂಡು ನಿರುಪಯುಕ್ತವಾಗುತ್ತವೆ. ಗುಡ್ಡಗಳ ನಾಶದಿಂದ ಅಂತರ್ಜಲದ ಒತ್ತಡ ಕಡಿಮೆಯಾಗಿ ನೀರಿನ ಒರತೆ ಬತ್ತಿಹೋಗುವುದರಿಂದ, ನದಿಪಾತ್ರದ ಜೀವಸಂಕುಲ ನಿರ್ವಂಶವಾಗುತ್ತದೆ- ಎನ್ನುವುದು ಪ್ರತಿಭಟನಾಕಾರರ ನಿಲುವಾಗಿತ್ತು. ಈ ಚಳುವಳಿಯಲ್ಲಿ 'ಅಪ್ಪಿಕೋ ಚಳವಳಿ' ಖ್ಯಾತಿಯ ಶ್ರೀ ಸುಂದರಲಾಲ್ ಬಹುಗುಣ ಬಂದು ಭಾಗವಹಿಸಿದರು. ಶಿವಮೊಗ್ಗೆಯಲ್ಲಿ ಭಾರೀ ಪ್ರಮಾಣದ ಜನಸೇರಿ ಚಳುವಳಿ ಮಾಡಿದರು.

ಬೀದರಿನ ಕೈಗಾರಿಕಾ ಪ್ರದೇಶ ಕೊಳಾರದಲ್ಲಿ ರಾಸಾಯನಿಕ ಕಾರ್ಖಾನೆಗಳು ಉಂಟು ಮಾಡುತ್ತಿರುವ ಪರಿಸರಮಾಲಿನ್ಯದ ವಿರುದ್ಧ ಅನೇಕ ತೀವ್ರಗಾಮಿ ಎಡಪಂಥೀಯ ಸಂಘಟನೆಗಳು ಹಾಗೂ ಸುತ್ತಲಿನ ಜನರು ನಡೆಸಿದ ಹೋರಾಟ ಮತ್ತೊಂದು ವಿದ್ಯಮಾನವಾಗಿದೆ. ಇವುಗಳ ಜತೆಯಲ್ಲಿ ನಡೆದ ಇತರ ಪರಿಸರ ಅಂದೋಲನಗಳೆಂದರೆ, ಉತ್ತರಕನ್ನಡ ಜಿಲ್ಲೆಯಲ್ಲಿ ಮತ್ತು ಬೆಂಗಳೂರಿನಲ್ಲಿ ನಡೆದ ಕೈಗಾ ಅಣುಸ್ಥಾವರ ಯೋಜನಾ ವಿರೋಧಿ ಚಳುವಳಿ; ಧಾರವಾಡದಲ್ಲಿ ಅರಣ್ಯ ಮತ್ತು ಬಂಜರು ಭೂಮಿಯಲ್ಲಿ ಜನರ ಸಹಭಾಗಿತ್ವಕ್ಕಾಗಿ ನಡೆದ ಹೋರಾಟ; ಉತ್ತರ ಕರ್ನಾಟಕದ ಸಿರ್ಸಿಯಲ್ಲಿ ನಡೆದ ಶರಾವತಿ ಟೇಲರೇಸ್ ಯೋಜನಾ ವಿರೋಧಿ ಚಳುವಳಿ; ಸಾಗರದ ಸೇವಾನಗರ ಟ್ರಸ್ಟ್ ಆಶ್ರಯದಲ್ಲಿ ನಡೆದ ಬೇಡ್ತಿ ಯೋಜನೆಯ ವಿರುದ್ಧದ ಚಳುವಳಿ; ಹರಿಹರದಲ್ಲಿ 'ಹರಿಹರ ಪಾಲಿಫೈಬರ್ಸ್' ಕಾರ್ಖಾನೆಯ ವಿರುದ್ಧ ನಡೆದ ಚಳುವಳಿ ಮುಂತಾದವು. ಈ ಎಲ್ಲ ಚಳುವಳಿಗಳು 'ಅಭಿವೃದ್ಧಿ'ಯ ಪರಿಕಲ್ಪನೆಯನ್ನು ಪ್ರಶ್ನಿಸುತ್ತಿವೆ ಹಾಗೂ ನೀರು ನೆಲ ಗಾಳಿಗಳ ಶುದ್ಧತೆ ಉಳಿಸಿಕೊಳ್ಳುವ ಅಥವಾ ಕಾಡನ್ನು ರಕ್ಷಿಸಿಕೊಳ್ಳುವ ಸ್ತರದಿಂದ ಮುನ್ನಡೆದು, ಸರ್ಕಾರದ ಹೊಸ ಆರ್ಥಿಕನೀತಿಗೆ ಮುಖಾಮುಖಿಯಾಗುವತ್ತ ಚಲಿಸುತ್ತಿವೆ.

ಈ ಲೇಖನದಲ್ಲಿ, ಕರ್ನಾಟಕದಲ್ಲಿ ೧೯೯೪ ರಲ್ಲಿ ನಡೆದ 'ಪ್ರಮುಖ' ವೆಂದುತೋರಿದ ಸಾಮಾಜಿಕ ವಿದ್ಯಮಾನಗಳನ್ನು ಪರಿಚಯಿಸುವ ಪ್ರಯತ್ನವನ್ನು

ಮಾಡಲಾಗಿದೆ. ಆದರೆ ಪ್ರಾರಂಭದಲ್ಲಿ ಹೇಳಿದಂತೆ, ಪ್ರತಿಯೊಂದು ವಿದ್ಯಮಾನದ ವಿವರವಾದ ವಿಶ್ಲೇಷಣೆ ಮಾಡಲಾಗಿಲ್ಲ. ಮತ್ತೆ ಕೆಲವನ್ನು ಉಲ್ಲೇಖಿಸಲಾಗಿಲ್ಲ. ಉದಾಹರಣೆಗೆ, ಈದ್‌ಮಿಲಾದ್ ಸಂದರ್ಭದಲ್ಲಿ ಭದ್ರಾವತಿಯಲ್ಲಿ ನಡೆದ ಹಾಗೂ ದಸರಾಮೆರವಣಿಗೆಯ ಹೊತ್ತಲ್ಲಿ ದಾವಣಗೆರೆಯಲ್ಲಿ ನಡೆದ ಕೋಮು ಗಲಭೆಗಳು; ರಾಜ್ಯದ ವಿವಿಧೆಡೆಗಳಲ್ಲಿ ಪೋಲಿಸರ ದೌರ್ಜನ್ಯಗಳ ವಿರುದ್ಧ ಜನ ಮಾಡಿದ ಪ್ರತಿಭಟನೆಗಳು ; ಕೇಂದ್ರ ಸರ್ಕಾರದ ಹಿಂದಿಹೇರಿಕೆಯ ಪ್ರಯತ್ನದ ವಿರುದ್ಧ ನಡೆದ ಚಳವಳಿ; ಮದ್ಯಪಾನ, ವಧುದಹನ ಮೊದಲಾದುವುದರ ವಿರುದ್ಧ ಮಹಿಳಾ ಸಂಘಟನೆಗಳ ಹೋರಾಟಗಳು -ಇತ್ಯಾದಿ. ಈ ಎಲ್ಲ ವಿದ್ಯಮಾನಗಳ ಪ್ರಮುಖ ಲಕ್ಷಣಗಳೆಂದರೆ, ಜಾಗತಿಕ ಮಟ್ಟದ ಮತ್ತು ರಾಷ್ಟ್ರಮಟ್ಟದ ವಿದ್ಯಮಾನಗಳಿಗೆ ಅತ್ಯಂತ ತುರ್ತಾಗಿ ಪ್ರತಿಕ್ರಿಯಿಸುವ ಅನಿವಾರ್ಯತೆಯನ್ನು ಜನ ಕಂಡುಕೊಳ್ಳುತ್ತಿರುವುದು ಮತ್ತು ತಮ್ಮ ಬದುಕನ್ನು ಛಿದ್ರಗೊಳಿಸಲು ಹೊರಬರುವ ಶಕ್ತಿಗಳ ವಿರುದ್ಧ ಹೋರಾಟವೊಂದೇ ಮಾರ್ಗ ಎನ್ನುವುದನ್ನು ಮನಗಾಣುತ್ತಿರುವುದು. ಮತ್ತೊಂದು ಪ್ರಮುಖ ಬೆಳವಣಿಗೆ ಎಂದರೆ, ತಾತ್ವಿಕವಾಗಿ ವಿಭಿನ್ನ ಸಿದ್ಧಾಂತಗಳನ್ನು ನಂಬುವ, ಪರಸ್ಪರ ವಿರುದ್ಧ ಹಿತಾಸಕ್ತಿಗಳನ್ನು ಹೊಂದಿರುವ ಸಂಘ- ಸಂಸ್ಥೆಗಳು, ಸಮಾನವಾದ ಪ್ರಬಲ ಶತ್ರುವನ್ನು ಎದುರಿಸುವಂಥ ಸಂದರ್ಭಗಳಲ್ಲಿ ಒಂದೇ ವೇದಿಕೆಯಡಿ ಬರುವ ಪ್ರಯತ್ನ ಮಾಡುತ್ತಿರುವುದು. ಈ ಬೆಳವಣಿಗೆ ಮುಂದೆ ವಿವಿಧ ಸಾಮಾಜಿಕ ಗುಂಪುಗಳ ರಾಜಕೀಯ ಧ್ರುವೀಕರಣದಲ್ಲಾಗಬಹುದಾದ ಬದಲಾವಣೆಯನ್ನು ಸೂಚಿಸುತ್ತದೆಯೇ?

# ರಾಜಕೀಯ ವಿದ್ಯಮಾನಗಳು

*ಡಿ.ವಿ. ರಾಜಶೇಖರ್*

ಹೊಸ ವರ್ಷದ (೧೯೯೫) ಆಗಮನದೊಂದಿಗೆ ಕರ್ನಾಟಕದಲ್ಲಿ ಹೊಸ ಸರ್ಕಾರವೂ ಅಸ್ತಿತ್ವಕ್ಕೆ ಬಂದಿದೆ. ೧೯೯೪ರಲ್ಲಿ ರಾಜಕೀಯ ಸ್ಥಿತ್ಯಂತರಕ್ಕೆ ಕಾರಣವಾಗಿದ್ದ ಕಾಂಗ್ರೆಸ್ -ಐ ಪಕ್ಷ ವಿಧಾನಸಭಾ ಚುನಾವಣೆಗಳಲ್ಲಿ ಸೋಲುಕಂಡಿದೆ. ಐದು ವರ್ಷಗಳ ಹಿಂದೆ ತಾವೇ ತಿರಸ್ಕರಿಸಿದ್ದ ಜನತಾದಳ ಪಕ್ಷವನ್ನು ರಾಜ್ಯದ ಜನತೆ ಮತ್ತೆ ಅಧಿಕಾರಕ್ಕೆ ತಂದಿದೆ. ಬಹುಶಃ ರಾಜ್ಯದ ರಾಜಕೀಯ ಚರಿತ್ರೆಯಲ್ಲಿ ಹಿಂದೆಂದೂ ಇಷ್ಟೊಂದು ನಿಖರವಾಗಿ ಆಡಳಿತಪಕ್ಷವನ್ನು ಸೋಲಿಸಿ ವಿರೋಧ ಪಕ್ಷವನ್ನು ಅಧಿಕಾರದ ಗದ್ದುಗೆಗೆ ಏರಿಸಿದ್ದಿಲ್ಲ. ಇದೇ ಕಾರಣಕ್ಕೆ ಈ ಬದಲಾವಣೆಗಳು ಜನರ ಚಿಂತನೆಯ ದಾರಿಯನ್ನು ಸ್ಪಷ್ಟವಾಗಿ ಎತ್ತಿ ಹೇಳುತ್ತವೆ.

೧೯೯೫ರ ಸ್ಥಿರ ರಾಜಕೀಯ ವಾತಾವರಣದ ಮಧ್ಯೆ ನಿಂತು, ಹಿಂದಿನ ೧೯೯೪ರ ವರ್ಷವನ್ನು ನೋಡಿದಾಗ ಯಾರಿಗಾದರೂ ಬೇಸರವಾಗದಿರಲಾರದು. ಒಡಲಲ್ಲಿಯೇ ಭಿನ್ನಮತವನ್ನಿಟ್ಟಿಕೊಂಡು ೧೯೯೪ ಉದಯಿಸಿತೊ ಎನ್ನುವಂತೆ, ಇಡೀ ವರ್ಷ ಆಡಳಿತ ಪಕ್ಷವಾಗಿದ್ದ ಕಾಂಗ್ರೆ ಭಿನ್ನಮತದಲ್ಲಿಯೇ ಮುಳುಗಿಹೋಗಿತ್ತು. ಅಧಿಕಾರಕ್ಕೆ ಬಂದ ಒಂದೇ ವರ್ಷದಲ್ಲಿ ಅಧಿಕಾರ ಕಳೆದುಕೊಂಡ ವೀರೇಂದ್ರ ಪಾಟೀಲರು ಎಸ್.ಬಂಗಾರಪ್ಪ ಅವರಿಗೆ ಅಧಿಕಾರ ಬಿಟ್ಟುಕೊಟ್ಟರು. ಎಸ್.ಬಂಗಾರಪ್ಪ ಮುಖ್ಯಮಂತ್ರಿಯಾದರು. ಸ್ಥಿರ ರಾಜಕೀಯ ಸ್ಥಾಪಿತವಾಗಬಹುದೆಂದು ನಿರೀಕ್ಷಿಸಿದ್ದವರಿಗೆ ನಿರಾಸೆಯಾಯಿತು. ಭಿನ್ನಮತ ಬಂಗಾರಪ್ಪ ಅವರ ಆಡಳಿತವನ್ನು ಕೊರೆಯಿತು. ಬಂಗಾರಪ್ಪನವರು ಹಮ್ಮಿಕೊಂಡ ಜನಪರ ಕಾರ್ಯಕ್ರಮಗಳು ಜನಮೆಚ್ಚುಗೆ ಗಳಿಸಿದರೂ ಅಂತಿಮವಾಗಿ ಭಿನ್ನಮತ ಅವರ ಪದಚ್ಯುತಿಗೂ ಕಾರಣವಾಯಿತು. ನಂತರ ಅಧಿಕಾರಕ್ಕೆ ಬಂದ ವೀರಪ್ಪಮೊಯ್ಲಿ ಅವರು ವರ್ಷ ಪೂರ್ತಿ ಹೆಣಗಿದರೂ ಭಿನ್ನಮತ ನಿವಾರಣೆ ಮಾಡಲಾಗಲಿಲ್ಲ. ರಾಜಕೀಯ ಅಸ್ಥಿರತೆ ವರ್ಷದ ಮೊದಲಲ್ಲೇ ಗಟ್ಟಿ ಬೇರುಬಿಡಲು ಆರಂಭಿಸಿತು.

ವೀರಪ್ಪಮೊಯ್ಲಿ ಅವರ ಬದಲಾವಣೆಗೆ ಒತ್ತಾಯಿಸಿ ಎಸ್.ಎಂ.ಕೃಷ್ಣ ಸೇರಿದಂತೆ ಏಳು ಸಚಿವರು ರಾಜ್ಯಪಾಲರಿಗೆ ರಾಜೀನಾಮೆ ಸಲ್ಲಿಸಿ (ಜನ. ೩) ಪಕ್ಷದ ಹೈಕಮಾಂಡಿಗೇ ಸವಾಲೆಸೆದರು. ವರ್ಷಾಂತ್ಯಕ್ಕೆ ಚುನಾವಣೆ ಎದುರಿಸಬೇಕಾದ ಕರ್ನಾಟಕದಲ್ಲಿ ಪಕ್ಷದ ಒಳಜಗಳ ಪರಿಹರಿಸದೆ ಹೈಕಮಾಂಡ್‌ಗೆ ಬೇರೆ ದಾರಿ ಇರಲಿಲ್ಲ. ಹೀಗಾಗಿ ಬಿಹಾರದ ಮಾಜಿ ಮುಖ್ಯಮಂತ್ರಿ ಡಾ. ಜಗನ್ನಾಥ ಮಿಶ್ರಾ ಅವರು ಸಮಸ್ಯೆ

ತಿಳಿಯಲು ಹೈಕಮಾಂಡ್ ದೂತರಾಗಿ ರಾಜ್ಯಕ್ಕೆ ಬಂದರು. ಡಾ. ಮಿಶ್ರ ಆಗಮನ ಕಾಂಗ್ರೆಸ್‌ನ ವಿವಿಧ ಗುಂಪುಗಳ ಬಲಾಬಲ ಪ್ರದರ್ಶನಕ್ಕೆ ದಾರಿ ಮಾಡಿಕೊಟ್ಟಿತು. ಚುನಾವಣೆ ಹತ್ತಿರ ಬರುತ್ತಿರುವ ಸಂದರ್ಭದಲ್ಲಿ ನಾಯಕತ್ವದ ಬದಲಾವಣೆ ಅಪಾಯಕಾರಿಯೆಂದು ಹೈಕಮಾಂಡ್ ಭಾವಿಸಿದೆಯೆಂಬ ಅಭಿಪ್ರಾಯವನ್ನು ಕಾಂಗ್ರೆಸ್ ವಲಯದಲ್ಲಿ ಮೂಡಿಸಲಾಯಿತು. ಇದರ ಪರಿಣಾಮ ೧೨ ಅಂಶಗಳ ರಾಜಿಸೂತ್ರವನ್ನು ಡಾ. ಜಗನ್ನಾಥ ಮಿಶ್ರ ಸಿದ್ಧ ಮಾಡಿದರು. ಮೊಯ್ಲಿ ಅವರ ಮುಂದುವರಿಕೆ, ರಾಜ್ಯ ಕಾಂಗ್ರೆಸ್ ಸಮಿತಿ ಪುನರ್‌ರಚನೆ, ಭಿನ್ನಮತದಿಂದಾಗಿಯೇ ವಜಾ ಆಗಿದ್ದ ರಾಜಶೇಖರಮೂರ್ತಿ ಅವರಿಗೆ ರಾಜ್ಯಸಭಾ ಟಿಕೆಟ್, ಸರ್ಕಾರ ಹಾಗೂ ಪಕ್ಷದ ನಿರ್ಧಾರಗಳಲ್ಲಿ ಭಿನ್ನರ ಅಭಿಪ್ರಾಯಕ್ಕೂ ಮಾನ್ಯತೆ -ಇವು ರಾಜಿಸೂತ್ರದ ಮುಖ್ಯಾಂಶಗಳಾಗಿದ್ದವು. ಒಲ್ಲದ ಮನಸ್ಸಿನಿಂದ ಮೊಯ್ಲಿ ಅವರ ನಾಯಕತ್ವವನ್ನು ಭಿನ್ನರು ಒಪ್ಪಿದರಾದರೂ, ವಿರೋಧಿ ಚಟುವಟಿಕೆ ರಹಸ್ಯವಾಗಿ ಮುಂದುವರಿದೇ ಇತ್ತು.

೧೯೯೨ರ ಡಿಸೆಂಬರ್ ೬ ರಂದು ಅಯೋಧ್ಯೆಯಲ್ಲಿನ ಬಾಬರಿ ಮಸೀದಿ ನೆಲಸಮ ಘಟನೆ, ಇಡೀ ರಾಷ್ಟ್ರದಲ್ಲಿ ಕೋಮು ಸೌಹಾರ್ದತೆಯನ್ನು ಕೆಡಿಸಿತ್ತು. ದೇಶ ಮಾಮೂಲಿಸ್ಥಿತಿಗೆ ಬರಲು ಬಹಳ ಕಾಲವೇ ಹಿಡಿಯಿತು. ಅಯೋಧ್ಯೆ ದುರಂತದ ಬೆನ್ನಲ್ಲಿದ್ದ ಬಿಜೆಪಿ, ಆರೆಸ್ಸೆಸ್, ಹಿಂದೂಮಹಾಸಭಾ ಸಂಘಟನೆಗಳು ನಂತರದ ದಿನಗಳಲ್ಲಿ ಸಾಮಾಜಿಕ ಕಳಂಕಕ್ಕೆ ಒಳಗಾದವು. ಇದರ ಪರಿಣಾಮವೊ ಎಂಬಂತೆ ನಂತರ ನಡೆದ ಚುನಾವಣೆಗಳಲ್ಲಿ ಜನರು ಭಾವೋದ್ರೇಕಕ್ಕೆ ಒಳಗಾಗದೆ ಅಯೋಧ್ಯೆಯ ರಾಜ್ಯದಲ್ಲಿಯೇ ಬಿಜೆಪಿ ಅಧಿಕಾರಕ್ಕೆ ಬರದಂತೆ ಮಾಡಿದರು. ಕಾಂಗ್ರೆಸ್‌ನಲ್ಲಿ ಒಳಜಗಳ ಮುಂದುವರಿಯುತ್ತಿರುವಂತೆಯೇ ಸಮಾಜವಾದಿ ಜನತಾಪಕ್ಷ ಹಾಗೂ ಜನತಾದಳ ಒಂದಾಗಿ ಏಕೀಕೃತ ಜನತಾದಳ ಉದಯವಾಯಿತು. ಕರ್ನಾಟಕದಲ್ಲಿ ಈ ಪ್ರಯೋಗ ಉತ್ತಮ ಫಲ ನೀಡಬಹುದೆನ್ನುವಾಗ ರಾಜ್ಯಸಭೆಗೆ ಅಭ್ಯರ್ಥಿಗಳನ್ನು ಆರಿಸುವ ವಿಚಾರದಲ್ಲಿ ಭಿನ್ನಮತ ಹುಟ್ಟಿತು. ಉದ್ಯಮಿ ಟ್ರೈಹಾನ್‌ಗೆ ಬೆಂಬಲ ನೀಡಿಕೆ ಪ್ರಶ್ನೆ ರಾಜ್ಯ ಜನತಾದಳವನ್ನು ಅಲುಗಾಡಿಸಿತು.

ವರ್ಷಾರಂಭದಲ್ಲಿಯೇ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿ ಚುನಾವಣೆಗಳನ್ನು ಮುಂದಕ್ಕೆ ಹಾಕಿದ್ದ ಕಾಂಗ್ರೆಸ್, ಆ ಹಿಂದೆ ನಡೆದಿದ್ದ ಗ್ರಾಮ ಪಂಚಾಯಿತಿ ಚುನಾವಣೆ ಹಿನ್ನೆಲೆಯಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಬದಲಾವಣೆ ತರಲು ಪ್ರಯತ್ನಿಸಿತು. ಸರ್ಕಾರದ ಈ ಹಸ್ತಕ್ಷೇಪ ವಿರೋಧೀ ಸದಸ್ಯರಿಗೆ ಉತ್ತಮ ಅಸ್ತ್ರವಾಯಿತು. ಎಚ್.ಡಿ.ದೇವೇಗೌಡ ಹಾಗೂ ರಾಮಕೃಷ್ಣ ಹೆಗಡೆ ನೇತೃತ್ವದಲ್ಲಿ ಜನತಾದಳ ವಿಧಾನಸೌಧ ಮುತ್ತಿಗೆ ಕಾರ್ಯಕ್ರಮ ಹಮ್ಮಿಕೊಂಡಿತ್ತು. ಜನತಾದಳದಲ್ಲಿ ಒಗ್ಗಟ್ಟಿನ ಸೂಚನೆ ಆರಂಭವಾಗುತ್ತಿರುವಂತೆಯೇ ಕಾಂಗ್ರೆಸ್‌ನಲ್ಲಿ ಭಿನ್ನಮತ ಗರಿಗೆದರಿಕೊಂಡಿತು. ಭಿನ್ನಮತೀಯರಿಗೂ ಅವಕಾಶ ಕಲ್ಪಿಸಿಕೊಡುವ ದೃಷ್ಟಿಯಿಂದ ನಿಗಮ- ಮಂಡಲಿಗಳ ಅಧ್ಯಕ್ಷರ ರಾಜೀನಾಮೆ ಕೋರಲಾಯಿತು. (ಮಾರ್ಚ್.೧೫) ರಾಜ್ಯ ಬಜೆಟ್ ಮಂಡನೆ ಮುಗಿಯುತ್ತಿದ್ದಂತೆಯೇ ಏಪ್ರಿಲ್‌ನಲ್ಲಿ

ನಡೆಯಬೇಕಿದ್ದ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್ ಚುನಾವಣೆಗಳನ್ನು ಸರ್ಕಾರ ಮುಂದೂಡಿತು. ಗ್ರಾಮ ಪಂಚಾಯಿತಿ ಅಧ್ಯಕ್ಷ - ಉಪಾಧ್ಯಕ್ಷರ ಆಯ್ಕೆ ಸಂದರ್ಭದಲ್ಲಿ ಉಂಟಾಗಿರುವ ಹಿಂಸಾಚಾರದಿಂದ ಗ್ರಾಮೀಣ ಪ್ರದೇಶಗಳಲ್ಲಿ ಪ್ರಕ್ಷುಬ್ಧ ಸ್ಥಿತಿ ತಲೆದೋರಿದೆಯೆಂಬುದು, ಚುನಾವಣೆ ಮುಂದೂಡಿಕೆಗೆ ಸರ್ಕಾರ ನೀಡಿದ ಕಾರಣ. (ಮಾರ್ಚ್.೨೩) ವಿಧಾನ ಮಂಡಲದ ಅಧಿವೇಶನದಲ್ಲಿ ಕೋಲಾಹಲ. ಅಧಿವೇಶನ ಪೂರ್ತಿ ೩೧ ದಳ ಶಾಸಕರ ಅಮಾನತು. ರಾಜಕೀಯ ಬಿಕ್ಕಟ್ಟು ಉಲ್ಬಣಗೊಂಡಿರುವ ಸನ್ನಿವೇಶದಲ್ಲಿಯೇ ಶಾಲೆಗಳಲ್ಲಿ ಕನ್ನಡ ಮಾಧ್ಯಮ ಕಡ್ಡಾಯಕ್ಕೆ ಒತ್ತಾಯಿಸಿ ಕನ್ನಡಶಕ್ತಿ ಕೇಂದ್ರದ ಅಧ್ಯಕ್ಷ ಡಾ. ಎಂ. ಚಿದಾನಂದ ಮೂರ್ತಿ ಅವರು ಬೆಂಗಳೂರಿನಲ್ಲಿ ಅನಿರ್ದಿಷ್ಟ ಕಾಲದ ನಿರಶನ ಆರಂಭಿಸಿದರು. ಜನಾಭಿಪ್ರಾಯಕ್ಕೆ ಮಣಿದು ವೀರಪ್ಪಮೊಯ್ಲಿ ಅವರು ಈ ವರ್ಷದಿಂದಲೇ ಮಾತೃಭಾಷೆ ಮಾಧ್ಯಮ ಕಡ್ಡಾಯ ಮಾಡಲಾಗುವುದೆಂದು ಘೋಷಿಸಿ ಎಲ್ಲರನ್ನೂ ಚಕಿತಗೊಳಿಸಿದರು. ಮಾರ್ಚ್ ೩೧ರ ವೇಳೆಗೆ ರಾಜ್ಯದ ಹಣಕಾಸು ಪರಿಸ್ಥಿತಿ ಸರಿದೂಗಿಸಲು ಸರ್ಕಾರ ಪಿಯರ್‌ಲೆಸ್ ಸಂಸ್ಥೆಯಿಂದ ೨೦೦ ಕೋಟಿ ರೂ. ಸಾಲ ಪಡೆದದ್ದು ರಾಜಕೀಯ ವಲಯಗಳಲ್ಲಿ ಬಿರುಗಾಳಿ ಎಬ್ಬಿಸಿತು. ರಾಜ್ಯದಲ್ಲಿನ ರಾಜಕೀಯ ಅಸ್ಥಿರತೆಯ ಒಂದು ಪರಿಣಾಮ ಮಾತ್ರ ಇದಾಗಿತ್ತು. ಅಭಿವೃದ್ಧಿ ಕಾರ್ಯಗಳು ಎಲ್ಲಿಗೆ ಬಂದಿವೆ, ಆಡಳಿತ ಪರಿಸ್ಥಿತಿ ಹೇಗಿದೆ ಎಂಬುದನ್ನು ಕೇಳುವವರೇ ಇಲ್ಲವಾದಂಥ ಸಂದರ್ಭ ಅದು.

ರಾಜ್ಯದಾದ್ಯಂತ ಜನಬೆಂಬಲ ಗಳಿಸಲು ವ್ಯಾಪಕ ಪ್ರವಾಸಮಾಡಿದ್ದ ಎಸ್.ಬಂಗಾರಪ್ಪ ಅವರು, ಏಪ್ರಿಲ್ ೩ ರಂದು ದಾವಣಗೆರೆಯಲ್ಲಿ ನಡೆದ ಬೃಹತ್ ಸಮಾವೇಶವೊಂದರಲ್ಲಿ ಕರ್ನಾಟಕ ಕಾಂಗ್ರೆಸ್ ಪಕ್ಷಕ್ಕೆ ಚಾಲನೆ ನೀಡಿದರು. ಈ ಸಮಾವೇಶ ಒಂದು ರೀತಿಯಲ್ಲಿ ಕಾಂಗ್ರೆಸ್ ಪಕ್ಷದ ನಿಷ್ಠ ಮತದಾರರನ್ನು ಆಕರ್ಷಿಸಿತು. ಬೇರೆ ನಾಯಕತ್ವ ಹುಡುಕಲು ಕಾಂಗ್ರೆ ಮತದಾರ ಆರಂಭಿಸಿದ್ದು ಇಲ್ಲಿಂದಲೇ.

ದಾವಣಗೆರೆ ಸಮಾವೇಶ ಕಾಂಗ್ರೆ ವಲಯದಲ್ಲಿ ಭೀತಿಹುಟ್ಟಿಸಿದ ಪರಿಣಾಮವೊ ಎಂಬಂತೆ ಭಿನ್ನಮತೀಯರನ್ನು ಕೊನೆಗೂ ವಿಶ್ವಾಸಕ್ಕೆ ತೆಗೆದುಕೊಳ್ಳುವಂಥ ಕ್ರಮಕ್ಕೆ ವೀರಪ್ಪಮೊಯ್ಲಿ ಕೈ ಹಚ್ಚಿದರು. (ಏಪ್ರಿಲ್.೧೪) ಸಂಪುಟ ಪುನರ್ ರಚಿಸಿದರು. ಸಂಪುಟ ಗಾತ್ರ ೪೬ಕ್ಕೆ ಏರಿ ಹೊಸ ದಾಖಲೆ ಸ್ಥಾಪಿಸಿತು. ಕುಣಿಗಲ್ ಗೋಲೀಬಾರ್ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ಎದುರಿಸುತ್ತಿದ್ದ ರಮೇಶ್ ಅವರಿಗೆ ಸಚಿವ ಸ್ಥಾನ ನೀಡಿದ್ದು ಸಾರ್ವಜನಿಕರಲ್ಲಿ ತೀವ್ರ ಅಸಮಾಧಾನಕ್ಕೆ ಕಾರಣವಾಯಿತು. ಜಿಲ್ಲಾ, ಜಾತಿವಾರು ಪ್ರಾತಿನಿಧ್ಯದ ಗೊಂದಲದಿಂದಾಗಿ ಸಂಪುಟ ಪುನರ್‌ರಚನೆ ಮತ್ತೆ ಅತೃಪ್ತಿ ಹೊಗೆಯಾಡಲು ಕಾರಣವಾಯಿತು.

ಈ ವೇಳೆಗೆ ವಿಧಾನಸಭಾ ಚುನಾವಣೆ ಎದುರಿಸಬೇಕಾಗಬಹುದೆಂಬ ಭೀತಿಯಿಂದಾಗಿ ಸರ್ಕಾರ ಕೆಲವು ಜನಪ್ರಿಯ ನಿರ್ಧಾರಗಳನ್ನು ತೆಗೆದುಕೊಳ್ಳಲು ಆರಂಭಿಸಿತು. ಮೇ ತಿಂಗಳಲ್ಲಿ ತಾಲ್ಲೂಕು, ಜಿಲ್ಲಾ ಪಂಚಾಯತ್ ಚುನಾವಣೆ ನಡೆಸಲಾಗುವುದೆಂದು ತಿಳಿಸಲಾಯಿತು. ಮಾತೃಭಾಷಾ ಶಿಕ್ಷಣ ಕಡ್ಡಾಯ ಆದೇಶ

ಹೊರಡಿಸುವುದಾಗಿ ಭರವಸೆ ನೀಡಲಾಯಿತು. ನಾಲ್ಕು ವರ್ಷಗಳಿಂದ ಧೂಳುತಿನ್ನುತ್ತಿದ್ದ ಚಿನ್ನಪ್ಪರೆಡ್ಡಿ ವರದಿಯ ತತ್‌ಕ್ಷಣ ಜಾರಿಗೆ ನಿರ್ಧರಿಸಲಾಯಿತು. ವೀರಶೈವರಿಗೆ ಮತ್ತು ಒಕ್ಕಲಿಗರಿಗೆ ಮೀಸಲು ಕಲ್ಪಿಸಲಾಯಿತು. ಸರ್ಕಾರ ಈ ಎಲ್ಲ ನಿರ್ಧಾರಗಳನ್ನು ಒಂದಲ್ಲ ಒಂದು ಕಾರಣಕ್ಕೆ ಕೆಲವೇ ದಿನಗಳಲ್ಲಿ ತಾನೆ ಬದಲಾಯಿಸಬೇಕಾದಂಥ ಪ್ರಹಸನವನ್ನು ಜನರು ನೋಡಬೇಕಾಗಿ ಬಂತು. ಮಾತೃಭಾಷಾ ಶಿಕ್ಷಣ ನೀತಿಯು೧೯೮೯ರ ನಂತರದ ಇಂಗ್ಲೀಷ್ ಶಾಲೆಗಳಿಗೆ ಮಾತ್ರ ಅನ್ವಯವೆಂದು ಘೋಷಿಸುವ ಮೂಲಕ ಸರ್ಕಾರ ವಿಚಿತ್ರ ನಿಲುವು (ಏ. ೨೭) ತಳೆಯಿತು. ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯ್ತಿ ಚುನಾವಣೆ ನಡೆಸುವ ಹಿಂದಿನ ನಿರ್ಧಾರವನ್ನು ಸುಗ್ರೀವಾಜ್ಞೆ ಮೂಲಕ ರದ್ದು ಮಾಡಲಾಯಿತು. (ಎಪ್ರಿಲ್. ೩೦) ಸರ್ಕಾರದ ಈ ನಿರ್ಧಾರಕ್ಕೆ ಬೇಸತ್ತು ಗ್ರಾಮೀಣ ಅಭಿವೃದ್ಧಿ ಸಚಿವ ಎಂ.ವೈ. ಘೋರ್ಪಡೆ ಅವರು ರಾಜೀನಾಮೆ ನೀಡಿದರು.

ತಾಲ್ಲೂಕು ಪಂಚಾಯ್ತಿ ಚುನಾವಣೆ ರದ್ದಿಗೆ ಸರ್ಕಾರ ಏನೇನೋ ಕಾರಣ ನೀಡಿತು. ವಾಸ್ತವವಾಗಿ ವಿಧಾನಸಭಾ ಚುನಾವಣೆಗಳ ಮೊದಲು ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿ ಚುನಾವಣೆಗೆ ಆಡಳಿತ ಪಕ್ಷದ ಶಾಸಕರು ಒಪ್ಪದಿದ್ದುದೇ ಸುಗ್ರೀವಾಜ್ಞೆಗೆ ಕಾರಣವಾಗಿತ್ತೆಂಬುದು ಈಗ ರಹಸ್ಯವಾಗಿ ಉಳಿದಿಲ್ಲ. ವಿಧಾನ ಪರಿಷತ್ತಿನ ೧೧ ಸ್ಥಾನಗಳಿಗೆ ಜೂನ್. ೯ ರಂದು ಚುನಾವಣೆ ಘೋಷಣೆಯಾಯಿತು. ಭಿನ್ನಮತೀಯರು ಮತ್ತೆ ಸಕ್ರಿಯಗೊಂಡರು. ಸಚಿವ ಕೆ.ಎನ್. ನಾಗೇಗೌಡರಿಗೆ ಪಕ್ಷದ ಟಿಕೆಟ್ ನಿರಾಕರಿಸಲಾಯಿತು. ಪರಿಣಾಮವಾಗಿ ಅವರು ಕಾಂಗ್ರೆ ಅತೃಪ್ತರ ಗುಂಪಿಗೆ ಸೇರಿದರು.

ಜನತಾದಳದಲ್ಲಿಯೂ ಒಡಕು ಕಾಣದೆ ಇರಲಿಲ್ಲ. ಮೇಲ್ಮನೆಗೆ ನಡೆದ ಚುನಾವಣೆ ಸಂದರ್ಭದಲ್ಲಿ ದಳದ ಬಂಡಾಯ ಅಭ್ಯರ್ಥಿಯ ಗೆಲುವು ಹಲವು ಸದಸ್ಯರ ಅಮಾನತಿಗೆ ಕಾರಣವಾಗಿತ್ತು. ಈ ಘಟನೆಗಳ ಬೆನ್ನಲ್ಲೇ ರಾಷ್ಟ್ರೀಯ ಮಟ್ಟದಲ್ಲಿಯೂ ದಳ ಎರಡಾಯಿತು. ಜಾರ್ಜ್ ಫರ್ನಾಂಡೀಸ್ ಬೇರೆ ಪಕ್ಷ ಕಟ್ಟಿಕೊಂಡರು. ಆದರೆ ಆ ವಿಭಜನೆಯ ಪರಿಣಾಮ ಕರ್ನಾಟಕದಲ್ಲಿ ಕಾಣಲಿಲ್ಲ. ಹೆಗಡೆ -ದೇವೇಗೌಡರ ನಡುವೆ ಮೈತ್ರಿ ಸ್ಥಾಪಿತವಾಗಿದ್ದರೂ ಆ ಇಬ್ಬರ ಬಣಗಳಲ್ಲಿ ಅದು ಸ್ಥಾಪಿತವಾಗಲಿಲ್ಲ. ಗೊಂದಲಗಳು ಮುಂದುವರಿದೇ ಇದ್ದವು. ವಿಧಾನಸಭಾ ಚುನಾವಣೆಗಳಲ್ಲಿ ಬಿಜೆಪಿ ಕೈ ಮೇಲಾಗಬಹುದೆಂಬ ಲೆಕ್ಕಾಚಾರಗಳಿಗೆ ಮನಸೋತು ಜನತಾದಳದ ಕಾರ್ಯಾಧ್ಯಕ್ಷ ಜೀವರಾಜ ಆಳ್ವ ಬಿಜೆಪಿ ಸೇರಿಕೊಂಡರು.

ಹೆಚ್ಚುವರಿ ಮೀಸಲಾತಿ ನಿಗದಿ ಮಾಡಿದ್ದ ತಮಿಳುನಾಡು ಮಸೂದೆಗೆ ರಾಷ್ಟ್ರಪತಿಗಳ ಅಂಗೀಕಾರ ಸಿಕ್ಕಿದುದನ್ನು ಗಮನದಲ್ಲಿಟ್ಟುಕೊಂಡು, ವೀರಪ್ಪಮೊಯ್ಲಿ ಅವರ ಸರ್ಕಾರ ಮೀಸಲಾತಿ ಪ್ರಮಾಣವನ್ನು ಶೇ. ೭೩ಕ್ಕೆ ಏರಿಸಿದ್ದು ಎಲ್ಲರಿಗೂ ಆಘಾತವುಂಟು ಮಾಡಿತು. ಒಕ್ಕಲಿಗರು ಇದರಿಂದ ಕುಪಿತರಾದರು. ಮೀಸಲು ನೀತಿಯಲ್ಲಿ ನ್ಯಾಯದೊರಕಿಸಿಕೊಡಬೇಕೆಂದು ಒತ್ತಾಯಿಸಿ ಬೆಂಗಳೂರಿನ ಕಬ್ಬನ್ ಪಾರ್ಕಿನಲ್ಲಿ ಒಕ್ಕಲಿಗರ ಸಂಘ, ಆದಿಚುಂಚನಗಿರಿ ಬಾಲಗಂಗಾಧರನಾಥ ಸ್ವಾಮೀಜಿ

ಅವರು ಪ್ರೇರಣೆಯಲ್ಲಿ ಒಕ್ಕಲಿಗರ ಬೃಹತ್ ಸಮಾವೇಶವೊಂದನ್ನು ನಡೆಯಿಸಿತು. ಈ ಒತ್ತಾಯಕ್ಕೆ ಮಣಿದು ಸರ್ಕಾರ ಮೀಸಲಾತಿ ಪ್ರಮಾಣವನ್ನು ಶೇ. ೮೦ಕ್ಕೆ ಏರಿಸಿತು. ಕೆಲವರು ಸುಪ್ರೀಂಕೋರ್ಟ್‌ಗೆ ದೂರು ಸಲ್ಲಿಸಿದರು. ಮೀಸಲು ಪ್ರಮಾಣವನ್ನು ಶೇ. ೮೦ಕ್ಕೆ ಏರಿಸುವುದಿಲ್ಲವೆಂದು ರಾಜ್ಯ ಸರ್ಕಾರ ಅಂತಿಮವಾಗಿ ಮುಚ್ಚಳಿಕೆ ನೀಡಬೇಕಾಯಿತು (ಆಗಸ್ಟ್. ೧)

ಆಗಸ್ಟ್, ೧೫ ಹತ್ತಿರ ಬರುತ್ತಿದ್ದಂತೆ ಬಿಜೆಪಿ ಬತ್ತಳಿಕೆಯಿಂದ ಮತ್ತೆ ತನ್ನ ಹಳೆಯ ಅಸ್ತ್ರ ತೆಗೆಯಿತು. ಹುಬ್ಬಳ್ಳಿಯ ವಿವಾದಾತ್ಮಕ ಮೈದಾನದಲ್ಲಿ ರಾಷ್ಟ್ರಧ್ವಜ ಅಂದು ಹಾರಿಸಿಯೇ ತೀರುವುದಾಗಿ ಬಿಜೆಪಿ ಘೋಷಿಸಿ ಬಿಕ್ಕಟ್ಟನ್ನೇ ಸೃಷ್ಟಿಸಿತು. ಹುಬ್ಬಳ್ಳಿಯಲ್ಲಿ ಆಗಸ್ಟ್. ೧೫ ರಂದು ಗೋಲಿಬಾರ್‌ಗೆ ಐದು ಮಂದಿ ಸತ್ತರು. ಕಾಂಗ್ರೆ ಈ ವಿವಾದ ವಿಚಾರದಲ್ಲಿ ಉದಾಸೀನ ಧೋರಣೆ ಅನುಸರಿಸಿತೆಂಬ ಭಾವನೆ ಜನರಲ್ಲಿ ಬೆಳೆಯಿತು. ಮೀಸಲಾತಿ ನೀತಿ ಕುರಿತಂತೆ ಉಂಟಾದ ಗೊಂದಲ ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳ ಪ್ರವೇಶದ ಮೇಲೆ ಕೆಟ್ಟ ಪರಿಣಾಮ ಬೀರಿತು. ಮೀಸಲು ಪ್ರಮಾಣವನ್ನು ಶೇ. ೫೦ಕ್ಕೆ ಮೀರಿ ನಿಗದಿ ಮಾಡಬಾರದೆಂದು ಸುಪ್ರೀಂಕೋರ್ಟ್ ಆದೇಶ ನೀಡಿತು. ಈ ನಿರ್ದೇಶನದಿಂದಾಗಿ ಕಾಂಗ್ರೆ ಸರ್ಕಾರ ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಡೆಸಿದ ಮೀಸಲಾತಿ ನಾಟಕಕ್ಕೆ ತೆರೆ ಬಿದ್ದಿತು. ರಾಜ್ಯ ವಿಧಾನ ಸಭೆಗೆ ಚುನಾವಣೆ ಘೋಷಿತವಾಯಿತು (ಸೆಪ್ಟ. ೨೭)

ಎಲ್ಲ ಪಕ್ಷಗಳು ಚುನಾವಣೆ ತರಾತುರಿಯಲ್ಲಿರುವಂತೆಯೇ ಬೆಂಗಳೂರು ದೂರದರ್ಶನದಲ್ಲಿ ಕನ್ನಡ ಕಾರ್ಯಕ್ರಮದ ಮಧ್ಯೆ ಉರ್ದು ವಾರ್ತಾಪ್ರಸಾರ ಆರಂಭವಾಯಿತು. (ಅಕ್ಟೊ.೨) ಚುನಾವಣೆಗಳನ್ನು ಗಮನದಲ್ಲಿಟ್ಟುಕೊಂಡು ಮುಸ್ಲಿಮರನ್ನು ಓಲೈಸಲು ಕಾಂಗ್ರೆ ಹೀಗೆ ಮಾಡಿದೆಯೆಂಬುದೇ ಜನರ ಅನುಮಾನವಾಗಿತ್ತು. ಈ ಬೆಳವಣಿಗೆ ಹಿಂಸಾತ್ಮಕ ಪ್ರತಿಭಟನೆಗೆ ಕಾರಣವಾಯಿತು. ಕನ್ನಡದ ಹೆಸರಿನಲ್ಲಿ ಆರಂಭವಾದ ಪ್ರತಿಭಟನೆ ಕ್ರಮೇಣ ಕೋಮು ಬಣ್ಣ ಪಡೆಯಿತು. ಹಿಂಸಾಚಾರದಲ್ಲಿ ೨೩ ಮಂದಿ ಸತ್ತರು. ಉರ್ದುವಾರ್ತೆ ಪ್ರಸಾರ ಸಮಯವನ್ನು ಬದಲು ಮಾಡಿ ಮುಂದಿನ ಪ್ರಸಾರ ಕಾರ್ಯಕ್ರಮಗಳನ್ನು ನಂತರ ಪ್ರಕಟಿಸುವುದಾಗಿ ಸರ್ಕಾರ ಮತ್ತು ದೂರದರ್ಶನ ಘೋಷಿಸಿದ ನಂತರವೇ ಹಿಂಸಾಚಾರ ನಿಂತದ್ದು. ಉರ್ದುವಾರ್ತಾ ಪ್ರಸಾರ ಘಟನೆ ಹಿನ್ನೆಲೆಯಲ್ಲಿ ಆರಂಭವಾದ ಚಳವಳಿಯೊಳಕ್ಕೆ ಕೆಲವು ಕೋಮು ಶಕ್ತಿಗಳು ಮತ್ತು ದುಷ್ಕರ್ಮಿಗಳು ಪ್ರವೇಶಿಸಿದ್ದೇ ದುರಂತಕ್ಕೆ ಕಾರಣವಾಯಿತು.

ಚುನಾವಣೆಗಳು ಬರುವ ಮುನ್ನ ನಡೆದ ಈ ಹಿಂಸಾಚಾರ ಸಹಜವಾಗಿಯೇ ರಾಜಕೀಯ ಪಕ್ಷಗಳ ಭವಿಷ್ಯದ ಮೇಲೆ ಕೆಟ್ಟಪರಿಣಾಮ ಬೀರಿತು. ಚುನಾವಣೆ ನಂತರ ರಾಜ್ಯದಲ್ಲಿ ಬಹುಶಃ ಅತಂತ್ರ ರಾಜಕೀಯ ಸ್ಥಿತಿ ನಿರ್ಮಾಣವಾಗುವುದೆಂದು ಹೆದರಿದ್ದವರೂ ನಿಟ್ಟುಸಿರುಬಿಟ್ಟರು. ಎರಡು ಹಂತದ ಚುನಾವಣೆಗಳು ನಡೆದು ಫಲಿತಾಂಶಗಳು ಅಚ್ಚರಿ ಹುಟ್ಟಿಸಿದವು. ಕಾಂಗ್ರೆ ಹಿಂದೆ ಬಿದ್ದು ಜನತಾದಳ ಬಹುಮತ ಪಡೆಯಿತು. ಬಿಜೆಪಿ ಎರಡನೆಯ ಸ್ಥಾನಕ್ಕೆ ಏರಿ ಕಾಂಗ್ರೆ ಮೂರನೆಯ ಸ್ಥಾನಕ್ಕೆ ಇಳಿಯಿತು.

ಜನತಾದಳ ಪಕ್ಷಕ್ಕೆ ಸ್ವತಂತ್ರವಾಗಿ ಸರ್ಕಾರ ರಚಿಸುವಷ್ಟು ಬಹುಮತ ಬಂದ ನಂತರ ಮುಖ್ಯಮಂತ್ರಿ ಆಯ್ಕೆ ವಿಚಾರದಲ್ಲಿ ಆದ ವಿಳಂಬ ಕೆಲವು ಅಹಿತಕರ ಘಟನೆಗಳಿಗೆ ಕಾರಣವಾಯಿತು. ದೇವೇಗೌಡ ಹಾಗೂ ರಾಮಕೃಷ್ಣ ಹೆಗಡೆ ಅವರ ನಡುವೆ ಭಿನ್ನಾಭಿಪ್ರಾಯಗಳಿಂದಾಗಿಯೆ ಹೀಗಾಗಿದೆಯೆಂಬ ಲೆಕ್ಕಾಚಾರ ಅಂಥ ಬೆಳವಣಿಗೆಗೆ ಕಾರಣವಾಗಿತ್ತು. ದೇವೇಗೌಡರೇ ನಾಯಕರಾಗುವರೆಂದು ಮತ್ತು ತಾವು ಆ ಸ್ಥಾನಕ್ಕೆ ಪೈಪೋಟಿಯಲ್ಲಿ ಇಲ್ಲವೆಂದು ಹೆಗಡೆ ಅವರು ಘೋಷಿಸಿದ ನಂತರ ಪರಿಸ್ಥಿತಿ ಸುಧಾರಿಸಿತು. ಡಿಸೆಂಬರ್. ೧೧ ರಂದು ಎಚ್.ಡಿ.ದೇವೇಗೌಡ ಅವರು ಮುಖ್ಯಮಂತ್ರಿ ಮತ್ತು ಜೆ.ಎಚ್.ಪಟೇಲ್ ಅವರು ಉಪಮುಖ್ಯಮಂತ್ರಿ ಆದರು. ಡಿಸೆಂಬರ್. ೧೬ ರಂದು ೩೭ ಸಚಿವರು ಪ್ರಮಾಣ ವಚನ ಸ್ವೀಕರಿಸಿದರು.

ಮುಂದೆ ಸಿ.ಎಂ. ಇಬ್ರಾಹಿಂ ಜನತಾದಳ ಅಧ್ಯಕ್ಷರಾದರು. ಹೊಸ ಸರ್ಕಾರವನ್ನು ಅಧಿಕಾರಕ್ಕೆ ತರುವ ಮೂಲಕ ರಾಜ್ಯದ ಜನರು ದೇಶದಲ್ಲಿ ಭವಿಷ್ಯಸೂಚೀ ಅಧ್ಯಾಯವೊಂದನ್ನೇ ತೆರೆದರು. ಅಭಿವೃದ್ಧಿ ಪ್ರಗತಿ ಸಾಧಿಸಲು ರಾಜಕೀಯ ವ್ಯವಸ್ಥೆ ಒಂದು ಮಾಧ್ಯಮ. ಈ ಗುರಿ ಸಾಧನೆಗಾಗಿಯೇ ಜನ ಸ್ವಾತಂತ್ರ್ಯೋತ್ತರಕಾಲದ ಮೊದಲ ದಶಕಗಳಲ್ಲಿ ಮುಂದೆ ಬರುತ್ತಿದ್ದರು. ಆದರೆ ಇತ್ತೀಚಿನ ವರ್ಷಗಳಲ್ಲಿ ರಾಜಕೀಯ ವ್ಯವಸ್ಥೆಯ ಉದ್ದೇಶ, ಗುರಿ ಮರೆಯಾಗಿ, ಅದು ಸ್ವಹಿತರಕ್ಷಣೆಯ ಮುಖ್ಯ ಮಾರ್ಗವಾಗಿ ಪರಿವರ್ತಿತವಾಗುತ್ತಿದೆ. ರಾಜಕೀಯ ವ್ಯವಸ್ಥೆ, ಅದು ಹಿಡಿದಿರುವ ದಾರಿ, ರಾಜಕೀಯದಲ್ಲಿ ತೊಡಗಿರುವವರು ಮಾಡುತ್ತಿರುವ ಕೆಲಸ ಇಂದು ಹಿಂದಿನಷ್ಟು ಚಿಂತನೆಗೆ ಗ್ರಾಸವಾಗಿಲ್ಲ. ಹೀಗಾಗಿ ಎಲ್ಲವನ್ನೂ ಹೇಗಿದೆಯೋ ಹಾಗೆಯೇ ಒಪ್ಪಿಕೊಳ್ಳುವಂಥ ಉದಾಸೀನ ಮನೋಭಾವ ಎಲ್ಲೆಡೆ ವ್ಯಾಪಿಸಿದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಕಳೆದ ವರ್ಷದ ರಾಜಕೀಯ ವಿದ್ಯಮಾನಗಳನ್ನು ಹಾಗೂ ಚುನಾವಣಾ ಫಲಿತಾಂಶಗಳನ್ನು ಗಮನಿಸಿದಾಗ ಕೆಲವು ಆಸಕ್ತಿದಾಯಕ ಅಂಶಗಳನ್ನು ಕಾಣಬಹುದು. ರಾಜ್ಯದಲ್ಲಿ ಭದ್ರವಾಗಿದ್ದ ಕಾಂಗ್ರೆಸ್ ಸೋಲಲು ಮುಖ್ಯವಾಗಿ ಮೂರು ಕಾರಣಗಳಿದ್ದಂತಿವೆ: (೧) ಸ್ಥಳೀಯ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳದೆ ಮೂರು ಬಾರಿ ಮುಖ್ಯಮಂತ್ರಿಗಳನ್ನು ಬದಲಿಸಿದ್ದು; ಹೀಗೆ ನಾಯಕರನ್ನು ಬದಲಾಯಿಸುವಾಗ ಯಾರು ಉತ್ತಮ ಫಲಿತಾಂಶ ತಂದುಕೊಡಬಲ್ಲರು ಎಂಬುದರ ಕಡೆ ಯೋಚಿಸದೆ ಕೆಲವು ಭ್ರಮೆಗಳನ್ನು ನಂಬಿದ್ದು. (೨) ಪಂಚಾಯತ್ ರಾಜ್ಯ ವ್ಯವಸ್ಥೆ ಚುನಾವಣೆಗಳ ಬಗ್ಗೆ ಮತ್ತೆಮತ್ತೆ ಬದಲಾದ ಸರ್ಕಾರದ ಹಾಸ್ಯಾಸ್ಪದ ನಿಲುವು. (೩) ಅಯೋಧ್ಯೆಯ ಬಾಬರಿ ಮಸೀದಿ ನೆಲಸಮ ಘಟನೆ, ಹುಬ್ಬಳ್ಳಿ ಈದ್ಗಾ ಮೈದಾನ ಹಾಗೂ ಉರ್ದು ವಾರ್ತಾ ಪ್ರಸಾರ ವಿವಾದಗಳು ಕಾಂಗ್ರೆಸ್‌ನ ಸಾಂಪ್ರದಾಯಿಕ ಮತಬ್ಯಾಂಕ್ ಆಗಿದ್ದ ಮುಸ್ಲಿಮ್ ಮತದಾರರಲ್ಲಿ ಅಸಮಾಧಾನದ ಹೊಗೆ ಎಬ್ಬಿಸಿದ್ದುದು.

ಕಾಂಗ್ರೆಸ್ ಸೋಲಿಗೆ ಈ ಅಂಶಗಳು ಬಹು ಮುಖ್ಯ ಕಾರಣಗಳು. ಹಾಗೆಯೇ ಜನತಾದಳ ಪಕ್ಷ ಬಹುಮತಪಡೆಯಲೂ ಇವೇ ಅಂಶಗಳು ಕಾರಣವಾಗಿವೆ. ಜನತಾದಳ

ಚುನಾವಣೆಗೆ ಒಂದು ವರ್ಷ ಮೊದಲು ಬಲಿಷ್ಠ ಪಕ್ಷವೇನೂ ಆಗಿರಲಿಲ್ಲ. ಆದರೆ ಚುನಾವಣಾ ಮುನ್ನ ಪಕ್ಷದ ನಾಯಕರು ತೋರಿದ ಏಕತೆ ಜನರ ಬೆಂಬಲ ಪಡೆಯಲು ಕಾರಣವಾಯಿತು.

ಜನತಾದಳ ಜಯಗಳಿಸುವುದರ ಹಿಂದೆ ಆಗಿರುವ ವಿವಿಧ ಶಕ್ತಿಗಳ ಹೊಂದಾಣಿಕೆ ಅಭ್ಯಾಸಯೋಗ್ಯವಾದುದು. ಕರ್ನಾಟಕದ ಬಲಾಢ್ಯ ಜಾತಿಗಳಾದ ಒಕ್ಕಲಿಗ ಹಾಗೂ ವೀರಶೈವರು ಒಂದು ರಾಜಕೀಯ ಪಕ್ಷದ ವ್ಯಾಪ್ತಿಯಲ್ಲಿ ನಿಂತದ್ದು, ಅದೇ ಸಂದರ್ಭದಲ್ಲಿ ಮುಸ್ಲಿಮರು ಬಲಾಢ್ಯ ಜಾತಿಗಳ ಜೊತೆ ಸಖ್ಯ ಬೆಳೆಸಿದ್ದು, ಒಂದು ರೀತಿಯಲ್ಲಿ ಹೊಸ ರಾಜಕೀಯ ಸಂಯೋಗ. ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಹೊಂದಾಣಿಕೆ ಸಾಕಷ್ಟು ಸಾರಿ ಫಲಪ್ರದವಾಗಿಯೇ ಆಗಿದೆ. ಕಾಂಗ್ರೆಸ್‌ನ ಬಹುಮುಖ್ಯ ಬಲವೂ ಇದೇ ಆಗಿತ್ತು. ಇಂಥ ಹೊಂದಾಣಿಕೆಯಿಂದ ಬಹುಶಃ ದೇವರಾಜ ಅರಸು ಅವರು ಸಾಧಿಸಿದಂಥ ಪ್ರಗತಿ ಆನಂತರ ಬಂದವರಿಂದ ಸಾಧ್ಯವಾಗದಿದ್ದುದು, ಬಲಾಢ್ಯ ಜಾತಿಗಳು ರಾಜಕೀಯ ಮುಂಚೂಣಿಗೆ ಬರಲು ಕಾರಣವಾಗಿರಬೇಕು. ಈ ದೃಷ್ಟಿಯಿಂದ ಪ್ರಸಕ್ತ ಹೊಂದಾಣಿಕೆ ಹೊಸದೇ ಆಗಿದೆ. ಈ ಹೊಂದಾಣಿಕೆ ಹಿಂದುತ್ವವನ್ನು ಮುಂದಿಟ್ಟುಕೊಂಡು ಹೋರಾಡುವ ಯಾವುದೇ ಪಕ್ಷಕ್ಕೆ ಅನುಕೂಲಕರವಾಗಿರುವುದಿಲ್ಲ. ರಾಜ್ಯದಲ್ಲಿ ಈಗ ಬಿಜೆಪಿ ಎಷ್ಟೇ ಸ್ಥಾನಗಳಿಸಿದ್ದರೂ ಮುಂದೆ ಪರಿಸ್ಥಿತಿ ಅದಕ್ಕೆ ಅನುಕೂಲಕರವಾಗಿರಲಾರದು. ಮುಕ್ತ ಆರ್ಥಿಕನೀತಿ ಜಾರಿಯಿರುವ ಈ ಸಂದರ್ಭದಲ್ಲಿ ಬಲಾಢ್ಯ ಜಾತಿಗಳ ಹೊಂದಾಣಿಕೆ ಆಸಕ್ತಿದಾಯಕ. ಹೀಗೆಂದ ಮಾತ್ರಕ್ಕೆ ಕಾಂಗ್ರೆ ನಿರ್ನಾಮವಾಯಿತೆಂದಲ್ಲ. ಹಾಗೆ ನೋಡಿದರೆ ಕಾಂಗ್ರೆ ಗಳಿಸಿದ ಮತ ಪ್ರಮಾಣಕ್ಕೆ ಬಂಗಾರಪ್ಪ ನೇತೃತ್ವದ ಕೆ.ಸಿ.ಪಿ. ಪಡೆದ ಮತ ಪ್ರಮಾಣ ಸೇರಿಸಿದರೆ ಜನತಾದಳ ಗಳಿಸಿರುವ ಮತಗಳ ಶೇಕಡವಾರು ಪ್ರಮಾಣ ತುಂಬಾ ಜಾಸ್ತಿಯೇನೂ ಅಲ್ಲ. ಜನತಾದಳದ ಬಲ ವಿಸ್ತರಣೆಗೊಂಡರೆ ಮಾತ್ರ ಮುಖ್ಯ ರಾಜಕೀಯ ಶಕ್ತಿಯಾಗಿ ಅದು ಮಾರ್ಪಡಬಲ್ಲುದು.

ಬಲಾಢ್ಯ ಜಾತಿಗಳ ನಡುವಣ ಈ ಹೊಂದಾಣಿಕೆಗೆ ಭಿನ್ನ ಆಯಾಮಗಳೂ ಇರಲು ಸಾಧ್ಯ. ಹೊಂದಾಣಿಕೆ ಕಳಚಿಬಿದ್ದು ಬೇರೊಂದು ರೀತಿಯ ಹೊಂದಾಣಿಕೆಯೂ ಸ್ಥಾತವಾಗಬಹುದು. ಭಿನ್ನ ರೀತಿಯ ರಾಜಕೀಯ ಮೂರನೆಯ ಶಕ್ತಿಯ ಉದಯಕ್ಕೆ ಈ ಪರಿವರ್ತನೆ ಕಾರಣವಾಗಲೂಬಹುದು. ಎಚ್.ಡಿ. ದೇವೇಗೌಡರು ಒಬ್ಬ ಅನುಭವೀ ರಾಜಕಾರಣಿ. ಸಾಮಾನ್ಯ ಜನರ ನೋವು-ನಲಿವುಗಳನ್ನು ತಿಳಿದವರು. ಕುಸಿದಿರುವ ಆಡಳಿತ ವ್ಯವಸ್ಥೆಯನ್ನು ಹದ್ದುಬಸ್ತಿಗೆ ತಂದು ಜನಪರವಾಗಿ ಕೆಲಸ ಮಾಡುವರೆ? ಕಾದುನೋಡಬೇಕು.

# ಆರ್ಥಿಕ ವಿದ್ಯಮಾನಗಳು

*ಟಿ. ಆರ್. ಚಂದ್ರಶೇಖರ*

---

ನಮ್ಮ ರಾಜ್ಯದ ಆರ್ಥಿಕ ವಿದ್ಯಮಾನಗಳನ್ನು ಒಂದು ವರ್ಷದ ಚೌಕಟ್ಟಿನಲ್ಲಿ ವಿಶ್ಲೇಷಿಸುವುದು ಸ್ವಲ್ಪ ಸಂದಿಗ್ಧದ ಕೆಲಸವೇಸರಿ. ಏಕೆಂದರೆ, ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಜರುಗಿದ ವಿದ್ಯಮಾನವೊಂದರ ಬೇರುಗಳು, ಆ ಕಾಲಘಟ್ಟದ ಹಿಂದಿನ ವರ್ಷಗಳಲ್ಲಿ ಇಳಿದಿದ್ದಿರಬಹುದು ಹಾಗೂ ಆ ವಿದ್ಯಮಾನದ ಫಲಸ್ವರೂಪ ಮುಂದಿನ ವರ್ಷಗಳಲ್ಲಿ ಗೋಚರಿಸಬಹುದು. ಆದರೆ ವಿಶ್ಲೇಷಣೆ ಅನುಕೂಲಕ್ಕೆ ಹಾಗೂ ಈ ಲೇಖನ 'ಕನ್ನಡ ವಾರ್ಷಿಕ' ದ ಒಂದು ಭಾಗವಾಗಿರುವುದರಿಂದ, ಇಂಥ ಚೌಕಟ್ಟು ಅನಿವಾರ್ಯ. ಮತ್ತು ಅಪೇಕ್ಷಣೀಯ. ಈ ಪ್ರಬಂಧದಲ್ಲಿ ೧೯೯೮ರ ಕರ್ನಾಟಕದ ಆರ್ಥಿಕ ವಿದ್ಯಮಾನಗಳನ್ನು ಪರಿಶೀಲಿಸಲು ಪ್ರಯತ್ನಿಸಲಾಗಿದೆ.

ಮೊದಲು ಈ ಪ್ರಬಂಧದ ಸ್ವರೂಪ ಹಾಗೂ ಇಲ್ಲಿ ಅಳವಡಿಸಿಕೊಂಡಿರುವ ವಿಧಾನದ ಬಗ್ಗೆ ಎರಡು ಮಾತು. ಇದೇನು ೧೯೯೮ರ ವಿದ್ಯಮಾನಗಳ ಕಾಲಾನುಕ್ರಮಣಿಕೆ ಅಲ್ಲ ಅಥವಾ ಸಮಗ್ರ ವಿವರಗಳ ಪ್ರಬಂಧವೂ ಅಲ್ಲ. 'ಆರ್ಥಿಕ ವಿದ್ಯಮಾನ'ವನ್ನು ಇಲ್ಲಿ ವಿಶಾಲ ಅರ್ಥದಲ್ಲಿ ಪರಿಭಾವಿಸಲಾಗಿದೆ. ಉತ್ಪನ್ನ, ವರಮಾನ, ಉದ್ಯೋಗ, ತೆರಿಗೆ, ಬೆಲೆಏರಿಕೆ, ಬಜೆಟ್, ಹಣಕಾಸು, ಯೋಜನೆ- ಮುಂತಾದವುಗಳಷ್ಟೆ ಆರ್ಥಿಕ ವಿದ್ಯಮಾನಗಳಲ್ಲ. ಅಕ್ಷರ, ಆರೋಗ್ಯ, ಆಹಾರ, ವಿದೇಶೀ ಬಂಡವಾಳ, ಕಾರ್ಮಿಕರ ಸ್ಥಿತಿಗತಿಗಳು, ಕೇಂದ್ರ - ರಾಜ್ಯ ಸಂಬಂಧ, ರಾಜಕೀಯ ಬದಲಾವಣೆ ಮುಂತಾದವುಗಳನ್ನು ಇದು ಒಳಗೊಂಡಿದೆ. ಒಟ್ಟಾರೆ ಆರ್ಥಿಕ ವಿದ್ಯಮಾನಗಳು ಇಲ್ಲಿ 'ಅಭಿವೃದ್ಧಿ'ಗೆ ಸಂವಾದಿಯಾಗಿ ಬಳಕೆಯಾಗಿವೆ.

ಈ ಪ್ರಬಂಧದ ವ್ಯಾಪ್ತಿಯಲ್ಲಿ ಕರ್ನಾಟಕ ರಾಜ್ಯದೊಳಗಿನ ಪ್ರಾದೇಶಿಕ ಅಸಮತೋಲನವನ್ನೂ ಸೇರಿಸಿಕೊಳ್ಳಲಾಗಿದೆ. ಕರ್ನಾಟಕ ಏಕೀಕರಣವಾದ ೧೯೫೬ರಲ್ಲಿ ಕರ್ನಾಟಕದ ಭಾಗವಾಗಿ ಸೇರಿಕೊಂಡ ಹಾಗೂ ಅಂದಿನಿಂದ ಈಗಿನವರೆವಿಗೂ ಹಿಂದುಳಿದಿರುವ ಸ್ಥಿತಿಯಲ್ಲೇ ಇರುವ 'ಹೈದರಾಬಾದ್ ಕರ್ನಾಟಕ ಪ್ರದೇಶ ಆರ್ಥಿಕತೆ' ಕುರಿತು, ೧೯೯೮ರಲ್ಲಿ ಒಂದು ವಿಶಿಷ್ಟ ಅಧ್ಯಯನ ಯೋಜನೆ ಪ್ರಾರಂಭವಾಗಿದೆ. ಈ ಕುರಿತು ೧೯೯೮ರ ಸೆಪ್ಟೆಂಬರ್ ೧೯, ೨೦ ಮತ್ತು ೨೧ ರಂದು, ಗುಲ್ಬರ್ಗಾದಲ್ಲಿ ವಿಚಾರ ಸಂಕಿರಣವೊಂದು ಜರುಗಿತು. ಬೆಂಗಳೂರಿನ 'ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಅಧ್ಯಯನ ಸಂಸ್ಥೆ' [Isec]ಯು ಡಾ. ಅಬ್ದುಲ್ ಅಜೀಜ್‌ರವರ ನೇತೃತ್ವದಲ್ಲಿ ಸಿದ್ಧಪಡಿಸಿದ್ದ ಅಧ್ಯಯನ ಪ್ರಬಂಧಗಳ ಮಂಡನೆ ಹಾಗೂ ಚರ್ಚೆ. ಆ ಸಂಕಿರಣದಲ್ಲಿ

ನಡೆಯಿತು. ಈ ಬಗ್ಗೆ ವಿವರವಾದ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ. ೧೯೯೪ರ ಕೊನೆ ಭಾಗದಲ್ಲಿ ಕರ್ನಾಟಕ ವಿಧಾನಸಭಾ ಚುನಾವಣೆಗಳು ನಡೆದವು. ಕಾಂಗ್ರೆಸ್‌ಪಕ್ಷವು ಸೋತು ಜನತಾದಳವು ಸರ್ಕಾರ ರಚಿಸಿತು. ಈ ರಾಜಕೀಯ ಬದಲಾವಣೆಯು ಕರ್ನಾಟಕದ ಅಭಿವೃದ್ಧಿ ಸ್ವರೂಪ ಹಾಗೂ ಗತಿಯ ಮೇಲೆ ಖಚಿತವಾಗಿ ಪರಿಣಾಮಬೀರುತ್ತದೆ. ಇದರ ಬಗ್ಗೆಯೂ ಇಲ್ಲಿ ಪರಾಮರ್ಶೆ ಇದೆ. ಕರ್ನಾಟಕದ ಕೃಷಿ ತೀವ್ರ ಬಿಕ್ಕಟ್ಟು ಎದುರಿಸುತ್ತಿದೆ. ಈ ಬಗ್ಗೆ ಅಧ್ಯಯನ ನಡೆಸಿದ ತಜ್ಞರ ಸಮಿತಿಯು ೧೯೯೪ರ ಜನವರಿಯಲ್ಲಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಕರ್ನಾಟಕ ಕೃಷಿವಲಯ ಎದುರಿಸುತ್ತಿರುವ ಬಿಕ್ಕಟ್ಟಿನ ಸ್ವರೂಪ ಎಂತಹುದು? ಗ್ಯಾಟ್‌ಒಪ್ಪಂದ, ರಫ್ತುವೈಭವೀಕರಣ, ಬಹುರಾಷ್ಟ್ರೀಯ ತಳಿಕಂಪನಿಗಳ ಪ್ರವೇಶದಿಂದಾಗಿ ಕರ್ನಾಟಕ ಕೃಷಿಯಲ್ಲಾಗಲಿರುವ ಬದಲಾವಣೆ ವಿನ್ಯಾಸಗಳೇನು? ನೀರಾವರಿ ಸಮಸ್ಯೆಗಳು ಎಂತಹವು? ಮುಂತಾದ ಪ್ರಶ್ನೆಗಳನ್ನೆತ್ತಿಕೊಂಡು ಇಲ್ಲಿ ಚರ್ಚಿಸಲಾಗಿದೆ.

ನಮ್ಮದು ಒಕ್ಕೂಟ ವ್ಯವಸ್ಥೆ. ರಾಜ್ಯವೊಂದರ ಆರ್ಥಿಕ ವಿದ್ಯಮಾನಗಳನ್ನು ಕುರಿತು ಚರ್ಚಿಸುವಾಗ ಒಕ್ಕೂಟ [Federation] ಸ್ವರೂಪದ ಸಂಬಂಧಗಳನ್ನು ಪರಿಶೀಲಿಸುವುದು ಅಪೇಕ್ಷಣೀಯ ಎಂದು ನಾನು ಭಾವಿಸಿದ್ದೇನೆ. ಆರ್ಥಿಕ ವಿದ್ಯಮಾನಗಳ -ಇಲ್ಲಿ ಪ್ರಬಂಧದ ಚೌಕಟ್ಟಿನಲ್ಲಿ ಅಭಿವೃದ್ಧಿ ಕುರಿತ - ಪರಿಶೀಲನೆಯು ವಿದೇಶಿ ಬಂಡವಾಳ, ಖಾಸಗೀಕರಣ, ಉದಾರವಾದಗಳನ್ನು ಗಮನಿಸದಿದ್ದರೆ ಪೂರ್ಣವಾಗಲಾರದು. ಒಟ್ಟಂದದಲ್ಲಿ ಅಭಿವೃದ್ಧಿ - ಪರಿವರ್ತನೆ ದೃಷ್ಟಿಯಿಂದ ಪ್ರಸ್ತುತವೆನಿಸಿದ ವಿದ್ಯಮಾನಗಳನ್ನು ಪ್ರಬಂಧದ ವ್ಯಾಪ್ತಿಯಲ್ಲಿ ಸೇರಿಸಲಾಗಿದೆ.

ಸ್ವಾತಂತ್ರ್ಯ ಪೂರ್ವದಿಂದಲೂ, ಒಂದು ದೃಷ್ಟಿಯಿಂದ ಮೌರ್ಯರ- ಗುಪ್ತರ ಕಾಲದಿಂದಲೂ, ಒಕ್ಕೂಟ ವ್ಯವಸ್ಥೆಯನ್ನು ವಿವಿಧ ಸ್ವರೂಪದಲ್ಲಿ ಭಾರತವು ಅನುಸರಿಸಿಕೊಂಡು ಬಂದಿದೆ. 'ಚಪ್ಪನ್ನಾರು ದೇಶ' ಎಂಬ ನುಡಿಗಟ್ಟು ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದೆ. ಈ ಒಕ್ಕೂಟ ವ್ಯವಸ್ಥೆಗೆ ೧೯೫೦ರಲ್ಲಿ ನಾವು ಸ್ವೀಕರಿಸಿದ ಸಂವಿಧಾನದಲ್ಲಿ ಶಾಸನದ ಸ್ವರೂಪ ಒದಗಿತು. ಈ ದೇಶದ ಅಭಿವೃದ್ಧಿಯ ಜೀವನರೇಖೆಯೆಂದರೆ ಒಕ್ಕೂಟ ವ್ಯವಸ್ಥೆ. ನಮ್ಮ ಒಕ್ಕೂಟದಲ್ಲಿ ಯಾವಾಗಲೂ ಬಿಕ್ಕಟ್ಟಿಗೆ -ಘರ್ಷಣೆಗೆ ಕಾರಮವಾಗುವ ಸಂಗತಿಯೆಂದರೆ ಕೇಂದ್ರ - ರಾಜ್ಯಗಳ ನಡುವಣ ಹಣಕಾಸುಸಂಬಂಧ. ಕೇಂದ್ರ - ರಾಜ್ಯಗಳ ನಡುವಿನ ಹಣಕಾಸು ಸಂಬಂಧದ ಸ್ವರೂಪವನ್ನು, ಮುಖ್ಯವಾಗಿ ಕೇಂದ್ರದಿಂದ ರಾಜ್ಯಗಳಿಗೆ ಹಣಕಾಸು ಸಂಪನ್ಮೂಲಗಳ ವರ್ಗಾವಣೆಯನ್ನು ನಿರ್ಧರಿಸುವ ಜವಾಬ್ದಾರಿಯನ್ನು, ಸಂವಿಧಾನವು ಹಣಕಾಸು ಆಯೋಗ [ಹ. ಆ] ಕ್ಕೆ ವಹಿಸಿದೆ. ೧೯೯೪ರಲ್ಲಿ ೧೦ನೇ ಹ. ಆ. ಯು ತನ್ನವರದಿಯನ್ನು ರಾಷ್ಟ್ರಪತಿಗಳಿಗೆ ಸಲ್ಲಿಸಿದೆ. ಸಂವಿಧಾನದ ನಿಬಂಧನೆಯ ಪ್ರಕಾರ, ವರಮಾನ ತೆರಿಗೆ ಹಾಗೂ ಕೇಂದ್ರ ಅಬಕಾರಿ ಸುಂಕಗಳಿಂದ ಬರುವ ಹುಟ್ಟುವಳಿ [Revenue]ಯನ್ನು ಕೇಂದ್ರ ಹಾಗೂ ರಾಜ್ಯಗಳ ನಡುವೆ ಹಂಚುವ ಕೆಲಸವನ್ನು ಹ. ಆ. ನಿರ್ವಹಿಸುತ್ತದೆ. ಈ ಪಾಲು, ಮಾರಿಕೊಳ್ಳುವ ತೆರಿಗೆಗಳ ಗುಂಪಿಗೆ ಈಗಿರುವ ಎರಡು ತೆರಿಗೆಗಳ ಜೊತೆಗೆ

ಇನ್ನೂ ಕೆಲವನ್ನು - ಮುಖ್ಯವಾಗಿ ಕಂಪನಿವರಮಾನ ತೆರಿಗೆಯನ್ನು - ಸೇರಿಸಬೇಕು ಎಂಬುದು ರಾಜ್ಯಗಳ ಒತ್ತಾಯವಾಗಿದೆ. ಹ. ಆ. ಗಳಸಲಹೆ - ಶಿಫಾರಸ್ಸುಗಳ ವಿಷಯದಲ್ಲಿ ಮೊದಲಿನಿಂದಲೂ ಕರ್ನಾಟಕಕ್ಕೆ ಅನ್ಯಾಯವಾಗುತ್ತಲೆ ಬಂದಿದೆ. ಈ ಅನ್ಯಾಯವು ೧೦ನೇ ಹ. ಆ. ವರದಿಯಲ್ಲಿ ನೇರ್ಪುಗೊಂಡಿದೆ ಎಂಬ ಭರವಸೆ ಏನೂ ಇಲ್ಲ.

ಕೇಂದ್ರದಲ್ಲಿ ನಿರ್ದಿಷ್ಟ ಪಕ್ಷ ಅಧಿಕಾರದಲ್ಲಿದ್ದು, ರಾಜ್ಯದಲ್ಲಿ ಇನ್ನೊಂದುಪಕ್ಷ ಅಧಿಕಾರದಲ್ಲಿದ್ದಾಗ, ಈ ಹಣಕಾಸು ಸಂಬಂಧ ಘರ್ಷಣೆಯು ಬಿಕ್ಕಟ್ಟಿನ ಸ್ವರೂಪ ಪಡೆದುಕೊಂಡುಬಿಡುತ್ತದೆ. ನಮ್ಮ ಒಕ್ಕೂಟವ್ಯವಸ್ಥೆಯಲ್ಲಿ ರಾಜ್ಯಗಳೆಲ್ಲಾ ಹಣಕಾಸು ಸಂಪನ್ಮೂಲಕ್ಕೆ ಕೇಂದ್ರವನ್ನು ಅವಲಂಬಿಸಿಕೊಳ್ಳುವ ಸ್ಥಿತಿ ಇದೆ. ಈ ಕೇಂದ್ರಾವಲಂಬನೆಯು ಆರೋಗ್ಯಕರ - ಆದರ್ಶ ಒಕ್ಕೂಟವ್ಯವಸ್ಥೆಯ ಲಕ್ಷಣವಲ್ಲ. ಭಾರತದಲ್ಲಿ ಕೇಂದ್ರ ರಾಜ್ಯಗಳ ನಡುವೆ ಸಮಾನನೆಲೆಯ ಸಂಬಂಧಕ್ಕೆ ಪ್ರತಿಯಾಗಿ, ಅವಲಂಬಿ ಸಂಬಂಧ ಬೆಳೆದುಕೊಂಡು ಬಂದಿದೆ. ರಾಜ್ಯ ಸರ್ಕಾರಗಳನ್ನು ಕೇಂದ್ರವು ತನ್ನ ಒಂದು ಅಧೀನ ಇಲಾಖೆಯಂತೆ ನಡೆಸಿಕೊಳ್ಳುತ್ತದೆ.

ಹ. ಆ. ವು, ಒಂದು ಸಂವಿಧಾನಬದ್ಧ ಸಂಸ್ಥೆ. ಈ ಆಯೋಗದ ಮೂಲಕ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳಿಗೆ ಹಣಕಾಸು ಸಂಪನ್ಮೂಲ ವರ್ಗಾಯಿಸುತ್ತದೆ. ಇಂಥದೇ ಹಣಕಾಸು ವರ್ಗಾವಣೆ ಕೆಲಸವನ್ನು ಯೋಜನಾ ಆಯೋಗ [ಯೋ. ಆ] ವೂ ಮಾಡುತ್ತದೆ. ನಮ್ಮ ಒಕ್ಕೂಟವ್ಯವಸ್ಥೆಯಲ್ಲಿ ಹುಟ್ಟಿಕೊಂಡಿರುವ ವಿಕೃತಿಯೆಂದರೆ, ಸಂವಿಧಾನಬದ್ಧ ಸಂಸ್ಥೆ [ಹ. ಆ] ಗಿಂತ ರಾಜಕೀಯ ಸೃಷ್ಟಿಯಾಗಿರುವ ಯೋ. ಆ. ಪ್ರಧಾನವಾಗಿಬಿಟ್ಟಿರುವುದು. ಕೇಂದ್ರದಿಂದ ರಾಜ್ಯಗಳಿಗೆ ವರ್ಗಾವಣೆಯಾಗುವ ಹಣಕಾಸು ಸಂಪನ್ಮೂಲದಲ್ಲಿ, ಅತಿಹೆಚ್ಚು ಪ್ರಮಾಣವು ಯೋ. ಆ. ದ. ಮೂಲಕ ನಡೆಯುತ್ತದೆ. ಇದನ್ನು ಕೇಂದ್ರ ಸರ್ಕಾರವು ಉದ್ದೇಶಪೂರ್ವಕವಾಗಿ ಪೋಷಿಸಿಕೊಂಡು ಬರುತ್ತಿದೆ. ಇದರಿಂದಾಗಿ ಕೇಂದ್ರದಲ್ಲಿ ಅಧಿಕಾರದಲ್ಲಿರುವ ಪಕ್ಷವು ರಾಜ್ಯ-ರಾಜ್ಯಗಳ ನಡುವೆ ತಾರತಮ್ಯ - ಪಕ್ಷಪಾತ ತೋರಿಸಲು ಸಾಧ್ಯವಾಗಿದೆ. ೧೯೯೩ -೯೪ ರ ಸಾಲಿನಿಂದ ರಾಜ್ಯಗಳಿಗೆ ಕೇಂದ್ರದಿಂದ ವರ್ಗಾವಣೆಯಾಗುತ್ತಿರುವ ತೆರಿಗೆ ಪಾಲು ಹಾಗೂ ಹಣಕಾಸು ನೆರವುಗಳ ಬೆಳವಣಿಗೆ ದರವು ಕಡಿಮೆಯಾಗುತ್ತಿದೆ. ಈ ಬಗೆಯ ವಿಕಾರಗಳಿಗಾಗಿ ನಮ್ಮ ಒಕ್ಕೂಟ ವ್ಯವಸ್ಥೆಯಲ್ಲಿ ಒಡಕು - ಬಿರುಕು ಉಂಟಾಗುತ್ತದೆ. ಪ್ರಸ್ತುತ ಕೇಂದ್ರ ರಾಜ್ಯಗಳ ನಡುವಿನ ಹಣಕಾಸು ಸಂಬಂಧವು ರಾಜಕೀಯ ಉದ್ದೇಶಗಳಿಗನುಗುಣವಾಗಿ ರೂಪುಗೊಳ್ಳುತ್ತಿದೆಯೇ ವಿನಾ, ಒಕ್ಕೂಟವ್ಯವಸ್ಥೆಯ ಹಿತಾಸಕ್ತಿಯ ದೃಷ್ಟಿಯಿಂದ ರೂಪುಗೊಳ್ಳುತ್ತಿಲ್ಲ. ಹಣಕಾಸು ಅಧಿಕಾರವನ್ನೆಲ್ಲ ಕೇಂದ್ರವು ತನ್ನ ವಶದಲ್ಲಿರಿಸಿಕೊಳ್ಳಲು ಪ್ರಯತ್ನಿಸುತ್ತಿದೆ.

ರಾಜ್ಯ ಸರ್ಕಾರಗಳ ಹಣಕಾಸು ನಿರ್ವಹಣೆಯಲ್ಲಿನ ಅಶಿಸ್ತು -ಅವ್ಯವಹಾರಿಕತೆ ಬಗ್ಗೆ ಪ್ರವಚನ ನಡೆಸುವ ಕೇಂದ್ರ ಸರ್ಕಾರ ತನ್ನ ಹಣಕಾಸನ್ನು ಹೇಗೆ ನಿರ್ವಹಿಸುತ್ತಿದೆ? ರಾಜ್ಯ ಸರ್ಕಾರಗಳ ಬಜೆಟ್‌ನಲ್ಲಿನ ರೆವಿನ್ಯೂಕೊರತೆ ಬಗ್ಗೆ ಕೇಂದ್ರ ತೀವ್ರ ಕಳವಳ ವ್ಯಕ್ತ

ಪಡಿಸುತ್ತಿದೆ. ರಾಜ್ಯಗಳು ದುಂದು ವೆಚ್ಚ ಮಾಡುತ್ತಿವೆ ಎಂದು ಆರೋಪಿಸುತ್ತ ಆದರೆ ವಾಸ್ತವ ಸಂಗತಿ ಹೀಗಿಲ್ಲ.

ರಾಜ್ಯಗಳ ಒಟ್ಟು ರೆವಿನ್ಯೂ ಕೊರತೆ [Revenue deficit] ಯು ದೇಶದ ಜಿಪಿಡಿಯ ಶೇ. ೩ ರಷ್ಟಿದ್ದರೆ, ಕೇಂದ್ರದ ಒಟ್ಟು ರೆವಿನ್ಯೂ ಕೊರತೆ ದೇಶದ ಜಿಪಿಡಿಯ ಶೇ. ೭ ರಷ್ಟಿದೆ. ೧೯೯೩ -೯೪ ರಲ್ಲಿ ರಾಜ್ಯಗಳ ರೆವಿನ್ಯೂ ಕೊರತೆಯು ಅವುಗಳ ರೆವಿನ್ಯೂ ವೆಚ್ಚದ ಶೇ. ೫.೫ ರಷ್ಟಿದ್ದರೆ ಕೇಂದ್ರದ್ದು ಶೇ. ೨೦ ರಷ್ಟಿದೆ. ಕೇಂದ್ರವು ತನ್ನ ಸಾಲಕ್ಕೆ ಕಟ್ಟುತ್ತಿರುವ ಬಡ್ಡಿ ವಾರ್ಷಿಕ ಎಷ್ಟುಗೊತ್ತೆ? ಅದು ೧,೦೯,೩೦೨ ಕೋಟಿ ರೂಪಾಯಿಗಳು. ಈ ಮೊತ್ತವು ಕೇಂದ್ರದ ರೆವಿನ್ಯೂ ವೆಚ್ಚದ ಶೇ. ೫೫ ರಷ್ಟಾಗುತ್ತದೆ. ಆದರೆ ರಾಜ್ಯಗಳು ತಮ್ಮ ಸಾಲಕ್ಕೆ ಕಟ್ಟಬೇಕಾದ ಬಡ್ಡಿಯು ಅವುಗಳ ರೆವಿನ್ಯೂ ವೆಚ್ಚದ ಶೇ. ೧೭ ರಷ್ಟಿದೆ. ಯಾವುದು ಅಶಿಸ್ತು? ಯಾವುದು ದುಂದುಗಾರಿಕೆ?

೧೯೯೪ರಲ್ಲಿ ಕರ್ನಾಟಕದಲ್ಲಿ ಜನತಾದಳ ಸರ್ಕಾರ ರಚಿಸಿದೆ. ಕೇಂದ್ರದಲ್ಲಿ ಕಾಂಗ್ರೆಸ್ ಅಧಿಕಾರದಲ್ಲಿದೆ. ರೈತರ ಸಾಲಮನ್ನಾ, ಬಡವರಿಗೆ ಆಹಾರ ವಿತರಣೆಗೆ ಸಹಾಯಧನ, ಬಿಟ್ಟಿ ವಿದ್ಯುತ್ ಸರಬರಾಜು, ಬಿಟ್ಟಿ ನೀರಾವರಿ ಮುಂತಾದ ವಿಷಯಗಳಲ್ಲಿ, ಕರ್ನಾಟಕ ಹಾಗೂ ಕೇಂದ್ರಗಳ ನಡುವೆ ಜಟಾಪಟಿ ಶುರುವಾಗಿದೆ. ರಿಯಾಯತಿ ದರದಲ್ಲಿ ಬಡವರಿಗೆ ಅಕ್ಕಿ ಕೊಡುತ್ತೇನೆ ಎಂದು ಜನತಾದಳ ಚುನಾವಣೆಯಲ್ಲಿ ಆಶ್ವಾಸನೆನೀಡಿತ್ತು. ಈ ಬಗೆಯ 'ಜನಲೋಲುಪತೆ'ಯ ಕಾರ್ಯಕ್ರಮಗಳಿಗೆ ತಾನು ಹಣಕಾಸು ನೆರವು ನೀಡುವುದಿಲ್ಲವೆಂದು ಕೇಂದ್ರವು ಮುಖ ಸಿಂಡರಿಸುತ್ತಿದೆ. ರೈತರಿಗೆ ವಿದ್ಯುತ್, ರಸಗೊಬ್ಬರ, ಅಕ್ಕಿ ವಿತರಣೆ - ಮುಂತಾದವುಗಳಿಗೆ ಸಂಬಂಧಿಸಿದ ಸಹಾಯಧನ [Subsidy] ಬೆಲೆನೀತಿ ಬಗ್ಗೆ ಜನತಾದಳ ಸರ್ಕಾರ ಯಾವ ನಿಲುವು ತಳೆಯುತ್ತದೆ. ಈ ಸಮಸ್ಯೆಗಳನ್ನು ಕೇಂದ್ರದ ಜೊತೆ ಹೇಗೆ ಬಗೆಹರಿಸಿಕೊಳ್ಳುತ್ತದೆ ಎಂಬುದು, ಒಕ್ಕೂಟ ವ್ಯವಸ್ಥೆ ದೃಷ್ಟಿಯಿಂದ ಹೇಗೆ ಮುಖ್ಯವೊ ಹಾಗೆಯೇ ಕರ್ನಾಟಕದ ಅಭಿವೃದ್ಧಿಯಿಂದಲೂ ಮಹತ್ವದ್ದಾಗಿದೆ.

೧೯೯೪ರಲ್ಲಿ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಅಧಿಕಾರರೂಢ ಪಕ್ಷವಾಗಿದ್ದ ಕಾಂಗ್ರೆಸ್ಸನ್ನು ಸೋಲಿಸಿ ಅಧಿಕಾರಕ್ಕೆ ಬಂದಿರುವ ಕರ್ನಾಟಕದ ಪ್ರಧಾನ ಜಾತಿಗಳಾದ [Dominating castes] ಒಕ್ಕಲಿಗರು ಹಾಗೂ ಲಿಂಗಾಯಿತರ ಆಡುಂಬೊಲವಾಗಿರುವ ಜನತಾದಳ ಸರ್ಕಾರ, ರಾಜ್ಯದ ಅಭಿವೃದ್ಧಿ ಸವಾಲುಗಳನ್ನು ಹೇಗೆ ನಿಭಾಯಿಸುತ್ತದೆ ಎಂಬುದನ್ನು ತುಂಬಾ ಕುತೂಹಲದಿಂದ ಕಾದುನೋಡ ಬೇಕಾಗಿದೆ. ಅಭಿವೃದ್ಧಿ ಬಗ್ಗೆ ಕಾಳಜಿಯಿರುವವರೆಲ್ಲಾ ಸೂಕ್ಷ್ಮವಾಗಿ ಗಮನಿಸಬೇಕಾಗಿರುವ ಸಂಗತಿಯಾವುದೆಂದರೆ, ಈ 'ಪ್ರಧಾನ ಜಾತಿ ರಾಜಕೀಯ' ವು ಅಭಿವೃದ್ಧಿ ಸ್ವರೂಪದ ಮೇಲೆ ಬೀರಬಹುದಾದ ಪರಿಣಾಮ. ೧೯೯೪ರಲ್ಲಿ ಒಕ್ಕಲಿಗರು ಪ್ರಪ್ರಥಮ ಬಾರಿಗೆ ತಮ್ಮ ಶಕ್ತಿ -ಸಾಮರ್ಥ್ಯ- ಸಂಖ್ಯಾಬಲವನ್ನು, ಬೆಂಗಳೂರಿನಲ್ಲಿ ನಡೆಸಿದ ಅಸಾಮಾನ್ಯ ಸಮಾವೇಶದಲ್ಲಿ ಜಾಹೀರುಪಡಿಸಿದರು. ಜನತಾದಳದಿಂದ ಆರಿಸಿಬಂದ ಶಾಸಕರಲ್ಲಿ ಅತಿಹೆಚ್ಚು ಜನ ಈ ಎರಡು ಪ್ರಧಾನ ಜಾತಿಗಳಿಗೆ ಸೇರಿದ್ದಾರೆ.

ಪ್ರಧಾನ ಹಾಗೂ ಆಕ್ರಮಣಕಾರಿ ಜಾತಿಗಳ ಕೃಪಾಶ್ರಯದಲ್ಲಿ ಕೆಲಸ ಮಾಡಬೇಕಾಗಿರುವ ಜನತಾದಳ ಸರ್ಕಾರವು ರಾಜ್ಯದಲ್ಲಿ ಹಿಂದುಳಿದವರ್ಗದ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ಹಿತಾಸಕ್ತಿಯನ್ನು ಹೇಗೆ ಕಾಪಾಡುತ್ತದೆ ಎಂಬುದು ಗಂಭೀರ ಪ್ರಶ್ನೆಯಾಗಿದೆ. ಈ ದೇಶದಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸೇತರ ಪಕ್ಷಗಳು, ಸರ್ವೆ ಸಾಮಾನ್ಯವಾಗಿ ಪ್ರಧಾನ ಜಾತಿ ಅಲವಂಬಿತ ಪಕ್ಷಗಳೇ ಆಗಿವೆ. ಇಂದಿಗೂ ಗ್ರಾಮಾಂತರ ಪ್ರದೇಶದಲ್ಲಿ ದಲಿತರ ಮೇಲೆ ನಡೆಯುವ ದಬ್ಬಾಳಿಕೆ - ದೌರ್ಜನ್ಯಗಳಲ್ಲಿ, ಸಾಮಾನ್ಯವಾಗಿ ಪ್ರಧಾನ ಜಾತಿಗಳ ಕೈವಾಡವಿರುತ್ತದೆ ಎಂಬುದು ಇಂದು ರಹಸ್ಯವಾಗೇನು ಉಳಿದಿಲ್ಲ. ಇದು ಕರ್ನಾಟಕಕ್ಕೂ ನಿಜ ಹಾಗೂ ಇತರೆ ರಾಜ್ಯಗಳಿಗೂ ನಿಜ. ಜನತಾದಳ ಸರ್ಕಾರದ ಅಭಿವೃದ್ಧಿ ವಿನ್ಯಾಸ ಯಾವ ವರ್ಗದ ಹಿತವನ್ನು ಕಾಪಾಡುತ್ತದೆ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

೧೯೯೪ಳರಲ್ಲಿ ಪಂಚಾಯತ್‌ರಾಜ್‌ಗೆ ಸಂಬಂಧಿಸಿದ ವಿವಾದದಿಂದಾಗಿ, ಅಂದು ಕಾಂಗ್ರೆಸ್ ಸರ್ಕಾರದಲ್ಲಿ ಗ್ರಾಮೀಣಾಭಿವೃದ್ಧಿ ಮಂತ್ರಿಗಳಾಗಿದ್ದ ಶ್ರೀ ಎಂ. ವೈ. ಘೋರ್ಪಡೆಯವರು ತಮ್ಮ ಮಂತ್ರಿಸ್ಥಾನಕ್ಕೆ ರಾಜೀನಾಮೆ ನೀಡಬೇಕಾಯಿತು. ವಿಕೇಂದ್ರೀಕರಣಕ್ಕೆ ಬದ್ಧವಾಗಿರುವ ಹಾಗೂ ೧೯೮೦ರ ದಶಕದಲ್ಲಿ ಕರ್ನಾಟಕದಲ್ಲಿ ಜಿಲ್ಲಾಪರಿಷತ್ ಹಾಗೂ ಮಂಡಳ ಪಂಚಾಯತ್ ಸಂಸ್ಥೆಗಳನ್ನು ಅಸ್ತಿತ್ವಕ್ಕೆ ತಂದು, ಅದ್ಭುತ ಪ್ರಯೋಗವೊಂದನ್ನು ಯಶಸ್ವಿಯಾಗಿ ನಿರ್ವಹಿಸಿದ ಹಿರಿಮೆಯುಳ್ಳ ಜನತಾದಳ ಇಂದು ಅಧಿಕಾರದಲ್ಲಿದೆ- ಸರ್ಕಾರ ರಚಿಸಿದೆ. ಕಾಂಗ್ರೆಸ್ ಸರ್ಕಾರವು ಜಿಲ್ಲಾಪರಿಷತ್ ಹಾಗೂ ಮಂಡಲ ಪಂಚಾಯತ್‌ಗಳ ನಿರ್ವಹಣೆಯನ್ನು ಐ. ಎ. ಎಸ್ - ಕೆ. ಎ. ಎಸ್ ಅಧಿಕಾರಿಗಳ ವಶಕ್ಕೆ ಒಪ್ಪಿಸಿ, ವಿಕೇಂದ್ರೀಕರಣಕ್ಕೆ ತಿಲಾಂಜಲಿಕೊಟ್ಟು ತಾನೂ ಚುನಾವಣೆಯಲ್ಲಿ ಸೋತಿತು. ಇದಕ್ಕೆ ಸಂಬಂಧಿಸಿದ ಮಸೂದೆಗೆ ತಿದ್ದುಪಡಿತಂದು, ಶಾಸಕರನ್ನು ಓಲೈಸುವಸಲುವಾಗಿ ಜಿಲ್ಲಾಪರಿಷತ್ ಹಾಗೂ ಮಂಡಳಪಂಚಾಯಿತಿಗಳ ಮಧ್ಯದಲ್ಲಿ ತಾಲೂಕು ಪಂಚಾಯತನ್ನು ಸೇರಿಸಿತು. ಈ ಎಲ್ಲಾ ವಿಕಾರಗಳನ್ನು ಸರಿಪಡಿಸಿ, ನಿಜವಾಗಲೂ ಜನರಕೈಗೆ ಅಧಿಕಾರವನ್ನು ಈ ಜನತಾದಳ ಸರ್ಕಾರ ಹೇಗೆ ನೀಡುತ್ತದೆ ಎಂಬುದನ್ನು ಕಾದುನೋಡಬೇಕಾಗಿದೆ.

**ಬಿಕ್ಕಟ್ಟಿನಲ್ಲಿ ಕರ್ನಾಟಕದ ಕೃಷಿ**

ಕರ್ನಾಟಕದ ಕೃಷಿ ಬೆಳವಣಿಗೆ ದರವು, ಕಳೆದ ಮೂರು ದಶಕಗಳಲ್ಲೂ ಅಖಿಲಭಾರತ ಮಟ್ಟದ ಕೃಷಿ ಬೆಳವಣಿಗೆ ದರಕ್ಕಿಂತ ಕಡಿಮೆ ಇದೆ. ೭೦ ರ ದಶಕದಲ್ಲಿ ಕರ್ನಾಟಕದ ಕೃಷಿ ಬೆಳವಣಿಗೆ ದರವು ವಾರ್ಷಿಕ ಶೇ. ೩.೪೩ ಇದ್ದರೆ, ಅಖಿಲಭಾರತ ಮಟ್ಟದಲ್ಲಿ ಅದು ಶೇ. ೪.೧೫ ಇತ್ತು. ೮೦ ರದಶಕದಲ್ಲಿ ಕರ್ನಾಟಕದ್ದು ಶೇ. ೨.೮೦ ಇದ್ದರೆ, ಭಾರತ ಮಟ್ಟದ್ದು ಶೇ. ೫.೨೦ ಇತ್ತು. ಅಂದರೆ ೮೦ ರ ದಶಕದಲ್ಲಿ ಕರ್ನಾಟಕದ ಕೃಷಿ ಬೆಳವಣಿಗೆ ದರವು ಅಖಿಲ ಭಾರತ ಮಟ್ಟಕ್ಕಿಂತ ಹಾಗೂ ತಾನೇ ೭೦ರ ದಶಕದಲ್ಲಿ ಸಾಧಿಸಿದ್ದ ದರಕ್ಕಿಂತ ಕಡಿಮೆ ಇತ್ತು. ೧೯೬೦ - ೬೧ ರಿಂದ ೧೯೮೦ -೮೧ ರ ಅವಧಿಯಲ್ಲಿ ಕರ್ನಾಟಕದಲ್ಲಿ ಪ್ರಧಾನ ಬೆಳೆಗಳ ಇಳುವರಿ [yield] ಏರುಮುಖಿಯಾಗಿದ್ದರೆ,

೧೯೮೦ರ ದಶಕದಲ್ಲಿ ಕೆಲವು ಬೆಳೆ ಬಿಟ್ಟು ಉಳಿದಂತೆ ಇಳುವರಿಯು ಕುಸಿದಿತ್ತು. ಒಟ್ಟಾರೆ ಕರ್ನಾಟಕದ ಕೃಷಿಯು ೧೯೮೦ರ ದಶಕದಲ್ಲಿ ಒಂದು ರೀತಿಯ ಸ್ಥಗಿತತೆ [Stagnation] ಅನುಭವಿಸಿತು.

ಆದರೆ ೧೯೮೦ -೮೧ರಿಂದ ೧೯೮೯ -೯೦ ರ ಅವಧಿಯಲ್ಲಿ, ಕರ್ನಾಟಕದಲ್ಲಿ ನಿವ್ವಳ ಬಿತ್ತನೆಪ್ರದೇಶ ೯೮ -೯೯ ಲಕ್ಷ ಹೆಕ್ಟೇರಿನಿಂದ ೧೦೭ ಲಕ್ಷ ಹೆಕ್ಟೇರಿಗೇರಿದೆ. ನಿವ್ವಳ ನೀರಾವರಿ ಪ್ರದೇಶ ೧೩.೬೧ ಲಕ್ಷ ಹೆಕ್ಟೇರಿನಿಂದ ೨೧ .೮೪ ಲಕ್ಷ ಹೆಕ್ಟೇರಿಗೇರಿದೆ. ಸುಧಾರಿತ ತಳಿಗಳ ಉಪಯೋಗ ೧.೬೯ ಲಕ್ಷ ಕ್ವಿಂಟಲ್ ನಿಂದ ೪.೧೮ ಲಕ್ಷ ಕ್ವಿಂಟಲ್ ಗೇರಿದೆ. ರಸಗೊಬ್ಬರ ಬಳಕೆ [Npk] ೩.೪೪ ಲಕ್ಷ ಟನ್ ನಿಂದ ೭.೭೦ ಲಕ್ಷ ಟನ್ ಗೇರಿದೆ. ಕೀಟನಾಶಕಗಳ ಬಳಕೆ ೧೯೦೦ ಟನ್‌ನಿಂದ ೪೧೦೦ ಟನ್‌ಗೇರಿದೆ. ಈ ಎಲ್ಲಾ ವಿಸ್ತರಣೆ - ಏರಿಕೆಗಳ ಹಿನ್ನೆಲೆಯಲ್ಲಿ ಕೃಷಿಬೆಳೆಗಳ ಇಳುವರಿ ಕುಸಿತವು ತುಂಬಾ ಆತಂಕ ಕಾರಿ ಬೆಳವಣಿಗೆಯಾಗಿದೆ. ಈ ಸಮಸ್ಯೆಯನ್ನು ಕುರಿತು ಅಧ್ಯಯನ ನಡೆಸಿ, ಸಲಹೆ - ಸೂಚನೆ - ಪರಿಹಾರ ಸೂಚಿಸಲು ನೇಮಕಗೊಂಡಿದ್ದ ಸತೀಶ್ ಚಂದ್ರನ್ ಸಮಿತಿಯು ೧೯೯೪ರ ಜನವರಿಯಲ್ಲಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ.

ಈ ಇಳುವರಿ ಕುಸಿತಕ್ಕೆ ಹಲವಾರು ಕಾರಣಗಳು ಸಾಧ್ಯ. ಮುಖ್ಯವಾಗಿ ಸಾವು ಇಲ್ಲಿ ಎರಡು ಸಂಗತಿಗಳ ಕಡೆ ಗಮನಹರಿಸಬಹುದು. ಕರ್ನಾಟಕದ ಕೃಷಿಯಲ್ಲಿನ ಬೆಳೆ ಪದ್ಧತಿಯಲ್ಲಾಗುತ್ತಿರುವ ಬದಲಾವಣೆಯೇ ಈ ಇಳುವರಿ ಕುಸಿತಕ್ಕೆ ಕಾರಣವಾಗಿರುವ ಸಾಧ್ಯತೆ ಇದೆ.

೧೯೬೦ - ೬೧ರಿಂದ ೧೯೯೩ - ೯೪ ರ ಅವಧಿಯಲ್ಲಿ ಆಹಾರ ಬೆಳೆ [ಧಾನ್ಯ + ಬೇಳೆ] ಬೆಳೆಯುವ ಪ್ರದೇಶದ ವಿಸ್ತೀರ್ಣ ೭೫. ೭೯ ಲಕ್ಷ ಹೆಕ್ಟೇರಿನಿಂದ ೬೯. ೧೬ ಲಕ್ಷ ಹೆಕ್ಟೇರಿಗೆ ಇಳಿದಿದೆ. ಆದರೆ ವಾಣಿಜ್ಯ ಹಾಗೂ ತೋಟಗಾರಿಕೆ ಬೆಳೆ ಬೆಳೆಯುವ ಪ್ರದೇಶ ೨೩.೦೩ ಲಕ್ಷ ಹೆಕ್ಟೇರಿನಿಂದ ೩೬.೮೦ ಲಕ್ಷ ಹೆಕ್ಟೇರಿಗೇರಿದೆ. ೮೦ ರ ದಶಕದಲ್ಲಿ ಪ್ರಾರಂಭವಾದ ಸೂರ್ಯಕಾಂತಿ ಬೆಳೆ ಬೆಳೆಯುವ ಪ್ರದೇಶ ಇಂದು ೬ ಲಕ್ಷ ಹೆಕ್ಟೇರಿಗೇರಿದೆ. ಇದಿಷ್ಟೆ ಅಲ್ಲ. ನೀರಾವರಿ ಪ್ರದೇಶದಲ್ಲಿ ಬೆಳೆಯುವ ಆಹಾರ ಬೆಳೆಗಳ ಪಾಲು ೧೯೭೦ - ೭೧ರಲ್ಲಿ ಶೇ. ೭೦ ರಷ್ಟಿತ್ತು. ವಾಣಿಜ್ಯ ಬೆಳೆಗಳ ಪಾಲು ಕೇವಲ ಶೇ. ೩೦. ಆದರೆ ೧೯೮೯ - ೯೦ ರಲ್ಲಿ ನೀರಾವರಿಯಲ್ಲಿ ಬೆಳೆಯುವ ಆಹಾರ ಬೆಳೆಗಳ ಪಾಲು ಶೇ. ೫೫ಕ್ಕೆ ಇಳಿದಿದೆ. ವಾಣಿಜ್ಯ ಬೆಳೆಗಳದ್ದು ಶೇ. ೪೫ ಕ್ಕೇರಿದೆ.

ಬಡತನ - ಹಸಿವು -ನಿರುದ್ಯೋಗ ತೀವ್ರವಾಗಿರುವ ಸನ್ನಿವೇಶದಲ್ಲಿ ಈ ಬೆಳವಣಿಗೆಯು ಸ್ವಾಗತಾರ್ಹವಾಗಿ ಅಪೇಕ್ಷಣೀಯವಾಗಿ ತೋರುವುದಿಲ್ಲ. ಹೊಸ ಆರ್ಥಿಕ ನೀತಿ, ಗ್ಯಾಟ್, ರಫ್ತು ವೈಭವೀಕರಣ ಹಾಗೂ ಬಹುರಾಷ್ಟ್ರೀಯ ತಳಿ ಕಂಪನಿಗಳ ಪ್ರವೇಶ ಮುಂತಾದವು, ಮೇಲ್ಕಂಡ ಪ್ರವೃತ್ತಿಯನ್ನು ಉಲ್ಬಣಗೊಳಿಸುತ್ತವೆ. ಇದರ ಫಲ ಸ್ವರೂಪವಾಗಿ ಆಹಾರ ಧಾನ್ಯಗಳ ಬೆಲೆ ದುಬಾರಿಯಾಗುತ್ತದೆ. ಸಾರ್ವಜನಿಕ ವಿತರಣಾ ಜಾಲಕ್ಕೆ ಆಹಾರಧಾನ್ಯವನ್ನು ಬೇರೆ ರಾಜ್ಯಗಳಿಂದ ತರಿಸಿಕೊಳ್ಳಬೇಕಾಗುತ್ತದೆ. ಈ

ಎಲ್ಲಾ ಬೆಳವಣಿಗೆ ಬಂಡವಾಳಶಾಹಿ ಜಮೀನ್ದಾರರಿಗೆ ಲಾಭ ತರುತ್ತದೆ. ಆದರೆ ೩೮.೪೮ ಲಕ್ಷ ಅತಿಸಣ್ಣ ಹಾಗೂ ಸಣ್ಣ ಹಿಡುವಳಿಗಾರರು, ದಿವಾಳಿಯಾಗುತ್ತಾರೆ. ನೀರಾವರಿ ಪ್ರದೇಶವೆಲ್ಲಾ ವಾಣಿಜ್ಯ ಬೆಳೆಗಳ ಪಾಲಾದರೆ, ಆಹಾರ ಬೆಳೆಗಳು ಒಣ ಬೇಸಾಯವನ್ನೇ ನೆಮ್ಮಿಕೊಳ್ಳ ಬೇಕಾಗುತ್ತದೆ.

ಈ ಸಮಸ್ಯೆ ಮತ್ತಷ್ಟು ಉಲ್ಬಣಗೊಳ್ಳುವ ಸಾಧ್ಯತೆ ಇದೆ. ಏಕೆಂದರೆ ಕರ್ನಾಟಕದಲ್ಲಿ ಕೃಷಿಗೆ ವಿದ್ಯುತ್ ಉಚಿತವಾಗಿ ಸರಬರಾಜಾಗುತ್ತಿದೆ. ಆದರೆ ಈ ಸವಲತ್ತು ಬಹಳ ದಿನ ಮುಂದುವರಿಯುವ ಸಾಧ್ಯತೆ ಇಲ್ಲ. ಖಾಸಗಿ ಕ್ಷೇತ್ರಕ್ಕೆ ವಿದ್ಯುತ್ ಉತ್ಪಾದನೆಗೆ ಪ್ರವೇಶ ನೀಡಲಾಗಿದೆ. ಮುಕ್ತ ಮಾರುಕಟ್ಟೆಯಲ್ಲಿ ಖಾಸಗಿ ಕಂಪನಿಗಳು ಮಾರುಕಟ್ಟೆ ನಿಯಮದಂತೆ ವಿದ್ಯುತ್ ಮಾರಾಟಮಾಡುತ್ತವೆ. ಒಂದು ಅಂದಾಜಿನಂತೆ ಇನ್ನು ಎರಡು ವರ್ಷಗಳಲ್ಲಿ ವಿದ್ಯುತ್ ಬೆಲೆ ಕನಿಷ್ಠ ಮೂರು ಪಟ್ಟು ಹೆಚ್ಚುತ್ತದೆ ಎನ್ನುವ ಭಯ ಇದೆ. ಕೃಷಿಗೆ ಈಗ ನೀಡುತ್ತಿರುವ ಉಚಿತ ವಿದ್ಯುತ್ ನಿಲ್ಲಿಸಿಬಿಟ್ಟರೆ, ಉತ್ಪಾದನಾ ವೆಚ್ಚವು ಅಧಿಕಗೊಳ್ಳುತ್ತದೆ. ಆಹಾರ ಧಾನ್ಯಗಳು ಇನ್ನಷ್ಟು ದುಬಾರಿಯಾಗುತ್ತವೆ. ಕೃಷಿಗೆ ವಿದ್ಯುತ್ ಸರಬರಾಜನ್ನು ನಿಲ್ಲಿಸಿಬಿಟ್ಟರೆ ಆಹಾರ ಉತ್ಪನ್ನವೇನೂ ಕುಸಿಯುವುದಿಲ್ಲ. ಆದರೆ ಉತ್ಪಾದನಾ ವೆಚ್ಚಮಾತ್ರ ಅಧಿಕಗೊಳ್ಳುತ್ತದೆ. ಸಾರ್ವಜನಿಕ ವಿತರಣಾ ಜಾಲದಿಂದ ನೀಡುವ ಆಹಾರಧಾನ್ಯಕ್ಕೆ ಸಬ್ಸಿಡಿ ರದ್ದುಪಡಿಸುವ ಕ್ರಮ ಹೊಸ ಆರ್ಥಿಕನೀತಿಯಲ್ಲಿ ಅಂತರ್ಗತವಾಗಿದೆ. ಈ ಎಲ್ಲಾ ಬದಲಾವಣೆಗಳು ಬಂಡವಾಳಶಾಹಿ ಜಮೀನ್ದಾರರ, ಉದ್ದಿಮೆಗಾರರ, ಸಂಘಟಿತವಲಯದ ಕಾರ್ಮಿಕರ ಹಾಗೂ ವ್ಯಾಪಾರಿಗಳ ಬದುಕನ್ನು ನಂದವನವನ್ನಾಗಿ ಮಾಡಿದರೆ, ಭೂರಹಿತ ಕಾರ್ಮಿಕರ, ಸಣ್ಣ - ಅತಿಸಣ್ಣ ರೈತರ, ಸ್ವಯಂ ಉದ್ಯೋಗಿಗಳ ಹಾಗೂ ಕಸುಬುದಾರರ ಬದುಕನ್ನು ನರಕವನ್ನಾಗಿಸುತ್ತವೆ.

**ಕರ್ನಾಟಕವನ್ನು ಕಾಡುತ್ತಿರುವ ೨೦೦೦ ಇಸವಿ ಗುಮ್ಮ**

೨೦೦೦ ಇಸವಿಯೊಳಗೆ ಕರ್ನಾಟಕವು ತನ್ನ ಪಾಲಿನ ನೀರನ್ನೆಲ್ಲಾ ಬಳಸಿಕೊಳ್ಳ ಬೇಕಾಗಿರುವುದರಿಂದ, ಬೃಹತ್ ಅಣೆಕಟ್ಟೆಗಳ ಮೇಲೆ ವಿಪರೀತ ಹಣ ತೊಡಗಿಸಬೇಕಾಗಿದೆ. ಆದರೆ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ, ಕಾಲುವೆಗಳಜಾಲ, ನೀರಿನ ಉಚಿತ ನಿರ್ವಹಣೆ ಮುಂತಾದವುಗಳ ಕಡೆ ಗಮನವನ್ನಾಗಲಿ - ಹಣವನ್ನಾಗಲಿ ನೀಡಲು ಸಾಧ್ಯವಾಗುತ್ತಿಲ್ಲ. ಇದರಿಂದ ನಿರ್ಮಾಣಗೊಂಡ ನೀರಾವರಿ ಸಾಮರ್ಥ್ಯಕ್ಕೂ ಹಾಗೂ ಬಳಕೆಯಾಗುತ್ತಿರುವ ನೀರಾವರಿ ಸಾಮರ್ಥ್ಯಕ್ಕೂ ಅಂತರ ತೀವ್ರಗೊಳ್ಳುತ್ತದೆ. ಈ ೨೦೦೦ ಇಸವಿ ಗುಮ್ಮವು ನಮ್ಮನ್ನು ಕಾಡುತ್ತಿರುವುದರಿಂದ, ಅಣೆಕಟ್ಟೆ ನಿರ್ಮಾಣವನ್ನು ತರಾತುರಿಯಿಂದ ಮುಗಿಸುವ ಪ್ರವೃತ್ತಿ ಇದೆ. ಇದರಿಂದ ಅಣೆಕಟ್ಟೆಗಳ ಗುಣಮಟ್ಟಕ್ಕೆ ಧಕ್ಕೆಯುಂಟಾಗುತ್ತದೆ. ೧೯೯೪ರಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯ ಸ್ವಯಂಚಾಲಿತ ಗೇಟು ಕೆಲಸಮಾಡದೆ ಕೈ ಕೊಟ್ಟಿತು. ಇದರಿಂದ ಸಾಕಷ್ಟು ತೊಂದರೆ - ನಷ್ಟ ಉಂಟಾಯಿತು. ಇಂಥಹ ತಾಂತ್ರಿಕ ದೋಷಗಳು `ತರಾತುರಿ` ಯಿಂದಾಗಿ ನುಸುಳಿ ಕೊಳ್ಳುತ್ತಿವೆ.

ಇವೆಲ್ಲಕ್ಕಿಂತ ಹೆಚ್ಚಾಗಿ ೨೦೦೦ ಇಸವಿ ಗುಮ್ಮದಿಂದಾಗಿ ಕರ್ನಾಟಕವು ಸಣ್ಣನೀರಾವರಿ ಹಾಗೂ ಒಣಬೇಸಾಯ ಅಭಿವೃದ್ಧಿಯನ್ನು ಕಡೆಗಣಿಸುವ ಪ್ರಮೇಯ ಉಂಟಾಗಿದೆ. ಇಂದಿಗೂ ಕರ್ನಾಟಕದಲ್ಲಿನ ನೀರಾವರಿ ಸಾಮರ್ಥ್ಯದಲ್ಲಿ ಶೇ. ೬೦ ರಷ್ಟು ಸಣ್ಣ ನೀರಾವರಿ ಮೂಲದಿಂದಲೇ ಉಂಟಾಗಿದೆ. ಆಹಾರ ಉತ್ಪನ್ನವು ಹೆಚ್ಚಾಗಿ ಒಣಬೇಸಾಯವನ್ನು ಅವಲಂಬಿಸಿದೆ. ಆದರೆ ೨೦೦೦ ಇಸವಿಯ ಲಕ್ಷ್ಮಣರೇಖೆಗೆ ಹೆದರಿ ಸಣ್ಣನೀರಾವರಿ ಹಾಗೂ ಒಣಬೇಸಾಯಗಳನ್ನು ಕಡೆಗಣಿಸಿದ್ದರಿಂದ 'ಅದೂ ಇಲ್ಲ ಇದೂ ಇಲ್ಲ' ಎನ್ನುವ ಅತಂತ್ರದ ಸ್ಥಿತಿ ಉಂಟಾಗಿದೆ.

ಈ ಎಲ್ಲಾ ಬೆಳವಣಿಗೆಗಳನ್ನೂ ನಾವು ಮುಕ್ತ ಮನಸ್ಸಿನಿಂದ ಪರಾಮರ್ಶಿಸಬೇಕಾದ ಕಾಲಬಂದಿದೆ. ಜನರ ಬದುಕು ಉತ್ತಮಗೊಳ್ಳಲು ಏನು ಬೇಕು ಎಂಬುದು, ಪ್ರತಿಯೊಂದು ಅಭಿವೃದ್ಧಿ ನಿರ್ಣಯದ ಹಿಂದಿನ ಮಾನದಂಡವಾಗಬೇಕು. ೨೦೦೦ ಇಸವಿಯ ಗುಮ್ಮವೇ ಮುಖ್ಯವಾಗಿ, ಜನರ ಬದುಕು ಅಮುಖ್ಯವಾಗಿಬಿಡಬಾರದು. ೨೦೦೦ ಇಸವಿ ಭಯವನ್ನೇ ಆಧಾರವಾಗಿಟ್ಟುಕೊಂಡು ಬೃಹತ್ ನೀರಾವರಿ ಯೋಜನೆಗಳ ಮೇಲೆ ಸಾವಿರಾರು ಕೋಟಿ ರೂಪಾಯಿ ಸುರಿಯುತ್ತಿದ್ದೇವೆ. ಬೃಹತ್ ನೀರಾವರಿ ಯೋಜನೆ ಆಧರಿತ ಅಭಿವೃದ್ಧಿಯು ಜನರ ಬದುಕನ್ನು ಉತ್ತಮಪಡಿಸುತ್ತದೆಯೇ ಎಂಬುದರ ತೌಲನಿಕ ದೃಷ್ಟಿಕೋನದ ಅಗತ್ಯವೂ ಇದೆ. ಅಭಿವೃದ್ಧಿ ಕುರಿತಂತೆ ಇರುವ ಪರ್ಯಾಯಗಳ ಬಗ್ಗೆ ನಮಗೆ ಯಾಕೆ ದಿವ್ಯ ನಿರ್ಲಕ್ಷ್ಯ? ಈ ಬೃಹತ್ ನೀರಾವರಿ ಯೋಜನೆ ಪ್ರಣೀತ ಅಭಿವೃದ್ಧಿ ಯಾರ ಹಿತಾಸಕ್ತಿಗಳನ್ನು ಪೂರೈಸುತ್ತದೆ?

ಈ ಬಗ್ಗೆ ಇಲ್ಲಿ ಸುದೀರ್ಘವಾಗಿ ಚರ್ಚಿಸುವುದಕ್ಕೆ ಕಾರಣವೆಂದರೆ, ಕರ್ನಾಟಕದಲ್ಲಿ ಇಂದು ಅಭಿವೃದ್ಧಿ ಎಂದರೆ ಬೃಹತ್ ನೀರಾವರಿ, ಅಭಿವೃದ್ಧಿ ಎಂದರೆ ಬಿಟ್ಟಿ ವಿದ್ಯುತ್, ಎಂಬ ಭ್ರಮೆಗಳಿಗೆ ನಿಜದ ಸೂಜಿಮೊನೆ ತಾಗಿಸುವುದಾಗಿದೆ. ಇಲ್ಲಿನ ಚರ್ಚೆಯು ೧೯೯೪ಕ್ಕೆ ಹೇಗೆ ಅನ್ವಯವಾಗಬಲ್ಲುದೊ ಹಾಗೆಯೇ, ಯಾವ ವರ್ಷಕ್ಕೂ ಅನ್ವಯವಾಗಬಲ್ಲದು ಎಂಬ ಅರಿವು ನನಗಿದೆ. ಆದರೆ ೧೯೯೪ರಲ್ಲಿ ಕರ್ನಾಟಕದಲ್ಲಿ ಉಂಟಾದ ರಾಜಕೀಯ ಬದಲಾವಣೆ, ಬೆಂಗಳೂರಿನ ಹತ್ತಿರ ಸ್ಥಾಪಿಸಬೇಕೆಂದಿದ್ದ ಜಪಾನಿನ 'ಕೈಗಾರಿಕಾ ವಸಾಹತು' ವನ್ನು ಯಶಸ್ವಿಯಾಗಿ ತಡೆಹಿಡಿದ ಸಾಮ್ರಾಜ್ಯಶಾಹಿ ವಿರೋಧೀ ಕಾರ್ಯಕರ್ತರ ಎಚ್ಚರ, ಬಳ್ಳಾರಿಯ ಹತ್ತಿರದ ಕಾರ್ಗಿಲ್ ಕಂಪನಿಯ ಕಟ್ಟಡಗಳನ್ನು ನೆಲಸಮಮಾಡಿದ ರೈತಶಕ್ತಿ -ಇವುಗಳೆಲ್ಲದರ ಹಿನ್ನೆಲೆಯಲ್ಲಿ ಈ ಚರ್ಚೆ ಪ್ರಸ್ತುತವಾಗಿದೆ. ಮೇಲಾಗಿ ಕರ್ನಾಟಕದ ಕೃಷಿಯು ಬಿಕ್ಕಟ್ಟಿನಿಂದ ಸೊರಗುತ್ತಿದೆ ಎಂಬುದು ಸ್ಪಷ್ಟವಾಗಿ ಗೋಚರಿಸಿದ್ದು ೧೯೯೪ರಲ್ಲಿ ಎಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಈದಿಶೆಯಲ್ಲಿ ಬೆಂಗಳೂರಿನ ' ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಅಧ್ಯಯನ ಸಂಸ್ಥೆ' [Isec] ಯಲ್ಲಿನ ಅರ್ಥಶಾಸ್ತ್ರಜ್ಞರು ಕರ್ನಾಟಕದ ಆರ್ಥಿಕತೆ ಬಗ್ಗೆ ನಡೆಸಿದ ಅಧ್ಯಯನ, ಈ ಅಧ್ಯಯನ ಬೀರುತ್ತಿರುವ ಬೆಳಕು ಶ್ಲಾಘನೀಯವಾದುದಾಗಿದೆ. ಇದರಲ್ಲಿ ಹೆಸರಿಸಬೇಕಾದವರೆಂದರೆ, ಶ್ರೀ ಸತೀಶ್

ಚಂದ್ರನ್, ಡಾ. ಅಬ್ದುಲ್ ಅಜೀಜ್, ಡಾ. ಜಿ. ತಿಮ್ಮಯ್ಯ, ಡಾ. ವಿ. ಎಮ್. ರಾವ್, ಡಾ. ಎಂ. ವಿ. ನಾಡಕರ್ಣಿ, ವಿ. ಎಚ್. ರಾಯಪ್ಪ ಮುಂತಾದವರು. ಕರ್ನಾಟಕದ ಆರ್ಥಿಕತೆ ಕುರಿತು ಚಿಕಿತ್ಸಕ ದೃಷ್ಟಿಕೋನವನ್ನು ನೀಡುತ್ತಿರುವ ವಿ. ಆರ್. ಬ್ರಹ್ಮಾನಂದರವರ ಕಾಣಿಕೆಯನ್ನು ನಾವು ಕಡೆಗಣಿಸುವಂತಿಲ್ಲ.

**ಹೈದರಾಬಾದ್ ಕರ್ನಾಟಕ [ಹೈ. ಕ] ಪ್ರದೇಶ ದ ಆರ್ಥಿಕತೆ ಅಧ್ಯಯನ**

೧೯೯೪ರಲ್ಲಿ ಹೈ. ಕ. ಪ್ರದೇಶಕ್ಕೆ ಸಂಬಂಧಿಸಿದಂತೆ ಎರಡು ಮುಖ್ಯ ಸಂಗತಿಗಳು ರಾಜ್ಯಮಟ್ಟದಲ್ಲಿ ಚರ್ಚೆಗೆ ಗ್ರಾಸ ಒದಗಿಸಿದವು. ಹೈ. ಕ. ಪ್ರದೇಶ ಅಭಿವೃದ್ಧಿ ಮಂಡಳಿ ಪ್ರಾಯೋಜಿಸಿರುವ ಬೆಂಗಳೂರಿನ 'ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಅಧ್ಯಯನ ಸಂಸ್ಥೆ'ಯ [Isec] ನೇತೃತ್ವದಲ್ಲಿ ಹಾಗೂ ಆ ಸಂಸ್ಥೆಯ ಡಾ. ಅಬ್ದುಲ್ ಅಜೀಜ್‌ರವರ ನಿರ್ದೇಶನದಲ್ಲಿ 'ಹೈ.ಕ. ಪ್ರದೇಶ ಆರ್ಥಿಕತೆ' ಕುರಿತು ವಿಶಿಷ್ಟ ಅಧ್ಯಯನ ಯೋಜನೆ ೧೯೯೪ರಲ್ಲಿ ಪ್ರಾರಂಭವಾಯಿತು ಎನ್ನುವುದು ಮೊದಲನೆಯ ಸಂಗತಿ. ಇದಕ್ಕೆ ಸಂಬಂಧಿಸಿದಂತೆ ಮೊದಲ ಹಂತದ ವಿಚಾರ ಸಂಕಿರಣವೊಂದು ಗುಲ್ಬರ್ಗಾದಲ್ಲಿ ಸೆಪ್ಟೆಂಬರ್. ೧೯, ೨೦, ಹಾಗೂ ೨೧ ರಂದು ಜರುಗಿತು. ಎರಡನೆಯದಾಗಿ ಮೈಸೂರು ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ಅಧ್ಯಯನ ವಿಭಾಗದ ಸಹಭಾಗಿತ್ವದಲ್ಲಿ, ೧೯೯೪ರ ಡಿಸೆಂಬರ್. ೨೭, ೨೮ ಹಾಗೂ ೨೯ ರಂದು ನಡೆದ 'ಭಾರತೀಯ ಆರ್ಥಿಕ ಸಂಘ' [Iea] ದ ೭೭ ನೇ ವಾರ್ಷಿಕ ಸಮಾವೇಶದ ಸಂದಂರ್ಭದಲ್ಲಿ, ಕರ್ನಾಟಕದ ಖ್ಯಾತ ಅರ್ಥಶಾಸ್ತ್ರಜ್ಞ ಡಾ. ಜಿ. ತಿಮ್ಮಯ್ಯ ನವರು ಹೈ.ಕ. ಪ್ರದೇಶದ ಹಿಂದುಳಿದಿರುವಿಕೆಯ ಬಗ್ಗೆ ಭಿನ್ನವಾದ ವಾದವೊಂದನ್ನು ಮಂಡಿಸಿದರು.

ಡಾ. ಜಿ. ತಿಮ್ಮಯ್ಯನವರು ಎತ್ತಿರುವ 'ಹೈ. ಕ. ಪ್ರದೇಶವು ಇನ್ನೂ ಹಿಂದುಳಿದಿದೆಯೇ ಎಂದು ತೀರ್ಮಾನಿಸುವುದು ಎಷ್ಟರ ಮಟ್ಟಿಗೆ ಸರಿ?' ಎಂಬ ಪ್ರಶ್ನೆ ಸರಳವಾಗಿದೆ. [ನೋಡಿ: ಡಾ. ಜಿ. ತಿವ ್ಮಯ್ಯ 'Is Hydrabad Karnataka region still backward'; IEA 77th Conference Sonvennier; Mysore University. 1994. PP83 - 93] 'ಹಿಂದುಳಿದಿರುವುದು' ಎಂದರೆ ಸ್ಥಗಿತ ಸ್ಥಿತಿಯಲ್ಲ. ಅದೂಕೂಡ ಒಂದು ಚಲನಶೀಲ ಪರಿಕಲ್ಪನೆ. ೧೯೬೦ - ೬೧ ರಲ್ಲಿ ಕರ್ನಾಟಕದ ಪ್ರದೇಶವಾರು ಪ್ರತಿತಲಾ ವರಮಾನದ ದೃಷ್ಟಿಯಿಂದ ಹೈ. ಕ. ಪ್ರದೇಶವು ಕೊನೆ ಸ್ಥಾನದಲ್ಲಿತ್ತು. ೧೯೯೦ - ೯೧ ರಲ್ಲೂ ಕೊನೆ ಸ್ಥಾನದಲ್ಲೇ ಇದೆ. ಇದೇನೂ ನಿಜ. ಆದರೆ ಈ ಮೂವತ್ತು ವರ್ಷದ ಕಾಲಾವಧಿಯಲ್ಲಿ ಹೈ. ಕ. ಪ್ರದೇಶದ ಪ್ರತಿ ತಲಾವರಮಾನ ರೂ. ೨೮೯ ರಿಂದ ರೂ. ೩೬೪೨ ಕ್ಕೆ ಅಂದರೆ ೧೪ ಪಟ್ಟು ಏರಿಕೆಯಾಗಿದೆ ಎಂಬುದೂ ನಿಜ. ಏಕೀಕರಣದ ನಂತರ ರಾಜ್ಯದಲ್ಲಿ ನೀರಾವರಿಗೆ ವಿನಿಯೋಗಿಸಿದ ಹಣದಲ್ಲಿ ಸಿಂಹಪಾಲು ಹೈ. ಕ. ಪ್ರದೇಶಕ್ಕೆ ಸಂದಿದೆ. ಹಾಗಿದ್ದಮೇಲೆ ಹೈ. ಕ. ಪ್ರದೇಶವನ್ನು ಇನ್ನೂ ಹಿಂದುಳಿದಿದೆ ಎಂದು ಕರೆಯುವುದು ಸರಿಯಲ್ಲ ಎಂಬುದು ತಿಮ್ಮಯ್ಯನವರ ವಾದವಾಗಿದೆ. ಪ್ರಾಸಂಗಿಕವಾಗಿ ಹೈ. ಕ. ಪ್ರದೇಶದಲ್ಲಿನ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ತಾಂಡವವಾಡುತ್ತಿದೆ

ಎನ್ನಲಾದ ಭ್ರಷ್ಟಾಚಾರದ ಬಗ್ಗೆಯೂ ಅವರು ಪ್ರಸ್ತಾಪ ಮಾಡಿದ್ದಾರೆ. ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸ್ಥಿತಿಗತಿಗಳು ಈಗಿನದಕ್ಕಿಂತ ಉತ್ತಮವಾಗಿರುತ್ತಿತ್ತು ಎಂಬ ಅರ್ಥಬರುವ ಮಾತನ್ನೂ ಆಡಿದ್ದಾರೆ. ಸಂಯುಕ್ತ ಕರ್ನಾಟಕದ 'ಹೈ. ಕ. ವಿಶೇಷ ಪುರವಣಿ' ಯಲ್ಲಿ ಬಂದ ಬಹುಪಾಲು ಲೇಖನಗಳು, ಈ ಪ್ರದೇಶದಲ್ಲಿನ ಭ್ರಷ್ಟಾಚಾರದ ಪೀಡೆಯಬಗ್ಗೆ ಬೆಳಕು ಚೆಲ್ಲುತ್ತದೆ. ಈ ವಿಷಯದ ಬಗ್ಗೆ ಭಿನ್ನಾಭಿಪ್ರಾಯ ಸಾಧ್ಯವಿಲ್ಲ. ಆದರೆ ಭ್ರಷ್ಟಾಚಾರವನ್ನು ಹೈ. ಕ. ಪ್ರದೇಶಕ್ಕೆ ಮಾತ್ರ ಮೀಸಲಿಡುವುದರ ಬಗ್ಗೆ ನನ್ನ ತಕರಾರಿದೆ. ಏಕೆಂದರೆ ಭ್ರಷ್ಟಾಚಾರವು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲೂ ಕಂಡುಬರುವ ರೋಗವಾಗಿದೆ. ಪ್ರಮಾಣ ಹಾಗೂ ತೀವ್ರತೆಯಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸ ಇರಬಹುದು. ಆದರೆ ಭ್ರಷ್ಟಾಚಾರವು ಹೈ. ಕ. ಪ್ರದೇಶದ ವಿಶಿಷ್ಟತೆ ಹಾಗೂ ಈ ಪ್ರದೇಶವು ಹಿಂದುಳಿದಿರುವುದಕ್ಕೆ ಕಾರಣ ಎಂಬುದನ್ನು ಒಪ್ಪುವುದು ಕಷ್ಟ.

ಅಭಿವೃದ್ಧಿಯನ್ನು ಪ್ರತಿ ತಲಾವರಮಾನ ಅಥವಾ ಹೂಡಿದ ಬಂಡವಾಳಗಳ ಆಧಾರ ಮೇಲೆ ಮಾಪನ ಮಾಡುವ ಇತಿಮಿತಿಗಳು ಇಂದು ರಹಸ್ಯವಾಗೇನು ಉಳಿದಿಲ್ಲ. ಹೈ. ಕ. ಪ್ರದೇಶದ ಅಭಿವೃದ್ಧಿಯನ್ನು ಅಕ್ಷರ -ಆರೋಗ್ಯ ಮಾನದಂಡದ ದೃಷ್ಟಿಯಿಂದ ಪರಿವೀಕ್ಷಿಸಿದಾಗ, ಹಿಂದುಳಿದಿರುವಿಕೆಯ ಪೂರ್ಣಚಿತ್ರ ದೊರೆತೀತು. ಡಾ. ಅಬ್ದುಲ್ ಅಜೀಜ್‌ರವರ ನಿರ್ದೇಶನದಲ್ಲಿ ಹೈ. ಕ. ಆರ್ಥಿಕತೆ ಬಗ್ಗೆ ಸಿದ್ಧವಾದ ಅಧ್ಯಯನ ಪ್ರಬಂಧಗಳಲ್ಲಿ ಇದು ಸ್ಪಷ್ಟವಾಗಿದೆ. ಇಲ್ಲಿ ಕೆಲವನ್ನು ಮಾತ್ರ ನಾವು ಪರಿಗಣಿಸಬಹುದು.

* ಹೈ. ಕ. ಪ್ರದೇಶದ ಗ್ರಾಮೀಣ ಭಾಗದ ಮಹಿಳೆಯರ ಸಾಕ್ಷರತೆ ದರ ಶೇ. ೧೬.೧೪. ಕರ್ನಾಟಕ ರಾಜ್ಯಮಟ್ಟದಲ್ಲಿ ಗ್ರಾಮೀಣ ಮಹಿಳೆಯರ ಸಾಕ್ಷರತೆದರ ಶೇ. ೨೮.೭೭. ಏಕೀಕರಣಗೊಂಡು ೪೦ ವರ್ಷಗಳಾಗುತ್ತಿರುವ ಇಂದಿಗೂ ಮಹಿಳೆಯರ ಸಾಕ್ಷರತೆ ಶೇ. ೧೬.೧೪ ಎಂಬುದು ನಿಜಕ್ಕೂ ತಲೆತಗ್ಗಿಸಬೇಕಾದ ಸಂಗತಿ. ಈ ಶೇ. ೧೬.೧೪ ಸಾಕ್ಷರತೆಯು ಇಡೀ ಗ್ರಾಮೀಣ ಮಹಿಳಾವರ್ಗವನ್ನು ಆಧರಿಸಿದೆ. ಇದನ್ನು ವರ್ಗೀಕರಿಸಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಮಹಿಳೆಯರ ಸಾಕ್ಷರತೆಯನ್ನು ಪರಿಗಣಿಸಿದರೆ ಇನ್ನಾವ ಮಾಹಿತಿ ಕಾದಿದೆಯೊ?

* ಹೈ. ಕ. ಪ್ರದೇಶದ ಒಟ್ಟು ಸಾಕ್ಷರತೆ ದರವು ಶೇ. ೩೨.೭೧ [೧೯೯೧ರ ಜನಗಣತಿ] ಕರ್ನಾಟಕ ರಾಜ್ಯಮಟ್ಟದಲ್ಲಿ ಒಟ್ಟು ಸಾಕ್ಷರತೆ ಶೇ. ೪೭.೦೨

* ಹೈ. ಕ. ಪ್ರದೇಶದಲ್ಲಿ ಜನನದರ ೩೨.೭; ಕರ್ನಾಟಕ ರಾಜ್ಯ ಮಟ್ಟದಲ್ಲಿ ಜನನದರ ೨೮.೮

* ಹೈ. ಕ. ಪ್ರದೇಶದಲ್ಲಿ ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ದರ ಶೇ. ೨.೨೧; ಕರ್ನಾಟಕ ರಾಜ್ಯ ಮಟ್ಟದಲ್ಲಿ ಜನಸಂಖ್ಯೆಯ ಬೆಳವಣಿಗೆ ದರ ಶೇ. ೧.೭೫

* ಕರ್ನಾಟಕ ರಾಜ್ಯದಲ್ಲಿ ಶಿಶುಮರಣದರ [Infant mortality rate] ಅತಿ ಹೆಚ್ಚಿರುವ ಜಿಲ್ಲೆಗಳೆಂದರೆ ಹೈ. ಕ. ಪ್ರದೇಶದ ನಾಲ್ಕು ಜಿಲ್ಲೆಗಳು.

* ಕರ್ನಾಟಕರಾಜ್ಯಮಟ್ಟದಲ್ಲಿ ಮಕ್ಕಳ ಮರಣದರ [೫ ವರ್ಷದ] ಸರಾಸರಿ ೧೪೨. ಆದರೆ ಇದೇ ದರವು ಹೈ. ಕ. ಪ್ರದೇಶದ ರಾಯಚೂರು ಜಿಲ್ಲೆಯಲ್ಲಿ ೧೮೪, ಗುಲ್ಬರ್ಗಾ ಜಿಲ್ಲೆಯಲ್ಲಿ ೧೬೩, ಬೀದರ ಜಿಲ್ಲೆಯಲ್ಲಿ ೧೪೪ ಹಾಗೂ ಬಳ್ಳಾರಿ ಜಿಲ್ಲೆಯಲ್ಲಿ ೧೮೧ ಇದೆ.

* ರಾಜ್ಯಮಟ್ಟದಲ್ಲಿ ಪ್ರತಿ ೯೦೦ ಜನರಿಗೆ ಒಂದು ಆಸ್ಪತ್ರೆ ಹಾಸಿಗೆ ಇದೆ. ಹೈ. ಕ. ಪ್ರದೇಶದಲ್ಲಿ ಪ್ರತಿ ೧೫೩೬ ಜನರಿಗೆ ಒಂದು ಆಸ್ಪತ್ರೆ ಹಾಸಿಗೆ ಇದೆ.

* ಹೈ. ಕ ಪ್ರದೇಶದ ಜಿಲ್ಲೆಗಳಲ್ಲಿ ಹೆಣ್ಣುಶಿಶು ಮರಣದರವು ಗಂಡುಶಿಶು ಮರಣದರಕ್ಕಿಂತ ಅಧಿಕವಿದೆ.

* ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಹೈ. ಕ. ಪ್ರದೇಶದ ಪಾಲು ಶೇ. ೧೭.೮೯. ಆದರೆ ರಾಜ್ಯದ ಪ್ರಾಥಮಿಕ ಶಾಲೆಗಳ (ಹಿರಿಯ - ಕಿರಿಯ) ಸಂಖ್ಯೆಯಲ್ಲಿ ಹೈ.ಕ. ಪ್ರದೇಶದ ಪಾಲು ಕೇವಲ ಶೇ. ೧೩.೫೨. ಅಂದರೆ ಈ ಪ್ರದೇಶದಲ್ಲಿ ಇರಬೇಕಾದುದಕ್ಕೂ ಹಾಗೂ ಇರುವುದಕ್ಕೂ ಇರುವ ಅಂತರವು ಶೇ. ೪.೩೭

ಹೈ. ಕ. ಪ್ರದೇಶದ ಹಿಂದುಳಿದಿರುವಿಕೆಯನ್ನು ಹೀಗೆ ಅಕ್ಷರ - ಆರೋಗ್ಯಗಳಿಗೆ ಸಂಬಂಧಿಸಿದ ಉಪಾಧಿಗಳಿಂದ ತೀರ್ಮಾನಿಸಬೇಕಾಗುತ್ತದೆ. ೧೯೯೪ರಲ್ಲೂ ಹೈ. ಕ. ಪ್ರದೇಶವು ಹಿಂದುಳಿದಿದೆ ಎಂಬುದರ ಬಗ್ಗೆ ಯಾರಿಗೂ ಅನುಮಾನವಿರಲು ಸಾಧ್ಯವಿಲ್ಲ.

**ಅಭಿವೃದ್ಧಿ ಸಂಸ್ಥೆಗಳು**

ಕರ್ನಾಟಕದಲ್ಲಿ ಇಂದು ಅಭಿವೃದ್ಧಿ ಹೆಸರಿನಲ್ಲಿ ಹತ್ತು -ಹಲವು - ಮಂಡಳಿಗಳು -ನಿಗಮಗಳು ಕಾರ್ಯಪ್ರವೃತ್ತವಾಗಿವೆ. ಈ ಅಭಿವೃದ್ಧಿ ಸಂಸ್ಥೆಗಳೆಲ್ಲವನ್ನೂ ಎರಡು ಗುಂಪುಗಳನ್ನಾಗಿ ವಿಂಗಡಿಸಬಹುದು.

೧. ಪ್ರದೇಶ ಅಭಿವೃದ್ಧಿ ಮಂಡಳಿಗಳು [Adbs] ಉದಾ.ಗೆ ಹೈದರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿ, ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿ, ಬಯಲು ಪ್ರದೇಶ [ಮೈದಾನ] ಅಭಿವೃದ್ಧಿ ಮಂಡಳಿ, ಗಡಿಪ್ರದೇಶ ಅಭಿವೃದ್ಧಿ ಮಂಡಳಿ - ಇತ್ಯಾದಿ.

೨. ದುರ್ಬಲರ ಅಭಿವೃದ್ಧಿ ನಿಗಮಗಳು. ಉದಾ.ಗೆ ಕರ್ನಾಟಕ ಪರಿಶಿಷ್ಟಜಾತಿ-ಪರಿಶಿಷ್ಟ ವರ್ಗ ಅಭಿವೃದ್ಧಿ ನಿಗಮ, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ಇತ್ಯಾದಿ.

೧೯೯೪ - ೯೫ ರ ಸಾಲಿನಲ್ಲಿ ಈ ಎರಡೂ ವಿಧದ ಮಂಡಳಿ - ನಿಗಮಗಳಿಗೆ ಬಜೆಟ್‌ನಲ್ಲಿ ತೆಗೆದಿಟ್ಟ ಹಣ ೧೮೨.೩೩ ಕೋಟಿ ರೂಪಾಯಿಗಳು. ೧೯೯೪ - ೯೫ ರ ಸಾಲಿನ ಯೋಜನಾ ವೆಚ್ಚದ ಶೇ. ೫ ರಷ್ಟು ಅಭಿವೃದ್ಧಿ ಸಂಸ್ಥೆಗಳಿಗೆ ಮೀಸಲಿಡಲಾಗಿದೆ. ನಾವು ಇಲ್ಲಿ ಗಮನಿಸಬೇಕಾದ ಸಂಗತಿಯೇನೆಂದರೆ, ಈ ಮಂಡಳಿ - ನಿಗಮಗಳೆಲ್ಲಾ ರಾಜಕೀಯ ಸೃಷ್ಟಿಗಳು. ಆದರೆ ಇವುಗಳನ್ನು ನಿಜವಾದ ಅರ್ಥದಲ್ಲಿ ಜನಪ್ರತಿನಿಧಿ ಸಂಸ್ಥೆಗಳೆಂದು ಪರಿಗಣಿಸಲು ಸಾಧ್ಯವಿಲ್ಲ. ಸರ್ಕಾರವನ್ನು ನಡೆಸುವ ರಾಜಕೀಯ ಪಕ್ಷದ ಅನುಬಂಧಗಳಂತೆ ಇವು ಕೆಲಸ ಮಾಡುತ್ತವೆ.

ಈ ನಿಗಮ - ಮಂಡಳಿಗಳ ಆಡಳಿತ ವೆಚ್ಚ ಎಷ್ಟು? ಅಭಿವೃದ್ಧಿ ಮೇಲೆ ಇವು ಬೀರುವ ಪರಿಣಾಮ ಏನು? ಒಂದು ಮಂಡಳಿಯೋ ನಿಗಮವೋ ಮಾಡಿದ ಕೆಲಸವನ್ನೇ ಮತ್ತೊಂದು ನಿಗಮ -ಮಂಡಳಿ ಅಥವಾ ಸರ್ಕಾರದ ಮತ್ತಾವುದೊ ಇಲಾಖೆ ಮಾಡುವ ಸ್ಥಿತಿ ಇಲ್ಲವೋ ? ಈ ಮಂಡಳಿ- ನಿಗಮಗಳ ನಿರ್ವಹಣೆ ಸರ್ಕಾರಿ ಆಡಳಿತ ಯಂತ್ರದ ಮೇಲೆ ಹೇರುವ ಒತ್ತಡ ಯಾವ ಬಗೆಯದು ? ಇಲ್ಲಿ ಅಭಿವೃದ್ಧಿಯನ್ನು ಹೇಗೆ ಪರಿಭಾವಿಸಲಾಗಿದೆ? ಇವೆಲ್ಲವೂ ಹಾಡಿದ್ದೆ ಹಾಡುವ 'ಕಿಸುಬಾಯಿ ದಾಸಯ್ಯ' ಗಳಾಗಿಲ್ಲವೆ ?

ಈ ಎಲ್ಲಾ ಪ್ರಶ್ನೆ - ದೂರುಗಳಿಗೆ ಸಮಾಧಾನಕರ ಉತ್ತರ ದೊರೆಯುವುದು ಸಾಧ್ಯವಿಲ್ಲ. ಅವುಗಳ ಕಾರ್ಯವೈಖರಿಯೂ ಸಮಾಧಾನಕರವಾಗಿಲ್ಲ. ಹೈ. ಕ. ಪ್ರದೇಶ ಅಭಿವೃದ್ಧಿ ಮಂಡಳಿಯು ಅಸ್ತಿತ್ವಕ್ಕೆ ಬಂದಾಗಿನಿಂದ ಇಂದಿನವರೆಗೆ ವ್ಯಯಿಸಿದ ಒಟ್ಟು ಮೊತ್ತದಲ್ಲಿ, ಶೇ. ೨೫ ರಷ್ಟು ರಸ್ತೆ -ಸೇತುವೆ ನಿರ್ಮಾಣಕ್ಕೆ ಸಂದಿದೆ. ರಸ್ತೆ ಸೇತುವೆಗಳೇ 'ಅಭಿವೃದ್ಧಿ' ಎಂದು ಈ ಮಂಡಳಿ ಭಾವಿಸಿದಂತಿದೆ. ರಸ್ತೆ - ಸೇತುವೆಗಳನಿರ್ಮಾಣಕ್ಕೆ ಆದ್ಯತೆ ಸಲ್ಲುತ್ತಿರುವುದಕ್ಕೆ ಕಾಂಟ್ರ್ಯಾಕ್ಟ್ - ಕಮಿಷನ್‌ಗಳ ಆಮಿಷ ಕಾರಣವಾಗಿರಬಹುದು. ಈ ಮಂಡಳಿ - ನಿಗಮಗಳ ಅಗತ್ಯವನ್ನು ಕುರಿತು, ಅವುಗಳ ಕಾರ್ಯವೈಖರಿ ಕುರಿತು ಹಾಗೂ ಅವುಗಳ ಕಾರ್ಯಗಳು ಅಭಿವೃದ್ಧಿಯ ಮೇಲೆ ಬೀರುವ ಪರಿಣಾಮ ಕುರಿತು ಪರಾಮರ್ಶಿಸುವ ಕಾಲ ಈಗ ಬಂದಿದೆ.

ಕರ್ನಾಟಕದಲ್ಲಿ ಅತ್ಯಂತ ನಿರ್ಲಕ್ಷ್ಯಕ್ಕೆ ಗುರಿಯಾಗಿರುವ ಸಂಗತಿಯೆಂದರೆ ಆರೋಗ್ಯ. ಅಭಿವೃದ್ಧಿಯ ನಿಜವಾದ ಮಾನದಂಡವಾಗಿರುವ ಆರೋಗ್ಯದ ಸ್ಥಿತಿಗತಿ ಕರ್ನಾಟಕದಲ್ಲಿ ತೃಪ್ತಿಕರವಾಗಿಲ್ಲ. ೧೯೯೪ - ೯೫ ರಲ್ಲಿ ಆರೋಗ್ಯಕ್ಕೆ ಮೀಸಲಿಟ್ಟ ಹಣ ೧೧೨.೭೬ ಕೋಟಿರೂಪಾಯಿಗಳು. ಆ ಸಾಲಿನ ಒಟ್ಟು ವೆಚ್ಚದಲ್ಲಿ ಆರೋಗ್ಯಕ್ಕೆ ಸಂದ ಮೊತ್ತದ ಪಾಲು ಕೇವಲ ಶೇ. ೩.೩

ದಕ್ಷಿಣ ಭಾರತದಲ್ಲಿ ಅತಿ ಹೆಚ್ಚು ಜನನದರ [Birth rate] ಇರುವ ರಾಜ್ಯ ಕರ್ನಾಟಕ. ಅತಿಹೆಚ್ಚು ಶಿಶುಮರಣದರ ಇರುವ ರಾಜ್ಯವೂ ಕರ್ನಾಟಕವಾಗಿದೆ. ೧೯೯೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಜನನದರ ೨೮.೫. ಆದರೆ ಆಂಧ್ರ ಪ್ರದೇಶದಲ್ಲಿ ಜನನದರ ೨೭.೮; ಕೇರಳದಲ್ಲಿ ೨೦.೭; ತಮಿಳು ನಾಡಿನಲ್ಲಿ ೨೩.೩.

ಕೇರಳದಲ್ಲಿ ಪ್ರತಿ ಒಂದು ಲಕ್ಷ ಜನಸಂಖ್ಯೆಗೆ ಲಭ್ಯವಿರುವ ಆಸ್ಪತ್ರೆ ಹಾಸಿಗೆಗಳ ಸಂಖ್ಯೆ ೨೫೪. ಕರ್ನಾಟಕದಲ್ಲಿ ಅದು ಕೇವಲ ೮೦. ಒಟ್ಟು ಆಸ್ಪತ್ರೆ ಹಾಸಿಗೆಗಳಲ್ಲಿ ಗ್ರಾಮೀಣ ಪ್ರದೇಶದ ಪಾಲು ಕೇರಳದಲ್ಲಿ ಶೇ. ೫೬.೧೨ ಇದ್ದರೆ, ಕರ್ನಾಟಕದಲ್ಲಿ ಅದು ಕೇವಲ ಶೇ. ೯.೮೨ ಮಾತ್ರ. ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸುವ ಹಾದಿಯಲ್ಲಿ ಕೇರಳದ ಸಾಧನೆಯನ್ನು ಹೊಗಳುವ ಜನರು, ಆ ರಾಜ್ಯವು ಆರೋಗ್ಯದ ಕ್ಷೇತ್ರದಲ್ಲಿ ಸಾಧಿಸಿರುವ ಯಶಸ್ಸನ್ನು ಮರೆತುಬಿಡಬಾರದು.

೧೯೯೪ - ೯೫ ರಲ್ಲಿ ಶಿಶುಮರಣದರವನ್ನು ಕಡಿಮೆ ಮಾಡುವ ಉದ್ದೇಶದಿಂದ 'ಸುರಕ್ಷಾ' ಎಂಬ ಕಾರ್ಯಕ್ರಮವೇನೊ ಶುರುವಾಗಿದೆ. ೧೯೯೪ - ೯೫ ರಲ್ಲಿ ನೂರಕ್ಕೆ ನೂರರಷ್ಟು 'ಮಕ್ಕಳ ರೋಗನಿರೋಧ' ಸಾಧಿಸಲು ೪ ಕೋಟಿ ರೂಪಾಯಿ ಮೀಸಲಿಡಲಾಗಿದೆ. ಜನಸಂಖ್ಯೆಯಲ್ಲಿ ಶೇ ೧೦ ರಿಂದ ೧೫ ರಷ್ಟಿರುವ ಅಂದರೆ ೬೦ - ೭೦ ಲಕ್ಷದಷ್ಟಿರುವ ಮಕ್ಕಳಿಗೆಲ್ಲಾ ರೋಗನಿರೋಧ ನೀಡುವ ಕಾರ್ಯಕ್ರಮಕ್ಕೆ ಮೀಸಲಿಟ್ಟ ೪ ಕೋಟಿ ರೂಪಾಯಿ, 'ಬಕಾಸುರನ ಹೊಟ್ಟೆಗೆ ಚಮಚ ಮಜ್ಜಿಗೆ' ಎನ್ನುವಂತಿದೆ. ಒಟ್ಟಿನಲ್ಲಿ ಅಭಿವೃದ್ಧಿ ದೃಷ್ಟಿಯಿಂದ ತುಂಬಾ ಮುಖ್ಯವಾಗಿರುವ ಅಕ್ಷರ - ಆರೋಗ್ಯ ಕರ್ನಾಟಕದಲ್ಲಿ ದಿವ್ಯ ನಿರ್ಲಕ್ಷ್ಯಕ್ಕೆ ಗುರಿಯಾಗಿಬಿಟ್ಟಿವೆ.

ಕರ್ನಾಟಕದ ಕೈಗಾರಿಕಾವಲಯವನ್ನು ಕಾಡುತ್ತಿರುವ ಒಂದು ಸಮಸ್ಯೆಯೆಂದರೆ, ತೀವ್ರ ಸ್ವರೂಪದ ವಿದ್ಯುತ್ ಕೊರತೆ. ವಿದ್ಯುತ್ ಬೇಡಿಕೆ ಹಾಗೂ ನೀಡಿಕೆಗಳ ನಡುವಿನ ಅಂತರ ಶೇ. ೨೧.೯ ಎನ್ನಲಾಗಿದೆ. ಗ್ರಾಮೀಣ ವಿದ್ಯುದೀಕರಣದಲ್ಲಿ ನೂರಕ್ಕೆ ನೂರರಷ್ಟು ಯಶಸ್ಸು ಸಾಧಿಸಿ ಕರ್ನಾಟಕದಲ್ಲಿ ಹೆಮ್ಮೆಯಿಂದ ಬೀಗುತ್ತಿದೆ. ಆದರೆ ಪ್ರತಿಯೊಂದು ಗ್ರಾಮದಲ್ಲೂ ಎಷ್ಟು ಮನೆಗಳಿಗೆ ವಿದ್ಯುತ್ ಸಂಪರ್ಕ ಒದಗಿಸಲಾಗಿದೆ ಎಂದು ನೋಡಿದರೆ ಪರಿಸ್ಥಿತಿ ಸಮಾಧಾನಕರವಾಗಿಲ್ಲ. ೧೯೯೩ -೯೪ರಲ್ಲಿ ೧೫೦ ಮೆ. ವಾ. ಹೆಚ್ಚುವರಿ ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು ಅಭಿವೃದ್ಧಿ ಪಡಿಸಲಾಯಿತು. ೧೯೯೪ - ೯೫ ರಲ್ಲಿ ೨೫೦ ಮೆ. ವಾ. ವಿದ್ಯುತ್ ಸಾಮರ್ಥ್ಯ ಅಭಿವೃದ್ಧಿ ಪಡಿಸುವ ಗುರಿ ಇತ್ತು.

ಕರ್ನಾಟಕದ ವಿದ್ಯುತ್ ಕ್ಷೋಭೆ ಮುಗಿಯುವ ಕಾಲಬಂದಿದೆ ಎನ್ನಲಾಗಿದೆ. ಅಮೆರಿಕೆಯ ಒಂದು ಕಂಪನಿ [Cogentrix] ಕರ್ನಾಟಕದಲ್ಲಿ ೧೦೦೦ ಮೆ. ವಾ. ಸಾಮರ್ಥ್ಯದ ಮೂರು ಶಾಖೋತ್ಪನ್ನ ವಿದ್ಯುತ್ ಘಟಕಗಳನ್ನು ಸ್ಥಾಪಿಸಲು ಮುಂದೆ ಬಂದಿದೆ. ಮತ್ತೊಂದು ವಿದೇಶೀ ಕಂಪನಿ [Hok International] ಹೊಸಪೇಟೆಯಲ್ಲಿ ೫೦೦ ಮೆ. ವಾ. ಸಾಮರ್ಥ್ಯದ ಎರಡು ಶಾಖೋತ್ಪನ್ನ ಘಟಕ ಸ್ಥಾಪಿಸಲು ಮುಂದಾಗಿದೆ. ಅಮೆರಿಕೆಯ ಬೋಸ್ಟನ್‌ನ ಒಂದು ಕಂಪನಿ ರಾಯಚೂರಿನಲ್ಲಿ ೫೦೦ ಮೆ. ವಾ. ಸಾಮರ್ಥ್ಯದ ಎರಡು ಶಾಖೋತ್ಪನ್ನ ಘಟಕಗಳನ್ನು ನಿರ್ಮಿಸಿದೆ. ಕೃಷ್ಣಾ ನದಿಕೊಳ್ಳದಲ್ಲಿ ಮೂರು ಜಲವಿದ್ಯುತ್ ಸ್ಥಾವರಗಳನ್ನು ಅಮೆರಿಕೆಯ TAFCO ನಿರ್ಮಿಸಲಿದೆ. ಇವಲ್ಲದೆ ರಾಜ್ಯದ ವಿವಿಧ ಭಾಗಗಳಲ್ಲಿ ೧೫ ಮಿನಿ ಜಲವಿದ್ಯುತ್ ಕೇಂದ್ರ ಹಾಗೂ ೬ ಪವನಶಕ್ತಿ ಕೇಂದ್ರಗಳನ್ನು ಸ್ಥಾಪಿಸಲು ಯೋಜಿಸಲಾಗುತ್ತದೆ.

ವಿದ್ಯುತ್‌ಗೆ ಸಂಬಂಧಿಸಿದ ಕೆಲವು ಸಮಸ್ಯೆಗಳು ಹೀಗಿವೆ.

೧. ಕರ್ನಾಟಕದಲ್ಲಿ ವಿತರಣೆ ಹಾಗೂ ಸಾಗಾಣಿಕೆಯಲ್ಲಿ ಉಂಟಾಗುತ್ತಿರುವ ವಿದ್ಯುತ್ ನಷ್ಟ ಶೇ. ೨೦. ಈ ವಿದ್ಯುತ್ ನಷ್ಟವನ್ನು ತಪ್ಪಿಸಿದರೂ ಸಾಕು, ನಮ್ಮ ವಿದ್ಯುತ್ ಕೊರತೆ ಎಷ್ಟೋ ಕಡಿಮೆಯಾಗಿ ಬಿಡುತ್ತದೆ.

೨. ಕರ್ನಾಟಕದಲ್ಲಿ ೮ - ೧೦ ಶಾಖೋತ್ಪನ್ನ ಘಟಕಗಳು ನಿರ್ಮಾಣಗೊಳ್ಳಲಿವೆ. ಅವುಗಳು ಸೃಷ್ಟಿಸುವ ಪರಿಸರ ಮಾಲಿನ್ಯದ ಬಗ್ಗೆ ನಾವು ಜಾಗೃತರಾಗಿರುವಂತೆ ಕಾಣುತ್ತಿಲ್ಲ. ಕೈಗಾದಲ್ಲಿನ ಪರಮಾಣು ಸ್ಥಾವರದಲ್ಲಿ ನಿರ್ಮಾಣ ಹಂತದಲ್ಲಿದ್ದ ಗೋಪುರವೊಂದು ೧೯೯೪ರಲ್ಲಿ ಕುಸಿದು ಬಿದ್ದು ನಮ್ಮ ಭಯವನ್ನು ಹೆಚ್ಚಿಸಿದೆ.

೩. ಈ ಯೋಜಿಸಲಾಗಿರುವ ವಿದ್ಯುತ್ ಕೇಂದ್ರಗಳೆಲ್ಲಾ ಖಾಸಗಿಕ್ಷೇತ್ರದಲ್ಲಿ ವಿದೇಶಿ ಬಂಡವಾಳದ ನೆರವಿನಿಂದ ನಿರ್ಮಾಣಗೊಳ್ಳಲಿವೆ. ಈಗ ವಿದ್ಯುತ್ ನೀಡಿಕೆಯಲ್ಲಿ ಸಹಾಯಧನದ ವಿಷಯವು ರಾಜ್ಯದಲ್ಲಿ ಗಂಭೀರ ರಾಜಕೀಯ ಸ್ವರೂಪ ತಳೆಯುವ ಸಾಧ್ಯತೆ ಇದೆ.

ಈ ಸಮಸ್ಯೆಗಳನ್ನೆಲ್ಲಾ ಕರ್ನಾಟಕ ಹೇಗೆ ನಿವಾರಿಸಿ ಕೊಳ್ಳುತ್ತದೆ ಎಂಬುದನ್ನು ನಾವು ಕಾದು ನೋಡಬೇಕಾಗಿದೆ.

ಕೇಂದ್ರ ಸರ್ಕಾರವು ೧೯೯೧ರಲ್ಲಿ ಹೊಸ ಆರ್ಥಿಕನೀತಿಯನ್ನು ಜಾರಿಗೆ ತಂದಾಗಿನಿಂದ 'ವಿದೇಶಿ ಬಂಡವಾಳ'ದ ಹುಚ್ಚು ಎಲ್ಲಾ ರಾಜ್ಯ ಸರ್ಕಾರಗಳನ್ನು ಹಿಡಿದಿದೆ. ಈ ಹುಚ್ಚಿನಿಂದ ಕರ್ನಾಟಕವು ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಬಹು ರಾಷ್ಟ್ರೀಯ ಕಂಪನಿಗಳು ಕರ್ನಾಟಕದಲ್ಲಿ ಬಂಡವಾಳ ಹೂಡಲು ತುದಿಗಾಲ ಮೇಲೆ ನಿಂತಿವೆ. ಈ ಕಂಪನಿಗಳಿಗೆ ಕರ್ನಾಟಕವೆಂದರೆ ಕೇವಲ 'ಬೆಂಗಳೂರು' ಎಂಬ ಭಾವನೆ ಇದ್ದಂತಿದೆ. ವಿದ್ಯುತ್, ರಸ್ತೆ ನಿರ್ಮಾಣ, ಎಲೆಕ್ಟ್ರಾನಿಕ್ಸ್, ಮಾಹಿತಿ - ಮುಂತಾದ ಕ್ಷೇತ್ರಗಳಲ್ಲಿ ನೂರಾರು ಯೋಜನೆಗಳ ಮಾತುಗಳು ಕೇಳಿ ಬರುತ್ತಿವೆ. ೧೯೭೧ ರಿಂದಲೂ ನೆನೆಗುದಿಗೆ ಬಿದ್ದಿದ್ದ 'ವಿಜಯನಗರ ಉಕ್ಕು' ೧೯೯೪ ರಲ್ಲಿ ದಡಸೇರಿದಂತೆ ಕಾಣುತ್ತದೆ. ಜಿಂದಾಲ್ ಕಂಪನಿಯು ಸಮರೋಪಾದಿಯಲ್ಲಿ 'ವಿಜಯನಗರ ಉಕ್ಕು' ಕಾರ್ಖಾನೆಯ ನಿರ್ಮಾಣವನ್ನು ಕೈಗೆತ್ತಿಕೊಂಡಿದೆ. ಪೈಪೋಟಿ, ಲಾಭ, ಮುಕ್ತ ಮಾರುಕಟ್ಟೆ, ಉತ್ಪಾದಕತೆ, ತಂತ್ರಜ್ಞಾನ, ರಫ್ತು - ಮುಂತಾದವು ಇಂದು ಅಭಿವೃದ್ಧಿಯ ಮಾರ್ಗದರ್ಶಸೂತ್ರಗಳಾಗಿ ಬಿಟ್ಟಿವೆ. ಸಾರ್ವಜನಿಕ ವಲಯದ ಉದ್ದಿಮೆಗಳಲ್ಲಿನ ಸರ್ಕಾರದ ಬಂಡವಾಳವನ್ನು ಖಾಸಗಿಯವರ ಪರವಾಗಿ ವಿಸರ್ಜಿಸುವ ಕೆಲಸದಲ್ಲಿ ಸರ್ಕಾರವು ನಿರತವಾಗಿದೆ. ಉದ್ದಿಮೆಗಳನ್ನು ದಕ್ಷತೆಯಿಂದ ನಿರ್ವಹಿಸಲು ವಿಫಲವಾದ ಸರ್ಕಾರವು, ಸಾರ್ವಜನಿಕ ಆಡಳಿತವನ್ನು ನಿಯತ್ತಿನಿಂದ ನಿರ್ವಹಿಸಬಲ್ಲುದೆ ಎಂಬ ಪ್ರಶ್ನೆಯನ್ನು ಯಾರೂ ಕೇಳುತ್ತಿಲ್ಲ ಎಂಬುದೇ ಇಲ್ಲಿನ ವ್ಯಂಗ್ಯ. ಸಾರ್ವಜನಿಕ ವಲಯದ ಉದ್ದಿಮೆಗಳನ್ನು ಖಾಸಗಿಕ್ಷೇತ್ರಕ್ಕೆ ವಿಕ್ರಯಿಸಲು ಸಿದ್ಧವಾಗಿರುವ ಜನರು, ಸಾರ್ವಜನಿಕ ಆಡಳಿತದ ಬಗ್ಗೆ ತುಟಿ ಬಿಚ್ಚುತ್ತಿಲ್ಲ. ಆಡಳಿತದ ಖಾಸಗೀಕರಣಕ್ಕೂ ನಾವು ತಯಾರಿದ್ದೇವೇನು?

# ವಿಜ್ಞಾನ - ತಂತ್ರಜ್ಞಾನಗಳ ವಿದ್ಯಮಾನಗಳು

*ಡಿ. ಆರ್. ಬಳೂರಗಿ*

---

ಲೌಕಿಕ ವಿಷಯಗಳಲ್ಲಿ ಆಸಕ್ತಿಯಿಲ್ಲದ ಯಾರೋ ನಾಲ್ಕಾರು ಜನ ಅರೆಹುಚ್ಚರು ನಿರುಪಯುಕ್ತ ವಿಷಯಗಳ ಬಗ್ಗೆ ತಲೆಕೆಡಿಸಿಕೊಂಡು ನಡೆಸುವ ವಿಚಾರ ಮಥನವೇ 'ವಿಜ್ಞಾನ' ವೆಂದು ಬಹುಕಾಲದ ಹಿಂದಿನ ಭಾವನೆಯಾಗಿತ್ತು. ಆದರೆ ಇಂದು ಈ ಭಾವನೆ ಬದಲಾಗಿದೆ. ವಿಜ್ಞಾನ ಶಿಕ್ಷಣಕ್ಕೆ ಸಾಕಷ್ಟು ಮಹತ್ವ ದೊರತಿದೆ. ಕಲೆ, ಸಾಹಿತ್ಯದಂತೆ ವಿಜ್ಞಾನ - ತಂತ್ರಜ್ಞಾನ ಸಹ ನಮ್ಮ ಜೀವನದ ಪ್ರಸ್ತುತ ವಿಷಯಗಳಲ್ಲೊಂದಾಗಿ ಪರಿಣಮಿಸಿದೆ. ಸಾಮಾನ್ಯ ಜನರೂ ಸಹ ವಿಜ್ಞಾನ -ತಂತ್ರಜ್ಞಾನದ ವಿದ್ಯಮಾನಗಳನ್ನು ಅರಿತುಕೊಳ್ಳುವಲ್ಲಿ ಕುತೂಹಲ ತೋರ್ಪಡಿಸುತ್ತಿದ್ದಾರೆ. ಅವರ ಕುತೂಹಲ ತಣಿಸುವ ಯತ್ನಗಳೂ ನಡೆದಿವೆ. ವಿಜ್ಞಾನವನ್ನು ಸಾಮಾನ್ಯರಿಗೆ ತಿಳಿಸುವುದು ಸಾಧ್ಯವೇ ಇಲ್ಲವೆಂದು ಒಂದು ಕಾಲದಲ್ಲಿ ತಿಳಿಯಲಾಗಿತ್ತು. ಇಂದು ಆ ಭಾವನೆಯಲ್ಲಿ ಸಹ ಬದಲಾವಣೆಯಾಗಿದೆ. ಯಾಕೆಂದರೆ ನಾವು ಒಂದು ಕಾವ್ಯವನ್ನು ಓದಿ, ಅರ್ಥಮಾಡಿಕೊಂಡು ಆನಂದಿಸುತ್ತೇವೆ. ಹಾಗೆ ಆನಂದಿಸಲು ನಾವು ಕವಿಗಳೇ ಆಗಿರಬೇಕಿಲ್ಲ. ಒಳ್ಳೆಯ ಸಂಗೀತವನ್ನಾಲಿಸಿ ಸಂತೋಷಪಡುತ್ತೇವೆ. ಹಾಗೆ ಸಂತೋಷಪಡಲು ನಾವು ಆ ಮಟ್ಟದ ಸಂಗೀತಗಾರರಾಗಿರಬೇಕಿಲ್ಲ. ಅದೇ ರೀತಿ ವಿಜ್ಞಾನದ ಸಾಧನೆಗಳನ್ನರಿಯಲು ಸಂಶೋಧನಾನಿರತ ವಿಜ್ಞಾನಿಯಾಗಿರಬೇಕಾದ ಅಗತ್ಯವಿಲ್ಲ. ಅದಕ್ಕಾಗಿ ಮುಖ್ಯವಾಗಿ ಆಗಬೇಕಾದುದೇನೆಂದರೆ, ವಿಜ್ಞಾನ ಲೇಖಕರು ವೈಜ್ಞಾನಿಕ ಸಾಧನೆಗಳನ್ನು ಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಹೇಳಲು, ನಾಲ್ಕು ಮೆಟ್ಟಿಲು ಕೆಳಗಿಳಿದು ಬರಬೇಕು. ಹಾಗೆಯೆ ಸಾಮಾನ್ಯ ಓದುಗರು ಅದನ್ನರಿತುಕೊಳ್ಳಲೋಸುಗ ಆಸಕ್ತಿವಹಿಸಿ ನಾಲ್ಕು ಮೆಟ್ಟಿಲು ಮೇಲೇರಬೇಕು. ಇದರ ಫಲವಾಗಿ ಇಂದು ಜಗತ್ತಿನಾದ್ಯಂತ ವಿವಿಧ ಭಾಷೆಗಳಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯ ಬೆಳೆಯುತ್ತಲಿದೆ. ಪ್ರಸ್ತುತ ಲೇಖನದಲ್ಲಿ ಸಹ ಈ ಅಂಶವನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ.

ವಿಜ್ಞಾನ -ತಂತ್ರಜ್ಞಾನ ಕ್ಷೇತ್ರ ಸಾರ್ವತ್ರಿಕವಾದದ್ದು. ಅದು ಒಂದು ದೇಶದ, ಒಂದು ಭಾಷೆಯ ಗುತ್ತಿಗೆಯಲ್ಲ. ಈ ಕ್ಷೇತ್ರದಲ್ಲಿಂದು ನಡೆಯುತ್ತಿರುವ ಪ್ರಗತಿ ಎಷ್ಟು ತೀವ್ರಗತಿಯಲ್ಲಿದೆಯೆಂದರೆ, ವಿಜ್ಞಾನದ ಒಂದೊಂದು ಶಾಖೆಯಲ್ಲಿಯೇ ಪ್ರತಿದಿನ ನೂರಾರು ಸಂಶೋಧನಾ ಲೇಖನಗಳು ಪ್ರಕಟವಾಗುತ್ತಿವೆ. ನಮ್ಮ ದೇಶ, ನಮ್ಮ ರಾಜ್ಯ ಕೂಡ ಈ ದಿಸೆಯಲ್ಲಿ ಹಿಂದುಳಿದಿಲ್ಲ. ಕಳೆದ ವರ್ಷ ಕನ್ನಡನಾಡಿನಲ್ಲಿ ನಡೆದ ವೈಜ್ಞಾನಿಕ

ಪ್ರಗತಿ - ಸಾಧನೆಗಳ ಸ್ಥೂಲ ಪರಿಚಯ ಮಾಡಿಕೊಡುವದು ಪ್ರಸ್ತುತ ಲೇಖನ ಉದ್ದೇಶವಾಗಿದೆ.

**ವಿಜ್ಞಾನದ ಕಾಶಿ ಕರ್ನಾಟಕ**

ನಮ್ಮ ರಾಜ್ಯದಲ್ಲಿ ನಡೆಯುವ ವಿಜ್ಞಾನ ತಂತ್ರಜ್ಞಾನದ ವಿದ್ಯಮಾನಗಳು, ನಮ್ಮ ದೇಶದಲ್ಲಿ ನಡೆಯುವ ವಿದ್ಯಮಾನಗಳೊಂದಿಗೆ ಒತ್ತಾಗಿ ಹೆಣೆದುಕೊಂಡಿದೆ. ನಮ್ಮ ದೇಶದ ಪ್ರತಿಷ್ಠಿತ, ಮಹತ್ವದ ವೈಜ್ಞಾನಿಕ ಸಂಸ್ಥೆಗಳು - ಸಂಶೋಧನಾಲಯಗಳು ನಮ್ಮ ರಾಜ್ಯ - ಕರ್ನಾಟಕದಲ್ಲಿವೆ. ವೈಮಾನಿಕ ಕಾರಖಾನೆ ಹೆಚ್. ಎ. ಎಲ್ (Hindustan Aircraft Ltd) ರಾಷ್ಟ್ರೀಯ ವೈಮಾನಿಕ ಪ್ರಯೋಗಾಲಯ ಎನ್. ಎ. ಎಲ್ (National Aerospace Laboratory), ಭಾರತೀಯ ವಿಜ್ಞಾನ ಮಂದಿರ ಐ. ಐ. ಎಸ್ (Indian Institute of Science), ಭಾರತೀಯ ಇಲೆಕ್ಟ್ರಾನಿಕ್ಸ್ ಬಿ. ಇ. ಎಲ್ (Bharat Electronic Ltd), ಭಾರತೀಯ ಅಂತರಿಕ್ಷ ಸಂಶೋಧನಾ ಸಂಸ್ಥೆ ಇಸ್ರೋದ (Indian Space Research Organisation) ಪ್ರಧಾನ ಕಚೇರಿ, ಗಡಿಯಾರದ ಕಾರ್ಖಾನೆ ಹೆಚ್. ಎಂ. ಟಿ (Hindustan Machine Tools) ಇವೆಲ್ಲ ಬೆಂಗಳೂರಿನಲ್ಲಿವೆ. ಭೂಕಂಪ ಮಾಪನಕೇಂದ್ರ ಗೌರಿಬಿದನೂರಿನಲ್ಲೂ, ಕೇಂದ್ರೀಯ ಆಹಾರ ಸಂಶೋಧನಾಲಯ ಮೈಸೂರಿನಲ್ಲೂ ಇವೆ. ಈ ಸಂಸ್ಥೆಗಳಲ್ಲಿ ಸಾವಿರಾರು ಜನ ಕನ್ನಡಿಗರು ಕೆಲಸಮಾಡುತ್ತಿದ್ದಾರೆ. ಅವರಲ್ಲಿ ಅನೇಕರು ಹೆಸರಾಂತ ವಿಜ್ಞಾನಿಗಳು, ತಂತ್ರಜ್ಞರು, ಅಂತರರಾಷ್ಟ್ರೀಯ ಖ್ಯಾತಿಗಳಿಸಿದವರು. ಪ್ರೊ| ಯು. ಆರ್. ರಾವ್ ಸುಮಾರು ವರ್ಷಕಾಲ ಇಸ್ರೋದ ಅಧ್ಯಕ್ಷರಾಗಿದ್ದರು. ಕನ್ನಡದ ಖ್ಯಾತ ವಿಜ್ಞಾನ ಲೇಖಕ ಪ್ರೊ| ಆರ್. ಎಲ್. ನರಸಿಂಹಯ್ಯನವರ ಪುತ್ರ, ಪ್ರೊ| ಆರ್. ನರಸಿಂಹ ಅವರು ಒಂಬತ್ತು ವರ್ಷಕಾಲ ರಾಷ್ಟ್ರೀಯ ವೈಮಾನಿಕ ಪ್ರಯೋಗಾಲಯದ ನಿರ್ದೇಶಕರಾಗಿದ್ದರು. ಪ್ರೊ| ಸಿ. ಎನ್. ಆರ್. ರಾವ್ ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕರಾಗಿದ್ದು, ಕಳೆದ ವರ್ಷವಷ್ಟೇ ನಿವೃತ್ತರಾದರು. ಇವು ಕೆಲ ಉದಾಹರಣೆಗಳು ಮಾತ್ರ. ಇನ್ನೂ ಸಾಕಷ್ಟು ಕನ್ನಡಿಗರು ಈ ಸಂಸ್ಥೆಗಳಲ್ಲಿ ಮಹತ್ವದ ಸ್ಥಾನಗಳನ್ನು ಅಲಂಕರಿಸಿದ್ದಾರೆ ಮತ್ತು ನಮ್ಮ ದೇಶದ ವೈಜ್ಞಾನಿಕ ಪ್ರಗತಿಗೆ ಗಮನಾರ್ಹ ಕೊಡುಗೆ ನೀಡಿದ್ದಾರೆ. ಈ ಪ್ರತಿಷ್ಠಿತ ಸಂಸ್ಥೆಗಳು ಕೇಂದ್ರ ಸರಕಾರದ ಆಧೀನದಲ್ಲಿದ್ದರೂ, ಕನ್ನಡ ಭಾಷೆಗೆ ಅವು ಸಾಕಷ್ಟು ಪ್ರೋತ್ಸಾಹ ನೀಡುತ್ತಲಿವೆ. ಪ್ರತಿಯೊಂದು ಸಂಸ್ಥೆಯಲ್ಲೂ ಕನ್ನಡ ಸಂಘಗಳಿವೆ. ಎಲ್ಲ ಭಾಷಿಕರು ಸೇರಿಕೊಂಡು ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತಾರೆ. ಕನ್ನಡದಲ್ಲಿ ಪತ್ರಿಕೆಗಳನ್ನು ಪ್ರಕಟಿಸುತ್ತಾರೆ. ಇದು ನಿಜಕ್ಕೂ ಸಂತೋಷ ತರುವ ಸಂಗತಿ. ಕನ್ನಡ ನಾಡಿನಲ್ಲಿ ಬೇರೂರಿದ ಈ ಸಂಸ್ಥೆಗಳು, ಸಂಶೋಧನಾಲಯಗಳು ಕಳೆದ ವರ್ಷ ಸ್ಥಾಪಿಸಿದ ಪ್ರಗತಿಯ ಸ್ಥೂಲ ಚಿತ್ರಣವನ್ನಿಲ್ಲಿ ಕೊಡಲು ಪ್ರಯತ್ನಿಸಲಾಗಿದೆ.

**ಸಂಶೋಧನೆ - ಸಾಧನೆ**

ಭಾರತೀಯ ವಿಮಾನ ಕಾರ್ಖಾನೆ (HAL) ನಮ್ಮ ರಾಜ್ಯದ ಹಳೆಯ ಸಂಸ್ಥೆಗಳಲ್ಲೊಂದು. ಅದು ಸ್ವಾತಂತ್ರ್ಯಪೂರ್ವ ಅಂದರೆ, ೧೯೪೦ರಲ್ಲಿ ಮೈಸೂರು ಸರಕಾರದ ಸಹಯೋಗದೊಡನೆ ಆರಂಭವಾಯಿತು. ಅನಂತರ ಭಾರತ ಸರ್ಕಾರದ ಒಡೆತನಕ್ಕೆ ಸೇರಿತು. ಅಂದಿನಿಂದ ಇಂದಿನವರೆಗೆ ಅದು, ಸುಮಾರು ೩೦೦೦ ದಷ್ಟು ವಿಮಾನಗಳನ್ನು, ಹೆಲಿಕಾಪ್ಟರುಗಳನ್ನು ನಿರ್ಮಿಸಿದೆ. ೨೭೦೦ ರಷ್ಟು ಉನ್ನತ ತಂತ್ರಜ್ಞಾನದ ಜೆಟ್ ಎಂಜಿನ್‌ಗಳನ್ನು ನಿರ್ಮಾಣಮಾಡಿದೆ. ಪ್ರತಿವರ್ಷ ಹೆಚ್ ಎ ಎಲ್ ಸುಮಾರು ೬೦೦ ಕೋಟಿ ರೂಪಾಯಿಗಳಷ್ಟು ವಿದೇಶಿ ವಿನಿಮಯ ಉಳಿಸಿಕೊಡುತ್ತದೆ. ೧೯೯೪ ರಲ್ಲಿ ಅದು ತನ್ನದೇ ವಿನ್ಯಾಸ ರಚಿಸಿ ಹಗುರಾದ ಹೆಲಿಕಾಪ್ಟರನ್ನು ಯಶಸ್ವಿಯಾಗಿ ನಿರ್ಮಿಸಿತು. ಅದರ ಹೆಸರು ALH. ಅಂದರೆ Advanced Light Helicopter. ಇದನ್ನು ಹೆಚ್ ಎ ಎಲ್. ನ ಮಹತ್ವದ ಸಾಧನೆಯೆಂದು ಪರಿಗಣಿಸಲಾಗಿದೆ. ALH ನಾಗರಿಕ ಮತ್ತು ರಕ್ಷಣೆ, ಎರಡೂ ಉದ್ದೇಶಗಳಿಗೆ ಪ್ರಯೋಜನಕಾರಿಯಾಗಿದೆ.

ನೆದರ್‌ಲ್ಯಾಂಡಿನ ಫಾಕರ್ ವಿಮಾನ ಕಾರ್ಖಾನೆ, ತನ್ನ ಫಾಕರ್ - ೫೦ ವಿಮಾನಗಳಿಗೆ ಕ್ಷಿತಿಜ ಸಮಾಂತರ ಸ್ಟೆಬಿಲೈಜರ್ ತಯಾರಿಸಿಕೊಡಲು ಹೆಚ್ ಎ ಎಲ್ ಅನ್ನು ಕೇಳಿಕೊಂಡಿತ್ತು. ಹೆಚ್ ಎ ಎಲ್ ಈ ಕಾರ್ಯವನ್ನು ನಿಗದಿತ ಅವಧಿಗಿಂತ



ಮೊದಲೇ, ಅಂದರೆ ೧೯೯೪ರ ಆಗಸ್ಟ್ ತಿಂಗಳಿನಲ್ಲಿ ಈ ಕಾರ್ಯವನ್ನು ಪೂರೈಸಿತು. ಅಲ್ಲದೆ ನೆದರ್‌ಲ್ಯಾಂಡ್ಸ್‌ನ ಫಾಕರ್ ಕಂಪನಿಯ ಮೆಚ್ಚುಗೆಯನ್ನೂ ಗಳಿಸಿತು.

ಹೆಚ್ ಎ ಎಲ್‌ನಲ್ಲಿ ವಿಮಾನ- ಹೆಲಿಕಾಪ್ಟ್‌ರುಗಳ ದುರಸ್ತಿ, ನಿರ್ಮಾಣ ಮತ್ತು ನಿರ್ವಹಣೆಯ ಕಾರ್ಯ್ನ ನಡೆಯುತ್ತಿದ್ದರೆ, ರಾಷ್ಟ್ರೀಯ ವೈಮಾನಿಕ ಪ್ರಯೋಗ ಶಾಲೆಯಲ್ಲಿ ವಾಯುಮಾನಕ್ಕೆ ಸಂಬಂಧಿಸಿದ ಮೂಲಭೂತ ಪ್ರಯೋಗಗಳು ನಡೆಯುತ್ತಿವೆ. ಭಾರತೀಯ ವೈಜ್ಞಾನಿಕ ಮತ್ತು ಔದ್ಯೋಗಿಕ ಸಂಶೋಧನಾ ಮಂಡಳಿಯ ಆಶ್ರಯದಲ್ಲಿ, ೧೯೬೦ ರಲ್ಲಿ ಈ ಪ್ರಯೋಗಾಲಯ ಬೆಂಗಳೂರಿನಲ್ಲಿ ಸ್ಥಾಪನೆಗೊಂಡಿತು. ಕಳೆದ ಮೂವತ್ತೈದು ವರ್ಷಗಳಲ್ಲಿ ಎನ್ ಎ ಎಲ್ ಸಾಧನೆ ಅಂತರ್ ರಾಷ್ಟ್ರೀಯ ಮನ್ನಣೆಗಳಿಸಿದೆ. ಇದು ವಾಯುವಿಜ್ಞಾನಕ್ಕೆ ಸಂಬಂಧಿಸಿದ ಅನೇಕ ಜಟಿಲ ಸಮಸ್ಯೆಗಳನ್ನು ಕುರಿತು ಸಂಶೋಧನೆ ನಡೆಸಿ ಅವಕ್ಕೆ ಪರಿಹಾರ ಸೂಚಿಸಿದೆ. ಕಳೆದ ವರ್ಷ ಈ ಪ್ರಯೋಗಾಲಯ ಗಳಿಸಿದ ಲಾಭ ೭೯ ಕೋಟಿ ರೂಪಾಯಿಗಳು! ರಾಷ್ಟ್ರೀಯ ವೈಮಾನಿಕ ಶಾಲೆ ಕಳೆದ ವರ್ಷದಲ್ಲಿ ಮಾಡಿದ ಎರಡು ಗಮನಾರ್ಹ ಸಾಧನೆಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಒಂದು: ಹಂಸ - ೨ ಎಂಬ ಹೆಸರಿನ ವಿಮಾನ. ಇದು ಎಳೆಗಾಜಿನ ಪ್ಲಾಸ್ಟಿಕ್ ವಸ್ತುವಿನಿಂದ ನಿರ್ಮಿಸಲಾದ ಹಗುರಾದ ವಿಮಾನ. ಈ ವಿಮಾನದ ಉಡ್ಡಯನ ತೃಪ್ತಿಕರವಾಗಿದ್ದು, ಇದನ್ನು ಟಾಲ್ (TAAL - Taneja Aero space and Aviation Limited) ಸಂಸ್ಥೆಗಾಗಿ ಎನ್ ಎ ಎಲ್ ನಿರ್ಮಿಸಿಕೊಟ್ಟಿದೆ. ಇದರ ವಿನ್ಯಾಸ ನಿರ್ಮಾಣ, ಬಳಸಿದ ವಸ್ತುಗಳು, ತಂತ್ರಜ್ಞಾನ ಸಂಪೂರ್ಣವಾಗಿ ಎನ್ ಎ ಎಲ್‌ನದು. ಇನ್ನೊಂದು ೧/೧೫ ಸ್ಕೇಲ್ ಎಲ್ ಸಿ ಎ ಭ್ರಮಣ ಮುಕ್ತ ಮಾದರಿ. ಇದು ವಿಮಾನದ ಮಾದರಿಯ ಹೆಸರು. ಈ ಮಾದರಿ ೪ ಕಿಲೋಗ್ರಾಂ ಭಾರವಾಗಿದ್ದು, ೦.೯ ಮೀಟರ್ ಉದ್ದವಾಗಿದೆ. ಇದನ್ನು ದಕ್ಷತೆ ಮತ್ತು ಸಾಮರ್ಥ್ಯದ ಪರೀಕ್ಷೆಗಾಗಿ ರಶಿಯಾಕ್ಕೆ ಕಳಿಸಲಾಗಿದೆ. ಈ ಮಾದರಿಯ ವೈಶಿಷ್ಟ್ಯವೆಂದರೆ, ಇದರ ನಿರ್ಮಾಣಕ್ಕೆ ಬಳಸಿದ ವಸ್ತುವಿನದು. ಒಂದು ವಿಶಿಷ್ಟ ಬಗೆಯ ಕಾರ್ಬನ್ ಸಂಯುಕ್ತವನ್ನು ತಯಾರಿಸಿ, ಅದರಿಂದ ಈ ವಿಮಾನದ ಮಾದರಿಯನ್ನು ನಿರ್ಮಿಸಲಾಗಿದ್ದೆ.

ನಮ್ಮ ದೇಶದ ಇನ್ನೊಂದು ಪ್ರತಿಷ್ಠಿತ ಸಂಸ್ಥೆಯಾದ ಇಸ್ರೋ ಮತ್ತು ಅಂತರಿಕ್ಷ ಆಯೋಗದ ಪ್ರಧಾನ ಕಚೇರಿಗಳು ಬೆಂಗಳೂರಿನಲ್ಲಿವೆ. ಕಳೆದ ವರ್ಷ ಇಸ್ರೋದ ಪ್ರಮುಖ ಸಾಧನೆ ಎ ಎಸ್ ಎಲ್ ವಿ- ಡಿ 4 ರ ಯಶಸ್ವಿ ಉಡಾವಣೆ. ಈ ಉಡಾವಣಾ ವಾಹನದಿಂದ ೧೯೯೪ ರ ಮೇ ತಿಂಗಳ ೪ ರಂದು ಸ್ರೋಸ್ -ಸಿ ೨ ಉಪಗ್ರಹವನ್ನು ಭೂಮಿಯಿಂದ ೪೦೦ ಕಿಲೋಮೀಟರ್ ದೂರದ ಕಕ್ಷೆಗೆ ಯಶಸ್ವಿಯಾಗಿ ಸೇರಿಸಲಾಯಿತು. ಎ ಎಸ್ ಎಲ್ ವಿ - ಡಿ ೪ ಉಡಾವಣಾ ವಾಹನದ ಎತ್ತರ ೨೩.೮ ಮೀಟರುಗಳು ಮತ್ತು ಭಾರ ೪೧.೭ ಟನ್ನುಗಳು. ಉಪಗ್ರಹದ ಎತ್ತರ ೮೬೫ ಮಿಮೀ. ಅಗಲ ೩೨೦ ಮಿಮೀ. ಭಾರ ೧೧೩ ಕಿಲೋಗ್ರಾಂ. ಬಾಹ್ಯಾಕಾಶದಲ್ಲಿಯ ಗಾಮಾ ಕಿರಣಗಳ ಅಧ್ಯಯನ, ಅಯಾನುಗೋಲದಲ್ಲಿರುವ ಇಲೆಕ್ಟ್ರಾನುಗಳ, ಅಯಾನುಗಳ ಸಾಂದ್ರತೆ ಮತ್ತು ಉಷ್ಣತೆಯನ್ನು ಅಳತೆಮಾಡುವದು ಸ್ರೋಸ್ -ಸಿ ೨ ಉಪಗ್ರಹದ

ಉದ್ದೇಶವಾಗಿದೆ. ಈ ಉಪಗ್ರಹದ ಜೀವಾಳ ನಿಕ್ಕೆಲ್ -ಕ್ಯಾಡ್ಮಿಯ ವಿದ್ಯುತ್ಕೋಶದ ವಿನ್ಯಾಸ ಮತ್ತು ನಿರ್ಮಾಣ ಸಂಪೂರ್ಣವಾಗಿ ನಮ್ಮದೇ ಆಗಿದೆ. ಇದನ್ನು ತಿರುವನಂತಪುರದಲ್ಲಿರುವ ವಿಕ್ರಂ ಸಾರಾಭಾಯಿ ಬಾಹ್ಯಾಕಾಶ ಕೇಂದ್ರದ ವಿಜ್ಞಾನಿಗಳು ತಯಾರಿಸಿದ್ದಾರೆ.



೧೯೯೪ರ ಮೇ ೪ ರಂದು ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ ಉಡಾಯಿಸಿದ ಸ್ರೋಸ್ -ಸಿ೨ ಉಪಗ್ರಹ.

ನಮ್ಮ ದೇಶದಲ್ಲಿಯೇ ಇಲೆಕ್ಟ್ರಾನಿಕ್ಸ್ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿರುವದು ಬೆಂಗಳೂರಿನ ಭಾರತ್ ಇಲೆಕ್ಟ್ರಾನಿಕ್ಸ್ ಕಂಪನಿ. ಇದು ಸ್ಥಾಪನೆಗೊಂಡದ್ದು ೧೯೫೪ರಲ್ಲಿ. ಕಳೆದ ೪೦ ವರ್ಷಗಳಲ್ಲಿ ಬಿ ಇ ಎಲ್ ಸಾಧಿಸಿದ ಪ್ರಗತಿ ಅದ್ಭುತವಾದದ್ದು. ರಕ್ಷಣಾ ಇಲಾಖೆಗೆ ಅಗತ್ಯವಿರುವ ರಾಡಾರ್ ಮತ್ತು ಸಂಪರ್ಕ ಉಪಕರಣಗಳನ್ನು ಅದು ಒದಗಿಸಿದೆ. ಆಕಾಶವಾಣಿಯ ಪ್ರೇಕ್ಷಣ ಕೇಂದ್ರದ ಯಂತ್ರೋಪಕರಣಗಳು, ದೂರದರ್ಶನದ ಸ್ಟುಡಿಯೋ ಉಪಕರಣಗಳು, ಉಪಗ್ರಹ ಜೋಡಣಾ ಜಾಲ, ಟಿ. ವಿ. ಟ್ಯೂಬು ಇವೆಲ್ಲ ಬಿ ಇ ಎಲ್ ನಿರ್ಮಿತವಾದವುಗಳು. ಹವಾಮಾನ ಇಲಾಖೆಗೆ ಬೇಕಾದ ಬಿರುಗಾಳಿ ಮುನ್ಸೂಚನೆ ನೀಡಬಲ್ಲ ರಾಡಾರ್, ವೈದ್ಯಕೀಯ ಕ್ಷೇತ್ರಕ್ಕೆ ಅಗತ್ಯವಿರುವ ಎಕ್ಸ್ -ಕಿರಣ ಉಪಕರಣ, ಟೆಲಿಫೋನ್ ಉದ್ದಿಮೆಗೆ ಅಗತ್ಯವಿರುವ ಇಂಟಿಗ್ರೇಟೆಡ್ ಸರ್ಕ್ಯೂಟ್ (IC), ದ್ರವ ಸ್ಫಟಿಕ ಪ್ರದರ್ಶಕಗಳು (Liquid Crystal Display), ರೊಬೊಟ್, ಕಂಪ್ಯೂಟರ್, ಹೀಗೆ ಬಿ ಇ ಎಲ್ ಕೈಹಾಕದ ಕ್ಷೇತ್ರವೇ ಇಲ್ಲ. ಕಳೆದ ಸಾಲಿನಲ್ಲಿ ಭಾರತ ಇಲೆಕ್ಟ್ರಾನಿಕ್ಸ್ ನಡೆಸಿದ ಒಟ್ಟು ವಹಿವಾಟು ೮೫೦ ಕೋಟಿ

ರೂಪಾಯಿಗಳು. ಅದರಲ್ಲಿ ನಿವ್ವಳ ಲಾಭವೇ ೩೯ಲ ಕೋಟಿ ರೂಪಾಯಿಗಳಷ್ಟು. ಭಾರತ ಇಲೆಕ್ಟ್ರಾನಿಕ್ಸ್‌ನಂತೆ ಲಾಭದಾಯಕವಾಗಿ ನಡೆದ ಇನ್ನೆರಡು ಸಂಸ್ಥೆಗಳೆಂದರೆ, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಮತ್ತು ಹೆಚ್ ಎಂ ಟಿ ಕಾರ್ಖಾನೆಗಳು.

ಭಾರತೀಯ ವಿಜ್ಞಾನ ಮಂದಿರ ಅಥವಾ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್, ರಾಮನ್ ಸಂಶೋಧನಾಲಯ ನಮ್ಮ ದೇಶದ ಪ್ರತಿಷ್ಠಿತ ವಿಜ್ಞಾನ ಸಂಸ್ಥೆಗಳು. ಈ ಸಂಸ್ಥೆಗಳಲ್ಲಿ ಶುದ್ಧ ಮತ್ತು ಅನ್ವಯಕ ವಿಜ್ಞಾನ ಕುರಿತು ಸಂಶೋಧನೆಗಳು ನಡೆಯುತ್ತಿವೆ. ರಾಮನ್ ಸಂಶೋಧನಾಲಯದಲ್ಲಿ ಖಭೌತ ವಿಜ್ಞಾನ, ತಾತ್ವಿಕ ಭೌತ ವಿಜ್ಞಾನ ಮತ್ತು ದ್ರವಸ್ಫಟಿಕ ವಿಜ್ಞಾನಶಾಖೆಗಳಲ್ಲಿ ಸಂಶೋಧನೆಗಳು ನಡೆಯುತ್ತಿದ್ದು, ಆ ಫಲಿತಾಂಶಗಳು ಅಂತರರಾಷ್ಟ್ರೀಯ ಮನ್ನಣೆಗಳಿಸಿವೆ. ರಾಮನ್ ಸಂಶೋಧನಾಲಯದ ಸಹಯೋಗದೊಡನೆ ಗೌರಿಬಿದನೂರಿನ ಬಳಿ ರೇಡಿಯೋ ದೂರದರ್ಶಕವೊಂದನ್ನು ಉತ್ಸರ್ಜಿಸುವ ಕ್ವಾಸಾರ, ಪಲ್ಸಾರ್‌ನಂತಹ ಆಕಾಶಕಾಯಗಳ ಅಧ್ಯಯನ ಸಾಧ್ಯವಾಗಿದೆ. ಭಾರತೀಯ ವಿಜ್ಞಾನ ಮಂದಿರವಂತೂ ಸುಮಾರಾಗಿ ವಿಜ್ಞಾನದ ಎಲ್ಲ ಶಾಖೆಗಳನ್ನೂ ಒಳಗೊಂಡಿದೆ. ಅಲ್ಲಿ ನಡೆಯುವ ಸಂಶೋಧನೆಗಳು ಅಂತರರಾಷ್ಟ್ರೀಯ ಮಟ್ಟದವು. ಅಲ್ಲದೆ ಭಾರತೀಯ ವಿಜ್ಞಾನ ಮಂದಿರಲ್ಲಿ ಎರಡು ವಿಶಿಷ್ಟಶಾಖೆಗಳಿವೆ. ಒಂದು ಅಸ್ತ್ರ, ಇನ್ನೊಂದು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾಮಂಡಳಿ. ಇವುಗಳ ಉದ್ದೇಶ ಸಹ ವೈಶಿಷ್ಟ್ಯ ಪೂರ್ಣವಾದದ್ದು. ಅಸ್ತ್ರ ಎಂಬುದು Application of science and Technology for Rural Areas ಎಂಬ ಆಂಗ್ಲ ಭಾಷಾ ಪದಸಮುಚ್ಚಯದ ಪ್ರಥಮಾಕ್ಷರಿಗಳನ್ನು ಸೇರಿಸಿ ರಚಿಸಿದ ಹ್ರಸ್ವರೂಪ. ಗ್ರಾಮೀಣ ಜನರ ಸೌಲಭ್ಯಕ್ಕಾಗಿ ಪ್ರಯೋಜನವಾಗುವಂತಹ ಸಂಶೋಧನೆಗಳನ್ನು ವಿಜ್ಞಾನ -ತಂತ್ರಜ್ಞಾನ ಕ್ಷೇತ್ರದಲ್ಲಿ ನಡೆಸುವದು ಅಸ್ತ್ರ ಸಂಸ್ಥೆಯ ಉದ್ದೇಶ. ಅವರ ಸಂಶೋಧನೆಗಳ ಪೈಕಿ ಕಡಿಮೆ ಬೆಲೆಯಲ್ಲಿ ಮನೆಗಳ ನಿರ್ಮಾಣ, ಉರುವಲಿನ ಸಂಪೂರ್ಣ ಪ್ರಯೋಜನ ಪಡೆಯಬಲ್ಲ ಸ್ಟೋವ್ (Wood stove), ಬತ್ತಿಟ್ಟಿಗೆ, ಹೀಗೆ ಕೆಲವನ್ನು ಹೆಸರಿಸಬಹುದು. ಸರಕಾರವೇ ಮುತುವರ್ಜಿವಹಿಸಿ ಹಳ್ಳಿ ಹಳ್ಳಿಗಳಲ್ಲಿ ನಿರ್ಮಿಸಿದ ಅಸ್ತ್ರಒಲೆ, ಅಸ್ತ್ರ ಸಂಸ್ಥೆಯದೇ ಸೃಷ್ಟಿ ಎಂಬುದನ್ನಿಲ್ಲಿ ಸ್ಮರಿಸಬಹುದು.

ಅದೇ ರೀತಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಲಿ, ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬಳಸಿ ಕರ್ನಾಟಕ ರಾಜ್ಯದ ಅಭಿವೃದ್ಧಿ ಸಾಧಿಸುವ ಕುರಿತು ಶ್ರಮಿಸುತ್ತಿದೆ. ರಾಜ್ಯದ ವಿವಿಧ ಎಂಜಿನಿಯರಿಂಗ್ ಕಾಲೇಜುಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಆರ್ಥಿಕ ಸಹಾಯ ನೀಡಿ, ಅವರು ಸಣ್ಣ ಪುಟ್ಟ ಜನಪರ ವೈಜ್ಞಾನಿಕ ಸಂಶೋಧನೆಗಳನ್ನು ನಡೆಸುವಂತೆ ಈ ಮಂಡಲಿ ಪ್ರೋತ್ಸಾಹಿಸುತ್ತದೆ. ಅದರ ಫಲವಾಗಿ ಅನೇಕ ಕೃಷಿ ಉಪಕರಣಗಳು ಸೃಷ್ಟಿಯಾಗಿದ್ದು, ಇದರಿಂದ ನಮ್ಮ ರೈತರಿಗೆ ಸಾಕಷ್ಟು ಪ್ರಯೋಜನವಾಗಿದೆ. ನಮ್ಮ ರಾಜ್ಯದಲ್ಲಿ ವಾತಾವರಣ ದೂಷಿತಗೊಳ್ಳುವದನ್ನು ನಿಯಂತ್ರಿಸುವ ಕುರಿತು, ಸೌರಶಕ್ತಿ, ಗಾಳಿಶಕ್ತಿ ಮುಂತಾದ

ಅಸಾಂಪ್ರದಾಯಕ ಶಕ್ತಿಮೂಲಗಳ ಬಳಕೆ ಕುರಿತು, ಕರ್ನಾಟಕ ಸರಕಾರಕ್ಕೆ ಈ ಮಂಡಳಿ ಸಲಹೆ ನೀಡುತ್ತಿದೆ.

**ವಿಜ್ಞಾನ ಶಿಕ್ಷಣ - ಸಾಹಿತ್ಯ**

ಶಿಕ್ಷಣದಲ್ಲಿ ಮಾತೃಭಾಷೆಯೇ ಅತ್ಯುತ್ತಮ ಮಾಧ್ಯಮವೆಂಬುದು ನಿಸ್ಸಂದೇಹವಾಗಿ ಸಿದ್ಧವಾಗಿದ್ದರೂ, ಈಗಲೂ ನಮ್ಮಲ್ಲಿ ಪದವಿ ತರಗತಿಗಳಲ್ಲಿ ನಡೆಯುವ -ಅದರಲ್ಲೂ ವಿಜ್ಞಾನದ - ಬೋಧನೆ ಆಂಗ್ಲ ಭಾಷೆಯಲ್ಲಿಯೇ. ಇದರಿಂದ ವಿದ್ಯಾರ್ಥಿಯು ಪರೀಕ್ಷೆಯ ಮಟ್ಟಿಗೆ ವಿಷಯವನ್ನು ಕಂಠಪಾಠಮಾಡಿ ಒಪ್ಪಿಸಿ ಬಿಡುತ್ತಾನೆ. ವಾಸ್ತವಿಕವಾಗಿ ವಿಷಯ ವಿದ್ಯಾರ್ಥಿಯಿಂದ ದೂರವೇ ಉಳಿದುಬಿಡುತ್ತದೆ. ವಿಜ್ಞಾನ ಶಿಕ್ಷಣ ಅರ್ಥಪೂರ್ಣವಾಗಬೇಕಾದರೆ, ಅದು ನಮ್ಮ ಮಾತೃಭಾಷೆಯಲ್ಲಿಯೇ ನಡೆಯಬೇಕು. ಕನಿಷ್ಠಪಕ್ಷ ಆಸಕ್ತ ವಿದ್ಯಾರ್ಥಿಯ ಹಂಬಲನ್ನು ತಣಿಸಲಾದರೂ, ವಿಜ್ಞಾನದ ವಿವಿಧ ಶಾಖೆಗಳನ್ನು ಕುರಿತು ಕನ್ನಡದಲ್ಲಿ ಪುಸ್ತಕಗಳು ಬರಬೇಕು. ಈ ಕಾರ್ಯವನ್ನು ಕನ್ನಡ ನಾಡಿನ ಕೆಲ ಸ್ವಯಂಸೇವಾ ಸಂಸ್ಥೆಗಳು, ಸರ್ಕಾರಿ ಇಲಾಖೆಗಳು, ವಿಶ್ವವಿದ್ಯಾಲಯಗಳು ಕೆಲ ವರ್ಷಗಳಿಂದ ಮಾಡುತ್ತಲಿವೆ.

ಕನ್ನಡ ವಿಜ್ಞಾನ ಪರಿಷತ್ತು, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ನವಕರ್ನಾಟಕ ಪ್ರಕಾಶನ ಸಂಸ್ಥೆಗಳು ಪ್ರತಿ ವರ್ಷ ಕೆಲವಾದರೂ ವಿಜ್ಞಾನ ಪುಸ್ತಕಗಳನ್ನು ಪ್ರಕಟಿಸುತ್ತಿವೆ. ಆದರೆ ಇವು ಹೆಚ್ಚಾಗಿ ಜನಪ್ರಿಯ ವಿಜ್ಞಾನ ಪುಸ್ತಕಗಳು. ವಿದ್ಯಾರ್ಥಿಗಳಲ್ಲಿ, ಜನಸಾಮಾನ್ಯರಲ್ಲಿ ಈ ಪುಸ್ತಕಗಳು ವಿಜ್ಞಾನದ ಬಗ್ಗೆ ಆಸಕ್ತಿಯನ್ನು, ಕುತೂಹಲವನ್ನು ಕೆರಳಿಸಬಲ್ಲವು. ತಕ್ಕಮಟ್ಟಿಗೆ ವಿಜ್ಞಾನದ ವಿದ್ಯಮಾನಗಳ ಬಗ್ಗೆ ಮಾಹಿತಿ ಕೊಡಬಲ್ಲವು. ಎರಡು ವರ್ಷಗಳ ಕೆಳಗೆ ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರವನ್ನು ರಚಿಸಿತು. ಪುಸ್ತಕ ಪ್ರಾಧಿಕಾರವು ಮೂಲಭೂತ ಶಿಕ್ಷಣ ಮಾಲೆಯಲ್ಲಿ ಹತ್ತಾರು ಉತ್ತಮ ವಿಜ್ಞಾನ ಪುಸ್ತಕಗಳನ್ನು ಪ್ರಕಟಿಸಿದೆ. ಈ ಪುಸ್ತಕಗಳು ಪ್ರೌಢಶಾಲೆಯ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ಪರಾಮರ್ಶೆಯ ಗ್ರಂಥಗಳ ರೂಪದಲ್ಲಿ ಪ್ರಯೋಜನಕ್ಕೆ ಬರುತ್ತಿವೆ. ಅದೇ ಪುಸ್ತಕ ಪ್ರಾಧಿಕಾರ ನೂರು ಜನ ವಿಶ್ವವಿಖ್ಯಾತ ವಿಜ್ಞಾನಿಗಳ ಜೀವನಚರಿತ್ರೆ ಪ್ರಕಟಿಸುವ ಯೋಜನೆಯನ್ನು ಸಹ ಹಮ್ಮಿಕೊಂಡಿದೆ. ಜೀವನ ಚರಿತ್ರೆಯ ಪ್ರತಿಯೊಂದು ಪುಸ್ತಕವು ಸುಮಾರು ಇನ್ನೂರು ಪುಟಗಳಷ್ಟಿದ್ದು, ಅದರಲ್ಲಿ ಐವತ್ತು ಪುಟ ಆ ವಿಜ್ಞಾನಿಯ ಬದುಕು, ಇನ್ನು ಐವತ್ತು ಪುಟಗಳಲ್ಲಿ ಆತನ ಸಾಧನೆ, ಇನ್ನುಳಿದ ನೂರು ಪುಟ ಆ ವಿಜ್ಞಾನಿಯ ಸಾಧನೆಯನ್ನವಲಂಬಿಸಿ, ಆ ಕ್ಷೇತ್ರದಲ್ಲಾದ ಅನಂತರದ ಬೆಳವಣಿಗೆಗೆ ಮೀಸಲಾಗಿರುತ್ತದೆ. ಈ ಮಾಲೆಯಲ್ಲಿ ಈಗಾಗಲೇ ಗೆಲಿಲಿಯೋ, ಮೈಕೆಲ್ಸನ್ ವಿಜ್ಞಾನಿಗಳ ಜೀವನ ಚರಿತ್ರೆಗಳು ಪ್ರಕಟವಾಗಿದೆ. ಈ ಉದ್ದೇಶವನ್ನಿಟ್ಟುಕೊಂಡು ಪ್ರಕಟವಾದ ಪುಸ್ತಕಗಳು ವಿಜ್ಞಾನ ಶಿಕ್ಷಣವನ್ನು ಅರ್ಥಪೂರ್ಣವನ್ನಾಗಿಸುವಲ್ಲಿ ಸಹಕಾರಿಯಾಗಬಲ್ಲವು.

ಹಂಪಿಯ ಕನ್ನಡ ವಿಶ್ವವಿದ್ಯಾಲಯ ಕಳೆದ ವರ್ಷ ವೈಜ್ಞಾನಿಕ ಪಠ್ಯ ಪುಸ್ತಕಗಳ ಪ್ರಕಟಣಾ ಯೋಜನೆಯನ್ನು ಹಮ್ಮಿಕೊಂಡಿದೆ. ಈ ವರ್ಷದಿಂದ ಪದವಿ ಪೂರ್ವ ವರ್ಗಗಳಿಗೆ ಪಠ್ಯಕ್ರಮ ಬದಲಾಗಿದೆ. ಹೊಸ ಪಠ್ಯಕ್ರಮವನ್ನು ಅನುಸರಿಸಿ ಪಿ ಯು ಸಿ ಮೊದಲ ವರ್ಷದ ವಿದ್ಯಾರ್ಥಿಗಳಿಗಾಗಿ, ಗಣಿತ, ಭೌತಶಾಸ್ತ್ರ, ರಸಾಯನ ಶಾಸ್ತ್ರ, ಮತ್ತು ಜೀವಶಾಸ್ತ್ರ - ಹೀಗೆ ನಾಲ್ಕು ವಿಷಯಗಳನ್ನು ಕುರಿತು ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ಬರೆಸಲಾಗಿದ್ದು, ಅವುಗಳ ಮುದ್ರಣ ನಡೆದಿದೆ. ಪಿಯುಸಿ ವಿಜ್ಞಾನ ವರ್ಗದಲ್ಲಿ ಕನ್ನಡ ಮಾಧ್ಯಮದಲ್ಲಿ ಬೋಧನೆ ನಡೆಯುತ್ತದೆಯೋ ಅಥವಾ ಇಲ್ಲವೋ ಅದು ಬೇರೆ ವಿಷಯ. ಆದರೆ ಹತ್ತನೆಯ ವರ್ಗದವರೆಗೆ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗಳಿಗೆ, ವಿಜ್ಞಾನವನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಈ ಪುಸ್ತಕಗಳು ಖಂಡಿತವಾಗಿ ಪ್ರಯೋಜನಕಾರಿಯಾಗುತ್ತದೆ.

**ಹೊಸ ಸಂಸ್ಥೆಗಳು**

ಇತ್ತೀಚೆಗೆ ಉಪರಾಷ್ಟ್ರಪತಿ ಶ್ರೀ ಕೆ. ಆರ್. ನಾರಾಯಣನ್ ಅವರು ಬೆಂಗಳೂರಿನಲ್ಲಿ ಎರಡು ಹೊಸ ವೈಜ್ಞಾನಿಕ ಸಂಸ್ಥೆಗಳನ್ನು ಉದ್ಘಾಟಿಸಿದರು. ಒಂದು, ಜವಾಹರಲಾಲ ನೆಹರು ಉನ್ನತ ವೈಜ್ಞಾನಿಕ ಸಂಶೋಧನಾ ಕೇಂದ್ರ (Jawaharlal Nehru Centre for Advanced Scientific Research), ಇನ್ನೊಂದು, ದ್ರವಸ್ಫಟಿಕ ಸಂಶೋಧನಾ ಕೇಂದ್ರ (Centre for Liquid Crystal Research). ಇವೆರಡೂ ಸ್ವಾಯುತ್ತ ಸಂಸ್ಥೆಗಳು. ಜವಾಹರಲಾಲ ನೆಹರು ಕೇಂದ್ರವು ಬೆಂಗಳೂರಿನಿಂದ ೧೧ ಕಿಲೋಮೀಟರ್ ದೂರದಲ್ಲಿ, ಬೆಂಗಳೂರು - ಹೈದರಾಬಾದ ಹೆದ್ದಾರಿಯ ಬಳಿಯಲ್ಲಿ ಜಕ್ಕೂರಿನಲ್ಲಿದೆ. ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕರಾಗಿ ನಿವೃತ್ತರಾದ ಪ್ರೊ. ಸಿ. ಎನ್. ಆರ್. ರಾವ್ ಇದರ ಅಧ್ಯಕ್ಷರು. ಡಾ. ರಾಜಾ ರಾಮಣ್ಣ ಅವರು ಆಡಳಿತ ಮಂಡಳಿಯ ಚೇರಮನ್ನರು. ಕರ್ನಾಟಕ ಸರಕಾರ ಈ ಕೇಂದ್ರಕ್ಕೆ ೧೫ ಎಕರೆ ಭೂಮಿಯನ್ನು ದೇಣಿಗೆಯಾಗಿ ನೀಡಿದೆ. ಕಳೆದ ವರ್ಷ ಜುಲೈ ತಿಂಗಳಲ್ಲಿ ಈ ಕೇಂದ್ರ ಕಾರ್ಯಾರಂಭ ಮಾಡಿದೆ. ಜೀವವೈವಿಧ್ಯ, ಕಂಪ್ಯೂಟರ್, ಪ್ರವಾಹಗತಿ ವಿಜ್ಞಾನ, ಜೀನ್‌ಥೆರಪಿ, ಹ್ಯೂಮನ್ ಜಿನೋಮ್‌ಗಳಂತಹ ವಿಜ್ಞಾನದ ಅತ್ಯಾಧುನಿಕ ಕ್ಷೇತ್ರಗಳಲ್ಲಿ ಸಂಶೋಧನೆಗಳನ್ನು ನಡೆಸುವದು ನೆಹರು ಕೇಂದ್ರದ ಉದ್ದೇಶ.

ಇನ್ನೊಂದು ದ್ರವಸ್ಫಟಿಕ ಸಂಶೋಧನಾ ಕೇಂದ್ರ. ಇದು ಭಾರತ ಇಲೆಕ್ಟ್ರಾನಿಕ್ಸ್‌ನ ಆವರಣದಲ್ಲಿದೆ. ರಾಮನ್ ಸಂಶೋಧನಾಲಯದ ದ್ರವ ಸ್ಫಟಿಕ ಪ್ರಯೋಗಾಲಯದ ನಿರ್ದೇಶಕರಾಗಿ ನಿವೃತ್ತರಾದ ಪ್ರೊ. ಎಸ್. ಚಂದ್ರ ಶೇಖರ ಈ ಕೇಂದ್ರದ ನೇತೃತ್ವ ವಹಿಸಿದ್ದಾರೆ. ಪ್ರೊ. ಸಿ. ಎನ್. ಆರ್. ರಾವ್ ಮತ್ತು ಪ್ರೊ. ಚಂದ್ರಶೇಖರ ಇಬ್ಬರೂ ಅಂತರರಾಷ್ಟ್ರೀಯ ಖ್ಯಾತಿಯಿರುವ ವಿಜ್ಞಾನಿಗಳು. ಬ್ರಿಟನ್ನಿನ ರಾಯಲ್ ಸೊಸೈಟಿಯ ಫೆಲೋಷಿಪ್ (FRS) ಪಡೆದವರು. ಇದೀಗ ಆರಂಭವಾದ ಈ ಸಂಶೋಧನ ಕೇಂದ್ರಗಳಲ್ಲಿ ಕಾಲಾನುಕ್ರಮದಲ್ಲಿ ಉನ್ನತ ಮಟ್ಟದ ಸಂಶೋಧನೆ ನಡೆದು, ಅವು ಪ್ರಪಂಚದಾದ್ಯಂತ ಪ್ರಖ್ಯಾತಿಯನ್ನು ಪಡೆಯುವದರಲ್ಲಿ ಸಂದೇಹವಿಲ್ಲ.

ಇದು ಕಳೆದ ವರ್ಷ, ಅಂದರೆ ೧೯೯೪ರಲ್ಲಿ ವಿಜ್ಞಾನ - ತಂತ್ರಜ್ಞಾನ ಕ್ಷೇತ್ರದಲ್ಲಿ ನಡೆದ ವಿದ್ಯಮಾನಗಳ ಸ್ಥೂಲ ಸಮೀಕ್ಷೆ. ಕನ್ನಡ ನಾಡಿನ ಮಟ್ಟಿಗೆ ಇದರ ವ್ಯಾಪ್ತಿಯನ್ನು ಸೀಮಿತಗೊಳಿಸಲಾಗಿದ್ದರೂ, ವಿಷಯಕ್ಕೆ ಸಂಬಂಧಿಸಿದ ಎಲ್ಲ ವಿವರಗಳು ಇಲ್ಲಿ ಸ್ಥಾನ ಪಡೆಯದೆ ಹೋಗಿದ್ದರೆ ಅಚ್ಚರಿಯೇನಲ್ಲ. ವಿಜ್ಞಾನ ಅತಿ ವೇಗದಿಂದ ಬೆಳೆಯುತ್ತಿರುವುದೇ ಇದಕ್ಕೆ ಕಾರಣ.

# ಕ್ರೀಡಾ ವಿದ್ಯಮಾನಗಳು

*ಕೆ. ಎಂ. ರಾಘವನ್ ನಂಬಿಯಾರ್*

ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ವಿಶ್ವಕಪ್‌ಗಳು, ಗೇಮ್ಸ್‌ಗಳು, ಎಂದಿನ ಗ್ರ್ಯಾನ್‌ಸ್ಲ್ಯಾಮ್ ಟೆನಿಸ್‌ಕೂಟಗಳು, ಕ್ರಿಕೆಟ್ ಸರಣಿಗಳಿಂದ ೧೯೯೪ಳ ನೇ ಸಂವತ್ಸರ ಆರಂಭದಿಂದ ಅಂತ್ಯದವರೆಗೆ ನಿಬಿಡ ಚಟುವಟಿಕೆಗಳನ್ನು ಕಂಡಿದೆ. ಫುಟ್ಬಾಲಿನ ವಿಶ್ವಕಪ್, ಹಾಕಿಯ ವಿಶ್ವಕಪ್, ಕಾಮನ್‌ವೆಲ್ತ್ ಗೇಮ್ಸ್, ಏಶ್ಯನ್ ಗೇಮ್ಸ್, ಟೆನಿಸಿನ ಗ್ರ್ಯಾನ್‌ಸ್ಲ್ಯಾಮ್ ಕೂಟಗಳು, ಡೇವಿಸ್‌ಕಪ್ ಸರಣಿಗಳು, ಟೆಸ್ಟ್ ಕ್ರಿಕೆಟ್ ಸರಣಿಗಳು ಕ್ರೀಡಾಸಕ್ತರ ಲಕ್ಷ್ಯಸೆಳೆದ ಸಾಲಿನ ಮುಖ್ಯ ಘಟನೆಗಳಾಗಿವೆ. ಈ ಎಲ್ಲ ಚಟುವಟಿಕೆಗಳಲ್ಲಿ ಭಾರತದ ಸಹಭಾಗ ಇಲ್ಲವಾದರೂ, ಭಾರತ ಭಾಗವಹಿಸಿದ ಕ್ರೀಡೆಗಳಲ್ಲಿ ಪಡೆದ ಪ್ರಾಪ್ತಿ ಪರಿಮಿತವೆಂದೇ ಹೇಳಬೇಕು. ಹಾಗೆಯೆ ಭಾರತದ ಪ್ರಾಪ್ತಿಯಲ್ಲಿ ಕರ್ನಾಟಕ ರಾಜ್ಯದ ಪಾಲು ಪರಿಮಿತವೇ.

ಅಮೆರಿಕದ ವಿವಿಧ ಕೇಂದ್ರಗಳಲ್ಲಿ ನಡೆದು ಬ್ರಝಿಲ್ ಟ್ರೋಫಿಯನ್ನೆತ್ತಿದ ವಿಶ್ವಕಪ್ ಫುಟ್ಬಾಲಿನ ರೋಮಾಂಚಕ ಕಥಾನಕದಲ್ಲಿ, ಭಾರತದ ಪಾಲಿಗೆ ಟಿವಿಯಲ್ಲಿ ಪಂದ್ಯಗಳನ್ನು ನೋಡಿ ಖುಷಿಪಡುವುದಲ್ಲದೆ ಇನ್ನಾವ ಪಾತ್ರವೂ ಇರಲಿಲ್ಲ. ವಿಶ್ವಕಪ್ ಹಾಕಿಕೂಟ ಹಾಗಲ್ಲ. ಆಸ್ಟ್ರೇಲಿಯಾದ ಸಿಡ್ನಿಯಲ್ಲಿ ನಡೆದ ವಿಶ್ವಕಪ್ ಹಾಕಿ ಕೂಟದಲ್ಲಿ ಭಾರತ ಸಾಧಿಸಿದ ಪ್ರಗತಿಯನ್ನು ನೋಡಿದರೆ, ಭಾರತಮೂಲದ ಈ ಕ್ರೀಡೆ ಈ ದೇಶದಲ್ಲಿ ಮತ್ತೆ ಹೊಸ ಚಿಗುರನ್ನು ಪಡೆಯುತ್ತಿದೆ ಎಂದು ಅರ್ಥವಾಗುತ್ತದೆ. ಯೂರೋಪ್, ಆಸ್ಟ್ರೇಲಿಯಗಳ ಬಿಗಿಮುಷ್ಟಿಯಿಂದ ಕದಲಿಸಿ ಟ್ರೋಫಿಯನ್ನು ಕೊನೆಗೂ ಪಾಕಿಸ್ಥಾನ ಗೆದ್ದುಕೊಂಡಿತು. ಟ್ರೋಫಿ ಭಾರತೀಯ ಉಪಖಂಡಕ್ಕೆ ಬಂತು. ಪಾಕಿಸ್ಥಾನ ಅಂತಿಮ ಪಂದ್ಯದಲ್ಲಿ ಹಾಲೆಂಡನ್ನು ಪೆನಲ್ಟಿ ಶೂಟೌಟ್ ಮೂಲಕ ೪-೩ ಅಂತರದಲ್ಲಿ ಸೋಲಿಸಿ ಟ್ರೋಫಿಯನ್ನು ಮರಳಿ ವಶಪಡಿಸಿಕೊಂಡಿತ್ತು. ಈ ಹಿಂದಿನ ಕೂಟಗಳಲ್ಲಿ ೧೨ ಮತ್ತು ೧೧ನೆ ಸ್ಥಾನಗಳಿಗೆ ಮಾತ್ರ ಏರಿದ್ದ ಭಾರತ, ಈ ಬಾರಿ ಐದನೆ ಸ್ಥಾನಕ್ಕೆ ಏರಿಕೊಂಡಿತು. ಇದರಿಂದಾಗಿ ವರ್ಷವೂ ವಿಶ್ವದ ಶ್ರೇಷ್ಠ ಆರು ತಾಂಡಗಳ ನಡುವೆ ನಡೆಯುವ 'ಚಾಂಪಿಯನ್ಸ್ ಟ್ರೋಫಿ' ಹಾಕಿಕೂಟಕ್ಕೆ ಭಾರತ ಎಂಟುವರ್ಷಗಳ ಬಳಿಕ ಪ್ರವೇಶ ಪಡೆದುಕೊಂಡಿತು. ಜತೆಗೆ ೧೯೯೮ರಲ್ಲಿ ಜರ್ಮನಿಯ ಬರ್ಲಿನ್ ನಗರದಲ್ಲಾಗುವ ಮುಂದಿನ ವಿಶ್ವಕಪ್ ಕಣಕ್ಕೆ ನೇರ ಪ್ರವೇಶವನ್ನೂ ಗಳಿಸಿಕೊಂಡಿತು. ಕರ್ನಾಟಕದವರಾದ ಗೋಲ್‌ಕೀಪರ್ ಎ. ಬಿ. ಸುಬ್ಬಯ್ಯ ಅವರು ಈ ಕೂಟದಲ್ಲಿ ಭಾರತದ ಪಾಲಿಗ ಬಲುದೊಡ್ಡ ಶಕ್ತಿಯಾಗಿದ್ದರು.

ವಿಶ್ವಕಪ್ ಕೂಟಕ್ಕೆ ಮೊದಲೇ ಭಾರತೀಯ ಹಾಕಿಗೆ ಹೊಸ ಚೈತನ್ಯ ತುಂಬತೊಡಗಿತ್ತು. ಜಪಾನಿನ ಹಿರೋಶಿಮದಲ್ಲಿ ನಡೆದ ಏಶ್ಯನ್ ಗೇಮ್ಸ್‌ನಲ್ಲಿ ಹಾಕಿ ಬೆಳ್ಳಿಪದಕವನ್ನು ಭಾರತ ಗೆದ್ದಿದೆ. ಮೊದಲ ಸುತ್ತಿನಲ್ಲಿ ತನ್ನ ಕೈಯಲ್ಲಿ ಪರಾಭವ ಕಂಡಿದ್ದ ದಕ್ಷಿಣ ಕೊರಿಯಕ್ಕೆ ಅಂತಿಮ ಪಂದ್ಯದಲ್ಲಿ ಭಾರತ ೩-೨ ಅಂತರದಲ್ಲಿ ಶರಣಾದುದು ಒಂದು ವಿಪರ್ಯಾಸ. ಗೋಲುಶಾಹಿಗಳಾದ ಆಶಿಷ್ ಬಲ್ಲಾಳ್, ಎ. ಬಿ. ಸುಬ್ಬಯ್ಯ ಅಲ್ಲದೆ ರವಿ ನಾಯ್ಕರ್ ಅವರು ಈ ಕಣದಲ್ಲಿ ರಾಷ್ಟ್ರೀಯ ತಂಡದಲ್ಲಿದ್ದ ಕರ್ನಾಟಕದ ಪ್ರತಿಭೆಗಳು. ಅನಿಲ್ ಆಲ್ಡ್ರಿನ್, ಸುಬ್ಬಯ್ಯ ಇವರು ದೀರ್ಘಕಾಲ ಭಾರತವನ್ನು ಮೆರೆಸಬಲ್ಲವರೆಂದು ಆಗಿನ ಭಾರತೀಯ ತಂಡದ ಚೀಫ್‌ಕೋಚ್ ಜಾಫರ್ ಇಕ್ಬಾಲ್ ಅಭಿಪ್ರಾಯಪಟ್ಟಿದ್ದರು. ಏಶ್ಯಾಡಿನಲ್ಲಿ ಹೆಚ್ಚು ಮಿಂಚಿಕೊಳ್ಳದಿದ್ದರೂ ಅನಂತರದ ದಿನಗಳಲ್ಲಿ ರವಿ ನಾಯ್ಕರ್ ಭಾರತದ ಮುಖ್ಯ ಹಾಕಿಪಟುಗಳಲ್ಲಿ ಒಬ್ಬರಾಗಿ ನೆಲೆಯಾದರು.

ಕೆನಡದ ವಿಕ್ಟೋರಿಯಾದಲ್ಲಾದ ಕಾಮನ್‌ವೆಲ್ತ್ ಕ್ರೀಡೋತ್ಸವದಿಂದ ಕರ್ನಾಟಕದ ೨೩ರ ಹರೆಯದ ವೇಟ್‌ಲಿಫ್ಟರ್ ಸತೀಶ ರೈ ಅವರು ಎರಡು ಬೆಳ್ಳಿಯ ಪದಕಗಳನ್ನು ಗೆದ್ದಿದ್ದಾರೆ. ಪುಣೆಯಲ್ಲಿ ನಡೆದ ತೃತೀಯ ರಾಷ್ಟ್ರೀಯ ಕ್ರೀಡೋತ್ಸವದ ಭಾರವೆತ್ತುಗೆ ಸ್ಪರ್ಧೆಯಲ್ಲಿ ರೈ ಅವರು ತಮ್ಮ ೭೦ ಕೆ. ಜಿ. ದೇಹತೂಕ ವರ್ಗದಲ್ಲಿ ತಮ್ಮದೆ ಹೆಸರಿನಲ್ಲಿದ್ದ ಕ್ಲೀನ್ ಮತ್ತು ಜರ್ಕ್ ಹಾಗೂ ಒಟ್ಟು ಭಾರತ ರಾಷ್ಟ್ರೀಯ ದಾಖಲೆಗಳನ್ನು ಎರಡು ಬಾರಿ ಪರಿಷ್ಕರಿಸಿಕೊಂಡರು.

ಕ್ರೀಡೆಯಲ್ಲಿ ಹೊಸ ಆಯ್ಕೆ ಎಂದರೆ, ಪ್ರಬಲ ಸ್ಪರ್ಧೆಗಳಿಂದ ತಾನೇ ಶ್ರೇಷ್ಠ ಎಂದು ಹೊಸಬ ಸವಾಲಿಕ್ಕುವುದು ಎಂದರ್ಥ. ಪಿ.ಟಿ. ಉಷಾ ಉಚ್ಛ್ರಾಯ ಕಾಲದಲ್ಲಿದ್ದಾಗ ಕರ್ನಾಟಕದ ವಂದನಾರಾವ್, ಅಶ್ವಿನಿ ನಾಚಪ್ಪ ತಮ್ಮ ಆಯ್ಕೆಗಳನ್ನು ಸಮರ್ಥಿಸುತ್ತಿದ್ದರು. ಆದರೆ ಕರ್ನಾಟಕ ಅಥ್ಲೆಟಿಕ್ ತಂಡದಿಂದ ವಂದನಾ, ಅಶ್ವಿನಿ ಅವರ ನಿರ್ಗಮನ ಅವರಿಗಿಂತ ಸಮರ್ಥರ ಸವಾಲಿನ ಕಾರಣದಿಂದ ಆಗಲಿಲ್ಲ. ಅಂದರೆ ವಂದನಾ, ಅಶ್ವಿನಿ ಅವರ ಕ್ರೀಡಾಯೋಗ್ಯತೆ ಅನಂತರ ಕರ್ನಾಟಕ ತಂಡದಲ್ಲಿದ್ದವರಲ್ಲಿ ಕಾಣಿಸಲಿಲ್ಲ. ತೃತೀಯ ರಾಷ್ಟ್ರೀಯ ಕ್ರೀಡೋತ್ಸವದಲ್ಲಿ ಕರ್ನಾಟಕದ ಮೂವರು ವನಿತೆಯರು ಹೊಸ ಭರವಸೆಯನ್ನು ಮೂಡಿಸಿದರು. ಅವರೇ ಇ. ಬಿ. ಶೈಲಾ, ಸಿಲ್ವಿನಿಯಾ ಪಾಯಸ್ ಮತ್ತು ಎಚ್.ಜೆ. ಅಪ್ಸರಾ.

ಕೆ. ಬಿ. ಶೈಲಾ ಪುಣೆ ಕ್ರೀಡೋತ್ಸವದಲ್ಲಿ ವನಿತೆಯರ ೧೧೦ ಮೀ. ಸ್ಪ್ರಿಂಟ್ ಓಟವನ್ನು ೧೨.೦೨ ಸೆ. ಹೊತ್ತುಗಾರಿಕೆಯೊಂದಿಗೆ ಮುಗಿಸಿ, ಚಿನ್ನ ಗೆಲ್ಲುವ ಮೂಲಕ ರಾಷ್ಟ್ರದ ಅತಿವೇಗದ ಓಟಗಾತಿ ಎನಿಸಿಕೊಂಡರು. ಈಕೆ ಮುಖ್ಯಪಾತ್ರ ವಹಿಸಿದ ಕರ್ನಾಟಕ ತಂಡಕ್ಕೆ ೪ x ೧೦೦ ಮೀ. ರಿಲೇಚಿನ್ನವೂ ಬಂತು. ಕರ್ನಾಟಕದ ಎರಡು ರಿಲೇ ಚಿನ್ನಗಳಲ್ಲಿ ಶ್ರೀದೇವಿ ಅವರಿಗೂ ಪಾಲು ಇತ್ತು.

ವನಿತೆಯರ ೪೦೦ ಮೀ. ಹರ್ಡಲ್ಸ್‌ನಲ್ಲಿ ರಾಷ್ಟ್ರದ ಇನ್ನಾರೂ ತನಗೆ ಇದಿರಲ್ಲ ಎಂಬ ಹಾಗೆ ಓಡಿಗೆದ್ದವರು ಎಚ್. ಜಿ. ಅಪ್ಸರಾ. ಆಕೆ ಸಾಧಿಸಿದ ೫೬.೮೭ ಸೆ. ಹೊತ್ತು ಹೇಳಿಕೊಳ್ಳಬಹುದಾದ ಸಾಧನೆ ಅಲ್ಲವಾದರೂ ಇತರರಿಗೆ ಅಷ್ಟೂ ಎಟುಕಿಲ್ಲ ಎಂಬುದೂ ನಿಜವೆ. ಈ ಓಟದಲ್ಲಿ ಬೆಳ್ಳಿ ದೊರಕಿದುದು ಕರ್ನಾಟಕದವರೇ ಆದ ಎಂ. ಕೆ. ಆಶಾ ಅವರಿಗೆ.

ಕೆ. ಕೆ. ಗೀತಾ ಅವರು ವನಿತಾ ಹೆಪ್ಟಾತ್ಲಾನ್ ಸ್ಪರ್ಧೆಯನ್ನು ಗೆದ್ದು ಕರ್ನಾಟಕ ಹೆಮ್ಮೆಪಡುವಂತೆ ಮಾಡಿದರು. ಆಕೆ ವನಿತಾ ಲಾಂಗ್‌ಜಂಪ್, ೧೦೦ ಮೀ. ಹರ್ಡಲ್ಸ್‌ಗಳಲ್ಲಿ ಬೆಳ್ಳಿಯ ಪದಕಗಳನ್ನು ಗೆದ್ದರು. ಹೆಪ್ಟಾತ್ಲಾನ್ ಬೆಳ್ಳಿ ಗೆದ್ದ ಸುಮವತಿ ಅವರೂ ಕರ್ನಾಟಕದವರೇ. ವನಿತೆಯರ ೪೦೦ ಮೀ. ಓಟದಲ್ಲಿ ರಾಜ್ಯದ ಡಿ. ವನಜಾ ಅವರು ಕಂಚಿನ ಪದಕ ಗೆದ್ದಿದ್ದಾರೆ. ಆದರೆ ಈ ಎಲ್ಲ ಸಾಧನೆಗಳಿಗೆ ರಾಷ್ಟ್ರದ ಎಲ್ಲೆ ಮೀರುವ ಯೋಗ್ಯತೆ ಸಿದ್ಧಿಸಲಿಲ್ಲ. ೧೯೯೪ರ ಸಾಲಿನಲ್ಲಿ ಅಥ್ಲೆಟಿಕ್ ರಂಗದಲ್ಲಿ ರಾಷ್ಟ್ರದ ಒಟ್ಟಾರೆ ಅಭಿಯಾನ ತೇಜೋಹೀನ ಎಂದೇ ಹೇಳಬೇಕು.

ಈ ಅವಧಿಯಲ್ಲಿ ರಾಷ್ಟ್ರದ ಗಮನವನ್ನು ಸೆಳೆಯಬಲ್ಲಂಥ ಪ್ರದರ್ಶನವನ್ನು ಕರ್ನಾಟಕ ನೀಡಿದ ಇನ್ನೊಂದು ಕ್ರೀಡೆ ಈಜು. ಗೋವೆಯಲ್ಲಿ ನಡೆದ ೪೯ನೆ ಸೀನಿಯರ್ ರಾಷ್ಟ್ರೀಯ ಜಲಕ್ರೀಡಾ ಸ್ಪರ್ಧಾಕೂಟದಲ್ಲಿ ಕರ್ನಾಟಕದವರಾದ, ಆದರೆ ಕಣದಲ್ಲಿ ಪೋಲೀಸ್ ಪಡೆಯನ್ನು ಪ್ರತಿನಿಧಿಸಿದ, ಜೆ. ಅಭಿಜಿತ್ ೩೯ ಅಂಕಗಳನ್ನು ಕೂಡಿಸಿ ಪುರುಷರ ವಿಭಾಗದ ಚಾಂಪಿಯನ್ ಎನಿಸಿಕೊಂಡರು. ಅಭಿಜಿತ್ ಅವರ ಅಂಕಗಳಿಲ್ಲದೆಯೂ ಕರ್ನಾಟಕ ತಂಡ ೩೧ ಪದಕಗಳನ್ನು ಗೆದ್ದು ೨೦೦ ಅಂಕಗಳನ್ನು ಜೋಡಿಸಿಕೊಂಡು 'ಸಮಗ್ರ ತಂಡ ಪ್ರಶಸ್ತಿ' ಯನ್ನು ಗೆದ್ದುಕೊಂಡಿತು. ಇದರಲ್ಲಿ ವನಿತಾ ಲಾಂಗ್‌ಜಂಪ್ ೧೦೦ ಮೀ. ಹರ್ಡಲ್ಸ್‌ಗಳಲ್ಲಿ ಬೆಳ್ಳಿಯ ಪದಕಗಳನ್ನು ಗೆದ್ದರು. ಹೆಪ್ಟಾತ್ಲಾನ್ ಬೆಳ್ಳಿ ಗೆದ್ದ ಸುಮ ಅವರೂ ಕರ್ನಾಟಕದವರೇ. ವನಿತೆಯರ ೪೦೦ ಮೀ. ಓಟದಲ್ಲಿ ರಾಜ್ಯದ ಡಿ. ವನಜಾ ಅವರು ಕಂಚಿನ ಪದಕ ಗೆದ್ದಿದ್ದಾರೆ. ಆದರೆ ಈ ಎಲ್ಲ ಸಾಧನೆಗಳಿಗೆ ರಾಷ್ಟ್ರದ ಎಲ್ಲೆ ಮೀರುವ ಯೋಗ್ಯತೆ ಸಿದ್ಧಿಸಲಿಲ್ಲ. ೧೯೯೪ರ ಸಾಲಿನಲ್ಲಿ ಅಥ್ಲೆಟಿಕ್ ರಂಗದಲ್ಲಿ ರಾಷ್ಟ್ರದ ಒಟ್ಟಾರೆ ಅಭಿಯಾನ ತೇಜೋಹೀನ ಎಂದೇ ಹೇಳಬೇಕು.

ಈ ಅವಧಿಯಲ್ಲಿ ರಾಷ್ಟ್ರದ ಗಮನವನ್ನು ಸೆಳೆಯಬಲ್ಲಂಥ ಪ್ರದರ್ಶನವನ್ನು ಕರ್ನಾಟಕ ನೀಡಿದ ಇನ್ನೊಂದು ಕ್ರೀಡೆ ಈಜು. ಗೋವೆಯಲ್ಲಿ ನಡೆದ ೪೯ನೆ ಸೀನಿಯರ್ ರಾಷ್ಟ್ರೀಯ ಜಲಕ್ರೀಡಾ ಸ್ಪರ್ಧಾಕೂಟದಲ್ಲಿ ಕರ್ನಾಟಕದವರಾದ, ಆದರೆ ಕಣದಲ್ಲಿ ಪೋಲೀಸ್ ಪಡೆಯನ್ನು ಪ್ರತಿನಿಧಿಸಿದ, ಜೆ. ಅಭಿಜಿತ್ ೩೯ ಅಂಕಗಳನ್ನು ಕೂಡಿಸಿ ಪುರುಷರ ವಿಭಾಗದ ಚಾಂಪಿಯನ್ ಎನಿಸಿಕೊಂಡರು. ಅಭಿಜಿತ್ ಅವರ ಅಂಕಗಳಿಲ್ಲದೆಯೂ ಕರ್ನಾಟಕ ತಂಡ ೩೧ ಪದಕಗಳನ್ನು ಗೆದ್ದು ೨೦೦ ಅಂಕಗಳನ್ನು ಜೋಡಿಸಿಕೊಂಡು 'ಸಮಗ್ರ ತಂಡ ಪ್ರಶಸ್ತಿ'ಯನ್ನು ಗೆದ್ದುಕೊಂಡಿತು. ಇದರಲ್ಲಿ ವನಿತಾ ಈಜಾಳುಗಳ ಪಾಲು ೧೬೭ ಅಂಕಗಳು. ಅಭಿಜಿತ್ ಅವರ ಸಹಾಯದೊಂದಿಗೆ ೧೩೧

ಅಂಕಗಳನ್ನು ಕೂಡಿಸಿಕೊಂಡ ಪೊಲೀಸ್ ತಂಡ ಸಮಗ್ರ ಪ್ರಶಸ್ತಿಯಲ್ಲಿ ಕೂಟದ ದ್ವಿತೀಯ ಸ್ಥಾನಿಯಾಯಿತು. ಪುರುಷರ ತಂಡ ಪ್ರಶಸ್ತಿ ಪೊಲೀಸರಿಗೇ ಸೇರಿತು.

ಹದಿನೈದರ ಹರೆಯದ ಬೆಂಗಳೂರಿನ ಹುಡುಗ ಅಭಿಜಿತ್ ೧೫೦೦ ಮೀ. ಫ್ರೀಸ್ಟೈಲ್ ಈಜಿನಲ್ಲಿ ಚಿನ್ನ ಗೆಲ್ಲಲು ಸಾಧಿಸಿದ ಹೊತ್ತುಗಾರಿಕೆ ಎಲ್ಲರ ಗಮನ ಸೆಳೆದಿದೆ. ಆತ ೧೭ ನಿಮಿಷಕ್ಕೆ ಮೊದಲೇ ಈ ಈಜನ್ನು ಮುಗಿಸಿದ ದಕ್ಷಿಣ ಏಶ್ಯದ ಮೊದಲಿಗನೆನಿಸಿದರು. ಅಲ್ಲದೆ ೧೬:೫೬.೮೪ ಹೊತ್ತಿನ ಹೊಸ ರಾಷ್ಟ್ರೀಯ ದಾಖಲೆಗೆ ಹೆಸರಾದರು. ಆತ ಮುರಿದ ಹಳೆದಾಖಲೆ ರಾಜೀವ ನಾಗ್ಪಾಲ್ ಅವರ ಹೆಸರಿನಲ್ಲಿದ್ದ ೧೭:೨೫.೫೩. ಕರ್ನಾಟಕ ಈಜಿನಲ್ಲಿ ಒಂದು ಶಕ್ತಿ ಎಂಬುದನ್ನು ಸ್ಥಾಪಿಸುವಲ್ಲಿ ಸಜಿನಿ ಶೆಟ್ಟಿ, ಅಭಿನಯಾ ಶೆಟ್ಟಿ, ಮೇಘನಾ ನಾರಾಯಣ್ ಇವರ ಪಾತ್ರ ಗಣನೀಯವಾಗಿದೆ.

ರಾಷ್ಟ್ರೀಯ ಸೀನಿಯರ್ ಜಲಕ್ರೀಡಾ ಕೂಟಕ್ಕೆ ಮೊದಲು ಮುಂಬಯಿಯ ಅಂಧೇರಿ ಈಜುಕೊಳದಲ್ಲಿ ನಡೆದ ೨೧ನೆ ಜೂನಿಯರ್ ರಾಷ್ಟ್ರೀಯ ಜಲಕ್ರೀಡಾ ಸ್ಪರ್ಧಾಕೂಟದಲ್ಲಿ ಜೆ. ಅಭಿಜಿತ್, ಆಶಿಮಾ ಶೆಟ್ಟಿ, ಸಜಿನಿ ಶೆಟ್ಟಿ, ಮೇಘನಾ ನಾರಾಯಣ್, ಅಭಿನಯಾ ಶೆಟ್ಟಿ ಮತ್ತು ಸತೀಶ್ ಕುಮಾರ್ ಉತ್ತಮ ಈಜಿನ ಪ್ರದರ್ಶನವಿತ್ತರು. ೧೫ರ ಕೆಳಹರೆಯ ಮತ್ತು ೧೮ರ ಕೆಳಹರೆಯದ ವನಿತಾ ವಿಭಾಗದಲ್ಲಿ ಲಭ್ಯ ೨೪ ಸ್ವರ್ಣಗಳಲ್ಲಿ ೨೨ ಸ್ವರ್ಣ ಕರ್ನಾಟಕದ ಈಜಾಳುಗಳ ಪಾಲಿಗಾಗಿವೆ.

ಭಾರತದಲ್ಲಿ ಜನಪ್ರಿಯ ಕ್ರೀಡೆಯೆನಿಸಿರುವ ಕ್ರಿಕೆಟಿನಲ್ಲಿ ಕರ್ನಾಟಕದ ಮೂವರು ರಾಷ್ಟ್ರೀಯ ತಂಡದ ಸ್ವತ್ತು ಎನಿಸಿಕೊಂಡಿದ್ದಾರೆ. ಅವರೇ ಅಂತರರಾಷ್ಟ್ರೀಯ ಖ್ಯಾತಿಯ ಲೆಗ್‌ಸ್ಪಿನ್ ಮಾಂತ್ರಿಕ ಅನಿಲ್ ಕುಂಬ್ಳೆ, ವೇಗಿಗಳಾದ ಜಾವಗಲ್ ಶ್ರೀನಾಥ್ ಮತ್ತು ಬಿ. ಕೆ. ವೆಂಕಟೇಶ ಪ್ರಸಾದ್.

ಲೆಗ್‌ಸ್ಪಿನ್ ಎಂದರೆ ಪಂದ್ಯವನ್ನು ಗೆದ್ದುಕೊಡುವಂಥ ಕ್ರಿಕೆಟಿನ ಪ್ರಧಾನ ಅಸ್ತ್ರ. ಚೆಂಡು ಹೊರಳುವುದು ಎಡಕ್ಕೊ ಬಲಕ್ಕೊ ಎಂದು ದಾಂಡಿಗನನ್ನು ಸದಾ ಚಿಂತೆಗೊಳಪಡಿಸುವ 'ಗೂಗ್ಲಿ' ಎಸೆತಗಳಿಂದ, ಲೆಗ್‌ಸ್ಪಿನ್ನಿಗ ಇದಿರಾಳಿಯ ರನ್‌ಸೂರೆಗೆ ಕಡಿವಾಣ ತೊಡಿಸಬಲ್ಲ. ಹಿಂದೊಮ್ಮೆ ಭಾರತ ಸ್ಪಿನ್‌ತ್ರಯರಿಂದ ಅನೇಕ ಯಶಸ್ಸುಗಳನ್ನು ಗಳಿಸಿತ್ತು. ಅದೇ ಬಗೆಯ ಸ್ಪಿನ್‌ತ್ರಯದ ಯುಗದ ಈಚಿನ ಪುನರಾವರ್ತನೆಯಲ್ಲಿ ಮುಖ್ಯಹೆಸರು ಅನಿಲ್ ಕುಂಬ್ಳೆ. ಆತ ವಿಶ್ವದ ಶ್ರೇಷ್ಠ ಮೂವರು ಲೆಗ್‌ಸ್ಪಿನ್ನಿಗರಲ್ಲಿ ಒಬ್ಬರೆಂದು ಪ್ರಸಿದ್ಧಿ. ಇತರ ಇಬ್ಬರೆಂದರೆ ಆಸ್ಟ್ರೇಲಿಯಾದ ಮೋಡಿಗಾರ ಶೇನ್‌ವಾರ್ನ್ ಮತ್ತು ಪಾಕಿಸ್ತಾನದ ಮುಶ್ತಾಕ್ ಅಹ್ಮದ್. ಈಗ ಚರ್ಚೆ ಸಾಗುತ್ತಿರುವುದು ಅನಿಲ್ ಕುಂಬ್ಳೆ ಶ್ರೇಷ್ಠರೋ, ಶೇನ್‌ವಾರ್ನ್ ಶ್ರೇಷ್ಠರೊ ಎಂದೇ ಆಗಿದೆ. ಒಂದಂಶವನ್ನು ಕಡೆಗಣಿಸುವಂತಿಲ್ಲ. ವೇಗದ ಶೈಲಿಯ ಸ್ಪಿನ್ ಎಸೆತವಿಕ್ಕುವ ಕುಂಬ್ಳೆ, ಕ್ರಿಕೆಟಿನ ಏಕದಿನ ಶೈಲಿಯಲ್ಲೂ ಟೆಸ್ಟ್ ಶೈಲಿಯಲ್ಲೂ ಏಕಪ್ರಕಾರ ಉಪಯೋಗಿ ಎಂದು ಸ್ಥಾಪಿಸಿರುವ ಪರಿಪಕ್ವ ಆಟಗಾರ. ರಾಷ್ಟ್ರೀಯ ತಂಡಕ್ಕೆ ಬಿಡುವಿರುವಾಗ ಅನಿಲ್ ಕುಂಬ್ಳೆ ರಣಜಿ ಸರಣಿಯಲ್ಲಿ ಕರ್ನಾಟಕ ತಂಡದ ನಾಯಕತ್ವ ವಹಿಸಿಯೂ ಸ್ಫೂರ್ತಿ

ನೀಡಿದ್ದಾರೆ. ರಾಜೇಶ್ ಚೌಹಾನ್, ವೆಂಕಟಪತಿ ರಾಜು ಅವರ ಜತೆಯಲ್ಲಿ ಮೂರನೆಯವರಾಗಿ ಸೇರಿಕೊಳ್ಳುವ ಅನಿಲ್‌ಕುಂಬ್ಳೆ ಅವರಿಗೆ, ಯಾರಿಂದಲೂ 'ಖೋ' ಬಂದಿಲ್ಲ. ಮೊದಲ ಇಬ್ಬರು ಇಷ್ಟರಲ್ಲೇ ಇತರರ 'ಖೋ'ದಿಂದ ಕದಲಿದ್ದಾರೆ. ಶ್ರೀಲಂಕೆಯೆದುರು ಲಕ್ನೋ ಟೆಸ್ಟಿನಲ್ಲಿ ಭಾರತವನ್ನು ಗೆಲ್ಲಿಸಿದ ಅನಿಲ್ ಕುಂಬ್ಳೆ ೫೯ ರನ್ ವೆಚ್ಚದಲ್ಲಿ ಏಳು ವಿಕೆಟುಗಳನ್ನು ಪಡೆದು ಟೆಸ್ಟ್ ಬಾಳ್ವೆಯ ಶ್ರೇಷ್ಠ ಪ್ರಾಪ್ತಿಯನ್ನು ದಾಖಲಿಸಿಕೊಂಡರು.

ಸುಮಾರು ೧೬ ವರ್ಷಗಳ ಕಾಲ ಭಾರತೀಯ ಕ್ರಿಕೆಟ್ ತಂಡದಲ್ಲಿ ವೇಗದದಾಳಿಯ ಸಾಮ್ರಾಟನಾಗಿ ನೆಲೆಯಾಗಿದ್ದ ಕಪಿಲದೇವ್, ವಿಶ್ವದಾಖಲೆಯ ವಿಕೆಟುಗಳ ಮೊತ್ತ ಗಳಿಸಿ ನಿವೃತ್ತಿ ಪ್ರಕಟಿಸುವವರೆಗೂ ತಂಡದ ಮೂರನೆ ವೇಗಿ ಎನಿಸಿದ್ದ ಮತ್ತು ಸ್ಪಿನ್‌ತ್ರಯದ ಕಾರಣ ಅಂತಿಮ ೧೧ರ ಬಳಗದಿಂದ ಆಗಾಗ ಹೊರಬೀಳುತ್ತಲೂ ಇದ್ದ. ಜಾವಗಲ್ ಶ್ರೀನಾಥ್ ೧೯೯೪ ರಲ್ಲಿ ಭಾರತದ ಸ್ಟ್ರೈಕ್ ಬೌಲರ್ ಆಗಿ ಪ್ರತಿಷ್ಠಿತರಾದರು. ವೆಸ್ಟ್‌ಇಂಡೀಸಿನ ಎದುರು ನಡೆದ ಮುಂಬಯಿ ಟೆಸ್ಟ್ ಪಂದ್ಯದಲ್ಲಿ ಒಬ್ಬ ಉತ್ತಮ 'ಸವ್ಯಸಾಚಿ'ಯಾಗಿಯೂ ಶ್ರೀನಾಥ್ ಗಣನೆಗೆ ಬಂದರು. ಆತ ವಿಂಡಿಗರ ಉರಿವೇಗದ ದಾಳಿಯೆದುರು ೭೪ ಎಸೆತಗಳಿಂದ ಆರು ಬೌಂಡರಿಗಳು ಮತ್ತು ಒಂದು ಸಿಕ್ಸರ್ ಸಹಿತ ೬೦ ರನ್‌ಗಳನ್ನು ಕೂಡಿಸಿ ತಂಡದ ಗೆಲವಿಗೆ ಮಹತ್ತರ ಸಹಾಯ ಮಾಡಿದರು. ಅರ್ಹವಾಗಿಯೆ 'ಪಂದ್ಯಶ್ರೇಷ್ಠ' ಪ್ರಶಸ್ತಿಯನ್ನು ಪಡೆದರು. ಟೆಸ್ಟ್ ಕ್ರಿಕೆಟಿನಲ್ಲಿ ಶ್ರೀನಾಥ್‌ಗೆ 'ಪಂದ್ಯಶ್ರೇಷ್ಠ' ಪ್ರಶಸ್ತಿ ಬಂದುದು ಇದು ಎರಡನೆ ಬಾರಿ. ಶ್ರೀನಾಥ್ ಅವರ ವೇಗದ ದಾಳಿಯಲ್ಲಿ ಉರಿ ಎಷ್ಟೆಂದು ಪೆಪ್ಸಿ ಸರಣಿ ಹಾಗೂ ವಿಲ್ಸ್ ಸರಣಿಗಳಲ್ಲಿ ಅವರನ್ನು ಇದಿರಿಸಿದ ವಿಂಡಿಗರಿಗೆ ಮಾತ್ರ ಗೊತ್ತು. ಅತ್ಯಂತ ವೇಗದಲ್ಲಿ ಚೆಂಡನ್ನು ಕಳುಹಿಸಬಲ್ಲ ವಿಶ್ವದ ಕೆಲವೆ ವೇಗಿಗಳಲ್ಲಿ ಒಬ್ಬರು ಶ್ರೀನಾಥ್. ಎಡಗೈ ದಾಂಡಿಗರನ್ನು ವಂಚಿಸಲು ಶ್ರೀನಾಥ್ ಅವರ ದಾಳಿಗೆ ಸಾಧ್ಯವಾದಷ್ಟು ಇನ್ನಾವ ಭಾರತೀಯ ಎಸೆಗಾರನಿಗೂ ಸಾಧ್ಯವಾಗಿಲ್ಲ ಎಂಬುದು ಉತ್ಪ್ರೇಕ್ಷೆಯೇನಲ್ಲ.

೧೯೯೦ ರಿಂದಲೂ ರಣಜಿ ಆಟಗಾರನಾಗಿ ತನ್ನ ವೇಗದ ದಾಳಿಯಿಂದ ಕರ್ನಾಟಕ ತಂಡದಲ್ಲಿ ಪ್ರತಿಷ್ಠಿತರಾಗಿದ್ದ ವೆಂಕಟೇಶ ಪ್ರಸಾದ್, ೧೯೯೪,ರ ಮಾರ್ಚ್ ತಿಂಗಳು ಭಾರತೀಯ ತಂಡಕ್ಕೆ ಆಕಸ್ಮಿಕವಾಗಿ ಸೇರ್ಪಡೆಯಾದರು. ನ್ಯೂಜಿಲೆಂಡ್ ಪ್ರವಾಸದಲ್ಲಿದ್ದ ಭಾರತೀಯ ತಂಡದಿಂದ ' ಸವ್ಯಸಾಚಿ' ಮನೋಜ ಪ್ರಭಾಕರ್, ಕಾಲುನೋವಿನಿಂದ ಹೊರಬಿದ್ದಾಗ ವೆಂಕಟೇಶ ಪ್ರಸಾದ್ ಅವರಿಗೆ ಕರೆ ಬಂತು. ಉತ್ತಮ ನಿರ್ವಹಣೆಯೊಂದಿಗೆ ಮಿಂಚಿಕೊಂಡಿದ್ದ ಪಂಜಾಬಿನ ಭೂಪಿಂದರ್ ಸಿಂಗ್ ಮತ್ತು ಬಂಗಾಲದ ಪ್ರಶಾಂತ ವೈದ್ಯ ಇವರನ್ನು ಹಿಂದಿಕ್ಕಿ, ವೆಂಕಟೇಶ ಪ್ರಸಾದ್ ರಾಷ್ಟ್ರೀಯ ತಂಡವನ್ನು ಸೇರಿಕೊಂಡರು. ಆದರೆ ಅವರು ಅಂತರಾಷ್ಟ್ರೀಯವಾಗಿ ಕಾಣಿಸಿಕೊಂಡ ಮೊದಲ ಪಂದ್ಯವೆಂದರೆ ನ್ಯೂಜಿಲ್ಯಾಂಡಿನಲ್ಲಾದ ಕೊನೆಯ ಪಂದ್ಯ. ಅದೇ ಏಪ್ರಿಲ್ ತಿಂಗಳು ಶಾರ್ಜಾದಲ್ಲಾದ ಕ್ರಿಕೆಟ್‌ಕೂಟದಲ್ಲಿ ವಿಂಡೀಸಿನ ಇನ್ನಿಂಗ್ಸಿನ ಎದುರು ಭಾರತದ ಆರಂಭಿಕ ದಾಳಿಯನ್ನು ಹಂಚಿಕೊಳ್ಳುವ ಹೆಗ್ಗಳಿಕೆ ಕರ್ನಾಟಕದ ವೇಗಿಗಳಾದ ಶ್ರೀನಾಥ್ ಮತ್ತು ವೆಂಕಟೇಶ ಪ್ರಸಾದ್ ಅವರ ಪಾಲಿಗಾಗಿತ್ತು.

# ಸಾಂಸ್ಕೃತಿಕ ವಿದ್ಯಮಾನಗಳು

## ರಂಗಭೂಮಿ

*ಗುಡಿಹಳ್ಳಿ ನಾಗರಾಜ*

---

ನಗರದ ಹವ್ಯಾಸಿ ರಂಗಭೂಮಿ ಚಟುವಟಿಕೆಗಳನ್ನು ಕುರಿತು ಮಾತ್ರ ಹೇಳುವುದಾದರೆ, ಹಿಂದಿನ ೬-೭ ವರ್ಷಗಳಂತೆ ೯೪ ರಲ್ಲಿ ಸಹ ರಂಗ ಚಟುವಟಿಕೆಗಳು ಕ್ಷೀಣಗೊಂಡಂತೆ ಕಾಣುತ್ತವೆ. ಆದರೆ ಹಳ್ಳಿಗಾಡಿನಲ್ಲಿ ಆಗುತ್ತಿರುವ ಕಂಪನಿಶೈಲಿಯ ನಾಟಕಗಳು, ಜಾನಪದ ನಾಟಕಗಳು ಮತ್ತು ಕಂಪನಿ ನಾಟಕಗಳ ಪ್ರದರ್ಶನದ ಸಂಖ್ಯೆಯನ್ನು ಲೆಕ್ಕಕ್ಕೆ ತೆಗೆದುಕೊಂಡರೆ, ಒಟ್ಟಾರೆ ರಂಗಚಟುವಟಿಕೆ ಕ್ಷೀಣಗೊಂಡಿಲ್ಲ. ಆದರೆ ಎಲ್ಲ ಪ್ರಕಾರಗಳೂ ಒಂದು ರೀತಿಯ ಬಿಕ್ಕಟ್ಟನ್ನು ಎದುರಿಸುತ್ತಿವೆ.

ನಗರದ ತಂಡಗಳನ್ನು ಮುಖ್ಯವಾಗಿ ಕಾಡಿದ್ದು ಪ್ರೇಕ್ಷಕರ ಕೊರತೆ. ೭೦ರ ದಶಕದಲ್ಲಿ ೩೦೦ ಪ್ರೇಕ್ಷಕರು ಬರುವ ಕಡೆ, ಈಗ ಆ ಸಂಖ್ಯೆ ೩೦ ಕ್ಕೆ ಇಳಿದಿದೆ. ಕಂಪನಿ, ನಾಟಕ, ಜಾನಪದ ನಾಟಕಗಳಿಗೆ ಏಳು-ಬೀಳು ಇದೆಯೇ ಹೊರತು, ಇನ್ನೂ ಇಂತಹ ದುಸ್ಥಿತಿ ಬಂದಿಲ್ಲ. ಹಳ್ಳಿಗಾಡಿನ ನಾಟಕಗಳಿಗಂತೂ ಸಾವಿರ- ಸಾವಿರ ಸಂಖ್ಯೆಯ ಪ್ರೇಕ್ಷಕರು ಈಗಲೂ ಇದ್ದಾರೆ. ಪ್ರತೀ ಹಳ್ಳಿಗಳಲ್ಲಿ ವರ್ಷಕ್ಕೆ ಒಂದು ಬಾರಿಯಾದರೂ ಆಗುವ ನಾಟಕಗಳನ್ನು ಸಾವಿರಾರು ಪ್ರೇಕ್ಷಕರು ವೀಕ್ಷಿಸುತ್ತಾರೆ. ಹಳ್ಳಿನಾಟಕಗಳು ಕಂಪನಿ ಶೈಲಿಯನ್ನೇ ಅನುಕರಿಸುತ್ತವೆ. ಕೆಲವು ವರ್ಷಗಳ ಹಿಂದೆ ಕೇಳಿಬರುತ್ತಿದ್ದ ವೃತ್ತಿ (ಕಂಪನಿ) ಮತ್ತು ಹವ್ಯಾಸಿ ತಂಡಗಳ ನಡುವೆ ಸಂವಾದ ನಡೆಯಬೇಕು ಎಂಬ ಮಾತು ಈಗ ಮರೆತೇ ಹೋಗಿದೆ. ಕಂದಕ ಹೆಚ್ಚಾಗಿದೆ. ಯಾರಿಗೂ ಯಾರ ಬಗ್ಗೆಯೂ ವಿಶ್ವಾಸ ಉಳಿದಿಲ್ಲ.

ಮೌಲಿಕತೆ ಬೇರೆ, ಜನಪ್ರಿಯತೆ ಬೇರೆ. ಜನಪ್ರಿಯವಾದದ್ದು ಮೌಲಿಕವಾಗಿರುವುದಿಲ್ಲ ಎಂಬ ವಿಂಗಡನೆಯಿಂದ 'ಸಾಹಿತ್ಯ ಶ್ರೇಷ್ಠರು' ಬೀಗುತ್ತಿರುವಂತೆಯೇ, ನಗರದ ಹವ್ಯಾಸಿಯಲ್ಲಿನ ಹಿಡಿಯಷ್ಟು ಮಂದಿ ಬೀಗುತ್ತಿರುವುದು ರಂಗಭೂಮಿಯನ್ನು ಸ್ಥಗಿತತೆಗೆ ಕೊಂಡೊಯ್ದರೆ ಅಚ್ಚರಿ ಇಲ್ಲ. ಮಧ್ಯಮವರ್ಗಕ್ಕೆ ಬೃಹತ್ ಪ್ರೇಕ್ಷಕ ಸಮುದಾಯದ ಬಗ್ಗೆ ಇರುವ ಅಂಜಿಕೆಯೂ ಇಂತಹ ನಿಲುವಿಗೆ ಕಾರಣವಿರಬಹುದು. ಪ್ರೇಕ್ಷಕರ ಸಹಭಾಗಿತ್ವದಿಂದ ಬೆಳೆಯುವ ರಂಗಭೂಮಿಯು ಪ್ರೇಕ್ಷಕರನ್ನೇ ಮರೆತರೆ ಆಗುವ ಸ್ಥಿತಿ ಈಗ ಉಂಟಾಗಿದೆ.



'ಹೇಮರೆಡ್ಡಿ ಮಲ್ಲಮ್ಮ' ನಾಟಕದ ಒಂದು ದೃಶ್ಯ

ಜೀವನದ ವೈರುಧ್ಯಗಳನ್ನು, ಸಂಕೀರ್ಣತೆಯನ್ನು ಕಲಾ ಮಾಧ್ಯಮದಲ್ಲಿ ಮಂಡಿಸುವ ಎಲ್ಲ ನಾಟಕ ಸಾಹಿತ್ಯವೂ ಪ್ರಕಟಿತ ಕೃತಿಯೇ ಆಗಿಲ್ಲ. ಅಪ್ರಕಟಿತವೂ ಸಾಕಷ್ಟಿದೆ. ಪ್ರದರ್ಶನದಿಂದ ಪ್ರದರ್ಶನಕ್ಕೆ ಬೆಳೆಯುತ್ತ, ಬದಲಾಗುತ್ತ ಹೋಗುವ ಶಕ್ತಿ ನಮ್ಮ ಮೌಖಿಕ ಪರಂಪರೆಗೆ, ಜಾನಪದಕ್ಕೆ, ಬೀದಿನಾಟಕಗಳಿಗೆ ಇದೆ. ಇಂತಹ ಗಂಭೀರ ಸಾಹಿತ್ಯವು ಜಾನಪದದಲ್ಲಿ, ಕಂಪನಿ ನಾಟಕಗಳಲ್ಲಿ ಎಲ್ಲೆಂದರಲ್ಲಿ ಹುದುಗಿದೆ. ಸುಶಿಕ್ಷಿತ ಹವ್ಯಾಸಿಗಳಿಗೆ ಅವನ್ನು ಹುಡುಕಿ ತೆಗೆಯುವ ವ್ಯವಧಾನ ಇಲ್ಲ. ಕನ್ನಡದಲ್ಲಿ ಹೊಸ ನಾಟಕಗಳೇ ಇಲ್ಲ ಎಂದು ಅವರು ಕೈಚೆಲ್ಲಿ ಕುಳಿತುಕೊಳ್ಳುತ್ತಾರೆ.

ಬೆಂಗಳೂರಿನ ಚಟುವಟಿಕೆಗಳು ಅನುವಾದ, ರೂಪಾಂತರ ಮತ್ತು ಹಳೆಯ ನಾಟಕಗಳ ಮರು ಪ್ರದರ್ಶನಗಳನ್ನೇ ಹೆಚ್ಚು ನೆಚ್ಚಬೇಕಾಯಿತು. ಬರ್ನಾಡ್ ಷಾನ 'ಎ ಡಾಲ್ಸ್ ಹೌಸ್', ಸೊಫೊಕ್ಲಿಸ್‌ನ 'ಅಂತಿಗೊನೆ', ಶೇಕ್ಸ್‌ಪಿಯರ್‌ನ 'ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ಜರ್ಮನ್ ಭಾಷೆಯ 'ವಿಸೀಟ್' (visit) ನಾಟಕದ ಕನ್ನಡ ಅನುವಾದ ಮುಂತಾದವು ರಂಗವೇರಿದವು. ಚಂದ್ರಕಾಂತ ಕುಸನೂರರ ' ವಿದೂಷಕ' ಅಸಂಗತ ನಾಟಕಕ್ಕೆ ಈ ಮಧ್ಯೆ ಒಂದು ಪ್ರದರ್ಶನದ ಭಾಗ್ಯ ಲಭಿಸಿತು. 'ರಂಗ ನಿರಂತರ' ಯುವ ರಂಗಕರ್ಮಿಗಳನ್ನು ಪ್ರೋತ್ಸಾಹಿಸುವ ಕೆಲಸ ಮುಂದುವರಿಸಿದೆ. ಕನ್ನಡದ ಹೊಸ

ನಾಟಕಗಳ ಪೈಕಿ ಜಾಡಮಾಲಿಯೊಬ್ಬ ಜನಪ್ರಿಯ ತಾರೆಯನ್ನು ಪ್ರೀತಿಸಿ ಭಗ್ನಗೊಳ್ಳುವ 'ಮಕರ ಚಂದ್ರ' ಎಂಬ ಶಿವಪ್ರಕಾಶರ ನಾಟಕ ಸ್ವಲ್ಪ ಸುದ್ದಿ ಮಾಡಿತು.

ಪರ್ವತವಾಣಿ ಅವರ ನಾಟಕೋತ್ಸವ, ಕೈಲಾಸಂ ಸ್ಪರ್ಧೆ, ಶಂಕರನಾಗ್ ನೆನಪಿಗೆ ರಂಗಶಂಕರ, ರಂಗಕರ್ಮಿ ಪದ್ಮಣ್ಣ ನಿಧನದ ನೆನಪಿಗೆ ಪು. ಲ. ದೇಶಪಾಂಡೆ ಅವರ ಒಂದು ನಾಟಕ- ಹೀಗೆ ಆಗಾಗ ರಂಗಮಂದಿರಗಳು ಅರೆ-ಬರೆ ತುಂಬುತ್ತಿದ್ದವು. ರಂಗ ಮಂದಿರ ಭರ್ತಿಯಾಗಿ ಸ್ವಲ್ಪ ಸಂಭ್ರಮ ಕಂಡಿದ್ದೆಂದರೆ ''ಕುವೆಂಪು ನಾಟಕೋತ್ಸವ''ದಲ್ಲಿ. ಫೋರ್ಡ್ ಫೌಂಡೇಶನ್ ನೆರವಿನಿಂದ ಜಯಶ್ರೀ ಅವರ ನಿರ್ದೇಶನದ 'ಅಗ್ನಿಪಥ್' ನಾಟಕ ಅದ್ದೂರಿಯಾಗಿ ಪ್ರದರ್ಶನಗೊಂಡಿತು. 'ಸ್ಫೂರ್ತಿ'ತಂಡ ಮಕ್ಕಳ ನಾಟಕ ಸ್ಪರ್ಧೆ ನಡೆಸಿತು. ವಿಶ್ವರಂಗಭೂಮಿ ದಿನಾಚರಣೆ ನಿಮಿತ್ತ ಬೆಂಗಳೂರಿನ ಬಿ. ಜಿ. ರಾಮಕೃಷ್ಣ, ಎಂ. ಶಿವಶಂಕರ್ ಎಂಬ ಯುವಕರು ೨೪ ಗಂಟೆಗಳ ಕಾಲ ಸತತ ನಾಟಕ ಪ್ರಯೋಗಿಸಿ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. 'ಸಿಂಹ' ತನ್ನ 'ಗುಹೆ'ಯೊಳಗೊಂದು 'ರಂಗಮಂದಿರ' ನಿರ್ಮಿಸಿದೆ. ಜಾನಪದ ರಂಗಪ್ರಕಾರ ಬಳಸಿಕೊಂಡು ಆಧುನಿಕ ರಂಗಪ್ರಯೋಗದ ರಾಷ್ಟ್ರೀಯ ಉತ್ಸವಕ್ಕೆ ದಕ್ಷಿಣವಲಯದಿಂದ ಆಯ್ಕೆಯಾದ ಕನ್ನಡ ನಾಟಕವೆಂದರೆ, ಶಿವಪ್ರಕಾಶರ 'ಮಹಾಚೈತ್ರ'. ಆದರೆ ಆ ಹೆಮ್ಮೆ ಬಹಳ ದಿನ ಉಳಿಯಲಿಲ್ಲ. ಇದೇ ನಾಟಕ ಕೃತಿಯು ಮತಾಂಧರ ಆಕ್ರೋಶಕ್ಕೆ ತುತ್ತಾದದ್ದು ಒಂದು ವಿಪರ್ಯಾಸ. ಚರಿತ್ರೆಯನ್ನು ವಿರೂಪಗೊಳಿಸಲಾಗಿದೆ ಎಂದು ಒಂದು ಸಣ್ಣ ಪ್ರಮಾಣದ ಪುರೋಹಿತಶಾಹಿವರ್ಗ ಎಬ್ಬಿಸಿದ ಗೊಂದಲ ಮಾರಕವಾದದ್ದು, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಿಂತ ಹೆಚ್ಚಾಗಿ ಪ್ರಗತಿಪರ ಆಶಯಗಳಿಗೆ. ತಾನೇ ನಿಯಮಿಸಿದ ಪಠ್ಯ ಪುಸ್ತಕವನ್ನು ವಿಶ್ವವಿದ್ಯಾಲಯದ ತಜ್ಞರಸಮಿತಿ ಸಮರ್ಥಿಸಿಕೊಂಡು ರಾಜೀನಾಮೆ ನೀಡುವಂತಹ ದಿಟ್ಟತನ ಪ್ರದರ್ಶಿಸದೇ ಹೋದದ್ದು, ಬುದ್ಧಿಜೀವಿಗಳ ಪುಕ್ಕಲುತನವನ್ನು ಬಯಲು ಮಾಡಿತು.

ಇದೊಂದು ಅಗ್ಗದ ಕೃತಿ. ಕೀಳು ಪ್ರಚಾರಕ್ಕಾಗಿ ಕೆಲವರು ವಿರೋಧಿಸಿ, ಕೆಲವರು ಸಮರ್ಥಿಸಿಕೊಳ್ಳುತ್ತಿದ್ದಾರೆ. ಅವರವರಲ್ಲೇ 'ಅಂಡರ್‌ಸ್ಟ್ಯಾಂಡಿಂಗ್' ಇದೆ ಎಂಬ ಅರ್ಥದಲ್ಲಿ ಪತ್ರಿಕೆಯೊಂದು ಬರೆದು, 'ಮಹಾಚೈತ್ರ' ನಾಟಕದ ಪರವಾಗಿ ರೂಪುಗೊಳ್ಳುತ್ತಿದ್ದ ಚಳವಳಿಯನ್ನು ಡೈವರ್ಟ್ ಮಾಡಿತು. ಕಿರಿಯ ಲೇಖಕನಿಗೆ ಏನಕೇನ ಪ್ರಚಾರ ಸಿಕ್ಕಿದ್ದರಿಂದ ಅಸಹನೆಯಿಂದ ಇದ್ದ ಹಿರಿಯಲೇಖಕರಿಗೆ, ಇದು ಹಾಸಿಗೆ ಹಾಸಿಕೊಟ್ಟಂತಾಯಿತು. ಆದರೆ ಪಠ್ಯವನ್ನು ಸರ್ಕಾರ ರದ್ದುಮಾಡಿದ ಮೇಲಷ್ಟೇ (ನಾಳೆ ತಮ್ಮ ಪುಸ್ತಕಕ್ಕೆ ಈ ಗತಿ ಬಂದರೆ) ಸಾಹಿತಿಗಳು ಎಚ್ಚೆತ್ತುಕೊಂಡರು. ಸಕಾಲಕ್ಕೆ ಪ್ರತಿಭಟನೆಯಿಂದ ಉಳಿಸಿಕೊಳ್ಳುವ ಯತ್ನಮಾಡದಿದ್ದುದು ಸಾರಸ್ವತಲೋಕದ ಅಪ್ರಾಮಾಣಿಕತೆಯನ್ನು ನಗ್ನಗೊಳಿಸಿತು. ರದ್ದು ಮಾಡಿದ ನಂತರ ಕೇಳಿ ಬಂದ ಸೊಲ್ಲು 'ಪೋಸ್ಟ್ ಮಾರ್ಟಂ' ಅಷ್ಟೇ ಆಯಿತು. ಆದರೂ ನಾಟಕದ ಪ್ರದರ್ಶನಕ್ಕೆ ಕುತ್ತು ಬಂದಿಲ್ಲ ಎಂಬುದೇ ಸಂತಸದ ವಿಚಾರ.

ಇಡೀ ಬೆಂಗಳೂರಿನ ಪ್ರೇಕ್ಷಕರನ್ನು ಉತ್ಸಾಹ, ಸಂಭ್ರಮದಿಂದ ಆಕರ್ಷಿಸಿದ ನಾಟಕವೆಂದರೆ ವಾರ್ತಾ ಇಲಾಖೆಗೆ ಆರ್. ನಾಗೇಶ್ ನಿರ್ದೇಶಿಸಿದ 'ಆಫೀಸಾಯ ನಮಃ'. ಸರ್ಕಾರಿ ಕಚೇರಿಯಲ್ಲಿನ ಬೇಜವಾಬ್ದಾರಿ, ಅಕ್ರಮ, ಅಶಿಸ್ತು, ಕುಡುಕತನ, ಜೂಜಿನಿಂದ ಆಗುವ ಅವಾಂತರಗಳಿಗೆ ಕಚಗುಳಿ ಇಡುವ ನಾಟಕ ಬೆಂಗಳೂರಿನ ನೌಕರ ಸಮುದಾಯಗಳನ್ನು ಎಚ್ಚರಿಸುವ ಕೆಲಸ ಮಾಡಿತು.

ವಾರ್ತಾ ಇಲಾಖೆ ಪ್ರಸಕ್ತ ವರ್ಷ ಹೊಸ ಉಪಕ್ರಮವೊಂದನ್ನು ಆರಂಭಿಸಿತು. ಇಲಾಖೆ ಇದುವರೆಗೂ ಬೆಂಗಳೂರಿನ ತನ್ನ ಕಲಾವಿಭಾಗದಲ್ಲಿ ನಾಟಕಗಳನ್ನು ಸಿದ್ಧಪಡಿಸಿಕೊಂಡು ಕರ್ನಾಟಕದ ಮೂಲೆಮೂಲೆಗೂ ಹೋಗಿ ಪ್ರದರ್ಶನ ಕೊಡುತ್ತಿತ್ತು. ಆದರೆ ಈಗ ಎರಡು ಮೂರು ಜಿಲ್ಲೆಗಳ ಒಂದು ಘಟಕ ಮಾಡಿ, ಆ ಎರಡು ಜಿಲ್ಲೆಗಳ ಶಿಸ್ತುಬದ್ಧ ರಂಗತಂಡವೊಂದಕ್ಕೆ ನಾಟಕ ನಿರ್ದೇಶಿಸಿ, ಆಯಾ ಜಿಲ್ಲೆಗಳಲ್ಲಿ ಪ್ರದರ್ಶಿಸುವಂತಹ ಒಂದು ವಿಕೇಂದ್ರಿಕರಣದ ಕ್ರಮ ಕೈಗೊಂಡಿತು. ಚಿತ್ರದುರ್ಗ, ತುಮಕೂರು, ಶಿವಮೊಗ್ಗ ಜಿಲ್ಲೆಗಳಿಗೆ ಸಿರಿಗೆರೆ ತರಳಬಾಳು ಕಲಾಸಂಘದಿಂದ 'ಜಲಗಾರ' ನಾಟಕವನ್ನು ನಾಗೇಶ್ ನಿರ್ದೇಶಿಸಿ, ಈ ಮೂರು ಜಿಲ್ಲೆಗಳಲ್ಲಿ ಸುಮಾರು ೨೦ ಪ್ರಯೋಗ ಕೊಟ್ಟರು; ಬಳ್ಳಾರಿ ರಾಯಚೂರು ಜಿಲ್ಲೆಗಳ ಘಟಕಕ್ಕೆ ಮರಿಯಮ್ಮನ ಹಳ್ಳಿ ಲಲಿತಕಲಾ ರಂಗದ ವತಿಯಿಂದ 'ಬೆಳ್ಳಕ್ಕಿ ಹಿಂಡ ಬೆದರ‍್ಯಾವೊ' ನಾಟಕವನ್ನು ಕೆ. ಶಿವರುದ್ರಯ್ಯ ನಿರ್ದೇಶಿಸಿ, ಆ ಎರಡು ಜಿಲ್ಲೆಗಳಲ್ಲಿ ಪ್ರದರ್ಶಿಸಿದರು. ಕಳೆದ ಹಲವು ವರ್ಷಗಳಲ್ಲಿ ಗ್ರಾಮೀಣ ಭಾಗದ ಹೆಚ್ಚು ಪ್ರೇಕ್ಷಕರನ್ನು ಸದ್ದಿಲ್ಲದೆ ತಲುಪಿದ್ದು ಸರ್ಕಾರದ ಅಂಗವಾದ ವಾರ್ತಾ ಇಲಾಖೆ ನಾಟಕಗಳು ಎಂಬುದು ಕೆಲವರಿಗಾದರೂ ಅಚ್ಚರಿಯ ಸಂಗತಿ.

ನಗರದ ಹವ್ಯಾಸಿ ತಂಡಗಳ ಪ್ರದರ್ಶನವೊಂದಕ್ಕೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನೀಡುವ ೨,೫೦೦ ರೂ.ಗಳ ಸಹಾಯ ಧನದಿಂದಲೇ ಕೆಲವು ತಂಡಗಳು ಬದುಕಿವೆ! ಹಳ್ಳಿಗಾಡಿನ ಹವ್ಯಾಸಿಗಳಿಗೆ ಈ ಸಹಾಯಧನ ಕೊಡಬಾರದೆಂದೇನೂ ಇಲ್ಲ. ಆದರೆ ಇಂತಹ ಸರ್ಕಾರದ ನೆರವು ಪಡೆದುಕೊಳ್ಳುವುದು ಅವರಿಗೆ ಗೊತ್ತಿಲ್ಲ. 'ಬೀದಿನಾಟಕ - ಎರಡು ದಶಕ' ಎಂಬ ವಿಚಾರಗೋಷ್ಠಿಯನ್ನೂ ಹಾಗೂ ಬೀದಿ ನಾಟಕೋತ್ಸವವೊಂದನ್ನು ಸಂಸ್ಕೃತಿ ಇಲಾಖೆ ನಡೆಸಿಕೊಟ್ಟಿತು. ಬೆಂಗಳೂರಿನ ಮಹಾನಗರಿಯ ಕಲಾಕ್ಷೇತ್ರದಲ್ಲಿ ಒಂದು ದಿನವೂ ಬಿಡುವಿಲ್ಲದಂತೆ ಕಂಪನಿ ಶೈಲಿಯ ಸಾಮಾಜಿಕ, ಪೌರಾಣಿಕ ನಾಟಕಗಳು ಪ್ರದರ್ಶನಗೊಂಡಿವೆ. ಅನೇಕ ಬಡಾವಣೆ, ಹಬ್ಬ - ಉತ್ಸವಗಳಲ್ಲೂ ಈ ರೀತಿ ಪ್ರಯೋಗಗಳಾಗಿವೆ. ಕೈಗಾರಿಕಾ ನಾಟಕೋತ್ಸವಗಳೂ ಜರುಗಿವೆ. ಬೆಂಗಳೂರಿನ ಹೊರಗೆ ಅನೇಕ ಗಮನಾರ್ಹ ಪ್ರಯೋಗಗಳು ನಡೆದಿವೆ. ಬೆಂಗಳೂರಿನಂತೆ ಇವೂ ಸಹ ಒಂದು ಎರಡು ಪ್ರಯೋಗಗಳಿಗೆ ಸೀಮಿತ. ಈ ಹವ್ಯಾಸಿಗಳು ಹೀಗೆಯೇ ಅಲ್ಪತೃಪ್ತರು. ಒಂದು ನಾಟಕ ಮಾಡಿ ಅದನ್ನೇ ವರ್ಷವೆಲ್ಲಾ ಚರ್ಚಿಸಿ ಖುಷಿಪಡುವಂತಹವರು.

ಕನಕಪುರದ ತಂಡಕ್ಕೆ ಇಕ್ಬಾಲ್ ನಿರ್ದೇಶಿಸಿದ ಬ್ರೆಕ್ಟ್‌ನ 'ಮೂರು ಕಾಸಿನ ಸಂಗೀತ'. ಬೆಂಗಳೂರಿನ ಎಲ್. ಕೃಷ್ಣಪ್ಪ ಚಿತ್ರದುರ್ಗದ 'ರಚನಾ'ಕ್ಕೆ ನಿರ್ದೇಶಿಸಿದ ನಿಸರ್ಗಪ್ರಿಯರ 'ತಿರುಕರಾಜ', ಸಿರಿಗೆರೆ ತಂಡಕ್ಕೆ ನಾಗೇಶ ನಿರ್ದೇಶಿಸಿದ 'ತಾಮ್ರಪತ್ರ', ಅಶೋಕ ಬಾದರದಿನ್ನಿ ಚಿತ್ರದುರ್ಗ ಮುರುಘಾಠದ ತಂಡಕ್ಕೆ ನಿರ್ದೇಶಿಸಿದ ನಾಟಕಗಳು -ಹೀಗೆ ಇವು ಬೆಂಗಳೂರಿನ ಖ್ಯಾತರು ಹೊರಗಡೆ ಹೋಗಿ ನಿರ್ದೇಶಿಸಿದ ಕೆಲವು ನಾಟಕಗಳು. ಮಂಚಿಕೇರಿ ತಂಡದಲ್ಲಿ 'ಮೃಚ್ಛಕಟಿಕ', 'ಸಿರಿಸಂಪಿಗೆ' ರಂಗವೇರಿದ್ದರೆ ಹುನಗುಂದದ 'ಧ್ರುವರಂಗ'ದಲ್ಲಿ ಲಂಕೇಶರ 'ಗುಣಮುಖ' (ಧ್ರುವರಾಜ ದೇಶಪಾಂಡೆ ನಿರ್ದೇಶನದಲ್ಲಿ) ಗಮನ ಸೆಳೆದಿದೆ. ಬಹಳ ದಿನಗಳಿಂದ ಮೌನವಾಗಿದ್ದ ಪ್ರತಿಭಾವಂತ ಗಾಯಕ-ನಿರ್ದೇಶಕ ಜನಾರ್ಧನ ಅವರು, ಮೈಸೂರಿನ 'ಜನ- ಮನ' ತಂಡಕ್ಕೆ ಚದುರಂಗರ 'ಬಂಡೆ ಕೊಳಲು' ನಿರ್ದೇಶಿಸಿದರು.

ಹವ್ಯಾಸಿ-ವೃತ್ತಿ ಎಂಬ ಕೃತಕತೆ ಬೇಧತೊರೆದು ತನ್ನ ಚಟುವಟಿಕೆ ಆರಂಭಿಸಿದ್ದು ಧಾರವಾಡದ 'ಮ್ಯಾಳ'ಕಳೆದ ವರ್ಷ ಕೃಷ್ಣ ಪಾರಿಜಾತ ಪ್ರಯೋಗ ಮಾಡಿದ್ದರೆ, ೯೪ ರಲ್ಲಿ ಕಂಪನಿ ನಾಟಕಗಳ ಖ್ಯಾತ ನಾಟಕಕಾರ ಮಹಾಂತೇಶ ಶಾಸ್ತ್ರಿಗಳ 'ಕುಂಕುಮ' ನಾಟಕವನ್ನು ಪ್ರದರ್ಶಿಸಿದೆ. ಫ್ರೆಂಚ್ ನಾಟಕಕಾರ ಮೊಲಿಯರ್‌ನ 'ದಿ ಬೂರ್ಜ್ವಾ ಜಂಟಲ್‌ಮನ್' (ರೂಪಾಂತರ: ಚಂದ್ರಶೇಖರ ಪಾಟೀಲ) ನಾಟಕವನ್ನು ಬಂಡು ಕುಲಕರ್ಣಿ ಯಶಸ್ವಿಯಾಗಿ ರಂಗಕ್ಕೆ ತಂದಿದ್ದಾರೆ.

ಪಾಲಕರ ಜವಾಬ್ದಾರಿ ಕುರಿತು ನೆಲಮಂಗಲದ ಶಿಕ್ಷಕ ಲಕ್ಷ್ಮಣ ಎಂಬುವರು ಸರಳ, ಆಡಂಬರ ರಹಿತ ಶೈಲಿಯಲ್ಲಿ ರಚಿಸಿರುವ 'ಗುರುಮೂರ್ತಪ್ಪನ ತೋಟ' ಕಳೆದ ೮ ವರ್ಷಗಳಲ್ಲಿ ೭೫ ಪ್ರದರ್ಶನ ಕಂಡು, ಗುಪ್ತಗಾಮಿನಿಯಾಗಿಯೇ ಜನರ ಮನ ಗೆದ್ದಿದೆ. ಮಕ್ಕಳೇ ಅಭಿನಯಿಸಿದ ನಾಟಕ ಇದು. ಶಾಲೆ- ಕಾಲೇಜುಗಳ ಮೂಲಕ ಇಂತಹ ಯತ್ನಗಳನ್ನು ಹೆಚ್ಚಿಸಬಾರದೇ ಎಂಬತ್ತ ರಂಗಾಸಕ್ತರ ಗಮನವನ್ನು ಈ ನಾಟಕ ಸೆಳೆದಿದೆ.

ವೃತ್ತಿ ರಂಗಭೂಮಿಯ ಶಿಸ್ತು, ಪ್ರತಿಭೆ ಹವ್ಯಾಸಿಗಳ ಪ್ರಯೋಗಶೀಲತೆ ಎರಡನ್ನು ಮೈಗೂಡಿಸಿಕೊಂಡು ಹಳ್ಳಿ-ಪಟ್ಟಣ ಎಲ್ಲೆಂದರಲ್ಲಿ ಹೆಚ್ಚು ಪ್ರಯೋಗ ಮಾಡುವ ಮರಿಯಮ್ಮನಹಳ್ಳಿಯ ಲಲಿತಕಲಾ ರಂಗಕ್ಕೆ ಈಗ ಹಬ್ಬದ ಸಡಗರ. ೯೪ ರಲ್ಲಿ ವಾರ್ತಾ ಇಲಾಖೆಯ ನಾಟಕ ಹೊರತುಪಡಿಸಿ ಹೊಸ ನಾಟಕ ಕೈಗೆತ್ತಿಕೊಳ್ಳಲಿಲ್ಲವಾದರೂ, ೯೩ ರ 'ಶೀಲಾವತಿ' ಜಾನಪದ ನಾಟಕ (ರಚನೆ-ಮುದೇನೂರು ಸಂಗಣ್ಣ. ನಿರ್ದೇಶನ- ಮ. ಬ. ಸೋಮಣ್ಣ) ಈಗಲೂ ಜಯಭೇರಿ ಬಾರಿಸುತ್ತಿದೆ.

ಮೈಸೂರಿನ 'ಸಮುದಾಯ' ಕಳೆದ ವರ್ಷಗಳ ನಾಟಕಗಳ ಮರುಪ್ರದರ್ಶನಗಳನ್ನು ನೆಚ್ಚಿಕೊಂಡರೆ, ಬೀದರ, ಗುಲ್ಬರ್ಗ ರಂಗ ತಂಡಗಳೂ ಅಷ್ಟಾಗಿ ಗಮನ ಸೆಳೆಯಲಿಲ್ಲ.

ಕಂಪನಿ ನಾಟಕದವರೊಬ್ಬರು ಇದೇ ಪ್ರಥಮ ಬಾರಿಗೆ ನಾಟಕ ಅಕಾಡೆಮಿ ಅಧ್ಯಕ್ಷರಾಗಿದ್ದ ಅವಧಿಯ ಕೊನೇ ವರ್ಷ ಇದು. ವೃತ್ತಿ ರಂಗಭೂಮಿಯ ಕಾಯಕಲ್ಪ ಯೋಜನೆ, ಅನೇಕ ವೃತ್ತಿ ಕಲಾವಿದರಿಗೆ ಪ್ರಶಸ್ತಿ, ಲೈಸನ್ಸ್ ಸರಳೀಕರಣಕ್ಕೆ ಹೋರಾಟ-ಮುಂತಾದವುಗಳಲ್ಲಿ ಅಕಾಡೆಮಿ ಅಧ್ಯಕ್ಷೆ ಚಿಂದೋಡಿ ಲೀಲಾ ತೀವ್ರವಾಗಿ ತೊಡಗಿಕೊಂಡರು. ಇವರ ಅವಧಿಯಲ್ಲಿ ಅಷ್ಟೇ ಪ್ರಮಾಣದಲ್ಲಿ ಹವ್ಯಾಸಿಗಳಿಗೂ ಅವಕಾಶ ದೊರೆತಿದೆ. ಯುವಜನೋತ್ಸವ, ಗ್ರಾಮೀಣ ರಂಗೋತ್ಸವ, ಕಾಲೇಜು ನಾಟಕೋತ್ಸವ, ಮಕ್ಕಳ ನಾಟಕೋತ್ಸವ - ಇವೆಲ್ಲಾ ಹವ್ಯಾಸಿಗಳಿಗೇ ರೂಪಿಸಿದ ಕಾರ್ಯಕ್ರಮಗಳು. ವೃತ್ತಿಕಂಪನಿ ಹಿನ್ನೆಲೆಯ ಅಕಾಡೆಮಿ ಅಧ್ಯಕ್ಷರು ಎಲ್ಲಾ ಪ್ರಕಾರಗಳನ್ನು ಸಮಾನ ಗೌರವದಿಂದ ಕಂಡರು. ಆದರೆ ಹವ್ಯಾಸಿಯವರು ಈ ಪದವಿಯಲ್ಲಿದ್ದಾಗ ವೃತ್ತಿ ಚಟುವಟಿಕೆಗಳಿಗೆ ಇಷ್ಟೇ ಗೌರವದಿಂದ ಪ್ರೋತ್ಸಾಹಿಸುತ್ತಾರೆಂದು ಹೇಳಲಿಕ್ಕಾಗದು. ವೃತ್ತಿರಂಗಭೂಮಿಗೆ ಖುಲಾಯಿಸಿದ್ದ ಅದೃಷ್ಟಕ್ಕೆ ಬಹುಶಃ ಇದು ಕೊನೆಯ ವರ್ಷ!

ಸರ್ಕಾರದ ಅನುದಾನಿತ ರಂಗಶಿಕ್ಷಣ ಶಾಲೆಯೊಂದನ್ನು ನಡೆಸುತ್ತಿರುವ ಹೆಗ್ಗೋಡಿನ 'ನೀನಾಸಂ' ತನ್ನ ಶಾಲೆಯಿಂದ ಶಿಕ್ಷಣಪಡೆದು ಹೊರಬಂದ ವಿದ್ಯಾರ್ಥಿಗಳಿಗೆ ಸತತ ನಾಲ್ಕು ತಿಂಗಳು ತರಬೇತಿ ನೀಡಿ ೩ ನಾಟಕಗಳನ್ನು ರೂಪಿಸುತ್ತದೆ. ರಾಜ್ಯಾದ್ಯಂತ ಪ್ರವಾಸ ಮಾಡಿಸುವ 'ತಿರುಗಾಟಕ್ಕೆ' ಈಗ ೧೫ ವರ್ಷ. ಕನ್ನಡದಲ್ಲಿ ಬಂದ ಸಾಮಾಜಿಕ ಹೊಣೆಗಾರಿಕೆಯ ನಾಟಕ ಮತ್ತು ಪಾರಂಪರಿಕ ರಂಗವಿನ್ಯಾಸಗಳೆಲ್ಲವನ್ನು ಮೈಗೂಡಿಸಿಕೊಂಡು ಶಿಸ್ತುಬದ್ಧ ಪ್ರಯೋಗ ನೀಡುವುದಕ್ಕೆ ನೀನಾಸಂ ಹೆಸರುವಾಸಿ. ಚಿದಂಬರರಾವ್ ಜಂಬೆ, ಕೆ. ವಿ. ಅಕ್ಷರ, ಜಯತೀರ್ಥ ಜೋಶಿ ಅವರುಗಳು ನಿರ್ದೇಶಿಸಿದ ಈ ಬಾರಿಯ ಮೂರೂ ನಾಟಕಗಳು ವಿಭಿನ್ನ ಅನುಭವ ನೀಡಿದವು. ನಿರಂತರ ರಂಗ ಚಟುವಟಿಕೆಯ ರೆಪರ್ಟರಿ ಮಾಡಬೇಕಾದ ಕೆಲಸವನ್ನು ಮಾಡುತ್ತಿರುವುದಕ್ಕೆ ನೀನಾಸಂ ಅಭಿನಂದನೆಗೆ ಪಾತ್ರವಾಗಿದೆ. ಆ ತಂಡದ ವ್ಯಾವಹಾರಿಕ ಕುಶಲತೆಯು ತಂಡ ಹಾಳಾಗದಂತೆ ಕಾಪಾಡಿದೆ.

ಆದರೆ ಈ ವರ್ಷ ತೀವ್ರ ಟೀಕೆಗಳಿಗೆ ಒಳಗಾದದ್ದೆಂದರೆ ಸರ್ಕಾರದ ರೆಪರ್ಟರಿ ಮೈಸೂರಿನ 'ರಂಗಾಯಣ'. ಈ ವರ್ಷ ಬೆಳಗಾವಿಯಲ್ಲಿ ವೃತ್ತಿ ರಂಗಭೂಮಿ ಮಾದರಿಯಲ್ಲಿ ನಾಲ್ಕು ನಾಟಕಗಳನ್ನು (ಕುವೆಂಪುರವರ ' ಚಂದ್ರಹಾಸ', 'ಕಿಂದರ ಜೋಗಿ', ರಷ್ಯನ್ ನಾಟಕ ಆಧಾರಿತ 'ಜಗದೇಕವೀರನ ಕತೆ', ಹಾಗೂ ಗಂಗಾಧರಸ್ವಾಮಿ ರಚಿಸಿ ನಿರ್ದೇಶಿಸಿದ ಪತ್ತೇದಾರಿ ನಾಟಕ 'ಪ್ರತಿಶೋಧ') ಒಂದು ತಿಂಗಳು ಸತತವಾಗಿ ನಡೆಸಿದ್ದೊಂದೇ ಅದರ ಸಾಧನೆ. ಅದರಲ್ಲೂ ಕೊನೆಯ ನಾಲ್ಕುದಿನ ಪ್ರಯೋಗ ಆಗಲಿಲ್ಲ. ಎನ್.ಎಸ್.ಡಿ. ಮತ್ತಿತರ ಸಂಸ್ಥೆಗಳಿಂದ ರಂಗತರಬೇತಿ ಪಡೆದ ಹತ್ತು-ಹದಿನೈದು ಪದವೀಧರರಿಗೆ ಆಸರೆಯಾಗಿದೆ ಎಂಬುದನ್ನು ಬಿಟ್ಟರೆ, ಈ ರೆಪರ್ಟರಿಯಿಂದ ಮತ್ತೇನು ಸಾಧನೆ ಎಂಬ ಪ್ರಶ್ನೆ ಎದ್ದಿದೆ. ನಾಲ್ಕಾರು ಜನರನ್ನು ಸಾಕಲಿಕ್ಕಾಗಿಯೇ ಇಂಥ ಬಿಳಿಯಾನೆ ಇಟ್ಟುಕೊಳ್ಳಬೇಕೆ ಎಂದು ಅನೇಕರ ಹುಬ್ಬು

ಏರಿಸಿದೆ. ಬಿ. ವಿ. ಕಾರಂತರು ಅತ್ಯುತ್ತಮ ನಿರ್ದೇಶಕರು ನಿಜ. ಅವರು ನಿರ್ದೇಶಿಸಿದ ನಾಟಕ 'ಗೋಕುಲ ನಿರ್ಗಮನ' ತಿರುಗಾಟದ ಮೂಲಕ, ಕಳೆದ ವರ್ಷ ರಾಜ್ಯದ ವಿವಿಧ ಭಾಗಗಳಲ್ಲಿ ಅಪಾರ ಜನಮೆಚ್ಚುಗೆ ಪಡೆಯಿತು. ಆದರೆ ರೆಪರ್ಟರಿಯಿಂದ ಅವರು ಮಾಡಿದ ಸಾಧನೆ ಏನು? ಅಲ್ಲಿರುವ ಕಲಾವಿದರ ಪ್ರತಿಭೆಯ ಬಗ್ಗೆ ಎರಡು ಮಾತಿಲ್ಲ. ಆದರೆ ಒಂದು ಊರಿನ (ಮೈಸೂರು) ರಂಗಚಟುವಟಿಕೆಗಾಗಿ ಸರ್ಕಾರ ರೆಪರ್ಟರಿ ಇಟ್ಟುಕೊಂಡು ಲಕ್ಷಾಂತರ ರೂ. ವೆಚ್ಚ ಮಾಡಬೇಕೆ? ಸಾವಿರಾರು ವೃತ್ತಿ ಕಲಾವಿದರಿಗೆ ೧೯೮೨ ರಿಂದಲೂ ಸಿಗುತ್ತಿರುವ ಮಾಸಾಶನ ಕೇವಲ ೧೫೦ ರೂ.! ಮಾಸಾಶನ ಸಿಗದೇ ಇರುವ ವೃತ್ತಿ ಕಲಾವಿದರು ಇನ್ನು ಹೆಚ್ಚಾಗಿದ್ದಾರೆ. ಅವರಿಗೆ ಯಾರು ದಿಕ್ಕು ಎಂದು ಎದ್ದಿರುವ ಪ್ರಶ್ನೆಗಳು, ರಂಗಾಯಣ ಉಳಿಸಿಕೊಳ್ಳುವ ಔಚಿತ್ಯವನ್ನೇ ಶಂಕಿಸಿವೆ. ಬದಲಾಗಿ ವಿಭಿನ್ನ ಪ್ರಾದೇಶಿಕತೆಗೆ ಒಂದೊಂದು ರಂಗಾಯಣ ಮಾಡಿ, ಅಲ್ಲಲ್ಲಿನ ಸ್ಥಳೀಯ ಸಂಪನ್ಮೂಲ ಬಳಸಿಕೊಂಡು ಖರ್ಚು-ವೆಚ್ಚ ತೂಗಿಸುವಷ್ಟು ಆದಾಯ ಭರಿಸುವಂತೆ ಮಾಡುವಂಥ ರಂಗಾಯಣಗಳ ಸ್ಥಾಪನೆಗೆ ಯಾಕೆ ಶ್ರಮಿಸಬಾರದು ಅಥವಾ ವೃತ್ತಿ ರಂಗಭೂಮಿಯಲ್ಲಿ ವ್ಯಾಪಕ ಬದಲಾವಣೆಗೆ ಯಾಕೆ ಶ್ರಮಿಸಬಾರದು ಎಂಬ ಪ್ರಶ್ನೆಗಳೂ ಎದ್ದಿವೆ.

ದೆಹಲಿ ನಾಟಕ ಶಾಲೆಯ ಶಾಖೆಯಾಗಿ ಪ್ರಾದೇಶಿಕ ಸಂಪನ್ಮೂಲ ಸಂಶೋಧನಾ ಕೇಂದ್ರವೊಂದು ಈ ವರ್ಷ ಬೆಂಗಳೂರಿನಲ್ಲಿ ಆರಂಭವಾಗಿದೆ.

ದಕ್ಷಿಣ ಕರ್ನಾಟಕದಲ್ಲಿ ನಾಟಕ ಕಂಪನಿಗಳಾವೂ ಉಳಿದಿಲ್ಲ. ಉತ್ತರ ಕರ್ನಾಟಕವೇ ಕಂಪನಿ ನಾಟಕಗಳಿಗೆ ನೆಲೆ. ಪ್ರಯೋಗಗಳು ಇಳಿಮುಖವಾಗಿವೆಯೇ ಹೊರತು, ಸಂಪೂರ್ಣ ಅವನತಿಯ ಅಂಚಿನಲ್ಲಿವೆ ಎಂದು ಹೇಳಲಿಕ್ಕಾಗದು. ಹತ್ತಾರು ಕಂಪನಿಗಳು ಈಗಲೂ ಇವೆ. ವ್ಯಾವಹಾರಿಕ ನಿಪುಣರಾದ ಗುಡಗೇರಿ ಬಸವರಾಜ, ಬಿ. ಆರ್. ಅರಿಷಿಣಗೋಡಿ, ಚಿಂದೋಡಿ ಲೀಲಾ ತಲಾ ೨-೩ ಕಂಪನಿಗಳನ್ನು ನಡೆಸುತ್ತಿದ್ದಾರೆ. ಜಿಲ್ಲಾ, ತಾಲ್ಲೂಕು, ಫಿರ್ಕಾ ಕೇಂದ್ರಗಳ ಜತೆಗೆ, ಜಾತ್ರೆ-ಉತ್ಸವಗಳ ಸಂದರ್ಭದಲ್ಲಿ ಚಿಕ್ಕ-ಪುಟ್ಟ ಊರುಗಳಲ್ಲಿ ಕಂಪನಿಗಳು ಕ್ಯಾಂಪ್ ಮಾಡುತ್ತಿವೆ. ಬಸವರಾಜ ಕಂಪನಿಯಲ್ಲಿ ಅವರೆ ರಚಿಸಿದ 'ವಿಧಿಯ ಕೈವಾಡ' 'ಸುಟ್ಟಿತು ಶೀಲ', 'ದುಡ್ಡಿನ ದರ್ಪ', 'ರೈತನ ಮಕ್ಕಳು', ಮುಂತಾದ ನಾಟಕಗಳ ಜತೆಗೆ ಇತರರ ನಾಟಕಗಳೂ ಪ್ರದರ್ಶನಗೊಳ್ಳುತ್ತಿವೆ. ಅರಿಷಿಣಗೋಡಿಯವರು ಈಗ ಬರೀ ತಮ್ಮ ನಾಟಕಗಳನ್ನು ಅವಲಂಬಿಸಿಲ್ಲ. ಅವರದೇ ಕೃತಿ 'ಬಸ್ ಕಂಡಕ್ಟರ್' ಜತೆಯಲ್ಲಿ 'ಹಸಿರುಬಳೆ', 'ನನ್ನ ಗಂಡನ ಹೆಂಡತಿ', 'ಭೂಮಿ ತೂಕದ ಹೆಣ್ಣು' ಮುಂತಾದ ನಾಟಕಗಳೂ ನಡೆಯುತ್ತಿವೆ. ಚಿಂದೋಡಿ ಲೀಲಾ ಅವರ ಮಾಲೀಕತ್ವದ ಮೂರು ಕಂಪನಿಗಳು ನಡೆಯುತ್ತಿವೆ. ಸಾಮಾಜಿಕ ನಾಟಕಗಳ ಜತೆಯಲ್ಲಿ 'ನಾಗಲಿಂಗ ಲೀಲೆ' ಎಂಬ ಸಂತನ ಕುರಿತ ನಾಟಕ ಪ್ರದರ್ಶನಗೊಳ್ಳುತ್ತಿದೆ.

ಗದಗದ ಪಂಚಾಕ್ಷರಿ ಗವಾಯಿ ಕಂಪನಿ 'ಅಕ್ಕಮಹಾದೇವಿ' ನಾಟಕವನ್ನು ಪ್ರದರ್ಶಿಸುತ್ತಿದೆ. ಸಣ್ಣ-ಪುಟ್ಟ ಕಂಪನಿಗಳ ಪೈಕಿ ಆಶಾಪುರ ಕಂಪನಿ, ಜಾಲಿಹಾಳ

ವೀರಣ್ಣ, ದೊಡ್ಡವಾಡ, ರೇಣುಕ ಮಿತ್ರಮಂಡಳಿ, ಕುಮಾರ ಶಿವಯೋಗೀಶ್ವರ ನಾಟಕ ಮಂಡಳಿ ಮುಂತಾದವು ಇವೆ. ಹಿಡಕಲ್ ಡ್ಯಾಂನಲ್ಲಿ ಸ್ತ್ರೀನಾಟಕ ಮಂಡಳಿ ಕೆಲವು ಹಳೆಯ ನಾಟಕಗಳನ್ನು ಪ್ರದರ್ಶಿಸಿತು.

'ಗೋಕಾಕ ಶಾರದಾ ನಾಟಕಮಂಡಳಿ'ಯಂತಹ ಪ್ರಸಿದ್ಧ ನಾಟಕ ಮಂಡಳಿಗಳು ಇಂದು ನಿಂತಿದ್ದರೂ, ಅದರಲ್ಲಿದ್ದ ಹಳೆಯ ಕಲಾವಿದರು ಅರೆವೃತ್ತಿ ಕಲಾವಿದರಾಗಿದ್ದಾರೆ. ಇವರು ಹುಬ್ಬಳ್ಳಿಯಲ್ಲಿ ನೆಲೆಸಿದ್ದು, ಕರೆ ಬಂದ ಕಡೆಗೆ ೪-೧೦ ಜನ ಒಟ್ಟಿಗೆ ಸೇರಿಕೊಂಡು ಹಳ್ಳಿಗಳಿಗೆ ಹೋಗಿ ೫-೬ ದಿನ ಪ್ರದರ್ಶನಕೊಟ್ಟು ಬರುತ್ತಾರೆ. ದಕ್ಷಿಣ ಕನ್ನಡ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ೬೬ ಯಕ್ಷಗಾನ ತಂಡಗಳು ನಷ್ಟವಿಲ್ಲದೇ ಪ್ರದರ್ಶನ ಕೊಡುತ್ತಿವೆ.

ಕರ್ನಾಟಕದಲ್ಲಿ ಕಂಪನಿ ನಾಟಕಗಳ ಹುಟ್ಟು ಬರೀ ಉದ್ಯಮವಾಗಿರಲಿಲ್ಲ. ನಮ್ಮ ಭಾಷೆ, ಸಂಸ್ಕೃತಿಗಳ ಬಗ್ಗೆ ಜನರನ್ನು ಎಚ್ಚರಿಸುವುದಾಗಿತ್ತು. ಈ ಶತಮಾನದ ಆರಂಭದಿಂದ ೪೦-೫೦ ರ ದಶಕದವರೆಗೆ ಹೆಚ್ಚು ಪ್ರಯೋಗಗೊಳ್ಳುತ್ತಿದ್ದ ಪೌರಾಣಿಕ ನಾಟಕಗಳಲ್ಲಿಯೂ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಪರವಾದ, ಅಸ್ಪೃಶ್ಯತೆ, ಜಾತಿ ನಿವಾರಣೆಯ ಸಂದೇಶವಿರುತ್ತಿತ್ತು. ನಂತರ ಬಂದ ಸಾಮಾಜಿಕ ನಾಟಕಗಳು ಸಮಕಾಲೀನ ಬದುಕಿಗೆ ಕನ್ನಡಿ ಹಿಡಿಯುತ್ತಿದ್ದವು. ಆಧುನಿಕ ತಂತ್ರಜ್ಞಾನ ಯುಗದಲ್ಲಿ ಅವಿಭಕ್ತ ಕುಟುಂಬದ ವಿಘಟನೆ ಅನಿವಾರ್ಯ. ಅವಿಭಕ್ತ ಕುಟುಂಬ ಉಳಿಯಲಿ ಎಂಬ ನೀತಿಬೋಧೆ ಏನೇ ಇರಲಿ, ಈ ವಿಘಟನೆಯ ವಾಸ್ತವ ಚಿತ್ರಣ ಇಂತಹ ನಾಟಕಗಳಲ್ಲಿ ಸಿಗುತ್ತಿತ್ತು. ಕಂದಗಲ್ಲ ಹನುಮಂತರಾವ್, ನಲವಡಿ ಶ್ರೀಕಂಠಶಾಸ್ತ್ರಿ, ಧುತ್ತರಗಿ ಮಹಾಂತೇಶ ಶಾಸ್ತ್ರಿ, ಓಬಳೇಶ, ಸಾಳುಂಕೆ ಮುಂತಾದವರು ಕಂಪನಿ ನಾಟಕ ಸೃಷ್ಟಿಸಿದ ಅತ್ಯುತ್ತಮ ನಾಟಕಕಾರರು. ಪರಸ್ಪರ ವೈರುಧ್ಯದ ಅಂಶಗಳು ಇವರ ನಾಟಕಗಳಲ್ಲಿ ಒಡಮೂಡಿವೆ. 'ಬಡತನದ ಭೂತ', 'ಮಾತಂಗ ಕನ್ಯೆ', 'ಕುಂಕುಮ', 'ಜೈ ಜವಾನ್ ಜೈ ಕಿಸಾನ್', 'ಆದರ್ಶ ಪ್ರೇಮ', 'ವರನೋಡಿ ಹೆಣ್ಣು ಕೊಡು', 'ಕೊಂಡು ತಂದ ಗಂಡ', 'ಖಾದಿ ಸೀರೆ', 'ಬಸ್ ಕಂಡಕ್ಟರ್' - ಮುಂತಾದ ಹತ್ತಾರು ನಾಟಕಗಳು ಅಪಾರ ಜನಪ್ರಿಯತೆ ಗಳಿಸಿಕೊಂಡ ಮೌಲಿಕ ಕೃತಿಗಳು. ತಮ್ಮ ಕಾಲದ ತಲ್ಲಣಗಳನ್ನು ಹಿಡಿದಿಟ್ಟ ಇಂತಹ ನಾಟಕಕಾರರೇ ಇಂದಣ ಕೃತಿರಚನೆಗೆ ತೊಡಗಿದ್ದರೆ, ಬಹುಶಃ ಬೆಲೆ ಏರಿಕೆ, ಉಪಭೋಗವಾದ, ಕೇಂದ್ರದ ಆರ್ಥಿಕನೀತಿ ಪರಿಣಾಮಗಳೂ ನಾಟಕದ ವಸ್ತುಗಳಾಗುತ್ತಿದ್ದವು. ಆದರೆ ಇಂದು ಬರುತ್ತಿರುವ ಬಹುತೇಕ ನಾಟಕಗಳು ಚರ್ವಿತ ಚರ್ವಣ ಕಥಾವಸ್ತುವುಳ್ಳವು. ಉದಾಹರಣೆಗೆ ಇಲ್ಲಿ ಕೆಲವು ನಾಟಕಗಳ ತಲೆ ಬರಹ ನೋಡಿ; 'ಕೈಲಾಗದ ಗಂಡ ಕೈಲಾಸ ಕಂಡ', 'ಸುಳ್ಳು ದೇವರಿಗೆ ಕಳ್ಳ ಪೂಜಾರಿ', 'ಹೂವಿನಂಥ ಹೆಣ್ಣು ಹಾವಿನಂಥ ಗಂಡು', 'ಪಾಪದ ತಂದೆ ಪುಣ್ಯದ ಮಗ', 'ರೈತ ನಗಲಿಲ್ಲ ಸರ್ಕಾರ ಉಳೀಲಿಲ್ಲ', 'ನನ್ನ ಗಂಡನ ಹೆಂಡತಿ, ಕಿವುಡ ಮಾಡಿದ ಕಿತಾಪತಿ'.

'ಸ್ವರ್ಗದ ಸೇವಕಿ ನರಕದ ನಾಯಕಿ', 'ಹುಚ್ಚರಿರುವರುತಂಗಿ ಎಚ್ಚರ', 'ಸತ್ಯ ಎಲ್ಲಿಗೆ ಕೈಎತ್ತಿ ಹೇಳು'. 'ಮಣ್ಣಿನ ಮಗ ಮಂತ್ರಿಯ ಮಗಳು' - ಮೊದಲು ಟೈಟಲ್‌ಗಳನ್ನಿಟ್ಟುಕೊಂಡು ಕಥೆ ಹೊಸೆಯುವುದು. ಇದು ಸಿನಿಮಾದಲ್ಲಿ ಹೀರೋ, ಹೀರೋಯಿನ್ ದೃಷ್ಟಿಯಲ್ಲಿಟ್ಟುಕೊಂಡು ಕತೆ ಹೊಸೆದ ಹಾಗೆ. ಇಂತಹ ನಾಟಕಗಳು ಇಂದು ಕಂಪನಿ ಹಾಗೂ ಹಳ್ಳಿಗಾಡೆರಡರಲ್ಲೂ ಪ್ರಯೋಗಗೊಳ್ಳುತ್ತಿವೆ. ಇವರ ಮಧ್ಯೆಯೂ ಒಂದೊಂದು ಒಳ್ಳೆಯ ನಾಟಕ ಸೃಷ್ಟಿಯಾಗುತ್ತಲೇ ಇದೆ.

ದ್ವಂದ್ವಾರ್ಥದ ಸಂಭಾಷಣೆಗಾಗಿ ಕಂಪನಿ ನಾಟಕಗಳನ್ನು ಟೀಕಿಸುವುದು ಒಂದು ಕ್ಲೀಷೆಯಾಗಿಬಿಟ್ಟಿದೆ. ಇಂದು ಮನುಷ್ಯನ ಅವನತಿಯ ಹಾದಿ ಅತ್ಯಾಧುನಿಕ ತಂತ್ರಜ್ಞಾನದ ಫಲವಾದ ಸೆಟಲೈಟ್‌ನಿಂದ ಎಂಬುದು ಒಂದು ವಿಪರ್ಯಾಸ. ಟಿ. ವಿ.ಯು ಪ್ರಲೋಭನೆಯ ಮಾರಾಟ ಕೇಂದ್ರವಾಗಿದೆ. ಗ್ರಾಹಕ ಸಂಸ್ಕೃತಿಯ ಚಕ್ರವ್ಯೂಹದಲ್ಲಿ ಮನುಷ್ಯನನ್ನು ಹಿಂಡಿ ಹಿಪ್ಪೆ ಮಾಡಲಾಗುತ್ತಿದೆ. ಮನುಷ್ಯ ಸಂಬಂಧಗಳ ಮಾರಾಟವೇ ನಡೆದಿದೆ. ಮಕ್ಕಳು ಒಟ್ಟಿಗೆ ಆಟವಾಡುವುದಿಲ್ಲ. ಪಕ್ಕದ ಮನೆಯವರೊಂದಿಗೆ ಸಂಬಂಧ ಕಡಿದುಹೋಗಿದೆ. ಹೊಸ ಆರ್ಥಿಕನೀತಿ ವ್ಯಕ್ತಿಗೂ ಸಮುದಾಯಕ್ಕೂ ಸಂಬಂಧ ಕಡಿದು ಹಾಕಿದೆ. ಜನ ಸಂಘಟಿತರಾಗಿ ಪ್ರಜಾಸತ್ತಾತ್ಮಕ ಹೋರಾಟದಲ್ಲಿ ತೊಡಗಿಕೊಳ್ಳುವ ಯಾವುದೇ ಅವಕಾಶ ಇಂದು ಇಲ್ಲ. ಜನರನ್ನು ನಿರ್ವೀರ್ಯರನ್ನಾಗಿ ಮಾಡಲಾಗುತ್ತಿದೆ. ಅಪಾರ ಜನಸಮೂಹದೊಂದಿಗೆ ಒಂದು ಕಲಾಕೃತಿಯನ್ನು ಹಂಚಿಕೊಳ್ಳುವ ಅನುಭವವನ್ನು ಇಂದಿನ ಸ್ಥಿತಿ ಇಲ್ಲವಾಗಿಸಿದೆ. ಮೂರ್ಖಪೆಟ್ಟಿಗೆಗೆ ಎಲ್ಲರೂ ದಾಸರಾಗಿದ್ದಾರೆ. ನಗರದ ಹವ್ಯಾಸಿಗಳು ಇದರ ಬಲೆಯಲ್ಲಿ ಬಿದ್ದಿದ್ದಾರೆ. ರಂಗಭೂಮಿಯ ಬೇರುಗಳನ್ನೇ ನಾಶಮಾಡುವ ಶಕ್ತಿ ಇದಕ್ಕೆ ಇದೆ.



'ವೀರಅಭಿಮನ್ಯು' ನಾಟಕದ ಒಂದು ದೃಶ್ಯ

ಕಂಪನಿನಾಟಕಗಳ ಸಂಭ್ರಮದ ದಿನಗಳು ದೂರಾಗಿರಬಹುದು. ಆದರೆ ಹಳ್ಳಿಗಾಡಿನ ನಾಟಕಗಳಿಗೆ ಆ ಸ್ಥಿತಿ ಇನ್ನೂ ಬಂದಿಲ್ಲ. ಗ್ರಾಮದಲ್ಲಿ ಒಂದು ನಾಟಕವೆಂದರೆ, ಹಳೇ ಸಂಭ್ರಮ ಇನ್ನೂ ಇದ್ದೇಇದೆ. ಕೆಲವು ಹಳ್ಳಿಗಳಲ್ಲಿ ಟಿಕೇಟಿಟ್ಟು ನಾಟಕ ಮಾಡಿದರೆ, ಮತ್ತೆ ಕೆಲವು ಹಳ್ಳಿಗಳಲ್ಲಿ ಉಚಿತವಾಗಿ ಮಾಡುವ ಎರಡೂ ಸಂಪ್ರದಾಯಗಳು ಇದೆ. ಪ್ರಯೋಗದಲ್ಲಿನ ಶಿಸ್ತು, ಅಚ್ಚುಕಟ್ಟುತನ ದಕ್ಷಿಣ ಕರ್ನಾಟಕಕ್ಕಿಂತ ಉತ್ತರ ಕರ್ನಾಟಕದಲ್ಲಿ ಹೆಚ್ಚು. ಕೊಪ್ಪಳ ತಾಲ್ಲೂಕಿನ ಕಂಪಸಾಗರ, ಬಳ್ಳಾರಿ ತಾಲ್ಲೂಕಿನ ಮದುರೆ, ಹಡಗಲಿ ತಾಲ್ಲೂಕಿನ ಹೊಳಗುಂದಿಯಂತಹ ಊರುಗಳನ್ನು ಈ ವಿಷಯಕ್ಕೆ ಉದಾಹರಿಸಬಹುದು. ಸೀಟುಗಳನ್ನು ರಿಜರ್ವ್ ಮಾಡುತ್ತಾರೆ. ಸಾಧಾರಣದಿಂದ ಒಳ್ಳೆಯ ಕಲೆಕ್ಷನ್ ಸಹ ಆಗುತ್ತದೆ. ಹೆಚ್ಚು ಕಡಿಮೆ ಎಲ್ಲ ಹಳ್ಳಿಗಳಲ್ಲೂ ಈ ವರ್ಷ ಒಂದೊಂದಾದರೂ ಪೌರಾಣಿಕ, ಸಾಮಾಜಿಕ ನಾಟಕಗಳು ಅಟ್ಟವೇರಿವೆ. ಬಳ್ಳಾರಿಯ ವೃತ್ತಿ ಕಲಾವಿದರು ಅಭಿನಯಿಸುವ ನಲವಡಿ ಅವರ 'ಹೇಮರೆಡ್ಡಿ ಮಲ್ಲಮ್ಮ' ಈ ವರ್ಷ ಹಳ್ಳಿಗಾಡಿನ ಭಾಗದಲ್ಲಿ ಹೆಚ್ಚು ಪ್ರಯೋಗಗೊಂಡ ನಾಟಕ. ಸುಭದ್ರಮ್ಮ ಮನ್ಸೂರ ಅವರ ಸಿರಿಕಂಠ, ಚಿಕ್ಕೇನಕೊಪ್ಪ ಶರಣರ ಬೆಂಬಲ ಇದಕ್ಕೆ ಕಾರಣ. ಪ್ರದರ್ಶನಗಳು ಮಳೆ-ಬೆಳೆ ಅವಲಂಬಿಸಿರುತ್ತವೆ. ಈ ಬಾರಿ ಚುನಾವಣೆ ಬೇರೆ. ಅದನ್ನು ಹೊರತುಪಡಿಸಿಯೂ ಬಹುತೇಕ ಎಲ್ಲ ಊರುಗಳಲ್ಲಿಯೂ ಕಂಪನಿಶೈಲಿ ನಾಟಕಗಳು ಪ್ರದರ್ಶನಗೊಂಡಿವೆ. ಹಾಗಾದರೆ ರಂಗ ಚಟುವಟಿಕೆಗಳು ಕ್ಷೀಣಗೊಂಡಿವೆ ಎಂಬ ಸಮಸ್ಯೆ ಯಾರದು? ಅದು ನಗರದ ಹವ್ಯಾಸಿಗಳದು ತಾನೆ?

ಒಂದು ಐತಿಹಾಸಿಕ ಅಗತ್ಯವಾಗಿ ಪ್ರೊಸೀನಿಯಂ ರಂಗಮಂದಿರ ಬೆಳೆದು ಬಂತು. ಜನತೆಯ ಸಂಕಷ್ಟಗಳು ಹೆಚ್ಚಾದಾಗ ಭಿನ್ನ ರಂಗತಂತ್ರವೊಂದರ ಅವಶ್ಯಕತೆ ಇತ್ತು. ಸಮುದಾಯದ ಭಾಗವಹಿಸುವಿಕೆಗೆ ಬೀದಿನಾಟಕ ತಂತ್ರವೇ ಸೂಕ್ತವಾಗಿತ್ತು. ಜನತೆಯು ತಮ್ಮ ಬದುಕಿನ ಉನ್ನತಿಗಾಗಿ, ಬದಲಾವಣೆಗಾಗಿ ಬಳಸಬೇಕಿದ್ದ ಬೀದಿನಾಟಕದ ಅಸ್ತ್ರ ಈಚಿನ ದಿನಗಳಲ್ಲಿ ವ್ಯವಸ್ಥೆಯ ಅಸ್ತ್ರವೇ ಆಗಿ ಹೋಗಿದ್ದು (ಸಾಕ್ಷರತೆ ಆಂದೋಲನ ಮೂಲಕ) ಒಂದು ವ್ಯಂಗ್ಯ. ಸಾಕ್ಷರತೆ ಪ್ರಸಾರ ಸಹ ಸಮಾಜ ಬದಲಾವಣೆ ಕೆಲಸ ಎಂದು ನಂಬಿಸಿ, ಎಲ್ಲ ಪ್ರಜಾಸತ್ತಾತ್ಮಕ ಸಂಘಟನೆಗಳನ್ನು ನಗರದ ಹವ್ಯಾಸಿಗಳನ್ನು ಸಾಕ್ಷರತೆ ಪ್ರಸಾರದಲ್ಲಿ ತೊಡಗಿಸಿ ಡೈವರ್ಟ್ ಮಾಡಲಾಯಿತು. ರಂಗಾಸಕ್ತರೆಲ್ಲರೂ ದುಬದುಬನೆ ಆ ಬಲೆಯಲ್ಲಿ ಇದ್ದರು.

ಜಿಲ್ಲೆಗೊಂದು ರಂಗ ಮಂದಿರ ಯೋಜನೆ ಪ್ರಕಾರ, ಈ ವರ್ಷ ಕೆಲವು ರಂಗಮಂದಿರಗಳು ಉದ್ಘಾಟನೆಯಾದವು. ಒಂದೂ ರಂಗಮಂದಿರಕ್ಕೆ ಯೋಗ್ಯವಾಗಿಲ್ಲ. ಸರ್ಕಾರಿ ಅಧಿಕಾರಿಗಳು ಪಕ್ಕದ ಊರಿಗಿಂತ ಅದ್ದೂರಿಯಾಗಿ ನಿರ್ಮಿಸಬೇಕು (ಅದ್ದೂರಿ ನಿರ್ಮಾಣದಲ್ಲಿ ಹೆಚ್ಚು ಹಣ ಹರಿದಾಡುತ್ತದೆ ) ಎಂಬ ಹಠದಲ್ಲಿ ಬರೀ ಕಲ್ಯಾಣ

ಮಂದಿರಗಳನ್ನು ನಿರ್ಮಿಸಿದ್ದಾರೆ. ಇಂತಹ ರಂಗಮಂದಿರಗಳು ಬೇಕಾಗಿದ್ದು ನಗರದ ಹವ್ಯಾಸಿಗಳಿಗೆ. ರಂಗಮಂದಿರಗಳು ಹೀಗೇಕೆ ಕಲ್ಯಾಣ ಮಂದಿರಗಳಾದವು ಎಂದು ಅವರು ಕೇಳುತ್ತಿಲ್ಲ.

ಹಳ್ಳಿಗಾಡಿನ ನಾಟಕಗಳು ಪರಿಷ್ಕಾರಗೊಳ್ಳಬೇಕು. ಪ್ರದರ್ಶನದ ಅವಧಿಯನ್ನು ಚಿಕ್ಕದುಗೊಳಿಸಬೇಕು. ಅಲ್ಲಿನ ಅನವಶ್ಯಕ ಆಡಂಬರ ತೆಗೆದು ಹಾಕಿ ವೆಚ್ಚ ಕಡಿಮೆ ಮಾಡಿಸಿದರೆ, ವರ್ಷಕ್ಕೆ ಒಂದು ನಾಟಕಗಳಾಗುವ ಬದಲಿಗೆ ೨-೩ ಪ್ರಯೋಗಗೊಳ್ಳುತ್ತವೆ. ಎಂದೂ ನಮ್ಮ ಪಾರಂಪರಿಕ ರಂಗಭೂಮಿಯು ಜನ ತಮ್ಮ ಬಳಿಗೇ ಬರಲಿ ಎಂದು ಕಾದು ಕುಳಿತಿಲ್ಲ. ಜಾತ್ರೆ-ರಥೋತ್ಸವದ ನೆಪದಲ್ಲಿ ಜನರ ಬಳಿಗೇಹೋಗಿದೆ. ಆದರೆ ಹವ್ಯಾಸಿ ರಂಗಭೂಮಿ ಮಾತ್ರ ಜನರಿಗಾಗಿ ಕಾದು ಕುಳಿತಿದೆ. ಜನರು ನಿಮ್ಮ ನಾಟಕ ನೋಡಲು ಕಾದಿದ್ದಾರೆ. ನೀವೇ ಅವರ ಬಳಿಗೆ ಹೋಗಬೇಕು. ಅದು ಬೀದಿ ನಾಟಕವಾಗಬಹುದು, ಜಾನಪದದ ಯಾವುದೇ ಪ್ರಕಾರವಾಗಬಹುದು. ಅಂತಹ ಪ್ರಯತ್ನವೊಂದನ್ನು ಮಾಡದಿದ್ದರೆ ನಮ್ಮ ಕಾಲದ ಸವಾಲನ್ನು ಎದುರಿಸಿದಂತಾಗುವುದಿಲ್ಲ.

ಹಳ್ಳಿಗಾಡಿನ ನಾಟಕಗಳು ಇನ್ನು ಸುಸಂಬದ್ಧಗೊಳ್ಳಬೇಕಾದರೆ ಕೈಗೊಳ್ಳಬೇಕಾದ ಕ್ರಮಗಳೇನು? ರಂಗಭೂಮಿಯ ಬೇರುಗಳನ್ನೇ ಕಡಿದು ಹಾಕುವ ಸೆಟಲೈಟುಗಳ ಪ್ರಭಾವ ಎದುರಿಸುವುದು ಹೇಗೆ? ರಂಗತಂತ್ರದಲ್ಲಿ ವ್ಯಾಪಕ ಬದಲಾವಣೆಗಳಾಗಬೇಕೆ? ನಾಟಕವೇ ಪ್ರೇಕ್ಷಕರ ಬಳಿಗೆ ಹೋಗಬೇಕೆ? ಇಂತಹ ಪ್ರಶ್ನೆಗಳನ್ನು ೯೪ ನೇ ಇಸವಿ ಸಹ ಹಾಕಿಕೊಳ್ಳಲಿಲ್ಲ.

# ಸಿನಿಮಾ

*ದೊಡ್ಡಹುಲ್ಲೂರು ರುಕ್ಕೋಜಿ*

ಕನ್ನಡ ವಾಕ್ಚಿತ್ರಕ್ಕೆ ಅರವತ್ತು ವರ್ಷ ತುಂಬಿದೆ. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಅರವತ್ತರ ಘಟ್ಟಕ್ಕೆ ಹಲವಾರು ಅರ್ಥ, ಮಹತ್ವಗಳಿದ್ದರೂ, ಅವನ್ನೆಲ್ಲ ಸಿನಿಮಾ ಮಾಧ್ಯಮಕ್ಕೆ ಅನ್ವಯಿಸಿಕೊಳ್ಳಬಹುದೇ ಎಂಬ ಪ್ರಶ್ನೆ ಏಳುತ್ತದೆ. ತಾಂತ್ರಿಕ ಸುಧಾರಣೆಗಳಿಂದಾಗಿ ಪ್ರತಿದಿನವೂ ಬದಲಾಗುತ್ತಿರುವ ನಮ್ಮದಲ್ಲದ ನಮ್ಮ ಈ ಮಾಧ್ಯಮದ ಖಚಿತ ರೂಪದ ಕಲ್ಪನೆ ನಮಗಿನ್ನೂ ಸಿಕ್ಕಿಲ್ಲ. ಇದರಿಂದಾಗಿಯೆ ಸಿನಿಮಾ ವಿಮರ್ಶೆಗೆ ನಿರ್ದಿಷ್ಟ ಪರಿಭಾಷೆ ರೂಪುಗೊಂಡಿಲ್ಲ. ತಮಗೊಂದು ವ್ಯಾಕರಣ, ವ್ಯಾಖ್ಯೆ ರೂಪಿಸಿಕೊಳ್ಳುವುದರಲ್ಲಿ ಭಾರತದ ಬೇರೆಲ್ಲ ಕಲಾಪ್ರಕಾರಗಳು ಪಡೆದುಕೊಂಡಿರುವ ಯಶಸ್ಸು ಸಿನಿಮಾ ಮಾಧ್ಯಮಕ್ಕೆ ದಕ್ಕದ್ದು ಏಕೆ? ಈ ಪ್ರಶ್ನೆ ಈಚೆಗೆ ಚರ್ಚೆ ಆಗುತ್ತಿದೆ. ಇದಕ್ಕೆ ಸರಳವಾಗಿ ''ಅರವತ್ತು ವರ್ಷ ಈ ಕೆಲಸಕ್ಕೆ ಕಡಿಮೆ'' ಎನ್ನುವುದಾದರೂ ಅದು ಸಂಪೂರ್ಣ ಸರಿಯಲ್ಲ. ಎಲ್ಲಾ ಆದಿಮ ಕಲೆಗಳನ್ನು ಸಂಗಮಿಸಿಕೊಂಡು ಬೆಳೆಯುತ್ತಿರುವ ಸಿನಿಮಾ, ತಾನು ಗುರುತಿಸಿಕೊಳ್ಳಬೇಕಾಗಿದ್ದ ಗಂಭೀರ ನೆಲೆಗಳಿಗೆಲ್ಲ ವಿಮುಖವಾಗಿದ್ದೇ ಇದಕ್ಕೆ ಕಾರಣವಿರಬಹುದು ಎಂಬ ಬಗ್ಗೆ ಚಿಂತಿಸಬೇಕಾಗಿದೆ.

ಪಾಶ್ಚಾತ್ಯ ಸಂಸ್ಕೃತಿಯ ಭಾವಪ್ರಧಾನ ಅಂಶಗಳಿಂದ ಪ್ರಭಾವಿತವಾಗಿರುವ ಇಂದಿನ ಸಿನಿಮಾಚಿಂತನೆ, ಶ್ರೇಷ್ಠ ಸಿನಿಮಾಕತೆಗಳನ್ನಾಗಲಿ, ಉತ್ತಮ ಸಿನಿಮಾಗಳನ್ನಾಗಲಿ ಸೃಷ್ಟಿಸುವಂಥದ್ದಾಗಿಲ್ಲ. ಕತೆಯ ಆಯ್ಕೆ ಮತ್ತು ಚಿತ್ರಕತೆಯ ರಚನೆಗೆ ಕೊಡುತ್ತಿರುವ ಉಪೇಕ್ಷಿತ ಗಮನ ಹಾಗೂ ಬದಲಾಗುತ್ತಿರುವ ಪ್ರೇಕ್ಷಕರ ಮನಸ್ಸನ್ನು ಗ್ರಹಿಸುವುದರಲ್ಲಿ ಸೋಲುತ್ತಿರುವುದರಿಂದ ಹೀಗಾಗುತ್ತಿದೆ. ವಸ್ತು ಹಾಗೂ ನಿರೂಪಣೆಗಿಂತ ಹೊರಗಿನ ವಿವರಗಳ ಪ್ರಚಾರದಿಂದಲೇ ವಿಜೃಂಭಿಸುವ ಪ್ರವೃತ್ತಿ ಹೆಚ್ಚಿದ್ದು ಅದಕ್ಕಾಗಿ ವಿವಾದಗಳನ್ನೊ, ಪ್ರಣಯ ಪ್ರಸಂಗಗಳನ್ನೊ, ಸೆಟ್ಟು- ಮನೆ ಧ್ವಂಸ ಮಾಡಿದ್ದನ್ನೊ, ಅತಿ ಕಡಿಮೆ ಅವಧಿಯಲ್ಲಿ ಚಿತ್ರೀಕರಣ ಮುಗಿಸಿದ್ದನ್ನೊ ಸುದ್ದಿ ಮಾಡಲಾಗುತ್ತಿದೆ. ಕಲಾಕೃತಿಯೊಂದರ ನಿರ್ಮಾಣದ ಹಂತದಲ್ಲಿ ಇಂಥ ಕಲುಷಿತ ಆಲೋಚನೆಗಳು ಇದ್ದರೆ, ಆ ಕಲಾಕೃತಿ ಹೇಗಿರಬಹುದೋ ಹಾಗೆಯೇ ಚಿತ್ರರಂಗದ ಸ್ಥಿತಿಯೂ ಇದೆ. ಆದ್ದರಿಂದಲೇ ಸಿನಿಮಾವನ್ನು ವಿಶ್ಲೇಷಣೆಗಾಗಿ ನೋಡುವಂಥ ಕ್ರಮದಲ್ಲೂ ಗೊಂದಲಗಳಿದ್ದು, ಸದ್ಯಕ್ಕೆ ಅದಕ್ಕೊಂದು ಪರಿಭಾಷೆ ಲಭ್ಯವಾಗುವ ಲಕ್ಷಣಗಳಿಲ್ಲ.

ಈ ಹಿನ್ನೆಲೆಯಲ್ಲಿ ೧೯೯೩ರ ಅವಧಿಯಲ್ಲಿ ಬಿಡುಗಡೆಯಾದ ೬೮ ಚಿತ್ರಗಳ ಸ್ವರೂಪದ ಬಗ್ಗೆ ಚರ್ಚಿಸುವುದಕ್ಕಿಂತ ಮುಂಚೆ, ಪ್ರಮುಖ ಹಾಗೂ ಸೃಜನಶೀಲ

ಪ್ರಯತ್ನಗಳ ಸಂಖ್ಯೆ ಎಷ್ಟು ಎಂಬುದನ್ನು ಗಮನಿಸುವುದು ಅಗತ್ಯ. ಒಟ್ಟು ಚಿತ್ರಗಳಲ್ಲಿ ಅದ್ಭುತ ಅನ್ನಿಸುವಂಥ ಯಶಸ್ಸು ಗಳಿಸಿದ್ದು ಕೇವಲ ಮೂರೇ ಚಿತ್ರಗಳು, ಅವು: 'ಒಡಹುಟ್ಟಿದವರು', 'ಹಾಲುಂಡ ತವರು' ಹಾಗೂ 'ಕರುಳಿನ ಕೂಗು'. ರಿಮೇಕ್ ಎಂದು ಕರೆಯುವಂಥವು ಕೇವಲ ನಾಲ್ಕು: 'ತೂಗುವೆ ಕೃಷ್ಣನಾ', 'ಕರುಳಿನ ಕೂಗು', 'ಹೆತ್ತ ಕರುಳು' ಹಾಗೂ 'ಮುತ್ತಣ್ಣ'. 'ತೂಗುವೆ ಕೃಷ್ಣನಾ' ಬಿಟ್ಟರೆ ಉಳಿದ ಮೂರು ಚಿತ್ರಗಳು ಯಶಸ್ವಿಯಾಗಿವೆ. ಕಾದಂಬರಿ ಆಧರಿಸಿದ ಏಳು ಚಿತ್ರಗಳು ತೆರೆಗೆ ಬಂದವು 'ಮುಸುಕು' 'ಸಮ್ಮಿಲನ' ' ಒಡಹುಟ್ಟಿದವರು' 'ಹಾಲುಂಡ ತವರು' 'ಯಾರಿಗೂ ಹೇಳ್ಬೇಡಿ' "ರಶ್ಮಿ' ಹಾಗೂ 'ಸಾಗರ ದೀಪ'. ಏಳೆಂಟು ವರ್ಷಗಳಷ್ಟು ಹಿಂದಿನ 'ಡೈಮಂಡ್ ಸೀಕ್ರೆಟ್' ಸೇರಿದಂತೆ ಈ ವರ್ಷ ಕೆಲವಾರು ಹಳೆಯ ಚಿತ್ರಗಳು ತೆರೆಗೆ ಬಂದವು. ಅವುಗಳಲ್ಲಿ 'ಅಪೂರ್ವ ಸಂಸಾರ' 'ಮೇಯರ್ ಪ್ರಭಾಕರ್' 'ಕೆರಳಿದ ಸರ್ಪ' 'ಪ್ರೇಮ ಸಿಂಹಾಸನ' 'ನ್ಯಾಯಕ್ಕಾಗಿ ಸವಾಲ್' ಸೇರಿವೆ.

ವಸ್ತುವಿನ ದೃಷ್ಟಿಯಿಂದ ಭಿನ್ನ ಅನ್ನಿಸುವ ಪ್ರಯತ್ನಗಳನ್ನು ಕಾಣದ ಈ ವರ್ಷದಲ್ಲಿ, ಹೊಸಬರು ಕೂಡ ಮಾಮೂಲಿ ಸೂತ್ರಗಳಿಗೆ ಜೋತು ಬಿದ್ದಿದ್ದೊಂದು ವಿಪರ್ಯಾಸ. ಹಾಗೆಯೇ ರಿಮೇಕ್‌ನ ಉಬ್ಬರ ಗಮನಾರ್ಹವಾಗಿ ಇಳಿದ ವರ್ಷವಿದು. ಸಿನಿಮಾ ಉದ್ಯಮ ಕರ್ನಾಟಕದಲ್ಲೇ ಬೇರೂರಲೆಂಬ ಉದ್ದೇಶದಿಂದ ಎಲ್ಲಾ ಕನ್ನಡ ಚಿತ್ರಗಳಿಗೆ ಶೇಕಡಾ ೫೦ ತೆರಿಗೆ ವಿನಾಯಿತಿ ಘೋಷಿಸಿದ್ದರಿಂದಾಗಿ ಏಕಾಏಕಿ ಏರಿದ ರಿಮೇಕ್ ದಂಧೆ, ಕಳೆದ ವರ್ಷದ 'ರಿಮೇಕ್‌ಗಳಿಗೆ ಸಬ್ಸಿಡಿ ಇಲ್ಲ' ಎಂಬ ಪುನರ್ವಿಮರ್ಶಿತ ನೀತಿಯಿಂದ ಕಡಿಮೆ ಆಯಿತು. ಆದರೂ ಹಿಂದಿನ ವರ್ಷ ಆರಂಭವಾಗಿದ್ದ ಅಥವಾ ನಿರ್ಮಾಣ ಮುಗಿಸಿದ್ದ ಸುಮಾರು ಅರವತ್ತೆಂಟು ಚಿತ್ರಗಳು ಈ ವರ್ಷ ತೆರೆಕಂಡವು. ಉಳಿದ ಕೆಲವರು ನಾಲ್ಕಾರು ಪರಭಾಷಾ ಚಿತ್ರಗಳಿಂದ ಎರವಲು ಪಡೆದು, ತಮ್ಮದು ರಿಮೇಕ್ ಅಲ್ಲ ಎಂದು ಸಾಧಿಸುವ ಪ್ರಯತ್ನ ಕೂಡ ಮಾಡಿದರು.

ವರ್ಷದ ಮೊದಲ ಚಿತ್ರ 'ತೂಗವೆ ಕೃಷ್ಣ ನಾ' ರಿಮೇಕ್ ಆಗಿದ್ದು, ಉತ್ತಮ ಆರಂಭಕ್ಕೆ ನಾಂದಿ ಹಾಡಲಿಲ್ಲವೆಂಬುದು ಒಂದು ವಿಪರ್ಯಾಸ. ಆದರೂ ಅತ್ಯಾಚಾರಕ್ಕೆ ಒಳಗಾದ ತರುಣಿಯೊಬ್ಬಳನ್ನು ಮಾನಸಿಕವಾಗಿ ಗುಣಪಡಿಸುವ ನಾಯಕನು, ಅವಳು ಗರ್ಭಿಣಿ ಎಂದು ತಿಳಿದೂ ಮದುವೆಯಾಗುವ ಪ್ರಗತಿಪರ ನಿಲುವಿನ ಚಿತ್ರವಿದು. ನಾಯಕಿ ಸೌಂದರ್ಯ ಹಾಗೂ ಅನಂತನಾಗ್‌ರ ಉತ್ತಮ ಅಭಿನಯದೊಂದಿಗೆ ಛಾಯಾಗ್ರಹಣ (ಸತ್ಯನಾರಾಯಣಸಿಂಗ್) ಕೂಡ ಈ ಚಿತ್ರದ ಮುಖ್ಯ ಅಂಶವಾಗಿತ್ತು. 'ಸಿಡಿದೆದ್ದ ಶಿವ' ಆಕ್ಷನ್ ಪ್ರಧಾನ ಫಾರ್ಮುಲಾ ಚಿತ್ರ. ಸಮಾಜದ ಸಮಸ್ಯೆಗಳನ್ನು ಮೇಲ್ಪದರದಲ್ಲಿ ಗ್ರಹಿಸುವ ಹಾಗೂ ಅದಕ್ಕೆ ಹಿಂಸೆಯಿಂದ ಪರಿಹಾರ ಸೂಚಿಸುವ ಸರಳ ಗ್ರಹಿಕೆಯ ಚಿತ್ರವಿದು. ತಮಿಳಿನ ತ್ಯಾಗರಾಜ್‌ರಿಗೆ ೧೯೯೩ ರಲ್ಲಿ ಕುದುರಿದ ವ್ಯಾಪಾರಿ ಮೌಲ್ಯವನ್ನು ಕ್ಯಾಶ್ ಮಾಡಿಕೊಳ್ಳುವುದಷ್ಟೇ ನಿರ್ದೇಶಕರ ಉದ್ದೇಶವಾಗಿರುವುದರಿಂದ, ಚಿತ್ರದ ಯಾವ ಅಂಶಗಳಿಗೂ ಅರ್ಥ ಒದಗಿಬಂದಿಲ್ಲ.

ಈ ಸಂದರ್ಭದಲ್ಲಿಯೇ ಅದ್ದೂರಿ ಅನ್ನಿಸಬಹುದಾದ ಎರಡು ಚಿತ್ರಗಳು ಬಿಡುಗಡೆಯಾದವು. ಒಂದು, ರವಿಚಂದ್ರನ್‌ರ 'ಚಿನ್ನ'. ಇನ್ನೊಂದು ಶಿವಮಣಿಯ 'ಸ್ವಾತಿ'. ಇವು ಪ್ರಚಾರ ಪಡೆಯುವುದರಲ್ಲಿ ಅಬ್ಬರದ ದಾರಿ ಹಿಡಿದಿದ್ದವು. ವಿಚಿತ್ರವೆಂದರೆ ಚಿತ್ರಕತೆಯ ದೋಷಗಳಿಂದಾಗಿ ಎರಡೂ ಸೋತವು. 'ಚಿನ್ನ' ಅರಣ್ಯ ಹಿನ್ನೆಲೆಯಲ್ಲಿ ಕೆಲವು ಸುಂದರ ಕಲ್ಪನೆಗಳಷ್ಟಕ್ಕೆ ಆಕರ್ಷಕವಾಗಿ, ಕಂಡರೆ 'ಸ್ವಾತಿ' ಕೇವಲ ಮೋಹಕ ಛಾಯಾಗ್ರಹಣಕ್ಕಷ್ಟೇ ಮಾತನಾಡಿಕೊಳ್ಳುವಂತಾಯಿತು. ಸುಧಾರಾಣಿ ಅಭಿನಯದ ಒಂದೆರಡು ಆಕರ್ಷಕ ಸಂದರ್ಭಗಳ ಹೊರತಾಗಿ ಎರಡು ಊರುಗಳ ನಡುವೆ ನಡೆಯುವ ಕತೆಯಲ್ಲಿ ಯಾವುದೇ ಹೊಸತನವಿಲ್ಲ. ಶಿವಮಣಿ ತನ್ನ ಅತಿ ಆತ್ಮವಿಶ್ವಾಸದಿಂದಾಗಿ ಹಾಳುಮಾಡಿದ ಚಿತ್ರವಿದು.

ಇವೆರಡರ ನಡುವೆ ಯಾವ ಅಬ್ಬರವಿಲ್ಲದೆ ಬಂದ 'ಚಿನ್ನಾ ನೀ ನಗುತಿರು' ಪರವಾಗಿಲ್ಲ ಅನಿಸಿದ್ದು ವಿಶೇಷವೆನಿಸಬಹುದಾದ ಕತೆಯಿಂದಾಗಿ. ನಿರುದ್ಯೋಗಿ ಯುವಕರಿಬ್ಬರು ಹಣದ ಆಸೆಯಿಂದಾಗಿ ಮಗುವೊಂದನ್ನು ಅಪಹರಿಸುತ್ತಾರೆ. ಮಗುವಿಗೆ ಪ್ರಾಣಾಂತಿಕ ಕಾಯಿಲೆಯಿರುವುದು ತಿಳಿದಂತೆ, ಕತೆ ಬದುಕಿನ ವಿಷಾದಗಳತ್ತ ಮುಖ ಮಾಡಿ ನಿಲ್ಲುತ್ತದೆ. ಬೇಬಿ ಶಾಮಿಲಿಯ ಉತ್ತಮ ಅಭಿನಯವು ಚಿತ್ರದ ಜೀವಾಳ. ಚಿತ್ರಕತೆ, ನಿರ್ದೇಶನದಲ್ಲಿ ಇನ್ನಷ್ಟು ಹೆಚ್ಚಿನ ಶ್ರಮವಹಿಸಿದ್ದರೆ ನಿರ್ದೇಶಕ ಚಿಕ್ಕಣ್ಣ ಇನ್ನಷ್ಟು ಯಶಸ್ಸು ಸಾಧಿಸಬಹುದಾಗಿತ್ತು.

ಜೋಸೈಮನ್ ನಿರ್ದೇಶನದ 'ಟೈಬಾಂಬ್' ಅವರ ಎಂದಿನ ಶೈಲಿಯ ಮಸಾಲೆ ಹಾಗೂ ಮಾರಾಮಾರಿ ಚಿತ್ರ. ನಿರೂಪಣೆಯಲ್ಲಿ ಅನುಸರಿಸಿದ ಅತಿಯಾದ ವೇಗ ಹಾಗೂ ಸಂಭಾಷಣೆ, ಹಾಡುಗಳಲ್ಲಿನ ನೇರ ಅಶ್ಲೀಲತೆ ಅಸಹ್ಯ ಹುಟ್ಟಿಸುವಂತಿದೆ. ಸಮೂಹ ಸಂಸ್ಕೃತಿಯನ್ನು ಹಾಳುಮಾಡುವುದಕ್ಕೆ ಇಂಥ ಚಿತ್ರಗಳು ಸಾಕಷ್ಟು ಕಾಣಿಕೆ ಸಲ್ಲಿಸುತ್ತವೆ. ಸಮಾಜಕ್ಕೆ ಬದ್ಧವಲ್ಲದ ರೀತಿಯಲ್ಲಿ ಯೋಚಿಸುವ ಜೋಸೈಮನ್ ತರದ ನಿರ್ದೇಶಕರಿಂದಾಗಿಯೇ ಪಿ. ಹೆಚ್. ವಿಶ್ವನಾಥ್ ಅಂಥವರ ಸ್ಥಾನಮಾನ ಸ್ವಲ್ಪ ಹೆಚ್ಚಿದಂತೆ ಕಾಣುವುದು. 'ಪಂಚಮ ವೇದ'ದ ನಂತರದ ಚಿತ್ರಗಳಲ್ಲಿ ಸ್ವಲ್ಪ ಹಿಂದೆ ಸರಿಸಿದ್ದ ವಿಶ್ವನಾಥ್, 'ಮುಸುಕು' ಮೂಲಕ ತಮಗೆ ಮಾಧ್ಯಮದ ಮೇಲೆ ಹಿಡಿತವಿದೆ ಎಂಬುದನ್ನು ಮತ್ತೆ ಸಾಬೀತು ಮಾಡಿದ್ದಾರೆ. ಅಂಬರೀಶ್‌ರವರು ಇನ್ನಷ್ಟು ಶ್ರಮವಹಿಸಿ ಅಭಿನಯಿಸಬೇಕಿತ್ತೆಂಬುದು ಹಾಗೂ ಆರ್. ಮಂಜುನಾಥ್‌ರ ಛಾಯಾಗ್ರಹಣ ಸುರೇಶ್‌ಅರಸ್‌ರ ಸಂಕಲನ ವಿಶೇಷವಾಗಿತ್ತೆಂಬುದು ಚಿತ್ರದ ನೋಡಿದ ನಂತರ ಉಂಟಾದ ಅನಿಸಿಕೆ.

'ಕರುಳಿನ ಕೂಗು' ಹಾಗೂ 'ಒಡಹುಟ್ಟಿದವರು' ಈ ವರ್ಷದ ಟ್ರೆಂಡ್ ಅನ್ನೇ ಬದಲಿಸಿದ ಚಿತ್ರಗಳು. ಈ ಎರಡು ಚಿತ್ರಗಳ ನಂತರ ಕನ್ನಡ ಚಿತ್ರಗಳ ದಿಕ್ಕು ಬೇರೆಯೇ ದಾರಿ ಹಿಡಿದದ್ದು, ಚಿತ್ರರಂಗದಲ್ಲಿ ಕಣ್ಣೀರು ಹಾಗೂ ಕಾಸಿನ ಕೋಡಿ ಹರಿಯುತ್ತಿದೆ. ಅವಿಭಕ್ತ ಕುಟುಂಬ ಹಾಗೂ ಹೆಣ್ಣಿನ ಮಹಾತ್ಯಾಗದ ಆದಿಮ ಪುರಾಣಗಳು ಈ ಎರಡು ಚಿತ್ರಗಳ ಮೂಲಕ ಪುನರಾವತರಣ ಗೊಂಡಿದ್ದು, ಜನಕೂಡ ಅವಕ್ಕೆ ಸ್ಪಂದಿಸುತ್ತಿದ್ದಾರೆ.

ರಿಮೇಕ್ ಆದ `ಕರುಳಿನ ಕೂಗು` ಶೇಕಡಾ ೧೦೦ ರ ತೆರಿಗೆ ವಿನಾಯಿತಿ ಪಡೆದು ಕೋರ್ಟಿನ ಕಟಕಟೆ ಹತ್ತಿದ ಚಿತ್ರ. ಕುಡಿತದ ದುಷ್ಪರಿಣಾಮಗಳನ್ನು ಹೇಳಲಾಗಿದೆ ಎಂಬ ಈ ಚಿತ್ರದಲ್ಲಿ ಕುಡಿತದ ಚಟಕ್ಕೆ ಬಲಿಯಾಗಿರುವ ನಾಯಕನ ಕುಟುಂಬ ಅವನು ಕುಡಿಯುವವರೆಗೂ ಸುಖವಾಗಿರುತ್ತದೆ. ಅವನು ಕುಡಿತ ಬಿಟ್ಟಮೇಲೆ ದುರಂತಕ್ಕೆ ಬಲಿಯಾಗುತ್ತದೆ! ವಿನಯಾಪ್ರಸಾದ್ ಹಾಗೂ ಬಾಲಕಲಾವಿದರ ಉತ್ತಮ ಅಭಿನಯವೊಂದೇ ಉಲ್ಲೇಖಿಸಬಹುದಾದ ಅಂಶ. ಉಳಿದಂತೆ ಚೆನ್ನಾಗಿದೆ ಅನ್ನಿಸುವ ಎಲ್ಲಾ ಅಂಶಗಳೂ ಮೂಲ ಮಲೆಯಾಳಂನ ಕಾಪಿಯೇ ಆಗಿರುವುದರಿಂದ, ಎಲ್ಲಾ ಮೆಚ್ಚಿಗೆ ಮೂಲ ನಿರ್ದೇಶಕನಿಗೇ ಸಲ್ಲುತ್ತದೆ. ನಿರ್ಮಾಪಕರು ಈ ಚಿತ್ರವನ್ನು ರಿಮೇಕ್ ಎಂದು ಹೇಳದೆ ಸರ್ಕಾರದ ದಾರಿ ತಪ್ಪಿಸಿದ್ದು ಇಡೀ ವರ್ಷ ಚರ್ಚೆಗೆ ಕಾರಣವಾಗಿತ್ತು.

'ಒಡ ಹುಟ್ಟಿದವರು' ಚಿತ್ರದಲ್ಲಿ ಡಾ. ರಾಜಕುಮಾರ್‌ರವರ ಅಭಿನಯಕ್ಕೆ ಸವಾಲಾಗುವಂಥ ಪಾತ್ರವಿಲ್ಲ. ಚಿತ್ರದ ಕತೆ ಮೂರು ದಶಕಗಳಷ್ಟು ಹಿಂದಿನ ಸ್ವರೂಪದ್ದು. ಅವಿಭಕ್ತ ಕುಟುಂಬಸಂಸ್ಕೃತಿಯು ಸಕಾರಣವಾಗಿಯೆ ಛಿದ್ರಗೊಳ್ಳುತ್ತಿರುವಾಗ ಅದು ಸರಿಯಲ್ಲ ಎನ್ನುವ ಆದರ್ಶವನ್ನು ಈ ಚಿತ್ರ ಹೇಳುತ್ತದೆ. ಕಲಾಕೃತಿಯಾಗಿ ತುಂಬಾ ದುರ್ಬಲವಾಗಿರುವ ಈ ಚಿತ್ರದ ನಿರೂಪಣೆಯಲ್ಲಿ ಸ್ವಲ್ಪವೂ ಜೀವಂತಿಕೆ ಇಲ್ಲ. `ಆಕಸ್ಮಿಕ` ಹಾಗೂ `ಜೀವನ ಚೈತ್ರ` ಗಳಲ್ಲಿದ್ದ ಅಂತಃಕರಣ ತಾಕುವ



`ಒಡಹುಟ್ಟಿದವರು` ಚಿತ್ರದಲ್ಲಿ ರಾಜಕುಮಾರ್, ಶ್ರೀಶಾಂತಿ

ಸಂದರ್ಭಗಳೊಂದೂ ಈ ಚಿತ್ರದಲ್ಲಿಲ್ಲ. ಕಳೆದ ೨೨ ವರ್ಷಗಳಲ್ಲಿ ಮೊದಲ ಬಾರಿಗೆ ಅಂಬರೀಶ್ ರಾಜ್‌ರ ಜೊತೆ ಅಭಿನಯಿಸಿರುವುದರಿಂದ, ಪ್ರೇಕ್ಷಕರು ಅಭಿಮಾನದ ನಟರ ಸಂಗಮದ ಸಂಭ್ರಮವನ್ನಷ್ಟೇ ಸವಿಯುವುದರಲ್ಲಿ ಚಿತ್ರದ ದೌರ್ಬಲ್ಯಗಳನ್ನು ಮರೆತರು. ರಾಜ್‌ರ ಮುಂದೆ ಅಂಬರೀಶ್‌ರ ಅಭಿನಯ, ದೇಹದ ಗಾತ್ರ ಎಲ್ಲವೂ ಹೋಲಿಕೆಗೆ ಸಿಕ್ಕಿದ್ದೇ ಪ್ರೇಕ್ಷಕರ ಮುಖ್ಯ ಮಾತಾಯಿತು. ರಾಜ್‌ರ ಸಂಸ್ಥೆ ಇದೇ ಪ್ರಥಮ ಬಾರಿಗೆ ಬೇರೊಬ್ಬ ಕಲಾವಿದನನ್ನು ರಾಜ್‌ರಷ್ಟೇ ಪ್ರಾಮುಖ್ಯತೆ ಕೊಟ್ಟು ಮೆರೆಸಿತು. ಇಲ್ಲಿ ಆಶ್ಚರ್ಯಪಡುವಂಥದ್ದಲ್ಲದ ಇನ್ನೊಂದು ಅಂಶವೆಂದರೆ, 'ರಾಯರಮಗ' ಚಿತ್ರ ಬಹುತೇಕ ಅಂಶಗಳಲ್ಲಿ 'ಒಡಹುಟ್ಟಿದವರು' ಕತೆಯನ್ನೇ ಹೋಲುವುದು.

ವಿಷ್ಣುವರ್ಧನ್‌ರ 'ಕುಂತಿ ಪುತ್ರ' ಹೆಸರಿನಲ್ಲೇ ತನ್ನ ಕತೆಯನ್ನು ಸೂಚಿಸುತ್ತದೆ. ಈ ಚಿತ್ರದಲ್ಲಿ ಪಂಢರಿಬಾಯಿಯವರನ್ನು ಅದೆಷ್ಟನೆಯ ಸಲವೋ ಅದೇ ತಾಯಿಯನ್ನಾಗಿ ನೋಡುತ್ತೇವೆ. ಸಾಮಾಜಿಕ ಸ್ಥಿತಿಗತಿಗಳು ಎಷ್ಟೇ ಬದಲಾಗಿದ್ದರೂ ನಮ್ಮ ಚಿತ್ರಗಳಲ್ಲಿ 'ತಾಯಿ' ಮಾತ್ರ ಬದಲಾಗುತ್ತಿಲ್ಲ. ಚಿತ್ರದ ನಾಯಕ ವಿಷ್ಣುವರ್ಧನ್‌ರ ವೇಷಭೂಷಣವೂ ಅಷ್ಟೆ, ಇಡೀ ಭಾರತದಲ್ಲಿ ಯಾವ ಜನಾಂಗದಲ್ಲೂ ಕಾಣದಂಥದ್ದು. ಅದರ ಹೋಲಿಕೆ ಪ್ಯಾಲೆಸ್ಟೈನಿನ ಯಾಸರ್ ಅರಾಫತ್‌ರಲ್ಲಿ ಮಾತ್ರ ಇದೆ!

ಸುಂದರಕೃಷ್ಣ ಅರಸ್‌ರ ಅಕಾಲಿಕ ಸಾವು ಅವರ ಕೊನೆಯ ಮಕ್ಕಳ ಚಿತ್ರ 'ಸೂಪರ್‌ನೊವಾ' ಬಗ್ಗೆ ಕಳಕಳಿಯ ಕುತೂಹಲ ಇಟ್ಟುಕೊಳ್ಳುವಂತೆ ಮಾಡಿತ್ತು. ಹಣಕಾಸಿನ ಅಡಚಣೆಯಿಂದಾಗಿ ವಿಜ್ಞಾನದ ವಸ್ತುವನ್ನುಳ್ಳ ಈ ಚಿತ್ರದ ಕಲ್ಪನೆ ಕುಬ್ಜಗೊಂಡಿದ್ದು, ಇದೇ ಕಾರಣಕ್ಕಾಗಿ ನಿರ್ದೇಶಕರ ಗಮನ ನಿರೂಪಣೆಯನ್ನು ಆಕರ್ಷಕಗೊಳಿಸಿದೆ. ಛಾಯಾಗ್ರಹಣ ಹಾಗೂ ಬೇಂದ್ರೆಯವರ ಪಾತರಗಿತ್ತಿ ಹಾಡು, ಬಹಳ ಕಾಲ ಮನಸ್ಸಿನಲ್ಲಿ ಉಳಿಯುವಷ್ಟು ಗಾಢ ಪರಿಣಾಮ ಬೀರುತ್ತದೆ. ನಟರಾಗಿ ಜನರನ್ನು ಗೆದ್ದಿದ್ದ ಅರಸ್‌ರವರು ಇನ್ನಷ್ಟು ವರ್ಷ ಬದುಕಿದ್ದಿದ್ದರೆ, ನಿರ್ದೇಶಕರಾಗಿ ಕೂಡ ಗೆಲ್ಲುತ್ತಿದ್ದರೆಂಬ ಭಾವನೆ ಈ ಚಿತ್ರ ನೋಡಿದಾಗ ಉಂಟಾಗುತ್ತದೆ.

'ಗಂಧದಗುಡಿ ಭಾಗ-೨' ಎಂ. ಪಿ. ಶಂಕರ್‌ರವರ ಶ್ರಮವನ್ನು ಎತ್ತಿ ತೋರಿಸಿದೆ. ಚರಣ್‌ರಾಜ್‌ರ ಅಭಿನಯದಲ್ಲಿ ಅಬ್ಬರ ಜಾಸ್ತಿ. ಶಿವರಾಜ್ ಕುಮಾರ್ ಇನ್ನೂ ಹೆಚ್ಚು ಶ್ರದ್ಧೆ ವಹಿಸಬೇಕಾಗುತ್ತಿತ್ತು. ಕೆಲವಾರು ಕಾರಣಗಳಿಂದಾಗಿ ಚಿತ್ರ ಅಷ್ಟು ಯಶಸ್ವಿಯಾಗದಿದ್ದರೂ ಕಳಪೆ ನಿರ್ಮಾಣವಲ್ಲ. ಈ ಚಿತ್ರದ ಮೂಲಕ ಜನಪ್ರಿಯ ಹಾಸ್ಯನಟಿ ಜಯಾ ಮತ್ತೆ ಚಿತ್ರರಂಗಕ್ಕೆ ಮರಳಿದ್ದಾರೆ. ಮರಳಿದ ಮಗ್ಗುಲಲ್ಲೇ 'ಮಿಸ್ಟರ್ ಮಹೇಶ್‌ಕುಮಾರ್', 'ಸಮ್ಮಿಲನ' ಚಿತ್ರಗಳಲ್ಲಿ ಅವರಿಗೆ ಅವಕಾಶ ಸಿಕ್ಕಿರುವುದು ಆಕೆಗಿದ್ದ ಜನಪ್ರಿಯತೆ ಹಾಗೂ ಚಿತ್ರರಂಗದಲ್ಲಿ ಆಕೆಯಂಥ ಕಲಾವಿದರ ಕೊರತೆಯನ್ನು ತೋರಿಸುತ್ತದೆ.

ಈ ಎಲ್ಲಾ ಚಿತ್ರಗಳ ಮೂಲಕ ಹಲವು ಹೊಸ ಮುಖಗಳು ಜನರೆದುರು ನಿಂತರೂ ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸುವಷ್ಟು ವಿಶೇಷ ಛಾಪನ್ನು ಯಾರೂ

ಮೂಡಿಸಿಲ್ಲ. ತೀವ್ರ ಆಸಕ್ತಿ, ಪೂರ್ವಸಿದ್ಧತೆಗಳ ಕೊರತೆಯಿಂದಾಗಿ ಹೊಸಬರಲ್ಲಿ ಭರವಸೆ ಇಡುವುದೇ ಕಷ್ಟದ ಸಂಗತಿಯಾಗಿ ಕಂಡಿದೆ.

'ರಸಿಕ', 'ಸಾಮ್ರಾಟ್', 'ಮೇಘಮಾಲೆ', 'ಮಹಾಕ್ಷತ್ರಿಯ' ಚಿತ್ರಗಳು ವೈಭವದೊಂದಿಗೆ ಗೆಲ್ಲಲು ಹವಣಿಸಿದ್ದರೆ, 'ಗೋಪಿ ಕಲ್ಯಾಣ' ಮತ್ತು 'ಚಮತ್ಕಾರ' ಅದೇ ಪರಿಣಾಮಕ್ಕಾಗಿ ಹಂಬಲಿಸಿರುವ ಕಡಿಮೆ ಬಜೆಟ್‌ನ ಚಿತ್ರಗಳು. ಮೊದಲ ಚಿತ್ರಗಳದ್ದು ಸಾಂಪ್ರದಾಯಿಕ ನಿರೂಪಣಾ ಶೈಲಿ. ಕೊನೆಯ ಎರಡರದ್ದು ಭಿನ್ನತೆಗಾಗಿ ಹಂಬಲಿಸಿರುವ ಪ್ರಯತ್ನ. ಮೊದಲ ನಾಲ್ಕು ಚಿತ್ರಗಳು ಸಿನಿಮಾಸ್ಕೋಪ್‌ನಲ್ಲಿದ್ದು, ಸಂಕಲನದ ಪರಿಣತಿಯನ್ನೊಳಗೊಂಡಿರುವುದರಿಂದ ಆ ಮೂಲಕವೇ ಆ ಚಿತ್ರಗಳ ಗುಣಾವಗುಣಗಳನ್ನು ಅವಲೋಕಿಸಬಹುದು.

ಮುಖ್ಯವಾಗಿ ನಮ್ಮ ನಿರ್ದೇಶಕರು ಚಿತ್ರನಿರ್ಮಾಣದಲ್ಲಿ ಸಂಕಲನದ ಹಂತವನ್ನು ಎಷ್ಟೊಂದು ಗಂಭೀರವಾಗಿ ಪರಿಗಣಿಸಿದ್ದಾರೆ ಎಂಬುದರ ಮೇಲೆ, ಸಂಕಲನಕಾರನ ಕೆಲಸದ ಸ್ವರೂಪ ನಿರ್ಧಾರವಾಗುತ್ತದೆ. ಚಿತ್ರಕತೆಯನ್ನು ಅನುಸರಿಸಿ ಚಿತ್ರಿಕೆಗಳನ್ನು ಜೋಡಿಸುವುದಷ್ಟೇ ಸಂಕಲನ ಎಂದು ಭಾವಿಸುವ ನಿರ್ದೇಶಕರಿಗೆ ಸಂಕಲನಕಾರರ ಆಯ್ಕೆಯ ಪ್ರಶ್ನೆಯೇ ಬರುವುದಿಲ್ಲ. ಇಂಥ ಧೋರಣೆಗೆ ಉದಾಹರಣೆಯಾಗಿ 'ರಸಿಕ' 'ಮೇಘಮಾಲೆ' ಚಿತ್ರಗಳನ್ನು ಗಮನಿಸಬಹುದು. ಅದೇ ಚಿತ್ರಕತೆ, ದೃಶ್ಯಗಳಲ್ಲಿ ಮಾಮೂಲಿಗಿಂತ ಹೊರತಾದ ಅಂಶಗಳಿರುವ 'ಸಾಮ್ರಾಟ್' ಹಾಗೂ 'ಮಹಾಕ್ಷತ್ರಿಯ' ಚಿತ್ರಗಳನ್ನು ಹೀಗೆ ಸುಲಭವಾಗಿ ಜೋಡಿಸಲು ಬರುವುದಿಲ್ಲ.

'ಸಾಮ್ರಾಟ್' ಚಿತ್ರದಲ್ಲಿ ಒಂದು ದೃಶ್ಯವಿದೆ. ಕಳ್ಳಸಾಗಣೆ ವ್ಯಾನೊಂದು ಬರುವ ಸೂಚನೆ ಸಿಕ್ಕಿ ನಾಯಕ ಪೊಲೀಸರೊಂದಿಗೆ ಕಾಯುತ್ತಾನೆ. ಆ ವ್ಯಾನ್ ಬರುತ್ತದೆ. ಆದರೆ ಅದರಲ್ಲಿ ಏನೂ ಇರುವುದಿಲ್ಲ. ನಾಯಕನ ಮೇಲೆ ರೇಗಿ ಪೊಲೀಸರು ಹೊರಟು ಹೋಗುತ್ತಾರೆ. ತನ್ನ ನಿರೀಕ್ಷೆ ಸುಳ್ಳಾದ್ದರಿಂದ ಬೇಸರಗೊಂಡ ನಾಯಕ ಆ ವ್ಯಾನು ಬಂದ ದಿಕ್ಕಿನತ್ತ ಮುಖ ಮಾಡಿ ಹೊರಟಾಗ ಎದುರುಗಡೆಯಿಂದ ಅದೇ ಬಗೆಯ, ಅದೇ ಸಂಖ್ಯೆಯ ಇನ್ನೊಂದು ವ್ಯಾನ್ ಹಾದುಹೋಗುತ್ತದೆ. ತಕ್ಷಣ ಬೈಕ್ ತಿರುಗಿಸಿಕೊಂಡು ಹಿಂಬಾಲಿಸಿದರೆ, ಎದುರಿನಿಂದ ಅಂಥ ಇನ್ನೂ ನಾಲ್ಕಾರು ವ್ಯಾನುಗಳು ರಸ್ತೆಗಿಳಿಯುತ್ತವೆ. ಎಲ್ಲಕ್ಕೂ ಒಂದೇ ಬಗೆಯ ನೋಂದಣಿ ಸಂಖ್ಯೆ. ಈ ದೃಶ್ಯದಲ್ಲಿ ಪ್ರೇಕ್ಷಕ ದಿಗ್ಭ್ರಮೆ, ಕುತೂಹಲಗಳ ವಶವಾಗಿರುತ್ತಾನೆ.

ಇಂಥ ದೃಶ್ಯಗಳಲ್ಲಿ ವ್ಯಾನುಗಳ ಓಡಾಟಕ್ಕೆ ಒಂದು ನಿರ್ದಿಷ್ಟ ಸ್ವರೂಪವನ್ನು ಸೃಷ್ಟಿಸಬೇಕು. ಇದು ಸಂಕಲನಕಾರನ ಕೆಲಸ. ಜೊತೆಗೆ ನಿರ್ದೇಶಕ ಯೋಜಿಸಿದ್ದಕ್ಕಿಂತ ಹೆಚ್ಚಿನ ಪರಿಣಾಮ ತರುವುದು, ಇಂಥ ದೃಶ್ಯಗಳಲ್ಲಿ ಸಂಕಲನಕಾರನಿಗೆ ಸಾಧ್ಯ. ಈ ಬಗೆಯ ದೃಶ್ಯಗಳನ್ನು ಸಂಕಲಿಸುವಾಗ ಸಂಕಲನಕಾರನಿಗೆ ಹೆಚ್ಚಿನ ಚಿತ್ರಿಕೆಗಳ ಅಗತ್ಯ ಕಾಣಬಹುದು. ಅವನ ಕಲ್ಪನೆಗೆ ಕೆಲವು ದೃಶ್ಯಗಳು ಬಂದು 'ಅವು ಇದ್ದಿದ್ದರೆ......'

ಎಂದೂ ಅನ್ನಿಸಬಹುದು. ಆದರೆ ಇದು ಅನಿಸಿಕೆಯ ಮಟ್ಟದಲ್ಲಿಯೆ ಉಳಿದುಬಿಡುವ ಸೃಜನಕ್ರಿಯೆ. ಇದು ಎಷ್ಟೋ ವೇಳೆ ಪ್ರೇಕ್ಷಕನಲ್ಲೂ ಬಂದು ಹೋಗುವಂತಹದ್ದಾಗಿರುತ್ತದೆ. ಚಿತ್ರವೊಂದರ ಇಂಥ ಅಂಶಗಳೇ ನಿರ್ದೇಶಕನ ಹೆಗ್ಗಳಿಕೆ ಮತ್ತು ಮಿತಿಗಳನ್ನು ಹೇಳುತ್ತವೆ. ಈ ದೃಶ್ಯಕ್ಕೆ ಆಳದ ತಗ್ಗು ದಿಣ್ಣೆಯಿರುವ ರಸ್ತೆಯನ್ನು ಆರಿಸಿಕೊಂಡಿರುವುದು ಸಮರ್ಪಕವಾಗಿದೆ. ಕ್ಯಾಮೆರಾ ರಸ್ತೆಯ ಈ ಬದಿಯ ತಗ್ಗಿನಲ್ಲಿದ್ದರೆ, ವ್ಯಾನು ಉಬ್ಬಿನಾಚೆಯ ಆ ಬದಿಯ ತಗ್ಗಿನಲ್ಲಿರುತ್ತವೆ. ನಿರ್ದಿಷ್ಟ ಅವಧಿಯಲ್ಲಿ ಅವು ಒಂದೊಂದೇ ಕಾಣಿಸಿಕೊಳ್ಳುವುದು ಪ್ರೇಕ್ಷಕರ ಕುತೂಹಲ ಹಾಗೂ ನಾಡಿಬಡಿತವನ್ನು ಹೆಚ್ಚಿಸುತ್ತವೆ. ಸುರೇಶ್ ಅರಸ್‌ರವರ ಸಂಕಲನ ಕೂಡ, ವ್ಯಾನುಗಳ ವರ್ತುಲವನ್ನು ಗೊಂದಲಕ್ಕೊಳಗಾಗದಂತೆ ಸೃಷ್ಟಿಸಿ, ದೃಶ್ಯದ ನಿಗೂಡತೆ ಹೆಚ್ಚುವಂತೆ ಮಾಡಿದೆ.

ಸಂಕಲನ ಕುರಿತು ಹೇಳಲು ಸಾಧ್ಯವಾಗಿಸುವ ಇಂಥ ದೃಶ್ಯಗಳು ಈ ವರ್ಷದ ಬಹುತೇಕ ಚಿತ್ರಗಳಲ್ಲಿ ಇಲ್ಲ. ಇಂಥ ದೃಶ್ಯಕ್ಕೆ ಸಂಗೀತದ ಅಗತ್ಯ ಬೀಳುವುದಿಲ್ಲ. ವ್ಯಾನುಗಳಿಂದ ಹೊರಡುವ ಶಬ್ದವೇ ದೃಶ್ಯದ ನಿಗೂಢತೆಯನ್ನು ಹೆಚ್ಚಿಸಬಲ್ಲುದು. ಗಂಭೀರವೆನ್ನಿಸುವಂಥ ಇಂಥದೇ ಬೇರೊಂದು ದೃಶ್ಯ 'ಮಹಾಕ್ಷತ್ರಿಯ' ಚಿತ್ರದಲ್ಲಿದೆ. ಅದು ನಾಯಕಿ ಸುಧಾರಾಣಿ ಸ್ನಾನಮಾಡುವಾಗ ಅವಳನ್ನು ಕೊಲ್ಲಲು ಮೊಸಳೆಯನ್ನು ಬಿಡುವ ದೃಶ್ಯ. ಇದು ನಿರೀಕ್ಷಿತ ಘಟನೆ. ಹೆಚ್ಚೆಂದರೆ ಕ್ಲೋಸಪ್ ಮತ್ತು ಮಿಡ್‌ಶಾಟ್‌ಗಳ ಸಮರ್ಪಕ ಸಂಯೋಜನೆಯಿಂದಾಚೆಗೆ ಹೆಚ್ಚಿನ ಕೆಲಸ ಸಂಕಲನಕಾರನಿಗೆ ಇಲ್ಲ. ಕೂತು ಮಾಡುವ ಕೆಲಸಕ್ಕೆ ಸರಿಯಾದ ಸಂಗೀತ ಜೋಡಿಸಿಬಿಟ್ಟರೆ ಸಂಗೀತಕಾರನ ಕೆಲಸವೂ ಮುಗಿದಂತೆ. ಈ ಎರಡೂ ಚಿತ್ರಗಳ ಸಂಕಲನ ಹಾಗೂ ಸಂಗೀತ ಕ್ರಮವಾಗಿ ಸುರೇಶ್ ಅರಸ್ ಹಾಗೂ ಹಂಸಲೇಖ ಅವರದ್ದು.

ಸಂಕಲನಕಾರ ಇಡೀ ಚಿತ್ರವನ್ನು ಒಬ್ಬ ಪ್ರೇಕ್ಷಕನ ರೀತಿಯಲ್ಲಿಯೇ ನೋಡಬೇಕು; ಪ್ರೇಕ್ಷಕನ ರೀತಿಯಲ್ಲಿಯೇ ಕಲ್ಪಿಸಿಕೊಳ್ಳಬೇಕು. ಚಿತ್ರದ ಬಗ್ಗೆ ಒಬ್ಬ ನಿರ್ದೇಶಕನಿಗಿರುವಷ್ಟು ಒಟ್ಟು ಸ್ವರೂಪ ಕಲ್ಪನೆ ಸಂಕಲನಕಾರನಿಗೂ ಇರದಿದ್ದರೆ, ಪರಿಣಾಮದ ನೆಲೆಯಲ್ಲಿ ಶ್ರೇಷ್ಠತೆಯನ್ನು ಸಾಧಿಸುವುದು ಕಷ್ಟ. ಇದರೊಂದಿಗೆ ಚಿತ್ರಿಕೆಗಳ ಸಂಖ್ಯೆ ಹೆಚ್ಚಿದಾಗ ಅಥವಾ ನಿರ್ದೇಶಕ 'ಬೇಡ' ಎಂದು ಕೈಬಿಟ್ಟ ದೃಶ್ಯಗಳಿದ್ದಾಗಲೂ, ಯೋಜಿತ ನಿರೂಪಣೆಯನ್ನು ಗುಣಾತ್ಮಕವಾಗಿ ಪರಿವರ್ತಿಸುವ ಅವಕಾಶ ಸಂಕಲನಕಾರನಿಗೆ ಇದೆ. ಆದರೆ ಆ ಮಟ್ಟದ ಪ್ರತಿಭೆ ಆತನಿಗೆ ಇರಬೇಕಷ್ಟೆ. ನಿರೂಪಣಾ ಪ್ರತಿಭೆ ಮತ್ತು ಅವನು ಶ್ರುತಪಡಿಸುವ ಭಾವತೀವ್ರತೆಯ ಅಂತಃಸಂಬಂಧವನ್ನು ಗ್ರಹಿಸಿ ಸಹವಾದ್ಯಗಳನ್ನು ಮಣಿಸುವುದು, ಹೇಗೆ ಒಂದು ಕಲೆಯೋ ಹಾಗೆಯೇ ಸಂಕಲನ ಕೂಡ. ನಿರ್ದೇಶಕನಿಗಿರುವಷ್ಟು ಸ್ಪಂದನಾಶಕ್ತಿ ಮತ್ತು ಸಿನಿಮಾದ ವಿವಿಧ ಚಿತ್ರಿಕೆಗಳ ನಡುವೆ ಇರುವ ಧ್ವನಿಸೂಕ್ಷ್ಮವನ್ನು ಗ್ರಹಿಸುವ ಕತೆಗಾರನೂ ಆಗಿರದಿದ್ದಲ್ಲಿ ಉತ್ತಮ ಸಂಕಲನ ಮಾಡುವುದು ಸಾಧ್ಯವಿಲ್ಲ.

ಚಿತ್ರೀಕರಣದಲ್ಲಿ ನಡೆದ ಅಪಘಾತದಿಂದಾಗಿ ದೊಡ್ಡ ಪ್ರಚಾರ ಪಡೆದ ಚಿತ್ರ 'ಲಾಕಪ್‌ಡೆತ್'. ಸಂಕಲನ ಮತ್ತು ಸುಂದರನಾಥ್ ಸುವರ್ಣರ ಛಾಯಾಗ್ರಹಣ ಚಿತ್ರದ ಪ್ಲಸ್‌ಪಾಯಿಂಟ್. ರಾಜೇಂದ್ರಬಾಬು ನಿರ್ದೇಶನದಲ್ಲಿ 'ವಿಷ್ಣು ಚಿತ್ರ' ಎಂದು 'ಹಾಲುಂಡ ತವರು' ಪಡೆದ ಪ್ರಚಾರ ಚಿತ್ರವನ್ನು ಯಶಸ್ವಿಗೊಳಿಸಿತು. ಹೆಣ್ಣಿನ ಕಣ್ಣೀರು ಹಾಗೂ ಕರುಳನ್ನು ಅವಲಂಭಿಸಿದ ಈ ಚಿತ್ರದಲ್ಲಿ, ಅತಿರೇಕವೆನ್ನಿಸುವ ನಾಯಕಿಯ ತ್ಯಾಗ ಒಂದು ಸವಕಲು ಮೌಲ್ಯ. ಈ ಚಿತ್ರಗಳ ನಡುವೆ 'ಇಂದ್ರನ ಗೆದ್ದ ನರೇಂದ್ರ' ದಂಥ ಫ್ಯಾಂಟಸಿ ಚಿತ್ರವೂ ಬಂದು ಹೋಗಿದೆ. ಯಶಸ್ವಿ ನಿರ್ಮಾಪಕ ಧನರಾಜ್ ಅವರ 'ಮಕ್ಕಳ ಸಾಕ್ಷಿ' ಮಕ್ಕಳಿಗಿಂತ ಹಿರಿಯರ ವಿಷಯವನ್ನೇ ತುಂಬಿಕೊಂಡಿದ್ದರಿಂದ ಹಾಗೂ ನಿರ್ದೇಶನದಲ್ಲಿ ಕುಸುರಿ ಇಲ್ಲದ್ದರಿಂದ ದೊಡ್ಡ ಸೋಲನ್ನು ಕಂಡಿತು.

'ಲವ್ ೯೪' ಕೆಲವು ಕಾರಣಗಳಿಂದ ಗಮನ ಸೆಳೆದ ಚಿತ್ರ. ಹೊಸ ಹುಡುಗ ಅಭಿಷೇಕ್ ಅವರು ಅಭಿನಯ, ನೃತ್ಯ, ಹಾಡು ಎಲ್ಲಾ ಸಂದರ್ಭದಲ್ಲೂ ಅನುಭವಿ ನಟರಷ್ಟೇ ಪ್ರಬುದ್ಧವಾಗಿ ಅಭಿನಯಿಸಿರುವುದು ವಿಶೇಷ. ನಿರ್ದೇಶಕ ಮುದ್ದುರಾಜ್ ಚಿತ್ರಕತೆಯ ಕಡೆ ಇನ್ನಷ್ಟು ಗಮನ ಕೊಟ್ಟಿದ್ದಿದ್ದರೆ ಚಿತ್ರ ಖಂಡಿತಾ ಯಶಸ್ವಿಯಾಗುತ್ತಿತ್ತು.

ಬಿ. ರಾಮಮೂರ್ತಿಯವರು 'ಲೂಟಿಗ್ಯಾಂಗ್' ಹಾಗೂ 'ಮೇಯರ್ ಪ್ರಭಾಕರ್' ಚಿತ್ರಗಳೊಂದಿಗೆ ೨೫ ರ ಸಂಖ್ಯೆಗೆ ಬಂದು ನಿಂತಿದ್ದಾರೆ. ಆದರೆ ಇಷ್ಟು



'ಹಾಲುಂಡ ತವರು' ಚಿತ್ರದಲ್ಲಿ ಸಿತಾರಾ ಹಾಗೂ ವಿಷ್ಣುವರ್ಧನ್

ಚಿತ್ರಗಳಲ್ಲಿ ಅವರ ಹೆಸರಿನೊಂದಿಗೆ ಹೇಳಬಹುದಾದ ಒಂದೇ ಒಂದು ಚಿತ್ರವೂ ಇಲ್ಲವೇಕೆಂದರೆ, ಅವರೂ ಇಷ್ಟೂ ಚಿತ್ರಗಳನ್ನು ನಿರ್ದೇಶಿಸಿರುವುದು ಕೇವಲ ಐದು ವರ್ಷಗಳಲ್ಲಿ. ಚಿತ್ರ ನಿರ್ದೇಶನವನ್ನು ಗಾರೆ ಕೆಲಸ ಎಂದು ಭಾವಿಸಿದರೆ ಇಂಥ ದುರಂತಗಳು ಎದುರಾಗುತ್ತವೆ. 'ಸಿಡಿದೆದ್ದ ಪಾಂಡವರು' ಹಾಗೂ 'ಇಂದ್ರನಗೆದ್ದ ನರೇಂದ್ರ' ಚಿತ್ರಗಳನ್ನು ನಿರ್ದೇಶಿಸಿರುವ ಸಾಯಿಪ್ರಕಾಶ್ ಅವರಿಗೂ ಇವೇ ಮಾತುಗಳು ಅನ್ವಯಿಸುತ್ತವೆ. 'ಮಂಡ್ಯದ ಗಂಡು' ಅಂಬರೀಶ್‌ರ ಹೆಸರು, ಹಿನ್ನೆಲೆಯನ್ನು ಕ್ಯಾಶ್ ಮಾಡಿಕೊಂಡ ಚಿತ್ರ. ರಮೇಶ್ ನಾಯಕನಾಗಿ ಅಭಿನಯಿಸಿದ 'ಹಂತಕ' ಜನರಿಂದ ತಿರಸ್ಕರಿಸಲ್ಪಟ್ಟ ಚಿತ್ರ. ರಮೇಶ್ ಅವರನ್ನು ತಮಿಳು ಪ್ರೇಕ್ಷಕರಂತೆ ಕನ್ನಡ ಪ್ರೇಕ್ಷಕರು ಒಪ್ಪಿಕೊಳ್ಳುತ್ತಿಲ್ಲ.

ವಸ್ತುವಿನ ಮಟ್ಟಿಗೆ 'ಕರ್ಫ್ಯೂ' ಹಾಗೂ 'ಯಾರಿಗೂ ಹೇಳ್ಬೇಡಿ' ಭಿನ್ನವಾಗಿವೆ. ಆದರೆ ಮಾಧ್ಯಮದ ಶಕ್ತಿ, ಸೂಕ್ಷ್ಮತೆಗಳ ಅರಿವಿಲ್ಲದ ನಿರ್ದೇಶನದಿಂದಾಗಿ ಈ ಚಿತ್ರಗಳು ಎತ್ತರಕ್ಕೇರುವುದಿಲ್ಲ. ಸಾಮಾಜಿಕ ಅನಿಷ್ಟಗಳಿಗೆಲ್ಲ ರಾಜಕಾರಣಿ, ಪುಡಾರಿಗಳೇ ಹೊಣೆ ಎಂಬ ಅರ್ಧಸತ್ಯವನ್ನು, ಪೂರ್ಣಸತ್ಯ ಎಂಬಂತೆ ಒರಟಾಗಿ ಪ್ರತಿಪಾದಿಸಲು ಹೋಗಿರುವುದರಿಂದ, ಈ ಎರಡು ಚಿತ್ರಗಳು ದುರ್ಬಲಗೊಂಡಿವೆ.

ನಿರ್ದೇಶಕ ಯಾರೇ ಆಗಿರಲಿ, ಆತನ ಚಿತ್ರದ ಕಲ್ಪನೆ-ಅದರ ಅರ್ಹತೆ ಏನೇ ಇರಲಿ-ಕೆಲವು ಪ್ರತೀಕಗಳಿಂದ ಕೂಡಿರುತ್ತದೆ. ಆ ಪ್ರತೀಕ 'ಕರ್ಫ್ಯೂ' ಚಿತ್ರದಲ್ಲಿರುವಂತೆ ಹಾಲಿಲ್ಲದೆ ಅಳುವ ಮಗುವಿನ ರೋದನದ ಮೂಲಕ ಸನ್ನಿವೇಶದ ಭೀಕರತೆಯನ್ನು ದಾಖಲಿಸುವುದಾಗಿರಬಹುದು ಅಥವಾ 'ಭೂತಾಯಿ ಮಕ್ಕಳು' ಚಿತ್ರದಲ್ಲಿ ಸಂಯೋಜಿಸಲ್ಪಟ್ಟಂತೆ ಸ್ವಂತ ಮಗುವನ್ನು ತನ್ನ ಸ್ನೇಹಿತನಿಗೆ ಹುಟ್ಟಿದೆಂದು ಭಾವಿಸಿದವನು ಆ ಮಗುವಿಗೆ ಹಾವು ಕಚ್ಚುವ ಸಂದರ್ಭದಲ್ಲಿ ಖುಷಿ ಪಡುತ್ತಾ ನಿಲ್ಲುವುದಾಗಿರಬಹುದು. ಈ ಎರಡೂ ದೃಶ್ಯಗಳ ಮೂಲಕ ಒಂದು ನಿರ್ದಿಷ್ಟ ಕಾರಣಕ್ಕಾಗಿ ವಿಷಾದ ಸೃಷ್ಟಿಸುವ ಉದ್ದೇಶ ನಿರ್ದೇಶಕನಿಗಿರಬಹುದು. ಈ ದೃಶ್ಯಗಳಿಗೆ ಒಟ್ಟು ಕತೆಯಲ್ಲಿ ಇರುವ ಸ್ಥಾನಮಾನ ಏನಾದರೂ ಆಗಿರಲಿ, ಈ ದೃಶ್ಯ ಅಥವಾ ಇಂಥ ಸರಣಿ ದೃಶ್ಯಗಳು, ವಿಷಾದ - ಆಂತಕಗಳನ್ನು ಸೃಷ್ಟಿಸುತ್ತಲೇ ಹೋದರೆ, ಈ ಆತಂಕದ 'ಆಳ' ತಳವೇ ಕಾಣದೆ ಮುಂದುವರಿಯುತ್ತಾ ಒಂದು ಹಂತದಲ್ಲಿ ಪ್ರೇಕ್ಷಕನನ್ನು ತನ್ನಿಂದ ವಿಮುಖಗೊಳಿಸುತ್ತದೆ. ಇದು ಅರ್ಥಶಾಸ್ತ್ರದ ತುಷ್ಟಿಗುಣ ಸಿದ್ಧಾಂತದ ಹಾಗೆ. ಕಲಾಕೃತಿಯೊಂದರ ನಿರ್ಮಿತಿಯಲ್ಲಿ ಅಗತ್ಯಗಳ ಪರಿಮಿತಿ ಅಥವಾ ಪರಿಣಾಮಗಳನ್ನು ಗ್ರಹಿಸದೇ ಹೋದರೆ ಪರಿಣಾಮ ಏರುಪೇರಾಗುತ್ತದೆ.

'ಕರ್ಫ್ಯೂ' ಚಿತ್ರದಲ್ಲಿ ಮಗುವಿಗೆ ಹಾಲು ಸಿಗದಂತೆ ಮಾಡುವುದರಿಂದ ಸಾಧಿಸಬಹುದಾದ ಪರಿಣಾಮವನ್ನು, ಅದೇ ಚಿತ್ರದಲ್ಲಿರುವ ಹುಚ್ಚನು ಹಾಲನ್ನು ತಂದು ಕುಡಿಸಿದಾಗ ಅಥವಾ ವಿಧ್ವಂಸಕನೊಬ್ಬನ ಕೈಲಿ ಆ ಕೆಲಸ ಮಾಡಿಸಿದಾಗ ಇನ್ನಷ್ಟು ಹೆಚ್ಚು ಕಲಾತ್ಮಕವಾಗಿ ಸಾಧಿಸಲು ಸಾಧ್ಯವಿತ್ತಲ್ಲವೇ ಎಂಬುದು ಒಂದು ಪ್ರಶ್ನೆ. 'ಭೂ ತಾಯಿ ಮಕ್ಕಳು' ಚಿತ್ರದಲ್ಲಿ ಏನೂ ಗೊತ್ತಿಲ್ಲದೆ ಸಾವಿನೊಂದಿಗೆ ಆಡುತ್ತಿರುವ ಮಗು, ಹಾವು

ಕಚ್ಚುವ ಮುನ್ನ 'ಹಾವು ಕಚ್ಚಲಿ' ಎಂದು ಬಯಸುತ್ತಾ ನಿಂತಿರುವ ತಂದೆಯತ್ತ ಒಮ್ಮೆ ನೋಡಿ, ಹಾವಿನೊಂದಿಗೆ ಆಟ ಮುಂದುವರೆಸಿ ಆನಂತರ ಕಚ್ಚುವ ಸಂದರ್ಭ ಇದ್ದಿದ್ದರೆ, ಅದರ ಅಂತಃಕರಣವೇ ಬೇರೆಯಾಗುತ್ತಿತ್ತು. ದೃಶ್ಯಗಳಲ್ಲೇ ಅಂತರ್ಗತವಾಗಿರುವ ಸೂಕ್ಷ್ಮಗಳನ್ನು ಬಳಸಿಕೊಳ್ಳಬೇಕಾದ್ದು ಹೀಗೆ.

ಜಗ್ಗೇಶ್ ಅಭಿನಯದ 'ಭೈರವ' ಹಾಗೂ ಶಿವರಾಜ್‌ಕುಮಾರ್ ಅಭಿನಯದ 'ಮುತ್ತಣ್ಣ' ಚಿತ್ರಗಳಿಗೆ ಕನ್ನಡದ ಸೊಗಡಿಲ್ಲ. ಇದಕ್ಕೆ ಕಾರಣ ಇವುಗಳ ಮೂಲ ಚಿತ್ರಗಳು ಬೇರೆ ಭಾಷೆಯವಾಗಿರುವುದು. ' ಸಾಗರದೀಪ' ಎಂ. ವೀರಪ್ಪಮೊಯಿಲಿಯವರ ಕತೆ ಎಂಬ ಕಾರಣಕ್ಕೆ ಅಲ್ಲದಿದ್ದರೂ, ನಾಗಾಭರಣರ ನಿರ್ದೇಶನ ಎಂಬುದಕ್ಕೂ ಆಸಕ್ತಿಯನ್ನು ಉಳಿಸಿಕೊಳ್ಳುವುದಿಲ್ಲ. ನಿರೂಪಣೆ ಅಷ್ಟೊಂದು ನೀರಸವಾಗಿದೆ. ಕಾಸರಗೋಡಿನ ಬೇಕಲ್‌ಕೋಟೆ ಹಾಗೂ ಅದರ ಸುತ್ತಲಿನ ರುದ್ರರಮಣೀಯ ಪ್ರಕೃತಿಯನ್ನು ಡೆನ್‌ಸೆಟ್‌ನಂತೆ ಚಿತ್ರಿಸಿರುವ ಪವಾಡ ಈ ಚಿತ್ರದಲ್ಲಿದೆ! ಈ ಚಿತ್ರವೂ ಸೇರಿದಂತೆ ವರ್ಷದ ಒಟ್ಟು ೬೮ ಚಿತ್ರಗಳ ಪೈಕಿ ಸುಮಾರು ೩೦ ಚಿತ್ರಗಳಲ್ಲಿ ಕನ್ನಡದ ಘೋಷಣೆಗಳು, ಕನ್ನಡದ ಹಿರಿಮೆಯನ್ನು ಸಾರುವ ಹಾಡುಗಳು ಹೇರಳವಾಗಿವೆ. ಆದರೆ, ಈ ೩೦ ಚಿತ್ರಗಳು ಕೇವಲ ಒಂದೊಂದೇ ವಾರ ಓಡಿವೆ. ಜೊತೆಗೆ ಹತ್ತು ಚಿತ್ರಗಳ ೧೦ ಹಾಡುಗಳಲ್ಲಿ ನಾಯಕಿಯರನ್ನು ಕುರಿತು ನಾಯಕ ಹಾಡುವ ''ಕನ್ನಡ ಹೆಣ್ಣಿನ ಕಂಪಿನ ಕಣ್ಣಿನ'' ಎಂಬರ್ಥದ ಸಾಲುಗಳ ಹಾಡುಗಳಿವೆ. ವಿಚಿತ್ರವೆಂದರೆ, ಇಷ್ಟೂ ನಾಯಕಿಯರು ಕನ್ನಡದ ಗಂಧವೇ ಗೊತ್ತಿಲ್ಲದ ತಮಿಳು, ಮಲೆಯಾಳಿ ಕಂಪಿನವರು! ಸಿನಿಮಾದ ವಿವಿಧ ಹಂತಗಳ ಕೆಲಸ ನಡೆಯುವಾಗ ಬೇರೆ ಬೇರೆ ವಿಭಾಗಗಳ ತಂತ್ರಜ್ಞರ ನಡುವೆ ಚರ್ಚೆ, ಸಾಮರಸ್ಯ ಇರುವುದಿಲ್ಲವಾದ್ದರಿಂದ ಹೀಗಾಗುತ್ತದೆ.

'ಮಹಾಶಕ್ತಿ ಮಾಯೆ' ಎಂಬ ಭಕ್ತಿ, ಸಾಮಾಜಿಕ, ಪೌರಾಣಿಕ ಚಿತ್ರದ ಬಗ್ಗೆ ಎರಡು ಮಾತನ್ನು ಪ್ರತ್ಯೇಕವಾಗಿಯೇ ಹೇಳಬೇಕಾಗುತ್ತದೆ. ಈ ಚಿತ್ರದಲ್ಲಿ ಜನರ ನಂಬಿಕೆಗಳನ್ನು ವ್ಯಾಪಾರವನ್ನಾಗಿ ಮಾಡುವ ಪ್ರಯತ್ನ ಇದೆ. ಕಲ್ಪಿತ ಘಟನೆಗಳನ್ನು ಅವು ನಡೆದಿರುವಂಥವು ಎಂಬ ರೀತಿಯಲ್ಲಿ ಚಿತ್ರಿಸಿರುವುದು ಒಂದು ದೊಡ್ಡ ಮೋಸ. ಒಂದು ರೀತಿಯಲ್ಲಿ ಈ ಚಿತ್ರ ಭಕ್ತಿ ತೋರದವರನ್ನು ಬೆದರಿಸುವ ರೀತಿಯಲ್ಲಿ ಇದ್ದು, ಇದನ್ನು ಜನ ಅನಾಮತ್ತಾಗಿ ತಿರಸ್ಕರಿಸಿದರು. ಈ ಸಂದರ್ಭದಲ್ಲಿಯೇ 'ಶಿರಡಿ ಸಾಯಿಬಾಬಾ' ಹಾಗೂ 'ಕೊಲ್ಲೂರು ಮೂಕಾಂಬಿಕಾ' ಕೂಡ ದಯನೀಯವಾಗಿ ಸೋಲುಂಡವು. ತನ್ನನ್ನು ವ್ಯಾಪಾರದಿಂದ ಸರಕನ್ನಾಗಿ ಮಾಡುತ್ತಿದ್ದಾರೆ ಎಂದೆನ್ನಿಸಿಯೋ ಏನೋ, ದೇವರು ಈ ಚಿತ್ರಗಳ ಮೇಲೆ ಕಿಂಚಿತ್ತೂ ದಯೆ ತೋರಲಿಲ್ಲ!

ವರ್ಷದ ಕೊನೆಯ ಎರಡೂವರೆ ತಿಂಗಳುಗಳಲ್ಲಿ ೧೬ ಚಿತ್ರಗಳು ಬಿಡುಗಡೆಯಾದವು. ಇವುಗಳಲ್ಲಿ ವಿಶೇಷ ಗಮನಕ್ಕೆ ಅರ್ಹವಾದ ಚಿತ್ರಗಳೆಂದರೆ 'ಗಂಡುಗಲಿ' ಹಾಗೂ 'ಪಂಜರದಗಿಳಿ' ಮಾತ್ರ. ತಾಂತ್ರಿಕತೆ ಹಾಗೂ ವೈಭವದ ನಿರ್ಮಾಣಕ್ಕಾಗಿ 'ಗಂಡುಗಲಿ' ಹೆಚ್ಚಿನ ಆಕರ್ಷಣೆ ಪಡೆದುಕೊಂಡಿದೆ. ಆದರೆ ಈ ಚಿತ್ರದ

ಕತೆ ಹಲವಾರು ಚಿತ್ರಗಳಿಂದ ಎತ್ತಿಕೊಂಡ ಸರಕಾದ್ದರಿಂದ ಸಿನಿಮಾ ನೋಡುವಾಗ ಮೂಲ ಚಿತ್ರಗಳೆಲ್ಲಾ ಸ್ಮೃತಿಗೆ ಬರುತ್ತವೆ. ಇಂಥದೇ ಅನುಭವ 'ಅಲೆಗ್ಸಾಂಡರ್' ಚಿತ್ರ ನೋಡಿದಾಗಲೂ ಆಯಿತು. ಆದರೆ 'ಗಂಡುಗಲಿ'ಯ ಹೆಗ್ಗಳಿಕೆಯಿರುವುದು ಛಾಯಾಗ್ರಹಣ (ಜಿ.ಜಿ. ಕೃಷ್ಣ) ಹಾಗೂ ಸಂಕಲನದಲ್ಲಿ (ಆರ್. ಜನಾರ್ಧನ್).

'ಪಂಜರದ ಗಿಳಿ' ಚಿತ್ರ 'ಗಂಡುಗಲಿ' ಗಿಂತ ತೀರಾ ಭಿನ್ನವಾಗಿದೆ. ನೆಂಟನ ವಂಚನೆಯಿಂದ ಮುಂಬೈನ ವೇಶ್ಯಾವಾಟಿಕೆಗೆ ಸೇರುವ ಈ ಚಿತ್ರದ ನಾಯಕಿ, ನಾಯಕನ ಸಹಾಯದಿಂದ ತಪ್ಪಿಸಿಕೊಂಡು ಬಂದು ಅವನನ್ನೇ ಮದುವೆ ಆಗುತ್ತಾಳೆ. ಈ ಕತೆಯನ್ನು ಹೇಳಲು ನಿರ್ದೇಶಕ ಸುಧೀಂದ್ರ ಕಲ್ಲೋಳ್ ಸ್ವಲ್ಪ ಜಾಸ್ತಿಯೇ ಕಷ್ಟಪಟ್ಟಿದ್ದಾರೆ. ಚಿತ್ರಕತೆಯಲ್ಲಿ ನೇರ ಫ್ಲಾಶ್‌ಬ್ಯಾಕ್‌ಗೆ ಬದಲು ಘಟನೆಗಳಿಂದಲೇ ವಿವರಗಳು ಬಿಚ್ಚಿಕೊಳ್ಳುವಂತೆ ಮಾಡಿರುವುದು ಹಾಗೂ ಹಾಸ್ಯದೊಂದಿಗೆ ಅತ್ಯಂತ ಸಹಜವಾಗಿ ಕುತೂಹಲವೂ ಹೆಚ್ಚುತ್ತಾ ಹೋಗುವಂತೆ ಕತೆ ಹೆಣೆದಿರುವುದು ಮೆಚ್ಚಿಗೆಯಾಗುತ್ತದೆ. ನಾಯಕಿ ಶೃತಿಯಷ್ಟೇ ಉತ್ತಮವಾಗಿ ಲೋಕೇಶ್, ಅಶೋಕ್‌ಬಾದರದಿನ್ನಿ, ಸಿಂಹ ಹೆಮ್ಮಿಗೆ ಅಭಿನಯಿಸಿದ್ದಾರೆ.

ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಮುಖ್ಯಪಾತ್ರದಲ್ಲಿ ಅಭಿನಯಿಸಿರುವ 'ಪ್ರಜಾಶಕ್ತಿ' ಹೆಗಡೆಯವರ ಸಾರ್ವಜನಿಕ ವ್ಯಕ್ತಿತ್ವವನ್ನು ಆಕರ್ಷಣೆ



'ಪ್ರಜಾಶಕ್ತಿ' ಚಿತ್ರದಲ್ಲಿ ರಾಮಕೃಷ್ಣಹೆಗ್ಗಡೆ, ಶಶಿಕುಮಾರ್ ಹಾಗೂ ಶ್ರೀಶಾಂತಿ.

ಮಾಡಿಕೊಳ್ಳಲು ಪ್ರಯತ್ನಿಸಿರುವ ಚಿತ್ರ. ಆದರೆ, ನಿರೂಪಣೆಯಲ್ಲಿನ ಅತಿವಾಚ್ಯತೆ ಚಿತ್ರದ ಗಾಂಭೀರ್ಯಕ್ಕೆ ಧಕ್ಕೆ ತಂದಿದೆ. ಹೆಗಡೆಯವರ ಅಭಿನಯ ' ಅಂಡರ್ ಪ್ಲೇ' ಅನ್ನುವುದಕ್ಕಿಂತಲೂ ಸಪ್ಪೆಯಾಗಿರುವುದರಿಂದ ಶಶಿಕುಮಾರ್ ಸೇರಿದಂತೆ ಅವರ ಸುತ್ತಲಿನ ಪಾತ್ರಗಳೆಲ್ಲ ನಾಟಕೀಯವಾಗಿ ಕಾಣುತ್ತವೆ. ಇಡೀ ಚಿತ್ರದಲ್ಲಿ ಉತ್ತಮ ಪಾತ್ರ ಪೋಷಣೆ ಆಗಿರುವುದು ಜಿಲ್ಲಾಧಿಕಾರಿ ಪಾತ್ರಕ್ಕೆ. ವಿನಯಪ್ರಸಾದ್ ಅತ್ಯಂತ ಗಂಭೀರವಾಗಿ ಅಭಿನಯಿಸಿ ಮನಸ್ಸಿನಲ್ಲಿ ಉಳಿಯುತ್ತಾರೆ. ಇವರೊಂದಿಗೆ ಅಶೋಕ್, ಬೂದಾಳ್ ಕೃಷ್ಣಮೂರ್ತಿ, ಲಕ್ಷ್ಮಣ್‌ರವರ ಅಭಿನಯ ಕೂಡ ನೆನಪಿನಲ್ಲಿ ಉಳಿಯುವಂತಿದೆ.

ಸಾಯಿಪ್ರಕಾಶ್ ಅವರ 'ಹೆತ್ತಕರುಳು' ಬಗ್ಗೆ ಹೆಚ್ಚಿಗೆ ಹೇಳುವಂತಿಲ್ಲ. ಈ ಚಿತ್ರದಲ್ಲಿ ಶೃತಿಯಷ್ಟು ಚಿಕ್ಕವಯಸ್ಸಿನ ನಟಿಯನ್ನು ತೆರೆಯ ಮೇಲೆ ಮೂರುಮಕ್ಕಳ ತಾಯಿಯನ್ನಾಗಿ ನೋಡುವುದು ಎಷ್ಟು ಕಷ್ಟವೋ ಅಷ್ಟೇ ಕಷ್ಟ ಬದುಕಲು ಹಲವಾರು ದಾರಿಗಳಿರುವ ಈ ಕಾಲದಲ್ಲಿ ಮಕ್ಕಳಿಗೆ ವಿಷಕೊಟ್ಟು ಸಾಯಿಸುವಂಥ ವಿದ್ಯಾವಂತ ಹೆಣ್ಣನ್ನು ಕಲ್ಪಿಸಿಕೊಳ್ಳುವುದರಲ್ಲೂ ಆಗುತ್ತದೆ. 'ಕಾವೇರಿ ತೀರದಲ್ಲಿ' ಚಿತ್ರದಲ್ಲಿ ಹೊಸತೆಂಬುದು ಏನೂ ಇಲ್ಲ. ಡಾ. ರಾಜ್‌ಕುಮಾರ್ ಅಭಿನಯದ 'ಎರಡು ಕನಸು' ಚಿತ್ರದ ಎಳೆಯೇ ಈ ಚಿತ್ರದ ಎಳೆಯೂ ಆಗಿದ್ದು ಕನ್ನಡ ಚಿತ್ರವನ್ನೇ ಕಾಪಿ



'ಹೆತ್ತಕರುಳು' ಚಿತ್ರದಲ್ಲಿ ಶೃತಿ, ಎಂ. ಎನ್. ಲಕ್ಷ್ಮೀದೇವಿ, ದೇವರಾಜ್, ಮತ್ತಿರರು

ಮಾಡಿದಂತಾಗಿದೆ. ಚಿತ್ರದ ಮನಮಿಡಿಯುವಂಥ ಸನ್ನಿವೇಶವೊಂದಕ್ಕೆ ಡಾ. ರಾಜ್‌ರವರ ಹಿನ್ನೆಲೆ ಹಾಡು ಕೂಡ ನೆರವಾಗಿ ಬಂದಿಲ್ಲ. ಈಚೆಗೆ ರಾಜ್‌ರವರು ಇತರರಿಗೆಂದು ಹಾಡುತ್ತಿರುವ ಹಾಡುಗಳು ಅಸಮರ್ಪಕ ಸಂದರ್ಭಗಳಿಂದಾಗಿ ಸೊರಗುತ್ತಿವೆ.

ಈ ವರ್ಷ ಕನ್ನಡ ಚಿತ್ರರಂಗಕ್ಕೆ ಸರ್ಕಾರದಿಂದ ಹೆಚ್ಚಿನ ನೆರವು ದಕ್ಕಿತು. ಕುಸಿಯುತ್ತಿರುವ ಚಿತ್ರರಂಗದ ಅಭಿವೃದ್ಧಿಗಾಗಿ ಸಮಗ್ರ ನೀತಿಯೊಂದನ್ನು ರೂಪಿಸಲು ಹಿರಿಯ ಪತ್ರಕರ್ತ ವಿ.ಎನ್. ಸುಬ್ಬರಾವ್ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯೊಂದನ್ನು ರಚಿಸಿತು. ಸರ್ಕಾರವು ಆ ಸಮಿತಿಯ ಶಿಫಾರಸ್ಸಿನ ಬಹುತೇಕ ಅಂಶಗಳನ್ನು ಜಾರಿಗೊಳಿಸಿತು. ಇದರಲ್ಲಿ ಮುಖ್ಯವಾದುದು 'ಸ್ಲ್ಯಾಬ್ ಪದ್ಧತಿ'ಯ ಜಾರಿ. ಪ್ರಶಸ್ತಿ ಮೊತ್ತದಲ್ಲಿ ಗಣನೀಯ ಏರಿಕೆ, ಹೊಸದಾಗಿ ಗಾಯಕ, ಗಾಯಕಿ, ಗೀತರಚನಕಾರ, ಕಲಾ ನಿರ್ದೇಶಕ ಇವರುಗಳಿಗೆ ಪ್ರಶಸ್ತಿ ಹಾಗೂ ಶ್ರೇಷ್ಠ ಸಾಮಾಜಿಕ ಕಳಕಳಿಯ ಚಿತ್ರ ಮತ್ತು ಶ್ರೇಷ್ಠ ಮಕ್ಕಳ ಚಿತ್ರಗಳಿಗೆ ಪ್ರಶಸ್ತಿ ನೀಡುವುದೂ ಸೇರಿದೆ.

ಮೂರು ವರ್ಷಗಳಿಂದ ಬಾಕಿ ಉಳಿಸಿಕೊಂಡಿದ್ದ ಪ್ರಶಸ್ತಿಗಳನ್ನು ಮಂಗಳೂರಿನಲ್ಲಿ ಪ್ರದಾನಿಸಲಾಯಿತು. ಮೊದಲ ಗುಬ್ಬಿ ವೀರಣ್ಣ ಪ್ರಶಸ್ತಿಯನ್ನು ಡಾ. ರಾಜ್‌ಕುಮಾರ್ ಅವರು ಪಡೆದುಕೊಂಡರು. 'ಚಿನ್ನಾರಿ ಮುತ್ತ', 'ದೇವರಕಾಡು' ಚಿತ್ರಗಳು ರಾಷ್ಟ್ರಪ್ರಶಸ್ತಿ ಪಡೆದವು. ಆರೆನ್ನಾರ್ ಪ್ರಶಸ್ತಿ, ನಿರ್ದೇಶಕರ ಸಂಘದ ಪ್ರಶಸ್ತಿ ಸಮಾರಂಭಗಳು ನಡೆದವು.

ಇದೇ ವರ್ಷ ಮೂವರು ಮಾಜಿ ಮುಖ್ಯಮಂತ್ರಿಗಳು ಚಿತ್ರರಂಗದಲ್ಲಿ ಸುದ್ದಿ ಮಾಡಿದರು. ವೀರಪ್ಪಮೊಯ್ಲಿಯವರ 'ಸಾಗರದೀಪ' ಕೃತಿ ಚಲನಚಿತ್ರವಾದರೆ ರಾಮಕೃಷ್ಣ ಹೆಗಡೆಯವರು ಅಭಿನಯಿಸಿದ 'ಪ್ರಜಾಶಕ್ತಿ' ವಿಧಾನಸಭಾ ಚುನಾವಣೆಯ ಸಂದರ್ಭದಲ್ಲಿ ಬಿಡುಗಡೆಯಾಯಿತು. ಬಂಗಾರಪ್ಪನವರು ಹಾಡಿದ ಹಾಡುಗಳ ಧ್ವನಿಸುರುಳಿಯೊಂದು ಚಲನಚಿತ್ರ ಸುದ್ದಿಗಳ ಜಾಗದಲ್ಲಿ ಗಮನ ಸೆಳೆಯಿತು.

ಕನ್ನಡ ವಾಕ್ಚಿತ್ರ ಅರುವತ್ತಕ್ಕೆ ಕಾಲಿಟ್ಟಿದ್ದು ಈ ವರ್ಷವೇ. ಒಂದು ಪ್ರಮುಖ ಉದ್ಯಮರೂಪಿ ಸಾಂಸ್ಕೃತಿಕ ರಂಗದ ವಜ್ರಮಹೋತ್ಸವ ಸಂಭ್ರಮವನ್ನು ಸರ್ಕಾರವಾಗಲಿ ಚಿತ್ರೋದ್ಯಮವಾಗಲಿ ಆಚರಿಸಲು ವಿಫಲವಾದವು. ಇಂಥ ಸಂದರ್ಭದಲ್ಲಿ ಕನ್ನಡ ಚಲನಚಿತ್ರ ಪತ್ರಕರ್ತರ ಕ್ರಿಯಾಶಾಲಿ ಸಂಘಟನೆ 'ಚಲನಚಿತ್ರ ಪತ್ರಕರ್ತರ ವೇದಿಕೆ' ಯು ವರ್ಷಪೂರ್ತಿ 'ಕನ್ನಡ ಚಿತ್ರರಂಗ- ೬೦: ಸಾಧನೆ -ಹಿನ್ನೋಟ' ಹೆಸರಿನಲ್ಲಿ ಉಪನ್ಯಾಸಗಳನ್ನು ಹಮ್ಮಿಕೊಂಡಿತ್ತು .ಅಲ್ಲದೇ, ಆಗಸ್ಟ್ ತಿಂಗಳಲ್ಲಿ ಕನ್ನಡ ಚಲನಚಿತ್ರ ಸಂಗೀತ ಕಳೆದ ೬೦ ವರ್ಷಗಳಲ್ಲಿ ಬೆಳೆದು ಬಂದ ಬಗೆಯ ಪ್ರಾತ್ಯಕ್ಷಿಕೆ, ಪ್ರದರ್ಶನ, ಗಾಯನಗಳೊಂದಿಗೆ ವಿಶೇಷವಾಗಿ ಸಂಯೋಜಿಸಿತ್ತು. ತೀರಾ ಅದ್ಧೂರಿಯಾಗಿ ನಡೆದ ಈ ಸಮಾರಂಭವನ್ನು ಖ್ಯಾತ ಗೀತರಚನಕಾರ, ಫಾಲ್ಕೆ ಪ್ರಶಸ್ತಿ ವಿಜೇತ ಮಜ್ರೂಹ್ ಸುಲ್ತಾನ್‌ಪುರಿ ಉದ್ಘಾಟಿಸಿದರು. ಆ ದಿನದ ಸಂಜೆಯ ಸಂಗೀತ ಸಮಾರಂಭವನ್ನು ಡಾ. ರಾಜ್‌ಕುಮಾರ್ ಉದ್ಘಾಟಿಸಿದರು; ಗುಲ್ಜಾರ್ ಮುಖ್ಯ

ಅತಿಥಿಯಾಗಿದ್ದರು. ದಕ್ಷಿಣ ಭಾರತದ ಸುಮಾರು ೨೫ ಮಂದಿ ಪ್ರಖ್ಯಾತ ಗಾಯಕಗಾಯಕಿಯರು ಭಾಗವಹಿಸಿ ಹಾಡಿದ್ದು ಈ ಕಾರ್ಯಕ್ರಮದ ವಿಶೇಷ.

ಸಂಭ್ರಮಕ್ಕೆ ಸಂಬಂಧಿಸಿದ ಇಷ್ಟು ಸಂಗತಿಗಳೊಂದಿಗೆ ಆಗಾಗ ನೋವು ಕೂಡ ಹಾಸು ಹೊಕ್ಕಾಗಿತ್ತು. ಕನ್ನಡ ಚಿತ್ರರಂಗದ ಉದಯೋನ್ಮುಖ ನಟ ಸುನಿಲ್ ಕಾರು ಅಪಘಾತದಲ್ಲಿ ಸಾವಿಗೀಡಾದರು. ' ಬೆರಳ್‌ಗೆ ಕೊರಳ್' ಅಲ್ಲದೆ ಸುಮಾರು ೨೦ ಗೀತೆಗಳ ಮೂಲಕ ಚಿತ್ರರಂಗಕ್ಕೂ ಹತ್ತಿರವಾಗಿದ್ದ ಕುವೆಂಪು ಇನ್ನಿಲ್ಲವಾದರು. 'ಗೆಜ್ಜೆ ಪೂಜೆ', 'ಫಣಿಯಮ್ಮ', 'ಸಂಬಂಧ', 'ಮುತ್ತು ಒಂದು ಮುತ್ತು', ' ಹೆಂಡತಿ ಎಂದರೆ ಹೀಗಿರಬೇಕು', (ಕೂಚುಭಟ್ಟ) ಚಿತ್ರಗಳ ಕಾದಂಬರಿಗಾರ್ತಿ ಎಂ.ಕೆ. ಇಂದಿರಾ, 'ರಥಸಪ್ತಮಿ', 'ಭಾಗ್ಯದಾ ಲಕ್ಷ್ಮೀ ಬಾರಮ್ಮಾ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದ ಖ್ಯಾತ ನಾಟಕಕಾರ ಪರ್ವತವಾಣಿ, 'ಕಳ್ಳಕುಳ್ಳ'ದಲ್ಲಿ ಅಭಿನಯಿಸಿದ್ದ ಹೆಸರಾಂತ ನೃತ್ಯಪಟು ಗೋಪಿಕೃಷ್ಣ, ಹೆಸರಾಂತ ಸಿನಿಮಾ ಉದ್ಯಮಿ ಎಲ್.ವಿ. ಪ್ರಸಾದ್, ಸಾಹಸ ನಿರ್ದೇಶಕ ವೈ. ಶಿವಯ್ಯ, ಬೆಂಗಳೂರಿನಲ್ಲಿ ನೆಲೆಸಿದ್ದ ಭಾರತೀಯ ಚಿತ್ರರಂಗದ ಪ್ರಥಮತಾರೆ ದೇವಿಕಾರಾಣಿ, ಕನ್ನಡ ಚಲನಚಿತ್ರಗಳ ಸ್ಥಿರಚಿತ್ರ, ಮಾಹಿತಿಗಳ ಸಂಗ್ರಹಕಾರ ಕಾನಕಾನಹಳ್ಳಿ ಗೋಪಿ ಅವರುಗಳು ನಮ್ಮನ್ನಗಲಿದ್ದು ಈ ವರ್ಷದ ಕಹಿನೆನಪು. ಹಿರಿಯ ನಟ ಕೆ.ಎಸ್. ಅಶ್ವತ್ಥ್‌ರವರು ಅಭಿನಯ ಜೀವನಕ್ಕೆ ಹೇಳಿದ ವಿದಾಯ, ಪಂಡರೀಬಾಯಿಯವರು ಅಪಘಾತದಲ್ಲಿ ಎಡಗೈ ಕಳೆದುಕೊಂಡ ಆತಂಕಗಳ ಜೊತೆಗೆ ಮರಣಾಂತಿಕ ಕಾಯಿಲೆಯೊಂದಿಗೆ ಬಾಲಣ್ಣ, ತೂಗುದೀಪ ಶ್ರೀನಿವಾಸ್ ಇಡೀ ವರ್ಷ ಹೋರಾಡಿದ್ದು ವಿಷಾದಕರ ಸಂಗತಿಗಳು.

ಡಬ್ಬಿಂಗ್ ಸಂಸ್ಕೃತಿಯ ಬಗ್ಗೆ ಡಾ. ರಾಜ್‌ಕುಮಾರ್ ಅವರೇ ಮತ್ತೊಮ್ಮೆ ದನಿ ಎತ್ತರಿಸಬೇಕಾಯಿತು. ಉರ್ದುವಾರ್ತಾ ಪ್ರಸಾರದ ಬೆಂಗಳೂರು ದೂರದರ್ಶನದ ನಿರ್ಧಾರವನ್ನು ವಾಪಸ್ಸು ಪಡೆಯುವಂತೆ ಮಾಡಿದ್ದು ಕೂಡ ಡಾ. ರಾಜ್‌ರವರ ಪ್ರತಿಭಟನೆಯ ಘೋಷಣೆಯೇ. ಬೆಂಗಳೂರು ಮಹಾನಗರಪಾಲಿಕೆ ವರ್ಷದ ಆರಂಭದಲ್ಲಿ ವಿಧಾನಸೌಧದ ಎದುರು ಡಾ. ರಾಜ್‌ರಿಗೆ ನಾಗರಿಕ ಸನ್ಮಾನ ಮಾಡಿತಲ್ಲದೆ, ರಾಜಾಜಿನಗರದ ೮೦ ಅಡಿ ರಸ್ತೆಗೆ ಅವರ ಹೆಸರಿಟ್ಟು ಗೌರವಿಸಿತು. 'ಜೀವನ ಚೈತ್ರ' ಅಭಿನಯಕ್ಕಾಗಿ ಶ್ರೇಷ್ಠನಟ ರಾಜ್ಯಪ್ರಶಸ್ತಿ ಪಡೆದ ರಾಜ್ 'ಒಡಹುಟ್ಟಿದವರು' ಚಿತ್ರದ ಅಭಿನಯಕ್ಕಾಗಿ ಆ ಪ್ರಶಸ್ತಿಯನ್ನು ಮತ್ತೊಮ್ಮೆ ಪಡೆದರಲ್ಲದೆ, ಶ್ರೇಷ್ಠ ಗಾಯಕ ಪ್ರಶಸ್ತಿಯನ್ನೂ ಪಡೆದ ಪ್ರಥಮ ಗಾಯಕರಾದರು. ಫಿಲಂಫೇರ್ ಶ್ರೇಷ್ಠನಟ ಪ್ರಶಸ್ತಿಯಲ್ಲದೆ ಉದಯ ಟಿ.ವಿ. 'ಕಲಾಶಿಖರ' ಎಂಬ ಬಿರುದನ್ನಿತ್ತು ಗೌರವಿಸಿತು. 'ಒಡಹುಟ್ಟಿದವರು' ೩೪ ಕೇಂದ್ರಗಳಲ್ಲಿ ಶತದಿನೋತ್ಸವ ಆಚರಿಸಿ ದಾಖಲೆ ನಿರ್ಮಿಸಿತು. ಡಾ.ರಾಜ್‌ರ ಮೂರು ಚಿತ್ರಗಳ ಯಶಸ್ಸಿನ 'ತ್ರಿವಳಿ ಸಮಾರಂಭ' ವು ವರ್ಷದ ಏಕೈಕ ಸಿನಿಮಾ ಸಮಾರಂಭ. ' ಜೀವನ ಚೈತ್ರ' ಒಂದು ವರ್ಷ ಪ್ರದರ್ಶನವಾದರೆ 'ಆಕಸ್ಮಿಕ' ಹಾಗೂ 'ಒಡಹುಟ್ಟಿದವರು' ರಜತೋತ್ಸವ ಕಂಡ

ಚಿತ್ರಗಳು. ಇಡೀ ವರ್ಷ ಯಶಸ್ಸು, ಉತ್ಸವಗಳ ಪ್ರತಿರೂಪವಾಗಿ ವಿಜೃಂಭಿಸಿದ ಡಾ. ರಾಜ್ ವರ್ಷದ ಏಕಮೇವಾದ್ವಿತೀಯ ಶ್ರೇಷ್ಠರಾಗಿ ಕಂಗೊಳಿಸಿದರು.

ಈ ವರ್ಷದ ಮತ್ತೊಂದು ಮುಖ್ಯ ವಿಶೇಷ, ರಾಜಕೀಯ ಪುಟಗಳಲ್ಲಿ ಸಿನಿಮಾ ಮಂದಿ ಕಾಣಿಸಿಕೊಂಡಿದ್ದು. ವರ್ಷದ ಆರಂಭದಲ್ಲಿ ಅನಂತನಾಗ್ ರಾಜ್ಯಸಭೆಗೆ ನಾಮಪತ್ರವನ್ನು ಸಲ್ಲಿಸಿ ವಾಪಸ್ಸು ತೆಗೆದುಕೊಂಡರು. ಅವರು ವರ್ಷದ ಕೊನೆಯಲ್ಲಿ ವಿಧಾನಸಭಾ ಚುನಾವಣೆಗೆ ಸ್ಪರ್ಧಿಸಿ ಗೆದ್ದರು. ಚುನಾವಣೆಗೆ ನೇರವಾಗಿ ಧುಮುಕಿದ ಇತರ ಕಲಾವಿದರೆಂದರೆ ಅಶೋಕ್, ಮುಖ್ಯಮಂತ್ರಿ ಚಂದ್ರು, ವಜ್ರಮುನಿ, ಉಮಾಶ್ರೀ, ಸುಧೀರ್, ಸುಂದರರಾಜ್, ಎಂ.ಪಿ. ಶಂಕರ್, ರಾಜ್ ಬಲ್ಲಾಳ್ ಹಾಗೂ ನರೇಂದ್ರ ಬಾಬು (ನಟ). ಇವರಲ್ಲಿ ವಜ್ರಮುನಿ ಹಾಗೂ ಚಂದ್ರುರವರನ್ನು ಬಿಟ್ಟು ಉಳಿದವರೆಲ್ಲರೂ ಠೇವಣಿ ಕಳೆದುಕೊಂಡರು. ನಿರ್ಮಾಪಕ ಸಂದೇಶ್ ನಾಗರಾಜ್‌ರವರನ್ನು ಜನತಾದಳದ ಮೂಲಕ ವಿಧಾನಪರಿಷತ್ ಚುನಾವಣೆಗೆ ಬೆಂಬಲಿಸಿ ಅಂಬರೀಶ್ ಸುದ್ದಿಮಾಡಿದರು. ಕೆಲದಿನಗಳಲ್ಲೆ ಪ್ರಧಾನಿ ನರಸಿಂಹರಾಯರ ಸಮ್ಮುಖದಲ್ಲಿ ಅವರು ಕಾಂಗ್ರೆ ಸೇರಿದರು. 'ಹೊಸನೀರು' ಚಿತ್ರದ ನಿರ್ಮಾಪಕ ಸಚ್ಚಿದಾನಂದ ಅವರು ವಿಧಾನ ಪರಿಷತ್‌ಗೆ ಆಯ್ಕೆಯಾದರು. ಈ ಸಲದ ವಿಧಾನಸಭಾ ಚುನಾವಣೆಯಲ್ಲಿ ವಿವಿಧ ಪಕ್ಷಗಳ ಪರವಾಗಿ ಹಿಂದೆಂದಿಗಿಂತಲೂ ಹೆಚ್ಚುಮಂದಿ ಕಲಾವಿದರು ಪ್ರಚಾರಕ್ಕೆ ಇಳಿದಿದ್ದರು.

ಒಟ್ಟಾರೆ, ೧೯೯೪ರ ಚಿತ್ರರಂಗದ ಒಟ್ಟು ಚಟುವಟಿಕೆಗಳಲ್ಲಿ ಕಂಡ ಗೊಂದಲ ಪ್ರೇಕ್ಷಕರಲ್ಲೂ ಕಾಣಿಸಿಕೊಂಡಿತು. ಚಿತ್ರಕರ್ತೃಗಳ ಗುರಿಯಿಲ್ಲದ ಪ್ರಯತ್ನಗಳು, ಅಭಿರುಚಿ ಬೆಳೆಸಿಕೊಳ್ಳಲಾಗದ ಪರಿಸ್ಥಿತಿಯಲ್ಲಿ ಪರಭಾಷಾ ಚಿತ್ರಗಳ ಮೊರೆಹೊಕ್ಕ ಪ್ರೇಕ್ಷಕರು- ಇವು ಒಟ್ಟು ನೋಟಕ್ಕೆ ದಕ್ಕಿದ ಚಿತ್ರಗಳಾಗಿ ಉಳಿದವು.

# ಸಂಗೀತ

## i) ಹಿಂದುಸ್ತಾನಿ ಸಂಗೀತ

*ಹನುಮಣ್ಣ ನಾಯಕ ದೊರೆ.*

ಕರ್ನಾಟಕಕ್ಕೆ ಹಿಂದುಸ್ತಾನಿ ಸಂಗೀತಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿಶಿಷ್ಟಪೂರ್ಣವಾದ ಸ್ಥಾನವಿದೆ. ಭಾರತದ ಉತ್ತರ ರಾಜ್ಯಗಳಿಗೆ ಹಿಂದುಸ್ತಾನೀ ಸಂಗೀತ ಪದ್ಧತಿಯೂ ದಕ್ಷಿಣದ ಆಂಧ್ರ, ಕೇರಳ, ತಮಿಳುನಾಡುಗಳಲ್ಲಿ ಕರ್ನಾಟಕ ಸಂಗೀತ ಪದ್ಧತಿಯೂ ಪ್ರಚಲಿತವಾಗಿವೆ. ಆದರೆ, ಕರ್ನಾಟಕದಲ್ಲಿ ಮಾತ್ರ ಎರಡೂ ಶೈಲಿಗಳು ಇದ್ದು, ಅವು ಉಚ್ಛ್ರಾಯಸ್ಥಿತಿಯಲ್ಲಿ ಬೆಳೆದುನಿಂತಿವೆ. ಹಿಂದುಸ್ತಾನೀ ಸಂಗೀತದ ಪ್ರಮುಖ ಘರಾಣೆಗಳಾಗಿರುವ ಗ್ವಾಲಿಯರ್, ಆಗ್ರಾ, ಜೈಪುರ, ಕಿರಾಣ 'ಇವುಗಳಿಗೆ ಕರ್ನಾಟಕವು ಹಿಂದಿನಿಂದಲೂ ನೆಲೆವೀಡಾಗಿದೆ. ಇವುಗಳಲೆಲ್ಲ ಹೆಚ್ಚು ಪ್ರಚಲಿತವಾಗಿರುವವೂ ಪ್ರಸಿದ್ಧವಾಗಿರುವವೂ ಎಂದರೆ, ಕಿರಾಣಾ ಹಾಗೂ ಗ್ವಾಲಿಯರ್ ಘರಾಣಗಳೇ.

ಕರ್ನಾಟಕದಲ್ಲಿ ಹಿಂದುಸ್ತಾನೀ ಸಂಗೀತಕ್ಷೇತ್ರಕ್ಕೆ ಅಡಿಪಾಯ ಹಾಕಿದವರೆಂದರೆ- ಉಸ್ತಾದ್ ಫಯಾಜ್‌ಖಾನ್. ಭೂಗಂಧರ್ವ ರಹಮತ್‌ಖಾನ್, ಸಿತಾರರತ್ನ ರಹಮತ್‌ಖಾನ್, ಉಸ್ತಾದ ವಹೀದ್‌ಖಾನ್, ಪಂಡಿತ್ ನೀಲ ಕಂಠಬುವಾ, ಗಾನಯೋಗಿ ಪಂಚಾಕ್ಷರಿಗವಾಯಿಗಳು, ಸವಾಯಗಂಧರ್ವ, ಡಾ. ಮಲ್ಲಿಕಾರ್ಜುನ ಮನಸೂರ, ಡಾ. ಬಸವರಾಜ ರಾಜಗುರು, ಡಾ. ಗಂಗೂಬಾಯಿ ಹಾನಗಲ್, ಪಂ. ಭೀಮಸೇನಜೋಶಿ, ಉಸ್ತಾದ್ ಎ. ಕರೀಮ್‌ಖಾನ್, ಮೊದಲಾದವರು! ಕರ್ನಾಟದಲ್ಲಿ ನಡೆಯುವ ಹಿಂದುಸ್ತಾನೀ ಸಂಗೀತಕ್ಕೆ ಸಂಬಂಧಿಸಿದ ಅನೇಕ ಚಟುವಟಿಕೆಗಳಿಗೆ ಮೇಲ್ಕಾಣಿಸಿದ ಕೆಲವು ಮಹಾನ್‌ಗುರುಗಳ ನೆನಪಿನಲ್ಲಿ ಅವರ ಶಿಷ್ಯರು ಸಲ್ಲಿಸುವ ಸಂಗೀತಸೇವೆಯೂ ಕಾರಣ ಆಗಿದೆ.

ಹಿಂದುಸ್ತಾನೀ ಸಂಗೀತಕ್ಕೆ ಸಂಬಂಧಿಸಿದಂತೆ ೯೫ ಳ ರ ಎಲ್ಲ ವಿದ್ಯಮಾನಗಳನ್ನು ಕುರಿತು ಬರೆಯುವುದು ಈ ಕಿರುಲೇಖನದಲ್ಲಿ ಕಷ್ಟಸಾಧ್ಯ. ಆದ್ದರಿಂದ ಕೆಲವೇ ಘಟನೆಗಳನ್ನು ಇಟ್ಟುಕೊಂಡು ಚರ್ಚಿಸಲು ಬಯಸುತ್ತೇನೆ. ಸಂಗೀತವು ಹುಟ್ಟಿಬೆಳೆದದ್ದೇ ಜನರ ಮಿಡಿತಗಳಿಂದ. ಅದು ಹೋಗಿ ಬೆರೆತು, ಸೇರಬೇಕಾದುದು ಜನರಲ್ಲಿಯೇ. ಹೀಗಿರುವಾಗ ಎಲ್ಲೊ ಒಂದಷ್ಟು ಸಂಗೀತಕಾರ್ಯಕ್ರಮಗಳು, ಕೆಲವೇ ಜನರು ಸೇರಿ ಕೆಲವೇ ಜನರಿಗಾಗಿ ಮಾಡುವ ಸೆಮಿನಾರುಗಳು, ಪ್ರಶಸ್ತಿ ಪ್ರದಾನ ಸಮಾರಂಭಗಳು, ಕೆಲವೇ ಪ್ರಕಟಣೆಗಳು, ಕಲಾವಿದರಿಗೆ ಅಲ್ಪಸ್ವಲ್ಪ ಪ್ರೋತ್ಸಾಹಧನ - ಶಿಷ್ಯವೇತನ, ಪಿಂಚಣಿ- ಇತ್ಯಾದಿ ಚಟುವಟಿಕೆಗಳು ತುಂಬ ಕೃಶವಾದ ವಿದ್ಯಮಾನಗಳು ಅನಿಸುತ್ತದೆ.

ಸಂಗೀತ ಸಂಬಂಧವಾದ ಬಹುತೇಕ ಚಟುವಟಿಕೆಗಳೆಲ್ಲ ವೇದಿಕೆ ಕಾರ್ಯಕ್ರಮಗಳಾಗಿವೆಯೇ ವಿನಾ, ಸಂಗೀತ ಕ್ಷೇತ್ರದ ಅಭಿವೃದ್ಧಿಗೆ ಪೂರಕವಾಗುವ ಶಾಸನಗಳಾಗಲಿ ಹೊಸ ಯೋಜನೆ- ಯೋಚನೆಗಳಾಗಲಿ ಕಮ್ಮಿಯೆಂದೇ ಹೇಳಬೇಕು. ಸಂಗೀತ ಸಂಸ್ಥೆಗಳು ಕಲಿಕಾಕೇಂದ್ರಗಳು, ಹಾಗೂ ಮಹತ್ವಪೂರ್ಣವಾದ ಸಂಗೀತವೇದಿಕೆಗಳು ಈ ಅವಧಿಯಲ್ಲಿ ಸೃಷ್ಟಿಗೊಂಡಿಲ್ಲ.

ಗದುಗಿನ 'ವೀರೇಶ್ವರ ಪುಣ್ಯಾಶ್ರಮ' ಎಂದರೆ ಗಾನಯೋಗಿ ಪಂಚಾಕ್ಷರಿ ಗವಾಯಿಗಳು ಕಂಡ ಕನಸು ಹಾಗೂ ಬಸರೀಗಿಡದ ವೀರಪ್ಪನವರ ನೆಲವು ಕೂಡಿ ರೂಪುಗೊಂಡ ನಾದಲೋಕವಾಗಿದೆ. ಗವಾಯಿಗಳು ಹುಟ್ಟುಕುರುಡರಾಗಿದ್ದರೂ ಅನೇಕರಿಗೆ ಸಂಗೀತದ ಕಣ್ಣನ್ನು ಕೊಟ್ಟವರು. ಸಮಾಜದಿಂದ ತಂದುದನ್ನು ತಮ್ಮ ಶಿಷ್ಯರಿಗೆ ಉಣಬಡಿಸಿ, ಉಡಬಡಿಸಿ ಕೆರೆಯ ನೀರನ್ನು ಕೆರೆಗೆ ಚೆಲ್ಲಿಹೋದರು. ಪಂ. ಬಸವರಾಜ ರಾಜಗುರು, ಪಂ. ಪುಟ್ಟರಾಜ ಗವಾಯಿಗಳು, ಪಂ. ಸಿದ್ಧರಾಮ ಜಂಬಲದಿನ್ನಿ, ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಚಂದ್ರಶೇಖರ ಪುರಾಣಿಕಮಠ ಮುಂತಾದ ಗವಾಯಿಗಳ ಶಿಷ್ಯರು ಈ ವೀರೇಶ್ವರ ಪುಣ್ಯಾಶ್ರಮದಲ್ಲಿ ಪ್ರತಿರುಷವೂ ಜ್ಯೇಷ್ಠಬಹುಳ ಪಂಚಮಿಯಂದು ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಪುಣ್ಯ ದಿನವನ್ನು ಅದ್ದೂರಿಯಿಂದ ಆಚರಿಸುತ್ತಾರೆ. ಮೂರುದಿನ ಮೂರುರಾತ್ರಿ ನಾದದ ಮಳೆಮಳೆ ಸುರಿಯುತ್ತದೆ. ಈ ಸಲ ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ ಎಂ. ವೆಂಕಟೇಶಕುಮಾರ, ತಬಲಪಟು ರಘುನಾಥನಾಕೋಡ, ಪಂ. ಶೇಷಾದ್ರಿ ಗವಾಯಿಗಳು, ಇನ್ನೂ ಅನೇಕ ಸಂಗೀತಗಾರರು ಸಂಗೀತಸೇವೆ ಸಲ್ಲಿಸಿದರು. ಅಲ್ಲಿ ಸಾವಿರಾರು ಜನ ಸೇರುತ್ತಾರೆ. ಹಾಡುತ್ತಾರೆ, ನುಡಿಸುತ್ತಾರೆ. ಆಲಿಸುತ್ತಾರೆ.

ಗಾನಯೋಗಿಗಳ ಉತ್ತರಾಧಿಕಾರಿಗಳಾಗಿರುವ ಪುಟ್ಟರಾಜ ಗವಾಯಿಗಳು ತಮ್ಮ ಗುರುಗಳ ಕನಸನ್ನು ಒಂಚೂರೂ ಭಗ್ನಗೊಳಿಸದೆ ನನಸಾಗಿಸಿ ಜೋಪಾನಮಾಡಿಕೊಂಡು ಹೊರಟಿದ್ದಾರೆ. ಅನ್ನ ಬಟ್ಟೆ ಕೊಟ್ಟು ಸಂಗೀತವನ್ನು ಕಲಿಸುತ್ತಾರೆ. ಇಂಥ ವ್ಯವಸ್ಥೆ ನೋಡಸಿಗುವುದು ಬಹಳ ಅಪರೂಪವೇ. ಇತ್ತೀಚೆಗೆ ಅಮೆರಿಕಾದವರು ತುಂಬಾ ಹಣವನ್ನು ಈ ಆಶ್ರಮದ ಬೆಳವಣಿಗೆಗಾಗಿ ಕೊಟ್ಟಿದ್ದಾರೆ. ಇಲ್ಲಿಯ ಸಾರ್ವಜನಿಕರೂ ಸಾಕಷ್ಟು ಸಹಾಯ ಮಾಡಿದ್ದಾರೆ. ಗಾನಯೋಗಿಗಳ ಪುಣ್ಯತಿಥಿಯನ್ನು ವರ್ಷವಿಡೀ ಒಂದಿಲ್ಲೊಂದು ಕಡೆ ಆಚರಿಸುತ್ತಾರೆ. ರಾಯಚೂರು, ಕಲಬುರಗಿ, ಬೀದರ, ಬೆಂಗಳೂರು, ಬಳ್ಳಾರಿ, ಮುಂತಾದ ಸ್ಥಳಗಳನ್ನು ಉಲ್ಲೇಖಿಸಬಹುದು.

ಹಿಂದುಸ್ತಾನೀ ಸಂಗೀತಕ್ಷೇತ್ರದ ಪ್ರಮುಖ ಘರಾಣೆಗಳಲ್ಲಿ ಒಂದಾದ ಕಿರಾಣ ಘರಾಣೆಯನ್ನು ಕರ್ನಾಟಕಕ್ಕೆ ತಂದವರು 'ಸವಾಯಿ ಗಂಧರ್ವ' ರೆಂದೇ ಪ್ರಖ್ಯಾತರಾದ ರಾಮಭಾವು ಕುಂದಗೋಳಕರರು. ಕಿರಾಣೆಯ ಪ್ರವರ್ತಕ ಉಸ್ತಾದ್ ಅಬ್ದುಲ್ ಕರೀಮ್‌ಖಾನ್‌ರ ಶಿಷ್ಯರಿವರು. ಇವರ ಗರಡಿಯಲ್ಲಿ ಡಾ. ಗಂಗೂಬಾಯಿ ಹಾನಗಲ್, ಪಂ. ಭೀಮಸೇನ ಜೋಶಿ, ಫಿರೋಜ್ ರಸ್ತೂದ್, ಮುಂತಾದ ಘಟಾನುಘಟಿಗಳು ತಯಾರಾದರು.

ಕುಂದಗೋಳದಲ್ಲಿ ಪ್ರತಿ ವರುಷದಂತೆ ಈ ಸಲವೂ ಅವಿಧವಾ ನವಮಿಯ ಸಂದರ್ಭದಲ್ಲಿ ಮೂರು ಹಗಲು ಮೂರು ರಾತ್ರಿ ಸವಾಯಿ ಗಂಧರ್ವರ ಪುಣ್ಯತಿಥಿಯನ್ನು ಆಚರಿಸಲಾಯಿತು. ದೇಶದ ಅನೇಕ ಪ್ರಸಿದ್ಧ ಸಂಗೀತಗಾರರು ಸೇವೆಸಲ್ಲಿಸಿದರು. ಇದೊಂದು ಸಂಗೀತ ಜಾತ್ರೆಯೆಂದೇ ಹೇಳಬೇಕು. ಪಂ. ಭೀಮಸೇನ ಜೋಶಿಯವರು ಅನುಕೂಲ ಮಾಡಿಕೊಂಡು ಕೆಲವು ಸಲ ಬರುತ್ತಾರೆ. ತಾವು ವಾಸವಾಗಿರುವ ಪುಣೆಯಲ್ಲಿ ಸವಾಯಿಗಂಧರ್ವದ ಪುಣ್ಯತಿಥಿಯ ನಿಮಿತ್ತ ಸಂಗೀತೋತ್ಸವವನ್ನು ಪ್ರತಿ ವರುಷ ವಿಜೃಂಭಣೆಯಿಂದ ಆಚರಿಸುತ್ತಾರೆ. ಕುಂದಗೋಳದ ಸಂಗೀತ ಸಮಾರೋಹದ ಕೊನೆಯಲ್ಲಿ ಡಾ. ಗಂಗೂಬಾಯಿ ಹಾನಗಲ್ಲರು ತಮ್ಮ ಗುರುಗಳ ಸ್ಮರಣಾರ್ಥ ಭೈರವಿ ಹಾಡುವುದು ವಾಡಿಕೆ. ಈ ಉತ್ಸವದಲ್ಲಿ ಕರ್ನಾಟಕದ ಹಾಗೂ ಹೊರನಾಡಿನ ಅದರಲ್ಲೂ ವಿಶೇಷವಾಗಿ ಮಹಾರಾಷ್ಟ್ರದ ಕಲಾವಿದರು ಭಾಗವಹಿಸಿದ್ದರು.

ಚಳಿಗಾಲದಲ್ಲಿ ಕರ್ನಾಟಕಕ್ಕೆ ಒಂದು ಬಿಸಿಬಿಸಿ ಸುದ್ದಿ ಬಂತು. ಈ ಬಿಸಿಗೆ ನಮ್ಮ ಜನ ಪುಳಕಿತರಾಗುವಂತಾಯಿತು. ಮಧ್ಯಪ್ರದೇಶ ಸರಕಾರವು ನಮ್ಮ ಹಿರಿಯ ಸಂಗೀತಶಾರದೆ ಡಾ. ಗಂಗೂಬಾಯಿ ಹಾನಗಲ್ ಅವರಿಗೆ ಈ ಬಾರಿಯ 'ಶಂಕರದೇವ ಪ್ರಶಸ್ತಿ' ಯನ್ನು ಕೊಡಮಾಡಿತು. ಕರ್ನಾಟಕದ ಮುಕುಟಕ್ಕೆ ಇನ್ನೊಂದು ಗರಿ ಮುಡಿಸಿದಂತಾಯಿತು. ಡಾ. ಗಂಗೂಬಾಯಿಯವರು ನಮ್ಮ ನಾಡಿಗೆ ಇನ್ನೊಂದು ಕೀರ್ತಿತಂದು, ಕರ್ನಾಟಕವನ್ನು ಲೋಕಕ್ಕೆ ಬೆಳಗಿತೋರಿದರು. ಡಾ. ಗಂಗೂಬಾಯಿ ಹಾನಗಲ್‌ರು ಸವಾಯಿ ಗಂಧರ್ವರ ಪ್ರಮುಖ ಶಿಷ್ಯೆಯರಲ್ಲೊಬ್ಬರು. ಅಗಾಧವಾದ ಸಂಗೀತ ವಿದ್ವತ್ತು, ಜ್ಞಾನ, ಸಾಧನೆ ಅವರದು. ಮಹಿಳೆಯೊಬ್ಬರು ಸಂಗೀತ ಕ್ಷೇತ್ರದಲ್ಲಿ ಗಟ್ಟಿಯಾಗಿ ನಿಂತು ಮಹತ್ತರವಾದನ್ನು ಸಾಧಿಸಬಹುದಾದ ಸಾಧ್ಯತೆಗಳನ್ನು ಸಾಬೀತುಪಡಿಸಿದವರು. ಗಂಡುಧ್ವನಿ, ಗಂಭೀರ ಗಾಯನ, ಅಪಾರವಾದ ಆಳ-ಅಗಲಗಳನ್ನು ಹೊಂದಿದ ಸಂಗೀತ ಪ್ರತಿಭೆ ಅವರದು.

ದಿ. ಉಸ್ತಾದ್ ಅಲ್ಲಾದಿಯಾಖಾನರು ಜೈಪುರ, ಅತ್ರಾಲಿ ಘರಾಣೆಯ ಪ್ರವರ್ತಕರು. ಈ ಅಪರೂಪದ ಘರಾಣೆಯನ್ನು ಕರ್ನಾಟಕಕ್ಕೆ ತಂದವರು. ಪಂ. ಮಲ್ಲಿಕಾರ್ಜುನ ಮನಸೂರರು. ಅಲ್ಲಾದಿಯಾ ಖಾನರ ನಂತರ ಅವರ ಮಕ್ಕಳಾದ ಉಸ್ತಾದ್ ಮಂಜೀಖಾನ್, ಬುರ್ಜೀಖಾನರ ಬಳಿ ಕಲಿತವರು. ಧಾರವಾಡದಲ್ಲಿ ಅಲ್ಲಾದಿಯಾಖಾನರ ನೆನಪಿನಲ್ಲಿ ಸಂಗೀತ ಸಮ್ಮೇಳನವನ್ನು ಸುಮಾರು ಹದಿನೈದು ವರುಷಗಳಿಂದ ಮನಸೂರ ಕುಟುಂಬದ ಸದಸ್ಯರೂ ಅವರ ಸ್ನೇಹಿತರೂ ಸೇರಿ ಆಚರಿಸುತ್ತಾರೆ. ಈ ಸಲ ಈ ಸಮ್ಮೇಳನದಲ್ಲಿ ಪ್ರೊ. ರಾಜಶೇಖರ ಮನಸೂರ, ಡಾ. ಕಮಲ ಪುರಂದರೆ, ಎಂ. ವೆಂಕಟೇಶ ಕುಮಾರ, ಕೈವಲ್ಯಕುಮಾರ ಗುರವ ಮುಂತಾದವರು ಹಾಡಿದರು. ಪ್ರೊ. ರಾಜಶೇಖರ ಮನಸೂರರ ಗಾಯನವು ಅಪ್ಪ ಮಲ್ಲಿಕಾರ್ಜುನ ಮನಸೂರರ ಅಪ್ಪಟ ಪ್ರತಿರೂಪ. ಜೈಪುರ ಘರಾಣೆಯ ಅಸಲಿತನ. ಅಪ್ಪನ ಗಾಯನ ಶೈಲಿಯ ನೊಗಹೊತ್ತ ಹೆಗಲಾಳು.

ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿಯವರು ಮಲ್ಲಿಕಾರ್ಜುನ ಮನಸೂರರ ಶಿಷ್ಯರಲ್ಲಿ ಪ್ರಮುಖರು. ನಿವೃತ್ತಿ ಬುವಾಸರನಾಯಕರ ಮನಸೂರರ, ನೀಲಕಂಠಬುವಾರ ಸಮ್ಮಿಶ್ರಿತ ಶೈಲಿ ಇವರದು. ಜೈಪುರ ಘರಾಣೆಯ ಖಾಸಾ ರಾಗಗಳು, ಚೀಜುಗಳು ಇವರ ಬತ್ತಳಿಕೆಯಲ್ಲಿವೆ. ಪಂ. ಮಲ್ಲಿಕಾರ್ಜುನ ಮನಸೂರರು ಅನೇಕ ಶಿಷ್ಯರಿಗೆ ತಮ್ಮ ಗರಡಿಯಲ್ಲಿ ತಾಲೀಮು ಕೊಟ್ಟರು. ಇವರಲ್ಲಿ ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಪಂ. ಸಿದ್ಧರಾಮ ಜಂಬಲದಿನ್ನಿ. ಪ್ರೊ. ರಾಜಶೇಖರ ಮನಸೂರ, ಪ್ರೊ. ರಾಜೀವ ಪುರಂಧರೆ, ಡಾ. ಕಮಲಪುರಂಧರೆ, ಸರಯೂ ಸೊನ್ನಿ ಉಲ್ಲೇಖಾರ್ಹರು. ಮನಸೂರರು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಮಟ್ಟದಲ್ಲಿ ಸಂಗೀತವಿಭಾಗ ತೆರೆಯುವಲ್ಲಿ ಪ್ರಮುಖ ಪಾತ್ರವಹಿಸಿದ್ದವರು. ಅಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಸಂಗೀತ ಕಲಿಯುವ ಏರ್ಪಾಟುಮಾಡಿದ್ದವರು. ಉನ್ನತ ವ್ಯಾಸಂಗದಲ್ಲಿ ಸಂಗೀತವನ್ನು ತಂದದ್ದು ತುಂಬಾ ಮಹತ್ವಪೂರ್ಣ ಕಾರ್ಯ. ಕರ್ನಾಟಕ ವಿಶ್ವವಿದ್ಯಾನಿಲಯದ ಸಂಗೀತ ವಿಭಾಗದ ವೈಶಿಷ್ಟ್ಯವೆಂದರೆ, ವಿವಿಧ ಘರಾಣೆಯ ಸಂಗೀತ ದಿಗ್ಗಜರು ಅಲ್ಲಿ ಕ್ರೋಢೀಕರಣಗೊಂಡಿದ್ದು. ಜೈಪುರ ಘರಾಣೆಯ ಪಂ. ಮಲ್ಲಿಕಾರ್ಜುನ ಮನಸೂರ, ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಪ್ರೊ. ರಾಜೀವಪುರಂದರೆ, ಪಂ. ನಾನಾ ಶೆಡೋಲಿಕರ, ಪದ್ಮಾವತಿಗೋಖಲೆ ಸಾಲಿಗ್ರಾಮ, ಗ್ವಾಲಿಯರ್ ಘರಾಣೆಯ ಪಂ. ಬಸವರಾಜ ರಾಜಗುರು, ಕಿರಾಣಾ ಘರಾಣೆಯ ಡಾ. ಗಂಗೂಬಾಯಿ ಹಾನಗಲ್, ಪಂ. ಸಂಗಮೇಶ್ವರ ಗುರವ, ಠುಮರಿಯ ಜಾನಕಿ ಅಯ್ಯರ್ ಮುಂತಾದವರು ಅಲ್ಲಿ ಕಲಿಸಿದ ಗುರುಗಳು. ಇಷ್ಟು ಜನ ಸಂಗೀತಗಾರರು ಒಂದೇಕಡೆ ಸೇರಿದ್ದು ಅದೊಂದು ಅದ್ಭುತ ಎಂದೇ ಹೇಳಬೇಕು. ಅಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳಿಗೆ ಬೇರೆಬೇರೆ ಗುರುಗಳ ಘರಾಣೆಗಳ ನಿಧಿಯನ್ನು ಪಡೆದುಕೊಂಡ ಭಾಗ್ಯ ಲಭಿಸಿತೆಂದೇ ಹೇಳಬೇಕು. ಮಲ್ಲಿಕಾರ್ಜುನ ಮನಸೂರರು ವಿದ್ಯಾರ್ಥಿಗಳನ್ನು ಕೇವಲ ಪದವೀಧರನ್ನಾಗಿ ಮಾಡಲಿಲ್ಲ. ಉತ್ತಮಗಾಯಕರನ್ನಾಗಿ ಮಾಡಿದರು.

ಇತ್ತೀಚೆಗೆ ಒಂದು ಫ್ಯಾಶನ್ ತೀವ್ರವಾಗಿದೆ. ವಿದೇಶಗಳಲ್ಲಿ ಕಾರ್ಯಕ್ರಮ ಕೊಡುವುದು. ಕೆಲವು ಸಲ ಇಂಥ ಸಂಗೀತಗಾರರನ್ನು ಬಹುದೊಡ್ಡ ಕಲಾವಿದರೆಂದೋ ಅಂತಾರಾಷ್ಟ್ರಮಟ್ಟದವರೆಂದೋ ಹೇಳತೊಡಗುವುದೂ ಉಂಟು. ನಾವು ಎಂ. ಎ. ಸಂಗೀತ ವ್ಯಾಸಂಗದಲ್ಲಿದ್ದಾಗ ಸಂಗೀತ ವಿಭಾಗದ ಅಧ್ಯಕ್ಷರಾಗಿದ್ದ, ಸಂಗೀತ ಮೇರು ಪಂ. ಮಲ್ಲಿಕಾರ್ಜುನ ಮನಸೂರರನ್ನು ಒಮ್ಮೆ ಕೇಳಿದ್ದೆವು. "ಅಜ್ಜ ಅವರೇ, ನೀವೇಕೆ ಫಾರಿನ್ನಿಗೆ ಹೋಗಿಲ್ಲ" ಎಂದು. ಆಗ ಅವರು ಹೇಳಿದ ಮಾತು ಸ್ಮೃತಿಪಟಲದಲ್ಲಿ ಇನ್ನೂ ಹಸಿಹಸಿಯಾಗಿದೆ. "ಅಲ್ಲಿ ಯಾರಿಗೆ ನಮ್ಮ ಸಂಗೀತ ತಿಳೀತೈತೋ ತಮ್ಮಾ. ಧಾರವಾಡದಾಗ ಹಾಡಿ ಸೈ ಅನಿಸಿಕೊಂಡ್ರ ಸಾಕಪಾ" ಎಂದು ಬಿಟ್ಟರು. ಈ ಮಾತಿನ ಸತ್ಯ ಸಿಡಿಲಿನಷ್ಟು ಪ್ರಖರವಾದದ್ದು. ಅಷ್ಟೇ ಸ್ಫಟಿಕಸ್ಪಷ್ಟವಾದದ್ದು. ಧಾರವಾಡವು ಸಂಗೀತದ ಕೇಂದ್ರಸ್ಥಾನ ಹೇಗೋ ಸಂಗೀತಗಾರರಿಗೆ ಸತ್ವಪರೀಕ್ಷಾಸ್ಥಳವೂ ಹೌದು.

ಸಂಗೀತಗಾರನ ಗುಣಮಟ್ಟ ಅಳೆಯುವಲ್ಲಿ ಅವನ ವಿದೇಶ ಪ್ರವಾಸವೊಂದೇ ಮಾನದಂಡವಾಗಲಾರದು. ವಿದೇಶಗಳಲ್ಲಿ ಸಂಗೀತ ಚಟುವಟಿಕೆಗಳು ನಡೆಯುವುದನ್ನು ಒಂದು ಸಾಂಸ್ಕೃತಿಕ ವಿನಿಮಯ ಹಾಗೂ ಲೋಕಾನುಭವ ಎಂದು ತಿಳಿದುಕೊಂಡರೆ ಸಾಕೆನಿಸುತ್ತದೆ. ಇದು ಸಂಗೀತಕ್ಷೇತ್ರದ ವಿಸ್ತರಣೆಗೆ ಅನುಕೂಲ, ಕೆಟ್ಟದ್ದಲ್ಲ. ಧಾರವಾಡದ ಪಂ. ಮಾಧವಗುಡಿಯವರು, ಸಂಗೀತ ದಿಗ್ಗಜ ಪಂ. ಭೀಮಸೇನ ಜೋಶಿಯವರ ಶಿಷ್ಯರು. ಗುರುಗಳ ಗಾಯನದ ಜೀವವಾಹಿನಿಯ ಹಾಗೆ. ಬಹ್ರೇನ್, ಮಸ್ಕತ್ ದೇಶಗಳಲ್ಲಿರುವ ಕನ್ನಡಿಗರು ಗುಡಿಯವರ ಗಾಯನವನ್ನು ಒಮ್ಮೆ ಕೇಳಿದ್ದೇ ತಡ ತಮ್ಮಲ್ಲಿಗೆ ಆಹ್ವಾನಿಸಿಯೇ ಬಿಟ್ಟರು. 'ಹಿಂದೂಸ್ತಾನೀ ಉತ್ಸವ' ದಲ್ಲಿ ಇವರ ಗಾಯನ ಏರ್ಪಟ್ಟಿತು. ಬಹುತೇಕ ಶ್ರೋತೃಗಳು ಭಾರತೀಯರು. ಅಲ್ಲಿಯ ಜನರಿಗೆ ಅಷ್ಟಾಗಿ ನಮ್ಮ ಸಂಗೀತದ ಬಗ್ಗೆ ಆಸಕ್ತಿ ಇಲ್ಲವೆಂದು ಗುಡಿಯವರು ಹೇಳಿದರು. ಆದರೂ ಅಲ್ಲಿನ ಭಾರತೀಯ ಸಾಂಸ್ಕೃತಿಕ ಕೇಂದ್ರದವರ ಈ ಕಾರ್ಯ ಸುತ್ಯಾರ್ಹವಾದುದು.

ಪಂ. ಬಸವರಾಜ ರಾಜಗುರುಗಳು ಕರ್ನಾಟಕದ ಹಿಂದುಸ್ತಾನೀ ಸಂಗೀತಕ್ಷೇತ್ರದ ಪಂಚತಾರೆಗಳಲ್ಲಿ ಒಬ್ಬರು. (ಪಂ. ಭೀಮಸೇನ ಜೋಶಿ, ಡಾ. ಮಲ್ಲಿಕಾರ್ಜುನ ಮನಸೂರ, ಡಾ. ಗಂಗೂಬಾಯಿ ಹಾನಗಲ್, ಪಂ. ಕುಮಾರ್ ಗಂಧರ್ವ, ಪಂ. ಬಸವರಾಜ ರಾಜಗುರು ಇವರೇ ಆ ಪಂಚತಾರೆಗಳು, ಪಂ. ರಾಜಗುರುಗಳು ಅದ್ಭುತ ಗಾಯಕರು. ಅವರದು ಮೋಹಕ, ಶೃಂಗಾರಪೂರ್ಣ ವಿದ್ವತ್ಪೂರ್ಣ ಗಾಯನ. ಮಿಂಚಿನಂತಹ ಸೆಳಕಿನ ಅವರ ಗಾಯನದಿಂದ ಶ್ರೋತೃಗಳು ಮೋಡಿಗೊಳಗಾಗುತ್ತಿದ್ದರು. ಕಿರಾಣಾ, ಗ್ವಾಲಿಯರ್, ಪಟಿಯಾಲಾ ಘರಾಣೆಗಳ ಹದ ಅವರಲ್ಲಿತ್ತು. ತಾವು ಬೆಳೆದುದೂ ಅಲ್ಲದೆ ತಮ್ಮ ಅಪಾರ ಸಂಗೀತ ಸಂಪತ್ತನ್ನು ಅನೇಕ ಶಿಷ್ಯರಿಗೆ ದಾನಮಾಡಿದ ಮಹಾದಾನಿ ಅವರು. ಇವರ ಸ್ಮರಣಾರ್ಥವಾಗಿ ಇವರ ಅನೇಕ ಶಿಷ್ಯರು, ಅಭಿಮಾನಿಗಳು ಸೇರಿ ನಾಡಿನ ಹಲವಾರು ಕಡೆ ಸಂಗೀತ ಸಮಾರೋಹ ನಡೆಸುತ್ತಾರೆ. ಧಾರವಾಡ, ಗುಲಬರ್ಗಾ, ಬಾಂಬೆ, ಬೆಂಗಳೂರು, ಗೋವಾ- ಮುಂತಾದ ಸ್ಥಳಗಳನ್ನು ಉದಾಹರಿಸಬಹುದು.

ಧಾರವಾಡದ ಕಲಾಭವನದಲ್ಲಿ ನಡೆದ ಈ ಹಿನ್ನೆಲೆಯ ಸಮಾರಂಭದಲ್ಲಿ, ಇನ್ನೊಬ್ಬ, ಸಂಗೀತಗಾರ ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಎಂ. ವೆಂಕಟೇಶ ಕುಮಾರ ಹಾಗೂ ಪಂ. ರಾಜಗುರುಗಳ ಇತರ ಶಿಷ್ಯರು ಭಾಗವಹಿಸಿದ್ದರು. ಪಂ. ಮತ್ತಿಕಟ್ಟಿಯವರು ಸಾಜಗಿರಿ ರಾಗವನ್ನು ಕೇವಲ ಹತ್ತುನಿಮಿಷ ಹಾಡಿ ಮುಗಿಸಿ ಎದ್ದುಬಿಟ್ಟರಂತೆ. ವೇದಿಕೆಯ ಮೇಲೆ ಆಸೀನರಾಗಿದ್ದ ಒಬ್ಬ ಸ್ವಾಮೀಜಿಯವರ ತನಕ ಹೋಗಿ (ನಮಸ್ಕರಿಸಲೆಂದೋ ಏನೋ,) ಅದೇ ವೇಗದಲ್ಲಿ ಸರಕ್ಕನೆ ಹೊರಳಿ ಮೈಕಿನ ಹತ್ತಿರ ಬಂದು, ತಮ್ಮ ಮಾವ ಪಂ. ರಾಜಗುರುಗಳ ಬಗ್ಗೆ ಮಾತಾಡುತ್ತ ಭಾವುಕರಾಗಿ ಅಳತೊಡಗಿದರಂತೆ. ಇವರು ಜೈಪುರ ಘರಾಣೆಯ ಅತಿರಥರಲ್ಲೊಬ್ಬರು.

ಮಲ್ಲಿಕಾರ್ಜುನ ಮನಸೂರರ ಶಿಷ್ಯರು. ಗುರುಗಳ ಸ್ಥಾನ ತುಂಬ ಬಲ್ಲ ಸಮರ್ಥರು. ಇವರೂ ಫ್ರಾನ್ಸ್, ಜರ್ಮನಿಗಳಿಗೆ ಹೋಗಿ ಹಾಡಿಬಂದರು.

ಡಿಸೆಂಬರ್ ತಿಂಗಳಲ್ಲಿ ಫ್ರಾನ್ಸ್‌ನ ನಾಲ್ಕುಜನ ಸಂಗೀತಗಾರರು ಹಿಂದೂಸ್ತಾನೀ ಸಂಗೀತ ಅಧ್ಯಯನಕ್ಕಾಗಿ ಕರ್ನಾಟಕಕ್ಕೆ ಬಂದರು. ಧಾರವಾಡ, ಬೆಂಗಳೂರು ಗುಲಬರ್ಗಾಗಳಿಗೆ ಭೇಟಿಕೊಟ್ಟರು. ಲೂಯಿಸ್ ಗನೆಲ್, ಕ್ರಿಸ್ಟೋಫರ್, ಕ್ಲೇರ್‌ಬಾಯ್, ಫ್ರಾನ್ಸಿಸ್ ಎಂಬ ಈ ನಾಲ್ಕು ಜನರು ಧಾರವಾಡದ ಪಂ. ಶಿವಾನಂದ ತರಲಗಟ್ಟಿಯವರ ಬಳಿ ಸಿತಾರ, ಸಂಗೀತ ಕಲಿಯುತ್ತಿದ್ದಾರೆ. ತರಲಗಟ್ಟಿಯವರನ್ನು ತಮ್ಮ ದೇಶಕ್ಕೆ ಅನೇಕಸಲ ಕರೆಸಿಕೊಳ್ಳುತ್ತಿದ್ದಾರೆ. ಗುಲಬರ್ಗಾದ ಶರಣ ಬಸವೇಶ್ವರ ಕಾಲೇಜಿನಲ್ಲಿ ವಿದೇಶೀ ಸಂಗೀತಗಾರರಾಗಿ ಭೂತರಾಗದ 'ಜಬಸೇ ತುಮಿಸನಲಾಗಲೀ' ಹಾಗೂ 'ಹುತ್ತವ ಬಡಿದರೆ ಹಾವು ಸಾಯಬಲ್ಲುದೇ' ಎಂಬ ಕೃತಿಗಳನ್ನು ತುಂಬಾ ಚೆನ್ನಾಗಿ ಹಾಡಿದರು. ಅವರ ಸ್ವರಜ್ಞಾನ, ತಾಳಜ್ಞಾನ ಮೆಚ್ಚುವಂತಹುದು. ಆದರೆ ಉಚ್ಚಾರಣೆ ನಮ್ಮಂತೆ ಇರಲು ಹೇಗೆ ಸಾಧ್ಯ? ಹಾಗೆ ನಿರೀಕ್ಷಿಸಲೂಬಾರದು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಶಿವಾನಂದ ತರಲಗಟ್ಟಿಯವರ ಸಿತಾರವಾದನವಿತ್ತು. ಅವರು ಲಲಿತ ಹಾಗೂ ಭೈರವಿ ರಾಗಗಳನ್ನು ಖುಶಿಯಾಗುವಂತೆ ನುಡಿಸಿದರು. ಇವರಿಗೆ ಸಮರ್ಥವಾಗಿ ತಬಲಾಸಾಥಿ ನೀಡಿದವರು ಪ್ರತಿಭಾನ್ವಿತ ಕಲಾವಿದ ಶಾಂತಲಿಂಗ ದೇಸಾಯಿ ಕಲ್ಲೂರು ಅವರು. ಮೇಡಂ ಗನೆಲ್ ಫ್ರಾನ್ಸಿನಲ್ಲಿ ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮಗಳ ಅಧಿಕಾರಿ. ಅದರ ಅಂಗವಾಗಿ ದೇಶವಿದೇಶ ಸುತ್ತಾಡುತ್ತಿರುತ್ತಾರೆ. ಕಾರ್ಯಕ್ರಮ ಏರ್ಪಡಿಸುತ್ತಾರೆ. ಗುಲಬರ್ಗಾದಲ್ಲಿ ಅವರು ಏರ್ಪಡಿಸಿದ ಕಾರ್ಯಕ್ರಮದಲ್ಲಿ ಪ್ರಸ್ತುತ ಲೇಖನದ ಲೇಖಕನೂ ಹಾಡಿದ್ದನು.

'ಸಿತಾರ ರತ್ನ' ಉಸ್ತಾದ್ ರಹಮತ್‌ಖಾನ್‌ರು ಕರ್ನಾಟಕಕ್ಕೆ ಸಿತಾರ ತಂದ ಪ್ರವರ್ತಕರೆನ್ನಬಹುದು. ಒಮ್ಮೆ ಮೈಸೂರಿನಲ್ಲಿ ಕಾರ್ಯಕ್ರಮ ನೀಡಿ ಪುಣೆಗೆ ಹಿಂದಿರುಗುವಾಗ, ಮಾರ್ಗದ ಮಧ್ಯ ಧಾರವಾಡದಲ್ಲಿ ರಹಿಮಾತಖಾನರು ಕೆಲಕಾಲ ತಂಗಿದ್ದರು. ಅನಂತರ ಅಲ್ಲಿಯ ರಮಣೀಯ ನಿಸರ್ಗಸೌಂದರ್ಯ, ಹಿತವಾದ ವಾತಾವರಣಕ್ಕೆ ಮಾರುಹೋಗಿ ಪುಣೆಬಿಟ್ಟು ೧೯೨೧ ರಲ್ಲಿ ಧಾರವಾಡದಲ್ಲಿ ನೆಲೆಸಿದರು. ೧೯೩೧ ರಲ್ಲಿ 'ಭಾರತೀಯ ಸಂಗೀತ ವಿದ್ಯಾಲಯ' ಎಂಬ ಸಂಗೀತ ಶಾಲೆ ಸ್ಥಾಪಿಸಿ ಅನೇಕರಿಗೆ ಸಿತಾರವಿದ್ಯೆ ಕಲಿಸಿದರು. ಇಂದಿನವರೆಗೂ ಈ ವಿದ್ಯಾಲಯ ಅಸ್ತಿತ್ವದಲ್ಲಿದೆ. ಇವರ ಮಕ್ಕಳು, ಮೊಮ್ಮಕ್ಕಳು, ಹೀಗೆ ವಂಶಜರೆಲ್ಲಾ ಸಿತಾರವಾದನ ಕಲೆಯನ್ನು ಮುಂದುವರೆಸಿಕೊಂಡು ಸಾಗಿದ್ದಾರೆ. ಉಸ್ತಾದ ರಹಮತ್‌ಖಾನರ ಸ್ಮರಣಾರ್ಥ ಧಾರವಾಡ, ಪುಣೆಗಳಲ್ಲಿ ಸಮಗೀತ ಸಮ್ಮೇಳನ ಜರುಗುತ್ತವೆ. ಈಸಲ ಧಾರವಾಡದ ಸಮ್ಮೇಳನದಲ್ಲಿ ಮುಂಬೈಯ ಶಹೀದ ಪರವೇಜ್ (ರಾಗ: ಯಮನ್) ಮಾಲಿನಿ ರಾಜೂರಕರ್ (ರಾಗ: ನಾರಾಯಣ) ಭೋಟೇ ರಹಿಮತ್‌ಖಾನ್ (ರಾಗ: ಪೂರಿಯಾ ಕಲ್ಯಾಣಿ) ಸಂಗೀತ ಸೇವೆ ಸಲ್ಲಿಸಿದರು.

## ii) ಕರ್ನಾಟಕ ಸಂಗೀತ

*ಆರ್. ಎಸ್. ಶ್ರೀ ಲತಾ*

ರಾಜ್ಯದಲ್ಲಿ ಕರ್ನಾಟಕ ಸಂಗೀತ ಚಟುವಟಿಕೆಗಳನ್ನು ಪೋಷಿಸುವ ಪ್ರಧಾನ ಮೂಲಗಳು ನಾಲ್ಕು: ಸರ್ಕಾರ, ಸ್ವಾಯತ್ತ ಅಕಾಡೆಮಿಗಳು, ಸ್ವಯಂಸೇವಾ ಸಂಸ್ಥೆ ಮತ್ತು ದೇವಾಲಯಗಳು. ಹಳೆಯ ಮೈಸೂರು ರಾಜ್ಯಕ್ಕೆ ಬಹುತೇಕ ಸೀಮಿತವಾಗಿದ್ದ ಕರ್ನಾಟಕ ಸಂಗೀತವು ಈಚಿನ ವರ್ಷಗಳಲ್ಲಿ ರಾಜ್ಯವ್ಯಾಪಿಯಾಗುತ್ತಿದೆ. ಜೊತೆಯಲ್ಲೇ ಸಂಗೀತ ಕಲಿಯುವವರ, ಕಲಿಸುವವರ ಹಾಗೂ ಸಂಗೀತ ಕಚೇರಿ ನೀಡುವವರ ಸಂಖ್ಯೆ ಕೂಡ ವೃದ್ಧಿಯಾಗುತ್ತಿದೆ.

ಸಂಗೀತ ಕಲೆ ಜನತೆಯನ್ನು ತಲುಪುವ ಮಾಧ್ಯಮಗಳು ನಾಲ್ಕು: ವೇದಿಕೆ ಸಂಗೀತ, ಆಕಾಶವಾಣಿ ಮತ್ತು ದೂರದರ್ಶನ, ಧ್ವನಿಸುರುಳಿ ಮತ್ತು ಶಾಲಾ ಕಾಲೇಜುಗಳಲ್ಲಿಯ ಪಠ್ಯಪತ್ತಿ.

ವರ್ಷದ ಪ್ರಮುಖ ಚಟುವಟಿಕೆಗಳಲ್ಲಿ ಹೆಸರಿನಬಹುದಾದವು-

೧. ಕರ್ನಾಟಕ ಸರ್ಕಾರ ಏರ್ಪಡಿಸುವ ಮೈಸೂರು ದಸರಾ ಸಂಗೀತ ನೃತೋತ್ಸವ. ಇದರಲ್ಲಿ ದೇಶದ ಪ್ರಮುಖ ಸಂಗೀತ ವಿದ್ವಾಂಸ ವಿದುಷಿಯರು ಪಾಲ್ಗೊಳ್ಳುತ್ತಾರೆ. ಮೈಸೂರು ಅರಮನೆ ಸಂಭಾಗಣದಲ್ಲಿ ಸಂಗೀತ ಕಾರ್ಯಕ್ರಮಗಳೂ ಮೈಸೂರಿನ ವಿವಿಧ ಕೇಂದ್ರಗಳಲ್ಲಿ ನೃತ್ಯ ಕಾರ್ಯಕ್ರಮಗಳೂ ಜರಗುವುವು.

೨. ಬೆಂಗಳೂರು ಗಾಯನ ಸಮಾಜದ ವಾರ್ಷಿಕ ಸಂಗೀತ ಸಮ್ಮೇಳನ.

೩. ಬೆಂಗಳೂರಿನ ಕರ್ನಾಟಕ ಗಾನಕಲಾ ಪರಿಷತ್ತು ಕುಕ್ಕೆ ಶ್ರೀಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಏರ್ಪಡಿಸಿದ ವಾರ್ಷಿಕ ಸಂಗೀತ ಸಮ್ಮೇಳನ.

೪. ಬೆಂಗಳೂರಿನ ಕರ್ನಾಟಕ ಗಾನಕಲಾ ಪರಿಷತ್ತಿನ ಯುವಜನ ವಿಭಾಗ ಮೈಸೂರಿನಲ್ಲಿ ನಡೆಸಿದ ವಾರ್ಷಿಕ ಯುವಸಂಗೀತ ಸಮ್ಮೇಳನ.

೫. ಮೈಸೂರಿನ ಜಗದ್ಗುರು ಶ್ರೀ ಶಿವರಾತ್ರೀಶ್ವರ ಸಭಾದವರು ವ್ಯವಸ್ಥೆಗೊಳಿಸಿದ ಸಂಗೀತ ಸಮ್ಮೇಳನ. ಮೇಲಿನ ಎಲ್ಲ ಸಮ್ಮೇಳನಗಳಲ್ಲೂ ವಿದ್ವತ್‌ಗೋಷ್ಠಿ, ಪ್ರಾತ್ಯಕ್ಷಿಕೆ, ಭಾಷಣ ಮತ್ತು ಯುವ, ಅನುಭವಿ ಮತ್ತು ವೃತ್ತಿ ಕಲಾವಿದರ ಸಂಗೀತ ಕಚೇರಿಗಳು ಪ್ರಸಾರವಾಗಿವೆ.

ಎಂದೂ ಅನ್ನಿಸಬಹುದು. ಆದರೆ ಇದು ಅನಿಸಿಕೆಯ ಮಟ್ಟದಲ್ಲಿಯೆ ಉಳಿದುಬಿಡುವ ಸೃಜನಕ್ರಿಯೆ. ಇದು ಎಷ್ಟೋ ವೇಳೆ ಪ್ರೇಕ್ಷಕನಲ್ಲೂ ಬಂದು ಹೋಗುವಂತಹದ್ದಾಗಿರುತ್ತದೆ. ಚಿತ್ರವೊಂದರ ಇಂಥ ಅಂಶಗಳೇ ನಿರ್ದೇಶಕನ ಹೆಗ್ಗಳಿಕೆ ಮತ್ತು ಮಿತಿಗಳನ್ನು ಹೇಳುತ್ತವೆ. ಈ ದೃಶ್ಯಕ್ಕೆ ಆಳದ ತಗ್ಗು ದಿಣ್ಣೆಯಿರುವ ರಸ್ತೆಯನ್ನು ಆರಿಸಿಕೊಂಡಿರುವುದು ಸಮರ್ಪಕವಾಗಿದೆ. ಕ್ಯಾಮೆರಾ ರಸ್ತೆಯ ಈ ಬದಿಯ ತಗ್ಗಿನಲ್ಲಿದ್ದರೆ, ವ್ಯಾನು ಉಬ್ಬಿನಾಚೆಯ ಆ ಬದಿಯ ತಗ್ಗಿನಲ್ಲಿರುತ್ತವೆ. ನಿರ್ದಿಷ್ಟ ಅವಧಿಯಲ್ಲಿ ಅವು ಒಂದೊಂದೇ ಕಾಣಿಸಿಕೊಳ್ಳುವುದು ಪ್ರೇಕ್ಷಕರ ಕುತೂಹಲ ಹಾಗೂ ನಾಡಿಬಡಿತವನ್ನು ಹೆಚ್ಚಿಸುತ್ತವೆ. ಸುರೇಶ್ ಅರಸ್‌ರವರ ಸಂಕಲನ ಕೂಡ, ವ್ಯಾನುಗಳ ವರ್ತುಲವನ್ನು ಗೊಂದಲಕ್ಕೊಳಗಾಗದಂತೆ ಸೃಷ್ಟಿಸಿ, ದೃಶ್ಯದ ನಿಗೂಡತೆ ಹೆಚ್ಚುವಂತೆ ಮಾಡಿದೆ.

ಸಂಕಲನ ಕುರಿತು ಹೇಳಲು ಸಾಧ್ಯವಾಗಿಸುವ ಇಂಥ ದೃಶ್ಯಗಳು ಈ ವರ್ಷದ ಬಹುತೇಕ ಚಿತ್ರಗಳಲ್ಲಿ ಇಲ್ಲ. ಇಂಥ ದೃಶ್ಯಕ್ಕೆ ಸಂಗೀತದ ಅಗತ್ಯ ಬೀಳುವುದಿಲ್ಲ. ವ್ಯಾನುಗಳಿಂದ ಹೊರಡುವ ಶಬ್ದವೇ ದೃಶ್ಯದ ನಿಗೂಢತೆಯನ್ನು ಹೆಚ್ಚಿಸಬಲ್ಲುದು. ಗಂಭೀರವೆನ್ನಿಸುವಂಥ ಇಂಥದೇ ಬೇರೊಂದು ದೃಶ್ಯ ' ಮಹಾಕ್ಷತ್ರಿಯ' ಚಿತ್ರದಲ್ಲಿದೆ. ಅದು ನಾಯಕಿ ಸುಧಾರಾಣಿ ಸ್ನಾನಮಾಡುವಾಗ ಅವಳನ್ನು ಕೊಲ್ಲಲು ಮೊಸಳೆಯನ್ನು ಬಿಡುವ ದೃಶ್ಯ. ಇದು ನಿರೀಕ್ಷಿತ ಘಟನೆ. ಹೆಚ್ಚೆಂದರೆ ಕ್ಲೋಸಪ್ ಮತ್ತು ಮಿಡ್‌ಶಾಟ್‌ಗಳ ಸಮರ್ಪಕ ಸಂಯೋಜನೆಯಿಂದಾಚೆಗೆ ಹೆಚ್ಚಿನ ಕೆಲಸ ಸಂಕಲನಕಾರನಿಗೆ ಇಲ್ಲ. ಕೂತು ಮಾಡುವ ಕೆಲಸಕ್ಕೆ ಸರಿಯಾದ ಸಂಗೀತ ಜೋಡಿಸಿಬಿಟ್ಟರೆ ಸಂಗೀತಕಾರನ ಕೆಲಸವೂ ಮುಗಿದಂತೆ. ಈ ಎರಡೂ ಚಿತ್ರಗಳ ಸಂಕಲನ ಹಾಗೂ ಸಂಗೀತ ಕ್ರಮವಾಗಿ ಸುರೇಶ್ ಅರಸ್ ಹಾಗೂ ಹಂಸಲೇಖ ಅವರದ್ದು.

ಸಂಕಲನಕಾರ ಇಡೀ ಚಿತ್ರವನ್ನು ಒಬ್ಬ ಪ್ರೇಕ್ಷಕನ ರೀತಿಯಲ್ಲಿಯೇ ನೋಡಬೇಕು; ಪ್ರೇಕ್ಷಕನ ರೀತಿಯಲ್ಲಿಯೇ ಕಲ್ಪಿಸಿಕೊಳ್ಳಬೇಕು. ಚಿತ್ರದ ಬಗ್ಗೆ ಒಬ್ಬ ನಿರ್ದೇಶಕನಿಗಿರುವಷ್ಟು ಒಟ್ಟು ಸ್ವರೂಪ ಕಲ್ಪನೆ ಸಂಕಲನಕಾರನಿಗೂ ಇರದಿದ್ದರೆ, ಪರಿಣಾಮದ ನೆಲೆಯಲ್ಲಿ ಶ್ರೇಷ್ಠತೆಯನ್ನು ಸಾಧಿಸುವುದು ಕಷ್ಟ. ಇದರೊಂದಿಗೆ ಚಿತ್ರಿಕೆಗಳ ಸಂಖ್ಯೆ ಹೆಚ್ಚಿದಾಗ ಅಥವಾ ನಿರ್ದೇಶಕ 'ಬೇಡ' ಎಂದು ಕೈಬಿಟ್ಟ ದೃಶ್ಯಗಳಿದ್ದಾಗಲೂ, ಯೋಜಿತ ನಿರೂಪಣೆಯನ್ನು ಗುಣಾತ್ಮಕವಾಗಿ ಪರಿವರ್ತಿಸುವ ಅವಕಾಶ ಸಂಕಲನಕಾರನಿಗೆ ಇದೆ. ಆದರೆ ಆ ಮಟ್ಟದ ಪ್ರತಿಭೆ ಆತನಿಗೆ ಇರಬೇಕಷ್ಟೆ. ನಿರೂಪಣಾ ಪ್ರತಿಭೆ ಮತ್ತು ಅವನು ಶ್ರುತಪಡಿಸುವ ಭಾವತೀವ್ರತೆಯ ಅಂತಃಸಂಬಂಧವನ್ನು ಗ್ರಹಿಸಿ ಸಹವಾದ್ಯಗಳನ್ನು ಮಣಿಸುವುದು, ಹೇಗೆ ಒಂದು ಕಲೆಯೋ ಹಾಗೆಯೇ ಸಂಕಲನ ಕೂಡ. ನಿರ್ದೇಶಕನಿಗಿರುವಷ್ಟು ಸ್ಪಂದನಾಶಕ್ತಿ ಮತ್ತು ಸಿನಿಮಾದ ವಿವಿಧ ಚಿತ್ರಿಕೆಗಳ ನಡುವೆ ಇರುವ ಧ್ವನಿಸೂಕ್ಷ್ಮವನ್ನು ಗ್ರಹಿಸುವ ಕತೆಗಾರನೂ ಆಗಿರದಿದ್ದಲ್ಲಿ ಉತ್ತಮ ಸಂಕಲನ ಮಾಡುವುದು ಸಾಧ್ಯವಿಲ್ಲ.

ಚಿತ್ರೀಕರಣದಲ್ಲಿ ನಡೆದ ಅಪಘಾತದಿಂದಾಗಿ ದೊಡ್ಡ ಪ್ರಚಾರ ಪಡೆದ ಚಿತ್ರ 'ಲಾಕಪ್‌ಡೆತ್'. ಸಂಕಲನ ಮತ್ತು ಸುಂದರನಾಥ್ ಸುವರ್ಣರ ಛಾಯಾಗ್ರಹಣ ಚಿತ್ರದ ಪ್ಲಸ್‌ಪಾಯಿಂಟ್. ರಾಜೇಂದ್ರಬಾಬು ನಿರ್ದೇಶನದಲ್ಲಿ 'ವಿಷ್ಣು ಚಿತ್ರ' ಎಂದು 'ಹಾಲುಂಡ ತವರು' ಪಡೆದ ಪ್ರಚಾರ ಚಿತ್ರವನ್ನು ಯಶಸ್ವಿಗೊಳಿಸಿತು. ಹೆಣ್ಣಿನ ಕಣ್ಣೀರು ಹಾಗೂ ಕರುಳನ್ನು ಅವಲಂಭಿಸಿದ ಈ ಚಿತ್ರದಲ್ಲಿ, ಅತಿರೇಕವೆನ್ನಿಸುವ ನಾಯಕಿಯ ತ್ಯಾಗ ಒಂದು ಸವಕಲು ಮೌಲ್ಯ. ಈ ಚಿತ್ರಗಳ ನಡುವೆ 'ಇಂದ್ರನ ಗೆದ್ದ ನರೇಂದ್ರ' ದಂಥ ಫ್ಯಾಂಟಸಿ ಚಿತ್ರವೂ ಬಂದು ಹೋಗಿದೆ. ಯಶಸ್ವಿ ನಿರ್ಮಾಪಕ ಧನರಾಜ್ ಅವರ 'ಮಕ್ಕಳ ಸಾಕ್ಷಿ' ಮಕ್ಕಳಿಗಿಂತ ಹಿರಿಯರ ವಿಷಯವನ್ನೇ ತುಂಬಿಕೊಂಡಿದ್ದರಿಂದ ಹಾಗೂ ನಿರ್ದೇಶನದಲ್ಲಿ ಕುಸುರಿ ಇಲ್ಲದ್ದರಿಂದ ದೊಡ್ಡ ಸೋಲನ್ನು ಕಂಡಿತು.

'ಲವ್ ೯೪' ಕೆಲವು ಕಾರಣಗಳಿಂದ ಗಮನ ಸೆಳೆದ ಚಿತ್ರ. ಹೊಸ ಹುಡುಗ ಅಭಿಷೇಕ್ ಅವರು ಅಭಿನಯ, ನೃತ್ಯ, ಹಾಡು ಎಲ್ಲಾ ಸಂದರ್ಭದಲ್ಲೂ ಅನುಭವಿ ನಟರಷ್ಟೇ ಪ್ರಬುದ್ಧವಾಗಿ ಅಭಿನಯಿಸಿರುವುದು ವಿಶೇಷ. ನಿರ್ದೇಶಕ ಮುದ್ದುರಾಜ್ ಚಿತ್ರಕತೆಯ ಕಡೆ ಇನ್ನಷ್ಟು ಗಮನ ಕೊಟ್ಟಿದ್ದಿದ್ದರೆ ಚಿತ್ರ ಖಂಡಿತಾ ಯಶಸ್ವಿಯಾಗುತ್ತಿತ್ತು.

ಬಿ. ರಾಮಮೂರ್ತಿಯವರು 'ಲೂಟಿಗ್ಯಾಂಗ್' ಹಾಗೂ 'ಮೇಯರ್ ಪ್ರಭಾಕರ್' ಚಿತ್ರಗಳೊಂದಿಗೆ ೨೫ ರ ಸಂಖ್ಯೆಗೆ ಬಂದು ನಿಂತಿದ್ದಾರೆ. ಆದರೆ ಇಷ್ಟು



'ಹಾಲುಂಡ ತವರು' ಚಿತ್ರದಲ್ಲಿ ಸಿತಾರಾ ಹಾಗೂ ವಿಷ್ಣುವರ್ಧನ್

ಚಿತ್ರಗಳಲ್ಲಿ ಅವರ ಹೆಸರಿನೊಂದಿಗೆ ಹೇಳಬಹುದಾದ ಒಂದೇ ಒಂದು ಚಿತ್ರವೂ ಇಲ್ಲವೇಕೆಂದರೆ, ಅವರೂ ಇಷ್ಟೂ ಚಿತ್ರಗಳನ್ನು ನಿರ್ದೇಶಿಸಿರುವುದು ಕೇವಲ ಐದು ವರ್ಷಗಳಲ್ಲಿ. ಚಿತ್ರ ನಿರ್ದೇಶನವನ್ನು ಗಾರೆ ಕೆಲಸ ಎಂದು ಭಾವಿಸಿದರೆ ಇಂಥ ದುರಂತಗಳು ಎದುರಾಗುತ್ತವೆ. 'ಸಿಡಿದೆದ್ದ ಪಾಂಡವರು' ಹಾಗೂ 'ಇಂದ್ರನಗೆದ್ದ ನರೇಂದ್ರ' ಚಿತ್ರಗಳನ್ನು ನಿರ್ದೇಶಿಸಿರುವ ಸಾಯಿಪ್ರಕಾಶ್ ಅವರಿಗೂ ಇವೇ ಮಾತುಗಳು ಅನ್ವಯಿಸುತ್ತವೆ. 'ಮಂಡ್ಯದ ಗಂಡು' ಅಂಬರೀಶ್‌ರ ಹೆಸರು, ಹಿನ್ನೆಲೆಯನ್ನು ಕ್ಯಾಶ್ ಮಾಡಿಕೊಂಡ ಚಿತ್ರ. ರಮೇಶ್ ನಾಯಕನಾಗಿ ಅಭಿನಯಿಸಿದ 'ಹಂತಕ' ಜನರಿಂದ ತಿರಸ್ಕರಿಸಲ್ಪಟ್ಟ ಚಿತ್ರ. ರಮೇಶ್ ಅವರನ್ನು ತಮಿಳು ಪ್ರೇಕ್ಷಕರಂತೆ ಕನ್ನಡ ಪ್ರೇಕ್ಷಕರು ಒಪ್ಪಿಕೊಳ್ಳುತ್ತಿಲ್ಲ.

ವಸ್ತುವಿನ ಮಟ್ಟಿಗೆ 'ಕರ್ಫ್ಯೂ' ಹಾಗೂ 'ಯಾರಿಗೂ ಹೇಳ್ಬೇಡಿ' ಭಿನ್ನವಾಗಿವೆ. ಆದರೆ ಮಾಧ್ಯಮದ ಶಕ್ತಿ, ಸೂಕ್ಷ್ಮತೆಗಳ ಅರಿವಿಲ್ಲದ ನಿರ್ದೇಶನದಿಂದಾಗಿ ಈ ಚಿತ್ರಗಳು ಎತ್ತರಕ್ಕೇರುವುದಿಲ್ಲ. ಸಾಮಾಜಿಕ ಅನಿಷ್ಟಗಳಿಗೆಲ್ಲ ರಾಜಕಾರಣಿ, ಪುಡಾರಿಗಳೇ ಹೊಣೆ ಎಂಬ ಅರ್ಧಸತ್ಯವನ್ನು, ಪೂರ್ಣಸತ್ಯ ಎಂಬಂತೆ ಒರಟಾಗಿ ಪ್ರತಿಪಾದಿಸಲು ಹೋಗಿರುವುದರಿಂದ, ಈ ಎರಡು ಚಿತ್ರಗಳು ದುರ್ಬಲಗೊಂಡಿವೆ.

ನಿರ್ದೇಶಕ ಯಾರೇ ಆಗಿರಲಿ, ಆತನ ಚಿತ್ರದ ಕಲ್ಪನೆ-ಅದರ ಅರ್ಹತೆ ಏನೇ ಇರಲಿ-ಕೆಲವು ಪ್ರತೀಕಗಳಿಂದ ಕೂಡಿರುತ್ತದೆ. ಆ ಪ್ರತೀಕ 'ಕರ್ಫ್ಯೂ' ಚಿತ್ರದಲ್ಲಿರುವಂತೆ ಹಾಲಿಲ್ಲದೆ ಅಳುವ ಮಗುವಿನ ರೋದನದ ಮೂಲಕ ಸನ್ನಿವೇಶದ ಭೀಕರತೆಯನ್ನು ದಾಖಲಿಸುವುದಾಗಿರಬಹುದು ಅಥವಾ 'ಭೂತಾಯಿ ಮಕ್ಕಳು' ಚಿತ್ರದಲ್ಲಿ ಸಂಯೋಜಿಸಲ್ಪಟ್ಟಂತೆ ಸ್ವಂತ ಮಗುವನ್ನು ತನ್ನ ಸ್ನೇಹಿತನಿಗೆ ಹುಟ್ಟಿದೆಂದು ಭಾವಿಸಿದವನು ಆ ಮಗುವಿಗೆ ಹಾವು ಕಚ್ಚುವ ಸಂದರ್ಭದಲ್ಲಿ ಖುಷಿ ಪಡುತ್ತಾ ನಿಲ್ಲುವುದಾಗಿರಬಹುದು. ಈ ಎರಡೂ ದೃಶ್ಯಗಳ ಮೂಲಕ ಒಂದು ನಿರ್ದಿಷ್ಟ ಕಾರಣಕ್ಕಾಗಿ ವಿಷಾದ ಸೃಷ್ಟಿಸುವ ಉದ್ದೇಶ ನಿರ್ದೇಶಕನಿಗಿರಬಹುದು. ಈ ದೃಶ್ಯಗಳಿಗೆ ಒಟ್ಟು ಕತೆಯಲ್ಲಿ ಇರುವ ಸ್ಥಾನಮಾನ ಏನಾದರೂ ಆಗಿರಲಿ, ಈ ದೃಶ್ಯ ಅಥವಾ ಇಂಥ ಸರಣಿ ದೃಶ್ಯಗಳು, ವಿಷಾದ - ಆಂತಕಗಳನ್ನು ಸೃಷ್ಟಿಸುತ್ತಲೇ ಹೋದರೆ, ಈ ಆತಂಕದ 'ಆಳ' ತಳವೇ ಕಾಣದೆ ಮುಂದುವರಿಯುತ್ತಾ ಒಂದು ಹಂತದಲ್ಲಿ ಪ್ರೇಕ್ಷಕನನ್ನು ತನ್ನಿಂದ ವಿಮುಖಗೊಳಿಸುತ್ತದೆ. ಇದು ಅರ್ಥಶಾಸ್ತ್ರದ ತುಷ್ಟಿಗುಣ ಸಿದ್ಧಾಂತದ ಹಾಗೆ. ಕಲಾಕೃತಿಯೊಂದರ ನಿರ್ಮಿತಿಯಲ್ಲಿ ಅಗತ್ಯಗಳ ಪರಿಮಿತಿ ಅಥವಾ ಪರಿಣಾಮಗಳನ್ನು ಗ್ರಹಿಸದೇ ಹೋದರೆ ಪರಿಣಾಮ ಏರುಪೇರಾಗುತ್ತದೆ.

'ಕರ್ಫ್ಯೂ' ಚಿತ್ರದಲ್ಲಿ ಮಗುವಿಗೆ ಹಾಲು ಸಿಗದಂತೆ ಮಾಡುವುದರಿಂದ ಸಾಧಿಸಬಹುದಾದ ಪರಿಣಾಮವನ್ನು, ಅದೇ ಚಿತ್ರದಲ್ಲಿರುವ ಹುಚ್ಚನು ಹಾಲನ್ನು ತಂದು ಕುಡಿಸಿದಾಗ ಅಥವಾ ವಿಧ್ವಂಸಕನೊಬ್ಬನ ಕೈಲಿ ಆ ಕೆಲಸ ಮಾಡಿಸಿದಾಗ ಇನ್ನಷ್ಟು ಹೆಚ್ಚು ಕಲಾತ್ಮಕವಾಗಿ ಸಾಧಿಸಲು ಸಾಧ್ಯವಿತ್ತಲ್ಲವೇ ಎಂಬುದು ಒಂದು ಪ್ರಶ್ನೆ. 'ಭೂ ತಾಯಿ ಮಕ್ಕಳು' ಚಿತ್ರದಲ್ಲಿ ಏನೂ ಗೊತ್ತಿಲ್ಲದೆ ಸಾವಿನೊಂದಿಗೆ ಆಡುತ್ತಿರುವ ಮಗು, ಹಾವು

ಕಚ್ಚುವ ಮುನ್ನ `ಹಾವು ಕಚ್ಚಲಿ' ಎಂದು ಬಯಸುತ್ತಾ ನಿಂತಿರುವ ತಂದೆಯತ್ತ ಒಮ್ಮೆ ನೋಡಿ, ಹಾವಿನೊಂದಿಗೆ ಆಟ ಮುಂದುವರೆಸಿ ಆನಂತರ ಕಚ್ಚುವ ಸಂದರ್ಭ ಇದ್ದಿದ್ದರೆ, ಅದರ ಅಂತಃಕರಣವೇ ಬೇರೆಯಾಗುತ್ತಿತ್ತು. ದೃಶ್ಯಗಳಲ್ಲೇ ಅಂತರ್ಗತವಾಗಿರುವ ಸೂಕ್ಷ್ಮಗಳನ್ನು ಬಳಸಿಕೊಳ್ಳಬೇಕಾದ್ದು ಹೀಗೆ.

ಜಗ್ಗೇಶ್ ಅಭಿನಯದ 'ಭೈರವ' ಹಾಗೂ ಶಿವರಾಜ್‌ಕುಮಾರ್ ಅಭಿನಯದ 'ಮುತ್ತಣ್ಣ' ಚಿತ್ರಗಳಿಗೆ ಕನ್ನಡದ ಸೊಗಡಿಲ್ಲ. ಇದಕ್ಕೆ ಕಾರಣ ಇವುಗಳ ಮೂಲ ಚಿತ್ರಗಳು ಬೇರೆ ಭಾಷೆಯವಾಗಿರುವುದು. 'ಸಾಗರದೀಪ' ಎಂ. ವೀರಪ್ಪಮೊಯಿಲಿಯವರ ಕತೆ ಎಂಬ ಕಾರಣಕ್ಕೆ ಅಲ್ಲದಿದ್ದರೂ, ನಾಗಾಭರಣರ ನಿರ್ದೇಶನ ಎಂಬುದಕ್ಕೂ ಆಸಕ್ತಿಯನ್ನು ಉಳಿಸಿಕೊಳ್ಳುವುದಿಲ್ಲ. ನಿರೂಪಣೆ ಅಷ್ಟೊಂದು ನೀರಸವಾಗಿದೆ. ಕಾಸರಗೋಡಿನ ಬೇಕಲ್‌ಕೋಟೆ ಹಾಗೂ ಅದರ ಸುತ್ತಲಿನ ರುದ್ರರಮಣೀಯ ಪ್ರಕೃತಿಯನ್ನು ಡೆನ್‌ಸೆಟ್‌ನಂತೆ ಚಿತ್ರಿಸಿರುವ ಪವಾಡ ಈ ಚಿತ್ರದಲ್ಲಿದೆ! ಈ ಚಿತ್ರವೂ ಸೇರಿದಂತೆ ವರ್ಷದ ಒಟ್ಟು ೬೮ ಚಿತ್ರಗಳ ಪೈಕಿ ಸುಮಾರು ೩೦ ಚಿತ್ರಗಳಲ್ಲಿ ಕನ್ನಡದ ಘೋಷಣೆಗಳು, ಕನ್ನಡದ ಹಿರಿಮೆಯನ್ನು ಸಾರುವ ಹಾಡುಗಳು ಹೇರಳವಾಗಿವೆ. ಆದರೆ, ಈ ೩೦ ಚಿತ್ರಗಳು ಕೇವಲ ಒಂದೊಂದೇ ವಾರ ಓಡಿವೆ. ಜೊತೆಗೆ ಹತ್ತು ಚಿತ್ರಗಳ ೧೦ ಹಾಡುಗಳಲ್ಲಿ ನಾಯಕಿಯರನ್ನು ಕುರಿತು ನಾಯಕ ಹಾಡುವ ''ಕನ್ನಡ ಹೆಣ್ಣಿನ ಕಂಪಿನ ಕಣ್ಣಿನ'' ಎಂಬರ್ಥದ ಸಾಲುಗಳ ಹಾಡುಗಳಿವೆ. ವಿಚಿತ್ರವೆಂದರೆ, ಇಷ್ಟೂ ನಾಯಕಿಯರು ಕನ್ನಡದ ಗಂಧವೇ ಗೊತ್ತಿಲ್ಲದ ತಮಿಳು, ಮಲೆಯಾಳಿ ಕಂಪಿನವರು! ಸಿನಿಮಾದ ವಿವಿಧ ಹಂತಗಳ ಕೆಲಸ ನಡೆಯುವಾಗ ಬೇರೆ ಬೇರೆ ವಿಭಾಗಗಳ ತಂತ್ರಜ್ಞರ ನಡುವೆ ಚರ್ಚೆ, ಸಾಮರಸ್ಯ ಇರುವುದಿಲ್ಲವಾದ್ದರಿಂದ ಹೀಗಾಗುತ್ತದೆ.

'ಮಹಾಶಕ್ತಿ ಮಾಯೆ' ಎಂಬ ಭಕ್ತಿ, ಸಾಮಾಜಿಕ, ಪೌರಾಣಿಕ ಚಿತ್ರದ ಬಗ್ಗೆ ಎರಡು ಮಾತನ್ನು ಪ್ರತ್ಯೇಕವಾಗಿಯೇ ಹೇಳಬೇಕಾಗುತ್ತದೆ. ಈ ಚಿತ್ರದಲ್ಲಿ ಜನರ ನಂಬಿಕೆಗಳನ್ನು ವ್ಯಾಪಾರವನ್ನಾಗಿ ಮಾಡುವ ಪ್ರಯತ್ನ ಇದೆ. ಕಲ್ಪಿತ ಘಟನೆಗಳನ್ನು ಅವು ನಡೆದಿರುವಂಥವು ಎಂಬ ರೀತಿಯಲ್ಲಿ ಚಿತ್ರಿಸಿರುವುದು ಒಂದು ದೊಡ್ಡ ಮೋಸ. ಒಂದು ರೀತಿಯಲ್ಲಿ ಈ ಚಿತ್ರ ಭಕ್ತಿ ತೋರದವರನ್ನು ಬೆದರಿಸುವ ರೀತಿಯಲ್ಲಿ ಇದ್ದು, ಇದನ್ನು ಜನ ಅನಾಮತ್ತಾಗಿ ತಿರಸ್ಕರಿಸಿದರು. ಈ ಸಂದರ್ಭದಲ್ಲಿಯೇ 'ಶಿರಡಿ ಸಾಯಿಬಾಬಾ' ಹಾಗೂ 'ಕೊಲ್ಲೂರು ಮೂಕಾಂಬಿಕಾ' ಕೂಡ ದಯನೀಯವಾಗಿ ಸೋಲುಂಡವು. ತನ್ನನ್ನು ವ್ಯಾಪಾರದಿಂದ ಸರಕನ್ನಾಗಿ ಮಾಡುತ್ತಿದ್ದಾರೆ ಎಂದೆನ್ನಿಸಿಯೋ ಏನೋ, ದೇವರು ಈ ಚಿತ್ರಗಳ ಮೇಲೆ ಕಿಂಚಿತ್ತೂ ದಯೆ ತೋರಲಿಲ್ಲ!

ವರ್ಷದ ಕೊನೆಯ ಎರಡೂವರೆ ತಿಂಗಳುಗಳಲ್ಲಿ ೧೬ ಚಿತ್ರಗಳು ಬಿಡುಗಡೆಯಾದವು. ಇವುಗಳಲ್ಲಿ ವಿಶೇಷ ಗಮನಕ್ಕೆ ಅರ್ಹವಾದ ಚಿತ್ರಗಳೆಂದರೆ 'ಗಂಡುಗಲಿ' ಹಾಗೂ 'ಪಂಜರದಗಿಳಿ' ಮಾತ್ರ. ತಾಂತ್ರಿಕತೆ ಹಾಗೂ ವೈಭವದ ನಿರ್ಮಾಣಕ್ಕಾಗಿ 'ಗಂಡುಗಲಿ' ಹೆಚ್ಚಿನ ಆಕರ್ಷಣೆ ಪಡೆದುಕೊಂಡಿದೆ. ಆದರೆ ಈ ಚಿತ್ರದ

ಕತೆ ಹಲವಾರು ಚಿತ್ರಗಳಿಂದ ಎತ್ತಿಕೊಂಡ ಸರಕಾದ್ದರಿಂದ ಸಿನಿಮಾ ನೋಡುವಾಗ ಮೂಲ ಚಿತ್ರಗಳೆಲ್ಲಾ ಸ್ಮೃತಿಗೆ ಬರುತ್ತವೆ. ಇಂಥದೇ ಅನುಭವ 'ಅಲೆಗ್ಸಾಂಡರ್' ಚಿತ್ರ ನೋಡಿದಾಗಲೂ ಆಯಿತು. ಆದರೆ 'ಗಂಡುಗಲಿ'ಯ ಹೆಗ್ಗಳಿಕೆಯಿರುವುದು ಛಾಯಾಗ್ರಹಣ (ಜಿ.ಜಿ. ಕೃಷ್ಣ) ಹಾಗೂ ಸಂಕಲನದಲ್ಲಿ (ಆರ್. ಜನಾರ್ಧನ್).

'ಪಂಜರದ ಗಿಳಿ' ಚಿತ್ರ 'ಗಂಡುಗಲಿ' ಗಿಂತ ತೀರಾ ಭಿನ್ನವಾಗಿದೆ. ನೆಂಟನ ವಂಚನೆಯಿಂದ ಮುಂಬೈನ ವೇಶ್ಯಾವಾಟಿಕೆಗೆ ಸೇರುವ ಈ ಚಿತ್ರದ ನಾಯಕಿ, ನಾಯಕನ ಸಹಾಯದಿಂದ ತಪ್ಪಿಸಿಕೊಂಡು ಬಂದು ಅವನನ್ನೇ ಮದುವೆ ಆಗುತ್ತಾಳೆ. ಈ ಕತೆಯನ್ನು ಹೇಳಲು ನಿರ್ದೇಶಕ ಸುಧೀಂದ್ರ ಕಲ್ಲೋಳ್ ಸ್ವಲ್ಪ ಜಾಸ್ತಿಯೇ ಕಷ್ಟಪಟ್ಟಿದ್ದಾರೆ. ಚಿತ್ರಕತೆಯಲ್ಲಿ ನೇರ ಫ್ಲಾಶ್‌ಬ್ಯಾಕ್‌ಗೆ ಬದಲು ಘಟನೆಗಳಿಂದಲೇ ವಿವರಗಳು ಬಿಚ್ಚಿಕೊಳ್ಳುವಂತೆ ಮಾಡಿರುವುದು ಹಾಗೂ ಹಾಸ್ಯದೊಂದಿಗೆ ಅತ್ಯಂತ ಸಹಜವಾಗಿ ಕುತೂಹಲವೂ ಹೆಚ್ಚುತ್ತಾ ಹೋಗುವಂತೆ ಕತೆ ಹೆಣೆದಿರುವುದು ಮೆಚ್ಚಿಗೆಯಾಗುತ್ತದೆ. ನಾಯಕಿ ಶೃತಿಯಷ್ಟೇ ಉತ್ತಮವಾಗಿ ಲೋಕೇಶ್, ಅಶೋಕ್‌ಬಾದರದಿನ್ನಿ, ಸಿಂಹ ಹೆಮ್ಮಿಗೆ ಅಭಿನಯಿಸಿದ್ದಾರೆ.

ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಮುಖ್ಯಪಾತ್ರದಲ್ಲಿ ಅಭಿನಯಿಸಿರುವ 'ಪ್ರಜಾಶಕ್ತಿ' ಹೆಗಡೆಯವರ ಸಾರ್ವಜನಿಕ ವ್ಯಕ್ತಿತ್ವವನ್ನು ಆಕರ್ಷಣೆ



'ಪ್ರಜಾಶಕ್ತಿ' ಚಿತ್ರದಲ್ಲಿ ರಾಮಕೃಷ್ಣಹೆಗ್ಗಡೆ, ಶಶಿಕುಮಾರ್ ಹಾಗೂ ಶ್ರೀಶಾಂತಿ.

ಮಾಡಿಕೊಳ್ಳಲು ಪ್ರಯತ್ನಿಸಿರುವ ಚಿತ್ರ. ಆದರೆ, ನಿರೂಪಣೆಯಲ್ಲಿನ ಅತಿವಾಚ್ಯತೆ ಚಿತ್ರದ ಗಾಂಭೀರ್ಯಕ್ಕೆ ಧಕ್ಕೆ ತಂದಿದೆ. ಹೆಗಡೆಯವರ ಅಭಿನಯ ' ಅಂಡರ್ ಪ್ಲೇ' ಅನ್ನುವುದಕ್ಕಿಂತಲೂ ಸಪ್ಪೆಯಾಗಿರುವುದರಿಂದ ಶಶಿಕುಮಾರ್ ಸೇರಿದಂತೆ ಅವರ ಸುತ್ತಲಿನ ಪಾತ್ರಗಳೆಲ್ಲ ನಾಟಕೀಯವಾಗಿ ಕಾಣುತ್ತವೆ. ಇಡೀ ಚಿತ್ರದಲ್ಲಿ ಉತ್ತಮ ಪಾತ್ರ ಪೋಷಣೆ ಆಗಿರುವುದು ಜಿಲ್ಲಾಧಿಕಾರಿ ಪಾತ್ರಕ್ಕೆ. ವಿನಯಪ್ರಸಾದ್ ಅತ್ಯಂತ ಗಂಭೀರವಾಗಿ ಅಭಿನಯಿಸಿ ಮನಸ್ಸಿನಲ್ಲಿ ಉಳಿಯುತ್ತಾರೆ. ಇವರೊಂದಿಗೆ ಅಶೋಕ್, ಬೂದಾಳ್ ಕೃಷ್ಣಮೂರ್ತಿ, ಲಕ್ಷ್ಮಣ್‌ರವರ ಅಭಿನಯ ಕೂಡ ನೆನಪಿನಲ್ಲಿ ಉಳಿಯುವಂತಿದೆ.

ಸಾಯಿಪ್ರಕಾಶ್ ಅವರ 'ಹೆತ್ತಕರುಳು' ಬಗ್ಗೆ ಹೆಚ್ಚಿಗೆ ಹೇಳುವಂತಿಲ್ಲ. ಈ ಚಿತ್ರದಲ್ಲಿ ಶೃತಿಯಷ್ಟು ಚಿಕ್ಕವಯಸ್ಸಿನ ನಟಿಯನ್ನು ತೆರೆಯ ಮೇಲೆ ಮೂರುಮಕ್ಕಳ ತಾಯಿಯನ್ನಾಗಿ ನೋಡುವುದು ಎಷ್ಟು ಕಷ್ಟವೋ ಅಷ್ಟೇ ಕಷ್ಟ ಬದುಕಲು ಹಲವಾರು ದಾರಿಗಳಿರುವ ಈ ಕಾಲದಲ್ಲಿ ಮಕ್ಕಳಿಗೆ ವಿಷಕೊಟ್ಟು ಸಾಯಿಸುವಂಥ ವಿದ್ಯಾವಂತ ಹೆಣ್ಣನ್ನು ಕಲ್ಪಿಸಿಕೊಳ್ಳುವುದರಲ್ಲೂ ಆಗುತ್ತದೆ. 'ಕಾವೇರಿ ತೀರದಲ್ಲಿ' ಚಿತ್ರದಲ್ಲಿ ಹೊಸತೆಂಬುದು ಏನೂ ಇಲ್ಲ. ಡಾ. ರಾಜ್‌ಕುಮಾರ್ ಅಭಿನಯದ 'ಎರಡು ಕನಸು' ಚಿತ್ರದ ಎಳೆಯೇ ಈ ಚಿತ್ರದ ಎಳೆಯೂ ಆಗಿದ್ದು ಕನ್ನಡ ಚಿತ್ರವನ್ನೇ ಕಾಪಿ



'ಹೆತ್ತಕರುಳು' ಚಿತ್ರದಲ್ಲಿ ಶೃತಿ, ಎಂ. ಎಸ್. ಲಕ್ಷ್ಮೀದೇವಿ, ದೇವರಾಜ್, ಮತ್ತಿತರರು

ಮಾಡಿದಂತಾಗಿದೆ. ಚಿತ್ರದ ಮನಮಿಡಿಯುವಂಥ ಸನ್ನಿವೇಶವೊಂದಕ್ಕೆ ಡಾ. ರಾಜ್‌ರವರ ಹಿನ್ನೆಲೆ ಹಾಡು ಕೂಡ ನೆರವಾಗಿ ಬಂದಿಲ್ಲ. ಈಚೆಗೆ ರಾಜ್‌ರವರು ಇತರರಿಗೆಂದು ಹಾಡುತ್ತಿರುವ ಹಾಡುಗಳು ಅಸಮರ್ಪಕ ಸಂದರ್ಭಗಳಿಂದಾಗಿ ಸೊರಗುತ್ತಿವೆ.

ಈ ವರ್ಷ ಕನ್ನಡ ಚಿತ್ರರಂಗಕ್ಕೆ ಸರ್ಕಾರದಿಂದ ಹೆಚ್ಚಿನ ನೆರವು ದಕ್ಕಿತು. ಕುಸಿಯುತ್ತಿರುವ ಚಿತ್ರರಂಗದ ಅಭಿವೃದ್ಧಿಗಾಗಿ ಸಮಗ್ರ ನೀತಿಯೊಂದನ್ನು ರೂಪಿಸಲು ಹಿರಿಯ ಪತ್ರಕರ್ತ ವಿ.ಎನ್. ಸುಬ್ಬರಾವ್ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯೊಂದನ್ನು ರಚಿಸಿತು. ಸರ್ಕಾರವು ಆ ಸಮಿತಿಯ ಶಿಫಾರಸ್ಸಿನ ಬಹುತೇಕ ಅಂಶಗಳನ್ನು ಜಾರಿಗೊಳಿಸಿತು. ಇದರಲ್ಲಿ ಮುಖ್ಯವಾದುದು 'ಸ್ಲ್ಯಾಬ್ ಪದ್ಧತಿ'ಯ ಜಾರಿ. ಪ್ರಶಸ್ತಿ ಮೊತ್ತದಲ್ಲಿ ಗಣನೀಯ ಏರಿಕೆ, ಹೊಸದಾಗಿ ಗಾಯಕ, ಗಾಯಕಿ, ಗೀತರಚನಕಾರ, ಕಲಾ ನಿರ್ದೇಶಕ ಇವರುಗಳಿಗೆ ಪ್ರಶಸ್ತಿ ಹಾಗೂ ಶ್ರೇಷ್ಠ ಸಾಮಾಜಿಕ ಕಳಕಳಿಯ ಚಿತ್ರ ಮತ್ತು ಶ್ರೇಷ್ಠ ಮಕ್ಕಳ ಚಿತ್ರಗಳಿಗೆ ಪ್ರಶಸ್ತಿ ನೀಡುವುದೂ ಸೇರಿದೆ.

ಮೂರು ವರ್ಷಗಳಿಂದ ಬಾಕಿ ಉಳಿಸಿಕೊಂಡಿದ್ದ ಪ್ರಶಸ್ತಿಗಳನ್ನು ಮಂಗಳೂರಿನಲ್ಲಿ ಪ್ರದಾನಿಸಲಾಯಿತು. ಮೊದಲ ಗುಬ್ಬಿ ವೀರಣ್ಣ ಪ್ರಶಸ್ತಿಯನ್ನು ಡಾ. ರಾಜ್‌ಕುಮಾರ್ ಅವರು ಪಡೆದುಕೊಂಡರು. 'ಚಿನ್ನಾರಿ ಮುತ್ತ', 'ದೇವರಕಾಡು' ಚಿತ್ರಗಳು ರಾಷ್ಟ್ರಪ್ರಶಸ್ತಿ ಪಡೆದವು. ಆರೆನ್ನಾರ್ ಪ್ರಶಸ್ತಿ, ನಿರ್ದೇಶಕರ ಸಂಘದ ಪ್ರಶಸ್ತಿ ಸಮಾರಂಭಗಳು ನಡೆದವು.

ಇದೇ ವರ್ಷ ಮೂವರು ಮಾಜಿ ಮುಖ್ಯಮಂತ್ರಿಗಳು ಚಿತ್ರರಂಗದಲ್ಲಿ ಸುದ್ದಿ ಮಾಡಿದರು. ವೀರಪ್ಪಮೊಯ್ಲಿಯವರ 'ಸಾಗರದೀಪ' ಕೃತಿ ಚಲನಚಿತ್ರವಾದರೆ ರಾಮಕೃಷ್ಣ ಹೆಗಡೆಯವರು ಅಭಿನಯಿಸಿದ 'ಪ್ರಜಾಶಕ್ತಿ' ವಿಧಾನಸಭಾ ಚುನಾವಣೆಯ ಸಂದರ್ಭದಲ್ಲಿ ಬಿಡುಗಡೆಯಾಯಿತು. ಬಂಗಾರಪ್ಪನವರು ಹಾಡಿದ ಹಾಡುಗಳ ಧ್ವನಿಸುರುಳಿಯೊಂದು ಚಲನಚಿತ್ರ ಸುದ್ದಿಗಳ ಜಾಗದಲ್ಲಿ ಗಮನ ಸೆಳೆಯಿತು.

ಕನ್ನಡ ವಾಕ್ಚಿತ್ರ ಅರುವತ್ತಕ್ಕೆ ಕಾಲಿಟ್ಟಿದ್ದು ಈ ವರ್ಷವೇ. ಒಂದು ಪ್ರಮುಖ ಉದ್ಯಮರೂಪಿ ಸಾಂಸ್ಕೃತಿಕ ರಂಗದ ವಜ್ರಮಹೋತ್ಸವ ಸಂಭ್ರಮವನ್ನು ಸರ್ಕಾರವಾಗಲಿ ಚಿತ್ರೋದ್ಯಮವಾಗಲಿ ಆಚರಿಸಲು ವಿಫಲವಾದವು. ಇಂಥ ಸಂದರ್ಭದಲ್ಲಿ ಕನ್ನಡ ಚಲನಚಿತ್ರ ಪತ್ರಕರ್ತರ ಕ್ರಿಯಾಶಾಲಿ ಸಂಘಟನೆ 'ಚಲನಚಿತ್ರ ಪತ್ರಕರ್ತರ ವೇದಿಕೆ' ಯು ವರ್ಷಪೂರ್ತಿ 'ಕನ್ನಡ ಚಿತ್ರರಂಗ- ೬೦: ಸಾಧನೆ -ಹಿನ್ನೋಟ' ಹೆಸರಿನಲ್ಲಿ ಉಪನ್ಯಾಸಗಳನ್ನು ಹಮ್ಮಿಕೊಂಡಿತ್ತು .ಅಲ್ಲದೇ, ಆಗಸ್ಟ್ ತಿಂಗಳಲ್ಲಿ ಕನ್ನಡ ಚಲನಚಿತ್ರ ಸಂಗೀತ ಕಳೆದ ೬೦ ವರ್ಷಗಳಲ್ಲಿ ಬೆಳೆದು ಬಂದ ಬಗೆಯ ಪ್ರಾತ್ಯಕ್ಷಿಕೆ, ಪ್ರದರ್ಶನ, ಗಾಯನಗಳೊಂದಿಗೆ ವಿಶೇಷವಾಗಿ ಸಂಯೋಜಿಸಿತ್ತು. ತೀರಾ ಅದ್ಧೂರಿಯಾಗಿ ನಡೆದ ಈ ಸಮಾರಂಭವನ್ನು ಖ್ಯಾತ ಗೀತರಚನಕಾರ, ಫಾಲ್ಕೆ ಪ್ರಶಸ್ತಿ ವಿಜೇತ ಮಜ್ರೂಹ್ ಸುಲ್ತಾನ್‌ಪುರಿ ಉದ್ಘಾಟಿಸಿದರು. ಆ ದಿನದ ಸಂಜೆಯ ಸಂಗೀತ ಸಮಾರಂಭವನ್ನು ಡಾ. ರಾಜ್‌ಕುಮಾರ್ ಉದ್ಘಾಟಿಸಿದರು; ಗುಲ್ಜಾರ್ ಮುಖ್ಯ

ಅತಿಥಿಯಾಗಿದ್ದರು. ದಕ್ಷಿಣ ಭಾರತದ ಸುಮಾರು ೨೫ ಮಂದಿ ಪ್ರಖ್ಯಾತ ಗಾಯಕಗಾಯಕಿಯರು ಭಾಗವಹಿಸಿ ಹಾಡಿದ್ದು ಈ ಕಾರ್ಯಕ್ರಮದ ವಿಶೇಷ.

ಸಂಭ್ರಮಕ್ಕೆ ಸಂಬಂಧಿಸಿದ ಇಷ್ಟು ಸಂಗತಿಗಳೊಂದಿಗೆ ಆಗಾಗ ನೋವು ಕೂಡ ಹಾಸು ಹೊಕ್ಕಾಗಿತ್ತು. ಕನ್ನಡ ಚಿತ್ರರಂಗದ ಉದಯೋನ್ಮುಖ ನಟ ಸುನಿಲ್ ಕಾರು ಅಪಘಾತದಲ್ಲಿ ಸಾವಿಗೀಡಾದರು. ' ಬೆರಳ್‌ಗೆ ಕೊರಳ್' ಅಲ್ಲದೆ ಸುಮಾರು ೨೦ ಗೀತೆಗಳ ಮೂಲಕ ಚಿತ್ರರಂಗಕ್ಕೂ ಹತ್ತಿರವಾಗಿದ್ದ ಕುವೆಂಪು ಇನ್ನಿಲ್ಲವಾದರು. 'ಗೆಜ್ಜೆ ಪೂಜೆ', 'ಫಣಿಯಮ್ಮ', 'ಸಂಬಂಧ', 'ಮುತ್ತು ಒಂದು ಮುತ್ತು', ' ಹೆಂಡತಿ ಎಂದರೆ ಹೀಗಿರಬೇಕು', (ಕೂಚುಭಟ್ಟ) ಚಿತ್ರಗಳ ಕಾದಂಬರಿಗಾರ್ತಿ ಎಂ.ಕೆ. ಇಂದಿರಾ, 'ರಥಸಪ್ತಮಿ', 'ಭಾಗ್ಯದಾ ಲಕ್ಷ್ಮೀ ಬಾರಮ್ಮಾ' ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದ್ದ ಖ್ಯಾತ ನಾಟಕಕಾರ ಪರ್ವತವಾಣಿ, 'ಕಳ್ಳಕುಳ್ಳ'ದಲ್ಲಿ ಅಭಿನಯಿಸಿದ್ದ ಹೆಸರಾಂತ ನೃತ್ಯಪಟು ಗೋಪಿಕೃಷ್ಣ, ಹೆಸರಾಂತ ಸಿನಿಮಾ ಉದ್ಯಮಿ ಎಲ್.ವಿ. ಪ್ರಸಾದ್, ಸಾಹಸ ನಿರ್ದೇಶಕ ವೈ. ಶಿವಯ್ಯ, ಬೆಂಗಳೂರಿನಲ್ಲಿ ನೆಲೆಸಿದ್ದ ಭಾರತೀಯ ಚಿತ್ರರಂಗದ ಪ್ರಥಮತಾರೆ ದೇವಿಕಾರಾಣಿ, ಕನ್ನಡ ಚಲನಚಿತ್ರಗಳ ಸ್ಥಿರಚಿತ್ರ, ಮಾಹಿತಿಗಳ ಸಂಗ್ರಹಕಾರ ಕಾನಕಾನಹಳ್ಳಿ ಗೋಪಿ ಅವರುಗಳು ನಮ್ಮನ್ನಗಲಿದ್ದು ಈ ವರ್ಷದ ಕಹಿನೆನಪು. ಹಿರಿಯ ನಟ ಕೆ.ಎಸ್. ಅಶ್ವತ್ಥ್‌ರವರು ಅಭಿನಯ ಜೀವನಕ್ಕೆ ಹೇಳಿದ ವಿದಾಯ, ಪಂಡರೀಬಾಯಿಯವರು ಅಪಘಾತದಲ್ಲಿ ಎಡಗೈ ಕಳೆದುಕೊಂಡ ಆತಂಕಗಳ ಜೊತೆಗೆ ಮರಣಾಂತಿಕ ಕಾಯಿಲೆಯೊಂದಿಗೆ ಬಾಲಣ್ಣ, ತೂಗುದೀಪ ಶ್ರೀನಿವಾಸ್ ಇಡೀ ವರ್ಷ ಹೋರಾಡಿದ್ದು ವಿಷಾದಕರ ಸಂಗತಿಗಳು.

ಡಬ್ಬಿಂಗ್ ಸಂಸ್ಕೃತಿಯ ಬಗ್ಗೆ ಡಾ. ರಾಜ್‌ಕುಮಾರ್ ಅವರೇ ಮತ್ತೊಮ್ಮೆ ದನಿ ಎತ್ತರಿಸಬೇಕಾಯಿತು. ಉರ್ದುವಾರ್ತಾ ಪ್ರಸಾರದ ಬೆಂಗಳೂರು ದೂರದರ್ಶನದ ನಿರ್ಧಾರವನ್ನು ವಾಪಸ್ಸು ಪಡೆಯುವಂತೆ ಮಾಡಿದ್ದು ಕೂಡ ಡಾ. ರಾಜ್‌ರವರ ಪ್ರತಿಭಟನೆಯ ಘೋಷಣೆಯೇ. ಬೆಂಗಳೂರು ಮಹಾನಗರಪಾಲಿಕೆ ವರ್ಷದ ಆರಂಭದಲ್ಲಿ ವಿಧಾನಸೌಧದ ಎದುರು ಡಾ. ರಾಜ್‌ರಿಗೆ ನಾಗರಿಕ ಸನ್ಮಾನ ಮಾಡಿತಲ್ಲದೆ, ರಾಜಾಜಿನಗರದ ೮೦ ಅಡಿ ರಸ್ತೆಗೆ ಅವರ ಹೆಸರಿಟ್ಟು, ಗೌರವಿಸಿತು. 'ಜೀವನ ಚೈತ್ರ' ಅಭಿನಯಕ್ಕಾಗಿ ಶ್ರೇಷ್ಠನಟ ರಾಜ್ಯಪ್ರಶಸ್ತಿ ಪಡೆದ ರಾಜ್ 'ಒಡಹುಟ್ಟಿದವರು' ಚಿತ್ರದ ಅಭಿನಯಕ್ಕಾಗಿ ಆ ಪ್ರಶಸ್ತಿಯನ್ನು ಮತ್ತೊಮ್ಮೆ ಪಡೆದರಲ್ಲದೆ, ಶ್ರೇಷ್ಠ ಗಾಯಕ ಪ್ರಶಸ್ತಿಯನ್ನೂ ಪಡೆದ ಪ್ರಥಮ ಗಾಯಕರಾದರು. ಫಿಲಂಫೇರ್ ಶ್ರೇಷ್ಠನಟ ಪ್ರಶಸ್ತಿಯಲ್ಲದೆ ಉದಯ ಟಿ.ವಿ. 'ಕಲಾಶಿಖರ' ಎಂಬ ಬಿರುದನ್ನಿತ್ತು ಗೌರವಿಸಿತು. 'ಒಡಹುಟ್ಟಿದವರು' ೩೪ ಕೇಂದ್ರಗಳಲ್ಲಿ ಶತದಿನೋತ್ಸವ ಆಚರಿಸಿ ದಾಖಲೆ ನಿರ್ಮಿಸಿತು. ಡಾ.ರಾಜ್‌ರ ಮೂರು ಚಿತ್ರಗಳ ಯಶಸ್ಸಿನ 'ತ್ರಿವಳಿ ಸಮಾರಂಭ' ವು ವರ್ಷದ ಏಕೈಕ ಸಿನಿಮಾ ಸಮಾರಂಭ. ' ಜೀವನ ಚೈತ್ರ' ಒಂದು ವರ್ಷ ಪ್ರದರ್ಶನವಾದರೆ 'ಆಕಸ್ಮಿಕ' ಹಾಗೂ 'ಒಡಹುಟ್ಟಿದವರು' ರಜತೋತ್ಸವ ಕಂಡ

ಚಿತ್ರಗಳು. ಇಡೀ ವರ್ಷ ಯಶಸ್ಸು, ಉತ್ಸವಗಳ ಪ್ರತಿರೂಪವಾಗಿ ವಿಜೃಂಭಿಸಿದ ಡಾ. ರಾಜ್ ವರ್ಷದ ಏಕಮೇವಾದ್ವಿತೀಯ ಶ್ರೇಷ್ಠರಾಗಿ ಕಂಗೊಳಿಸಿದರು.

ಈ ವರ್ಷದ ಮತ್ತೊಂದು ಮುಖ್ಯ ವಿಶೇಷ, ರಾಜಕೀಯ ಪುಟಗಳಲ್ಲಿ ಸಿನಿಮಾ ಮಂದಿ ಕಾಣಿಸಿಕೊಂಡಿದ್ದು. ವರ್ಷದ ಆರಂಭದಲ್ಲಿ ಅನಂತನಾಗ್ ರಾಜ್ಯಸಭೆಗೆ ನಾಮಪತ್ರವನ್ನು ಸಲ್ಲಿಸಿ ವಾಪಸ್ಸು ತೆಗೆದುಕೊಂಡರು. ಅವರು ವರ್ಷದ ಕೊನೆಯಲ್ಲಿ ವಿಧಾನಸಭಾ ಚುನಾವಣೆಗೆ ಸ್ಪರ್ಧಿಸಿ ಗೆದ್ದರು. ಚುನಾವಣೆಗೆ ನೇರವಾಗಿ ಧುಮುಕಿದ ಇತರ ಕಲಾವಿದರೆಂದರೆ ಅಶೋಕ್, ಮುಖ್ಯಮಂತ್ರಿ ಚಂದ್ರು, ವಜ್ರಮುನಿ, ಉಮಾಶ್ರೀ, ಸುಧೀರ್, ಸುಂದರರಾಜ್, ಎಂ.ಪಿ. ಶಂಕರ್, ರಾಜ್ ಬಲ್ಲಾಳ್ ಹಾಗೂ ನರೇಂದ್ರ ಬಾಬು (ನಟ). ಇವರಲ್ಲಿ ವಜ್ರಮುನಿ ಹಾಗೂ ಚಂದ್ರುರವರನ್ನು ಬಿಟ್ಟು ಉಳಿದವರೆಲ್ಲರೂ ಠೇವಣಿ ಕಳೆದುಕೊಂಡರು. ನಿರ್ಮಾಪಕ ಸಂದೇಶ್ ನಾಗರಾಜ್‌ರವರನ್ನು ಜನತಾದಳದ ಮೂಲಕ ವಿಧಾನಪರಿಷತ್ ಚುನಾವಣೆಗೆ ಬೆಂಬಲಿಸಿ ಅಂಬರೀಶ್ ಸುದ್ದಿಮಾಡಿದರು. ಕೆಲದಿನಗಳಲ್ಲೆ ಪ್ರಧಾನಿ ನರಸಿಂಹರಾಯರ ಸಮ್ಮುಖದಲ್ಲಿ ಅವರು ಕಾಂಗ್ರೆ ಸೇರಿದರು. 'ಹೊಸನೀರು' ಚಿತ್ರದ ನಿರ್ಮಾಪಕ ಸಚ್ಚಿದಾನಂದ ಅವರು ವಿಧಾನ ಪರಿಷತ್‌ಗೆ ಆಯ್ಕೆಯಾದರು. ಈ ಸಲದ ವಿಧಾನಸಭಾ ಚುನಾವಣೆಯಲ್ಲಿ ವಿವಿಧ ಪಕ್ಷಗಳ ಪರವಾಗಿ ಹಿಂದೆಂದಿಗಿಂತಲೂ ಹೆಚ್ಚುಮಂದಿ ಕಲಾವಿದರು ಪ್ರಚಾರಕ್ಕೆ ಇಳಿದಿದ್ದರು.

ಒಟ್ಟಾರೆ, ೧೯೯೪ರ ಚಿತ್ರರಂಗದ ಒಟ್ಟು ಚಟುವಟಿಕೆಗಳಲ್ಲಿ ಕಂಡ ಗೊಂದಲ ಪ್ರೇಕ್ಷಕರಲ್ಲೂ ಕಾಣಿಸಿಕೊಂಡಿತು. ಚಿತ್ರಕರ್ತೃಗಳ ಗುರಿಯಿಲ್ಲದ ಪ್ರಯತ್ನಗಳು, ಅಭಿರುಚಿ ಬೆಳೆಸಿಕೊಳ್ಳಲಾಗದ ಪರಿಸ್ಥಿತಿಯಲ್ಲಿ ಪರಭಾಷಾ ಚಿತ್ರಗಳ ಮೊರೆಹೊಕ್ಕ ಪ್ರೇಕ್ಷಕರು- ಇವು ಒಟ್ಟು ನೋಟಕ್ಕೆ ದಕ್ಕಿದ ಚಿತ್ರಗಳಾಗಿ ಉಳಿದವು.

# ಸಂಗೀತ

## i) ಹಿಂದುಸ್ತಾನಿ ಸಂಗೀತ

*ಹನುಮಣ್ಣ ನಾಯಕ ದೊರೆ.*

ಕರ್ನಾಟಕಕ್ಕೆ ಹಿಂದುಸ್ತಾನಿ ಸಂಗೀತಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿಶಿಷ್ಟಪೂರ್ಣವಾದ ಸ್ಥಾನವಿದೆ. ಭಾರತದ ಉತ್ತರ ರಾಜ್ಯಗಳಿಗೆ ಹಿಂದುಸ್ತಾನೀ ಸಂಗೀತ ಪದ್ಧತಿಯೂ ದಕ್ಷಿಣದ ಆಂಧ್ರ, ಕೇರಳ, ತಮಿಳುನಾಡುಗಳಲ್ಲಿ ಕರ್ನಾಟಕ ಸಂಗೀತ ಪದ್ಧತಿಯೂ ಪ್ರಚಲಿತವಾಗಿವೆ. ಆದರೆ, ಕರ್ನಾಟಕದಲ್ಲಿ ಮಾತ್ರ ಎರಡೂ ಶೈಲಿಗಳು ಇದ್ದು, ಅವು ಉಚ್ಛ್ರಾಯಸ್ಥಿತಿಯಲ್ಲಿ ಬೆಳೆದುನಿಂತಿವೆ. ಹಿಂದುಸ್ತಾನೀ ಸಂಗೀತದ ಪ್ರಮುಖ ಘರಾಣೆಗಳಾಗಿರುವ ಗ್ವಾಲಿಯರ್, ಆಗ್ರಾ, ಜೈಪುರ, ಕಿರಾಣ `ಇವುಗಳಿಗೆ ಕರ್ನಾಟಕವು ಹಿಂದಿನಿಂದಲೂ ನೆಲೆವೀಡಾಗಿದೆ. ಇವುಗಳಲೆಲ್ಲ ಹೆಚ್ಚು ಪ್ರಚಲಿತವಾಗಿರುವವೂ ಪ್ರಸಿದ್ಧವಾಗಿರುವವೂ ಎಂದರೆ, ಕಿರಾಣಾ ಹಾಗೂ ಗ್ವಾಲಿಯರ್ ಘರಾಣಗಳೇ.

ಕರ್ನಾಟಕದಲ್ಲಿ ಹಿಂದುಸ್ತಾನೀ ಸಂಗೀತಕ್ಷೇತ್ರಕ್ಕೆ ಅಡಿಪಾಯ ಹಾಕಿದವರೆಂದರೆ- ಉಸ್ತಾದ್ ಫಯಾಜ್‌ಖಾನ್, ಭೂಗಂಧರ್ವ ರಹಮತ್‌ಖಾನ್, ಸಿತಾರರತ್ನ ರಹಮತ್‌ಖಾನ್, ಉಸ್ತಾದ ವಹೀದ್‌ಖಾನ್, ಪಂಡಿತ್ ನೀಲ ಕಂಠಬುವಾ, ಗಾನಯೋಗಿ ಪಂಚಾಕ್ಷರಿಗವಾಯಿಗಳು, ಸವಾಯಗಂಧರ್ವ, ಡಾ. ಮಲ್ಲಿಕಾರ್ಜುನ ಮನಸೂರ, ಡಾ. ಬಸವರಾಜ ರಾಜಗುರು, ಡಾ. ಗಂಗೂಬಾಯಿ ಹಾನಗಲ್, ಪಂ. ಭೀಮಸೇನಜೋಶಿ, ಉಸ್ತಾದ್ ಎ. ಕರೀಮ್‌ಖಾನ್, ಮೊದಲಾದವರು! ಕರ್ನಾಟದಲ್ಲಿ ನಡೆಯುವ ಹಿಂದುಸ್ತಾನೀ ಸಂಗೀತಕ್ಕೆ ಸಂಬಂಧಿಸಿದ ಅನೇಕ ಚಟುವಟಿಕೆಗಳಿಗೆ ಮೇಲ್ಕಾಣಿಸಿದ ಕೆಲವು ಮಹಾನ್‌ಗುರುಗಳ ನೆನಪಿನಲ್ಲಿ ಅವರ ಶಿಷ್ಯರು ಸಲ್ಲಿಸುವ ಸಂಗೀತಸೇವೆಯೂ ಕಾರಣ ಆಗಿದೆ.

ಹಿಂದುಸ್ತಾನೀ ಸಂಗೀತಕ್ಕೆ ಸಂಬಂಧಿಸಿದಂತೆ ೧೯೯೪ ರ ಎಲ್ಲ ವಿದ್ಯಮಾನಗಳನ್ನು ಕುರಿತು ಬರೆಯುವುದು ಈ ಕಿರುಲೇಖನದಲ್ಲಿ ಕಷ್ಟಸಾಧ್ಯ. ಆದ್ದರಿಂದ ಕೆಲವೇ ಘಟನೆಗಳನ್ನು ಇಟ್ಟುಕೊಂಡು ಚರ್ಚಿಸಲು ಬಯಸುತ್ತೇನೆ. ಸಂಗೀತವು ಹುಟ್ಟಿಬೆಳೆದದ್ದೇ ಜನರ ಮಿಡಿತಗಳಿಂದ. ಅದು ಹೋಗಿ ಬೆರೆತು, ಸೇರಬೇಕಾದುದು ಜನರಲ್ಲಿಯೇ. ಹೀಗಿರುವಾಗ ಎಲ್ಲೋ ಒಂದಷ್ಟು ಸಂಗೀತಕಾರ್ಯಕ್ರಮಗಳು, ಕೆಲವೇ ಜನರು ಸೇರಿ ಕೆಲವೇ ಜನರಿಗಾಗಿ ಮಾಡುವ ಸೆಮಿನಾರುಗಳು, ಪ್ರಶಸ್ತಿ ಪ್ರದಾನ ಸಮಾರಂಭಗಳು, ಕೆಲವೇ ಪ್ರಕಟಣೆಗಳು, ಕಲಾವಿದರಿಗೆ ಅಲ್ಪಸ್ವಲ್ಪ ಪ್ರೋತ್ಸಾಹಧನ - ಶಿಷ್ಯವೇತನ, ಪಿಂಚಣಿ- ಇತ್ಯಾದಿ ಚಟುವಟಿಕೆಗಳು ತುಂಬ ಕೃಶವಾದ ವಿದ್ಯಮಾನಗಳು ಅನಿಸುತ್ತವೆ.

ಸಂಗೀತ ಸಂಬಂಧವಾದ ಬಹುತೇಕ ಚಟುವಟಿಕೆಗಳೆಲ್ಲ ವೇದಿಕೆ ಕಾರ್ಯಕ್ರಮಗಳಾಗಿವೆಯೇ ವಿನಾ, ಸಂಗೀತ ಕ್ಷೇತ್ರದ ಅಭಿವೃದ್ಧಿಗೆ ಪೂರಕವಾಗುವ ಶಾಸನಗಳಾಗಲಿ ಹೊಸ ಯೋಜನೆ- ಯೋಚನೆಗಳಾಗಲಿ ಕಮ್ಮಿಯೆಂದೇ ಹೇಳಬೇಕು. ಸಂಗೀತ ಸಂಸ್ಥೆಗಳು ಕಲಿಕಾಕೇಂದ್ರಗಳು, ಹಾಗೂ ಮಹತ್ವಪೂರ್ಣವಾದ ಸಂಗೀತವೇದಿಕೆಗಳು ಈ ಅವಧಿಯಲ್ಲಿ ಸೃಷ್ಟಿಗೊಂಡಿಲ್ಲ.

ಗದುಗಿನ 'ವೀರೇಶ್ವರ ಪುಣ್ಯಾಶ್ರಮ' ಎಂದರೆ ಗಾನಯೋಗಿ ಪಂಚಾಕ್ಷರಿ ಗವಾಯಿಗಳು ಕಂಡ ಕನಸು ಹಾಗೂ ಬಸರೀಗಿಡದ ವೀರಪ್ಪನವರ ನೆಲವು ಕೂಡಿ ರೂಪುಗೊಂಡ ನಾದಲೋಕವಾಗಿದೆ. ಗವಾಯಿಗಳು ಹುಟ್ಟುಕುರುಡರಾಗಿದ್ದರೂ ಅನೇಕರಿಗೆ ಸಂಗೀತದ ಕಣ್ಣನ್ನು ಕೊಟ್ಟವರು. ಸಮಾಜದಿಂದ ತಂದುದನ್ನು ತಮ್ಮ ಶಿಷ್ಯರಿಗೆ ಉಣಬಡಿಸಿ, ಉಡಬಡಿಸಿ ಕೆರೆಯ ನೀರನ್ನು ಕೆರೆಗೆ ಚೆಲ್ಲಿಹೋದರು. ಪಂ. ಬಸವರಾಜ ರಾಜಗುರು, ಪಂ. ಪುಟ್ಟರಾಜ ಗವಾಯಿಗಳು, ಪಂ. ಸಿದ್ಧರಾಮ ಜಂಬಲದಿನ್ನಿ, ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಚಂದ್ರಶೇಖರ ಪುರಾಣಿಕಮಠ ಮುಂತಾದ ಗವಾಯಿಗಳ ಶಿಷ್ಯರು ಈ ವೀರೇಶ್ವರ ಪುಣ್ಯಾಶ್ರಮದಲ್ಲಿ ಪ್ರತಿರುಷವೂ ಜ್ಯೇಷ್ಠಬಹುಳ ಪಂಚಮಿಯಂದು ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಪುಣ್ಯ ದಿನವನ್ನು ಅದ್ದೂರಿಯಿಂದ ಆಚರಿಸುತ್ತಾರೆ. ಮೂರುದಿನ ಮೂರುರಾತ್ರಿ ನಾದದ ಮಳೆಮಳೆ ಸುರಿಯುತ್ತದೆ. ಈ ಸಲ ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ ಎಂ. ವೆಂಕಟೇಶಕುಮಾರ, ತಬಲಪಟು ರಘುನಾಥನಾಕೋಡ, ಪಂ. ಶೇಷಾದ್ರಿ ಗವಾಯಿಗಳು, ಇನ್ನೂ ಅನೇಕ ಸಂಗೀತಗಾರರು ಸಂಗೀತಸೇವೆ ಸಲ್ಲಿಸಿದರು. ಅಲ್ಲಿ ಸಾವಿರಾರು ಜನ ಸೇರುತ್ತಾರೆ. ಹಾಡುತ್ತಾರೆ, ನುಡಿಸುತ್ತಾರೆ. ಆಲಿಸುತ್ತಾರೆ.

ಗಾನಯೋಗಿಗಳ ಉತ್ತರಾಧಿಕಾರಿಗಳಾಗಿರುವ ಪುಟ್ಟರಾಜ ಗವಾಯಿಗಳು ತಮ್ಮ ಗುರುಗಳ ಕನಸನ್ನು ಒಂಚೂರೂ ಭಗ್ನಗೊಳಿಸದೆ ನನಸಾಗಿಸಿ ಜೋಪಾನಮಾಡಿಕೊಂಡು ಹೊರಟಿದ್ದಾರೆ. ಅನ್ನ ಬಟ್ಟೆ ಕೊಟ್ಟು ಸಂಗೀತವನ್ನು ಕಲಿಸುತ್ತಾರೆ. ಇಂಥ ವ್ಯವಸ್ಥೆ ನೋಡಸಿಗುವುದು ಬಹಳ ಅಪರೂಪವೇ. ಇತ್ತೀಚೆಗೆ ಅಮೆರಿಕಾದವರು ತುಂಬಾ ಹಣವನ್ನು ಈ ಆಶ್ರಮದ ಬೆಳವಣಿಗಾಗಿ ಕೊಟ್ಟಿದ್ದಾರೆ. ಇಲ್ಲಿಯ ಸಾರ್ವಜನಿಕರೂ ಸಾಕಷ್ಟು ಸಹಾಯ ಮಾಡಿದ್ದಾರೆ. ಗಾನಯೋಗಿಗಳ ಪುಣ್ಯತಿಥಿಯನ್ನು ವರ್ಷವಿಡೀ ಒಂದಿಲ್ಲೊಂದು ಕಡೆ ಆಚರಿಸುತ್ತಾರೆ. ರಾಯಚೂರು, ಕಲಬುರಗಿ, ಬೀದರ, ಬೆಂಗಳೂರು, ಬಳ್ಳಾರಿ, ಮುಂತಾದ ಸ್ಥಳಗಳನ್ನು ಉಲ್ಲೇಖಿಸಬಹುದು.

ಹಿಂದುಸ್ತಾನೀ ಸಂಗೀತಕ್ಷೇತ್ರದ ಪ್ರಮುಖ ಘರಾಣೆಗಳಲ್ಲಿ ಒಂದಾದ ಕಿರಾಣ ಘರಾಣೆಯನ್ನು ಕರ್ನಾಟಕಕ್ಕೆ ತಂದವರು 'ಸವಾಯಿ ಗಂಧರ್ವ' ರೆಂದೇ ಪ್ರಖ್ಯಾತರಾದ ರಾಮಭಾವು ಕುಂದಗೋಳಕರರು. ಕಿರಾಣೆಯ ಪ್ರವರ್ತಕ ಉಸ್ತಾದ್ ಅಬ್ದುಲ್ ಕರೀಮ್‌ಖಾನ್‌ರ ಶಿಷ್ಯರಿವರು. ಇವರ ಗರಡಿಯಲ್ಲಿ ಡಾ. ಗಂಗೂಬಾಯಿ ಹಾನಗಲ್, ಪಂ. ಭೀಮಸೇನ ಜೋಶಿ, ಫಿರೋಜ್ ದಸ್ತೂರ್, ಮುಂತಾದ ಘಟಾನುಘಟಿಗಳು ತಯಾರಾದರು.

ಕುಂದಗೋಳದಲ್ಲಿ ಪ್ರತಿ ವರುಷದಂತೆ ಈ ಸಲವೂ ಅವಿಧವಾ ನವಮಿಯ ಸಂದರ್ಭದಲ್ಲಿ ಮೂರು ಹಗಲು ಮೂರು ರಾತ್ರಿ ಸವಾಯಿ ಗಂಧರ್ವರ ಪುಣ್ಯತಿಥಿಯನ್ನು ಆಚರಿಸಲಾಯಿತು. ದೇಶದ ಅನೇಕ ಪ್ರಸಿದ್ಧ ಸಂಗೀತಗಾರರು ಸೇವೆಸಲ್ಲಿಸಿದರು. ಇದೊಂದು ಸಂಗೀತ ಜಾತ್ರೆಯೆಂದೇ ಹೇಳಬೇಕು. ಪಂ. ಭೀಮಸೇನ ಜೋಶಿಯವರು ಅನುಕೂಲ ಮಾಡಿಕೊಂಡು ಕೆಲವು ಸಲ ಬರುತ್ತಾರೆ. ತಾವು ವಾಸವಾಗಿರುವ ಪುಣೆಯಲ್ಲಿ ಸವಾಯಿಗಂಧರ್ವದ ಪುಣ್ಯತಿಥಿಯ ನಿಮಿತ್ತ ಸಂಗೀತೋತ್ಸವವನ್ನು ಪ್ರತಿ ವರುಷ ವಿಜೃಂಭಣೆಯಿಂದ ಆಚರಿಸುತ್ತಾರೆ. ಕುಂದಗೋಳದ ಸಂಗೀತ ಸಮಾರೋಹದ ಕೊನೆಯಲ್ಲಿ ಡಾ. ಗಂಗೂಬಾಯಿ ಹಾನಗಲ್ಲರು ತಮ್ಮ ಗುರುಗಳ ಸ್ಮರಣಾರ್ಥ ಭೈರವಿ ಹಾಡುವುದು ವಾಡಿಕೆ. ಈ ಉತ್ಸವದಲ್ಲಿ ಕರ್ನಾಟಕದ ಹಾಗೂ ಹೊರನಾಡಿನ ಅದರಲ್ಲೂ ವಿಶೇಷವಾಗಿ ಮಹಾರಾಷ್ಟ್ರದ ಕಲಾವಿದರು ಭಾಗವಹಿಸಿದ್ದರು.

ಚಳಿಗಾಲದಲ್ಲಿ ಕರ್ನಾಟಕಕ್ಕೆ ಒಂದು ಬಿಸಿಬಿಸಿ ಸುದ್ದಿ ಬಂತು. ಈ ಬಿಸಿಗೆ ನಮ್ಮ ಜನ ಪುಳಕಿತರಾಗುವಂತಾಯಿತು. ಮಧ್ಯಪ್ರದೇಶ ಸರಕಾರವು ನಮ್ಮ ಹಿರಿಯ ಸಂಗೀತಶಾರದೆ ಡಾ. ಗಂಗೂಬಾಯಿ ಹಾನಗಲ್ ಅವರಿಗೆ ಈ ಬಾರಿಯ 'ಶಂಕರದೇವ ಪ್ರಶಸ್ತಿ' ಯನ್ನು ಕೊಡಮಾಡಿತು. ಕರ್ನಾಟಕದ ಮುಕುಟಕ್ಕೆ ಇನ್ನೊಂದು ಗರಿ ಮುಡಿಸಿದಂತಾಯಿತು. ಡಾ. ಗಂಗೂಬಾಯಿಯವರು ನಮ್ಮ ನಾಡಿಗೆ ಇನ್ನೊಂದು ಕೀರ್ತಿತಂದು, ಕರ್ನಾಟಕವನ್ನು ಲೋಕಕ್ಕೆ ಬೆಳಗಿತೋರಿದರು. ಡಾ. ಗಂಗೂಬಾಯಿ ಹಾನಗಲ್‌ರು ಸವಾಯಿ ಗಂಧರ್ವರ ಪ್ರಮುಖ ಶಿಷ್ಯೆಯರಲ್ಲೊಬ್ಬರು. ಆಗಾಧವಾದ ಸಂಗೀತ ವಿದ್ವತ್ತು, ಜ್ಞಾನ, ಸಾಧನೆ ಅವರದು. ಮಹಿಳೆಯೊಬ್ಬರು ಸಂಗೀತ ಕ್ಷೇತ್ರದಲ್ಲಿ ಗಟ್ಟಿಯಾಗಿ ನಿಂತು ಮಹತ್ತರವಾದನ್ನು ಸಾಧಿಸಬಹುದಾದ ಸಾಧ್ಯತೆಗಳನ್ನು ಸಾಬೀತುಪಡಿಸಿದವರು. ಗಂಡುಧ್ವನಿ, ಗಂಭೀರ ಗಾಯನ, ಅಪಾರವಾದ ಆಳ-ಅಗಲಗಳನ್ನು ಹೊಂದಿದ ಸಂಗೀತ ಪ್ರತಿಭೆ ಅವರದು.

ದಿ. ಉಸ್ತಾದ್ ಅಲ್ಲಾದಿಯಾಖಾನರು ಜೈಪುರ, ಅತ್ರಾಲಿ ಘರಾಣೆಯ ಪ್ರವರ್ತಕರು. ಈ ಅಪರೂಪದ ಘರಾಣೆಯನ್ನು ಕರ್ನಾಟಕಕ್ಕೆ ತಂದವರು. ಪಂ. ಮಲ್ಲಿಕಾರ್ಜುನ ಮನಸೂರರು. ಅಲ್ಲಾದಿಯಾ ಖಾನರ ನಂತರ ಅವರ ಮಕ್ಕಳಾದ ಉಸ್ತಾದ್ ಮಂಜೀಖಾನ್, ಬುರ್ಜೀಖಾನರ ಬಳಿ ಕಲಿತವರು. ಧಾರವಾಡದಲ್ಲಿ ಅಲ್ಲಾದಿಯಾಖಾನರ ನೆನಪಿನಲ್ಲಿ ಸಂಗೀತ ಸಮ್ಮೇಳನವನ್ನು ಸುಮಾರು ಹದಿನೈದು ವರುಷಗಳಿಂದ ಮನಸೂರ ಕುಟುಂಬದ ಸದಸ್ಯರೂ ಅವರ ಸ್ನೇಹಿತರೂ ಸೇರಿ ಆಚರಿಸುತ್ತಾರೆ. ಈ ಸಲ ಈ ಸಮ್ಮೇಳನದಲ್ಲಿ ಪ್ರೊ. ರಾಜಶೇಖರ ಮನಸೂರ, ಡಾ. ಕಮಲ ಪುರಂದರೆ, ಎಂ. ವೆಂಕಟೇಶ ಕುಮಾರ, ಕೈವಲ್ಯಕುಮಾರ ಗುರವ ಮುಂತಾದವರು ಹಾಡಿದರು. ಪ್ರೊ. ರಾಜಶೇಖರ ಮನಸೂರರ ಗಾಯನವು ಅಪ್ಪ ಮಲ್ಲಿಕಾರ್ಜುನ ಮನಸೂರರ ಅಪ್ಪಟ ಪ್ರತಿರೂಪ. ಜೈಪುರ ಘರಾಣೆಯ ಅಸಲಿತನ. ಅಪ್ಪನ ಗಾಯನ ಶೈಲಿಯ ನೊಗಹೊತ್ತ ಹೆಗಲಾಳು.

ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿಯವರು ಮಲ್ಲಿಕಾರ್ಜುನ ಮನಸೂರರ ಶಿಷ್ಯರಲ್ಲಿ ಪ್ರಮುಖರು. ನಿವೃತ್ತಿ ಬುವಾಸರನಾಯಕರ ಮನಸೂರರ, ನೀಲಕಂಠಬುವಾರ ಸಮ್ಮಿಳಿತ ಶೈಲಿ ಇವರದು. ಜೈಪುರ ಘರಾಣೆಯ ಖಾಸಾ ರಾಗಗಳು, ಚೀಜುಗಳು ಇವರ ಬತ್ತಳಿಕೆಯಲ್ಲಿವೆ. ಪಂ. ಮಲ್ಲಿಕಾರ್ಜುನ ಮನಸೂರರು ಅನೇಕ ಶಿಷ್ಯರಿಗೆ ತಮ್ಮ ಗರಡಿಯಲ್ಲಿ ತಾಲೀಮು ಕೊಟ್ಟರು. ಇವರಲ್ಲಿ ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಪಂ. ಸಿದ್ಧರಾಮ ಜಂಬಲದಿನ್ನಿ. ಪ್ರೊ. ರಾಜಶೇಖರ ಮನಸೂರ, ಪ್ರೊ. ರಾಜೀವ ಪುರಂಧರೆ, ಡಾ. ಕಮಲಪುರಂಧರೆ, ಸರಯೂ ಸೊನ್ನಿ ಉಲ್ಲೇಖಾರ್ಹರು. ಮನಸೂರರು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಮಟ್ಟದಲ್ಲಿ ಸಂಗೀತವಿಭಾಗ ತೆರೆಯುವಲ್ಲಿ ಪ್ರಮುಖ ಪಾತ್ರವಹಿಸಿದ್ದವರು. ಅಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಸಂಗೀತ ಕಲಿಯುವ ಏರ್ಪಾಟುಮಾಡಿದ್ದವರು. ಉನ್ನತ ವ್ಯಾಸಂಗದಲ್ಲಿ ಸಂಗೀತವನ್ನು ತಂದದ್ದು ತುಂಬಾ ಮಹತ್ವಪೂರ್ಣ ಕಾರ್ಯ. ಕರ್ನಾಟಕ ವಿಶ್ವವಿದ್ಯಾನಿಲಯದ ಸಂಗೀತ ವಿಭಾಗದ ವೈಶಿಷ್ಟ್ಯವೆಂದರೆ, ವಿವಿಧ ಘರಾಣೆಯ ಸಂಗೀತ ದಿಗ್ಗಜರು ಅಲ್ಲಿ ಕ್ರೋಢೀಕರಣಗೊಂಡಿದ್ದು. ಜೈಪುರ ಘರಾಣೆಯ ಪಂ. ಮಲ್ಲಿಕಾರ್ಜುನ ಮನಸೂರ, ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಪ್ರೊ. ರಾಜೀವಪುರಂದರೆ, ಪಂ. ನಾನಾ ಶೆಡೋಲಿಕರ, ಪದ್ಮಾವತಿಗೋಖಲೆ ಸಾಲಿಗ್ರಾಮ, ಗ್ವಾಲಿಯರ್ ಘರಾಣೆಯ ಪಂ. ಬಸವರಾಜ ರಾಜಗುರು, ಕಿರಾಣಾ ಘರಾಣೆಯ ಡಾ. ಗಂಗೂಬಾಯಿ ಹಾನಗಲ್, ಪಂ. ಸಂಗಮೇಶ್ವರ ಗುರವ, ಠುಮರಿಯ ಜಾನಕಿ ಅಯ್ಯರ್ ಮುಂತಾದವರು ಅಲ್ಲಿ ಕಲಿಸಿದ ಗುರುಗಳು. ಇಷ್ಟು ಜನ ಸಂಗೀತಗಾರರು ಒಂದೇಕಡೆ ಸೇರಿದ್ದು ಅದೊಂದು ಅದ್ಭುತ ಎಂದೇ ಹೇಳಬೇಕು. ಅಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳಿಗೆ ಬೇರೆಬೇರೆ ಗುರುಗಳ ಘರಾಣೆಗಳ ನಿಧಿಯನ್ನು ಪಡೆದುಕೊಂಡ ಭಾಗ್ಯ ಲಭಿಸಿತೆಂದೇ ಹೇಳಬೇಕು. ಮಲ್ಲಿಕಾರ್ಜುನ ಮನಸೂರರು ವಿದ್ಯಾರ್ಥಿಗಳನ್ನು ಕೇವಲ ಪದವೀಧರನ್ನಾಗಿ ಮಾಡಲಿಲ್ಲ. ಉತ್ತಮಗಾಯಕರನ್ನಾಗಿ ಮಾಡಿದರು.

ಇತ್ತೀಚೆಗೆ ಒಂದು ಫ್ಯಾಶನ್ ತೀವ್ರವಾಗಿದೆ. ವಿದೇಶಗಳಲ್ಲಿ ಕಾರ್ಯಕ್ರಮ ಕೊಡುವುದು. ಕೆಲವು ಸಲ ಇಂಥ ಸಂಗೀತಗಾರರನ್ನು ಬಹುದೊಡ್ಡ ಕಲಾವಿದರೆಂದೋ ಅಂತಾರಾಷ್ಟ್ರಮಟ್ಟದವರೆಂದೋ ಹೇಳತೊಡಗುವುದೂ ಉಂಟು. ನಾವು ಎಂ. ಎ. ಸಂಗೀತ ವ್ಯಾಸಂಗದಲ್ಲಿದ್ದಾಗ ಸಂಗೀತ ವಿಭಾಗದ ಅಧ್ಯಕ್ಷರಾಗಿದ್ದ, ಸಂಗೀತ ಮೇರು ಪಂ. ಮಲ್ಲಿಕಾರ್ಜುನ ಮನಸೂರರನ್ನು ಒಮ್ಮೆ ಕೇಳಿದ್ದೆವು. ''ಅಜ್ಜ ಅವರೇ, ನೀವೇಕೆ ಫಾರಿನ್ನಿಗೆ ಹೋಗಿಲ್ಲ'' ಎಂದು. ಆಗ ಅವರು ಹೇಳಿದ ಮಾತು ಸ್ಮೃತಿಪಟಲದಲ್ಲಿ ಇನ್ನೂ ಹಸಿಹಸಿಯಾಗಿದೆ. ''ಅಲ್ಲಿ ಯಾರಿಗೆ ನಮ್ಮ ಸಂಗೀತ ತಿಳೀತೈತೋ ತಮ್ಮಾ. ಧಾರವಾಡದಾಗ ಹಾಡಿ ಸೈ ಅನಿಸಿಕೊಂಡ್ರ ಸಾಕಪಾ'' ಎಂದು ಬಿಟ್ಟರು. ಈ ಮಾತಿನ ಸತ್ಯ ಸಿಡಿಲಿನಷ್ಟು ಪ್ರಖರವಾದದ್ದು. ಅಷ್ಟೇ ಸ್ಫಟಿಕಸ್ಪಷ್ಟವಾದದ್ದು. ಧಾರವಾಡವು ಸಂಗೀತದ ಕೇಂದ್ರಸ್ಥಾನ ಹೇಗೋ ಸಂಗೀತಗಾರರಿಗೆ ಸತ್ವಪರೀಕ್ಷಾಸ್ಥಳವೂ ಹೌದು.

ಸಂಗೀತಗಾರನ ಗುಣಮಟ್ಟ ಅಳೆಯುವಲ್ಲಿ ಅವನ ವಿದೇಶ ಪ್ರವಾಸವೊಂದೇ ಮಾನದಂಡವಾಗಲಾರದು. ವಿದೇಶಗಳಲ್ಲಿ ಸಂಗೀತ ಚಟುವಟಿಕೆಗಳು ನಡೆಯುವುದನ್ನು ಒಂದು ಸಾಂಸ್ಕೃತಿಕ ವಿನಿಮಯ ಹಾಗೂ ಲೋಕಾನುಭವ ಎಂದು ತಿಳಿದುಕೊಂಡರೆ ಸಾಕೆನಿಸುತ್ತದೆ. ಇದು ಸಂಗೀತಕ್ಷೇತ್ರದ ವಿಸ್ತರಣೆಗೆ ಅನುಕೂಲ, ಕೆಟ್ಟದ್ದಲ್ಲ. ಧಾರವಾಡದ ಪಂ. ಮಾಧವಗುಡಿಯವರು, ಸಂಗೀತ ದಿಗ್ಗಜ ಪಂ. ಭೀಮಸೇನ ಜೋಶಿಯವರ ಶಿಷ್ಯರು. ಗುರುಗಳ ಗಾಯನದ ಜೀವವಾಹಿನಿಯ ಹಾಗೆ. ಬಹ್ರೇನ್, ಮಸ್ಕತ್ ದೇಶಗಳಲ್ಲಿರುವ ಕನ್ನಡಿಗರು ಗುಡಿಯವರ ಗಾಯನವನ್ನು ಒಮ್ಮೆ ಕೇಳಿದ್ದೇ ತಡ ತಮ್ಮಲ್ಲಿಗೆ ಆಹ್ವಾನಿಸಿಯೇ ಬಿಟ್ಟರು. 'ಹಿಂದೂಸ್ತಾನೀ ಉತ್ಸವ' ದಲ್ಲಿ ಇವರ ಗಾಯನ ಏರ್ಪಟ್ಟಿತು. ಬಹುತೇಕ ಶ್ರೋತೃಗಳು ಭಾರತೀಯರು. ಅಲ್ಲಿಯ ಜನರಿಗೆ ಅಷ್ಟಾಗಿ ನಮ್ಮ ಸಂಗೀತದ ಬಗ್ಗೆ ಆಸಕ್ತಿ ಇಲ್ಲವೆಂದು ಗುಡಿಯವರು ಹೇಳಿದರು. ಆದರೂ ಅಲ್ಲಿನ ಭಾರತೀಯ ಸಾಂಸ್ಕೃತಿಕ ಕೇಂದ್ರದವರ ಈ ಕಾರ್ಯ ಸುತ್ಯಾರ್ಹವಾದುದು.

ಪಂ. ಬಸವರಾಜ ರಾಜಗುರುಗಳು ಕರ್ನಾಟಕದ ಹಿಂದುಸ್ತಾನೀ ಸಂಗೀತಕ್ಷೇತ್ರದ ಪಂಚತಾರೆಗಳಲ್ಲಿ ಒಬ್ಬರು. (ಪಂ. ಭೀಮಸೇನ ಜೋಶಿ, ಡಾ. ಮಲ್ಲಿಕಾರ್ಜುನ ಮನಸೂರ, ಡಾ. ಗಂಗೂಬಾಯಿ ಹಾನಗಲ್, ಪಂ. ಕುಮಾರ್ ಗಂಧರ್ವ, ಪಂ. ಬಸವರಾಜ ರಾಜಗುರು ಇವರೇ ಆ ಪಂಚತಾರೆಗಳು, ಪಂ. ರಾಜಗುರುಗಳು ಅದ್ಭುತ ಗಾಯಕರು. ಅವರದು ಮೋಹಕ, ಶೃಂಗಾರಪೂರ್ಣ ವಿದ್ವತ್ಪೂರ್ಣ ಗಾಯನ. ಮಿಂಚಿನಂತಹ ಸೆಳಕಿನ ಅವರ ಗಾಯನದಿಂದ ಶ್ರೋತೃಗಳು ಮೋಡಿಗೊಳಗಾಗುತ್ತಿದ್ದರು. ಕಿರಾಣಾ, ಗ್ವಾಲಿಯರ್, ಪಟಿಯಾಲಾ ಘರಾಣೆಗಳ ಹದ ಅವರಲ್ಲಿತ್ತು. ತಾವು ಬೆಳೆದುದೂ ಅಲ್ಲದೆ ತಮ್ಮ ಅಪಾರ ಸಂಗೀತ ಸಂಪತ್ತನ್ನು ಅನೇಕ ಶಿಷ್ಯರಿಗೆ ದಾನಮಾಡಿದ ಮಹಾದಾನಿ ಅವರು. ಇವರ ಸ್ಮರಣಾರ್ಥವಾಗಿ ಇವರ ಅನೇಕ ಶಿಷ್ಯರು, ಅಭಿಮಾನಿಗಳು ಸೇರಿ ನಾಡಿನ ಹಲವಾರು ಕಡೆ ಸಂಗೀತ ಸಮಾರೋಹ ನಡೆಸುತ್ತಾರೆ. ಧಾರವಾಡ, ಗುಲಬರ್ಗಾ, ಬಾಂಬೆ, ಬೆಂಗಳೂರು, ಗೋವಾ- ಮುಂತಾದ ಸ್ಥಳಗಳನ್ನು ಉದಾಹರಿಸಬಹುದು.

ಧಾರವಾಡದ ಕಲಾಭವನದಲ್ಲಿ ನಡೆದ ಈ ಹಿನ್ನೆಲೆಯ ಸಮಾರಂಭದಲ್ಲಿ, ಇನ್ನೊಬ್ಬ, ಸಂಗೀತಗಾರ ಪಂ. ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ, ಎಂ. ವೆಂಕಟೇಶ ಕುಮಾರ ಹಾಗೂ ಪಂ. ರಾಜಗುರುಗಳ ಇತರ ಶಿಷ್ಯರು ಭಾಗವಹಿಸಿದ್ದರು. ಪಂ. ಮತ್ತಿಕಟ್ಟಿಯವರು ಸಾಜಗಿರಿ ರಾಗವನ್ನು ಕೇವಲ ಹತ್ತುನಿಮಿಷ ಹಾಡಿ ಮುಗಿಸಿ ಎದ್ದುಬಿಟ್ಟರಂತೆ. ವೇದಿಕೆಯ ಮೇಲೆ ಆಸೀನರಾಗಿದ್ದ ಒಬ್ಬ ಸ್ವಾಮೀಜಿಯವರ ತನಕ ಹೋಗಿ (ನಮಸ್ಕರಿಸಲೆಂದೋ ಏನೋ,) ಅದೇ ವೇಗದಲ್ಲಿ ಸರಕ್ಕನೆ ಹೊರಳಿ ಮೈಕಿನ ಹತ್ತಿರ ಬಂದು, ತಮ್ಮ ಮಾವ ಪಂ. ರಾಜಗುರುಗಳ ಬಗ್ಗೆ ಮಾತಾಡುತ್ತ ಭಾವುಕರಾಗಿ ಅಳತೊಡಗಿದರಂತೆ. ಇವರು ಜೈಪುರ ಘರಾಣೆಯ ಅತಿರಥರಲ್ಲೊಬ್ಬರು.

ಮಲ್ಲಿಕಾರ್ಜುನ ಮನಸೂರರ ಶಿಷ್ಯರು. ಗುರುಗಳ ಸ್ಥಾನ ತುಂಬ ಬಲ್ಲ ಸಮರ್ಥರು. ಇವರೂ ಫ್ರಾನ್ಸ್, ಜರ್ಮನಿಗಳಿಗೆ ಹೋಗಿ ಹಾಡಿಬಂದರು.

ಡಿಸೆಂಬರ್ ತಿಂಗಳಲ್ಲಿ ಫ್ರಾನ್ಸ್‌ನ ನಾಲ್ಕುಜನ ಸಂಗೀತಗಾರರು ಹಿಂದೂಸ್ತಾನೀ ಸಂಗೀತ ಅಧ್ಯಯನಕ್ಕಾಗಿ ಕರ್ನಾಟಕಕ್ಕೆ ಬಂದರು. ಧಾರವಾಡ, ಬೆಂಗಳೂರು ಗುಲಬರ್ಗಾಗಳಿಗೆ ಭೇಟಿಕೊಟ್ಟರು. ಲೂಯಿಸ್ ಗನೆಲ್, ಕ್ರಿಸ್ಟೋಫರ್, ಕ್ಲೇರ್‌ಬಾಯ್, ಫ್ರಾನ್ಸಿಸ್ ಎಂಬ ಈ ನಾಲ್ಕು ಜನರು ಧಾರವಾಡದ ಪಂ. ಶಿವಾನಂದ ತರಲಗಟ್ಟಿಯವರ ಬಳಿ ಸಿತಾರ, ಸಂಗೀತ ಕಲಿಯುತ್ತಿದ್ದಾರೆ. ತರಲಗಟ್ಟಿಯವರನ್ನು ತಮ್ಮ ದೇಶಕ್ಕೆ ಅನೇಕಸಲ ಕರೆಸಿಕೊಳ್ಳುತ್ತಿದ್ದಾರೆ. ಗುಲಬರ್ಗಾದ ಶರಣ ಬಸವೇಶ್ವರ ಕಾಲೇಜಿನಲ್ಲಿ ವಿದೇಶೀ ಸಂಗೀತಗಾರರಾಗಿ ಭೂತರಾಗದ 'ಜಬಸೇ ತುಮಿಸನಲಾಗಲೀ' ಹಾಗೂ 'ಹುತ್ತವ ಬಡಿದರೆ ಹಾವು ಸಾಯಬಲ್ಲುದೇ' ಎಂಬ ಕೃತಿಗಳನ್ನು ತುಂಬಾ ಚೆನ್ನಾಗಿ ಹಾಡಿದರು. ಅವರ ಸ್ವರಜ್ಞಾನ, ತಾಳಜ್ಞಾನ ಮೆಚ್ಚುವಂತಹುದು. ಆದರೆ ಉಚ್ಚಾರಣೆ ನಮ್ಮಂತೆ ಇರಲು ಹೇಗೆ ಸಾಧ್ಯ? ಹಾಗೆ ನಿರೀಕ್ಷಿಸಲೂಬಾರದು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಶಿವಾನಂದ ತರಲಗಟ್ಟಿಯವರ ಸಿತಾರವಾದನವಿತ್ತು. ಅವರು ಲಲಿತ ಹಾಗೂ ಭೈರವಿ ರಾಗಗಳನ್ನು ಖುಶಿಯಾಗುವಂತೆ ನುಡಿಸಿದರು. ಇವರಿಗೆ ಸಮರ್ಥವಾಗಿ ತಬಲಾಸಾಥಿ ನೀಡಿದವರು ಪ್ರತಿಭಾನ್ವಿತ ಕಲಾವಿದ ಶಾಂತಲಿಂಗ ದೇಸಾಯಿ ಕಲ್ಲೂರು ಅವರು. ಮೇಡಂ ಗನೆಲ್ ಫ್ರಾನ್ಸಿನಲ್ಲಿ ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮಗಳ ಅಧಿಕಾರಿ. ಅದರ ಅಂಗವಾಗಿ ದೇಶವಿದೇಶ ಸುತ್ತಾಡುತ್ತಿರುತ್ತಾರೆ. ಕಾರ್ಯಕ್ರಮ ಏರ್ಪಡಿಸುತ್ತಾರೆ. ಗುಲಬರ್ಗಾದಲ್ಲಿ ಅವರು ಏರ್ಪಡಿಸಿದ ಕಾರ್ಯಕ್ರಮದಲ್ಲಿ ಪ್ರಸ್ತುತ ಲೇಖನದ ಲೇಖಕನೂ ಹಾಡಿದ್ದನು.

'ಸಿತಾರ ರತ್ನ' ಉಸ್ತಾದ್ ರಹಮತ್‌ಖಾನ್‌ರು ಕರ್ನಾಟಕಕ್ಕೆ ಸಿತಾರ ತಂದ ಪ್ರವರ್ತಕರೆನ್ನಬಹುದು. ಒಮ್ಮೆ ಮೈಸೂರಿನಲ್ಲಿ ಕಾರ್ಯಕ್ರಮ ನೀಡಿ ಪುಣೆಗೆ ಹಿಂದಿರುಗುವಾಗ, ಮಾರ್ಗದ ಮಧ್ಯ ಧಾರವಾಡದಲ್ಲಿ ರಹಿಮಾತಖಾನರು ಕೆಲಕಾಲ ತಂಗಿದ್ದರು. ಆನಂತರ ಅಲ್ಲಿಯ ರಮಣೀಯ ನಿಸರ್ಗಸೌಂದರ್ಯ, ಹಿತವಾದ ವಾತಾವರಣಕ್ಕೆ ಮಾರುಹೋಗಿ ಪುಣೆಬಿಟ್ಟು ೧೯೨೧ ರಲ್ಲಿ ಧಾರವಾಡದಲ್ಲಿ ನೆಲೆಸಿದರು. ೧೯೩೧ ರಲ್ಲಿ 'ಭಾರತೀಯ ಸಂಗೀತ ವಿದ್ಯಾಲಯ' ಎಂಬ ಸಂಗೀತ ಶಾಲೆ ಸ್ಥಾಪಿಸಿ ಅನೇಕರಿಗೆ ಸಿತಾರವಿದ್ಯೆ ಕಲಿಸಿದರು. ಇಂದಿನವರೆಗೂ ಈ ವಿದ್ಯಾಲಯ ಅಸ್ತಿತ್ವದಲ್ಲಿದೆ. ಇವರ ಮಕ್ಕಳು, ಮೊಮ್ಮಕ್ಕಳು, ಹೀಗೆ ವಂಶಜರೆಲ್ಲಾ ಸಿತಾರವಾದನ ಕಲೆಯನ್ನು ಮುಂದುವರೆಸಿಕೊಂಡು ಸಾಗಿದ್ದಾರೆ. ಉಸ್ತಾದ ರಹಮತ್‌ಖಾನರ ಸ್ಮರಣಾರ್ಥ ಧಾರವಾಡ, ಪುಣೆಗಳಲ್ಲಿ ಸಮಗೀತ ಸಮ್ಮೇಳನ ಜರುಗುತ್ತವೆ. ಈಸಲ ಧಾರವಾಡದ ಸಮ್ಮೇಳನದಲ್ಲಿ ಮುಂಬೈಯ ಶಹೀದ ಪರವೇಜ್ (ರಾಗ: ಯಮನ್) ಮಾಲಿನಿ ರಾಜೂರಕರ್ (ರಾಗ: ನಾರಾಯಣ) ಭೋಟೇ ರಹಿಮತ್‌ಖಾನ್ (ರಾಗ: ಪೂರಿಯಾ ಕಲ್ಯಾಣಿ) ಸಂಗೀತ ಸೇವೆ ಸಲ್ಲಿಸಿದರು.

## ii) ಕರ್ನಾಟಕ ಸಂಗೀತ

*ಆರ್. ಎನ್. ಶ್ರೀ ಲತಾ*

ರಾಜ್ಯದಲ್ಲಿ ಕರ್ನಾಟಕ ಸಂಗೀತ ಚಟುವಟಿಕೆಗಳನ್ನು ಪೋಷಿಸುವ ಪ್ರಧಾನ ಮೂಲಗಳು ನಾಲ್ಕು: ಸರ್ಕಾರ, ಸ್ವಾಯತ್ತ ಅಕಾಡೆಮಿಗಳು, ಸ್ವಯಂಸೇವಾ ಸಂಸ್ಥೆ ಮತ್ತು ದೇವಾಲಯಗಳು. ಹಳೆಯ ಮೈಸೂರು ರಾಜ್ಯಕ್ಕೆ ಬಹುತೇಕ ಸೀಮಿತವಾಗಿದ್ದ ಕರ್ನಾಟಕ ಸಂಗೀತವು ಈಚಿನ ವರ್ಷಗಳಲ್ಲಿ ರಾಜ್ಯವ್ಯಾಪಿಯಾಗುತ್ತಿದೆ. ಜೊತೆಯಲ್ಲೇ ಸಂಗೀತ ಕಲಿಯುವವರ, ಕಲಿಸುವವರ ಹಾಗೂ ಸಂಗೀತ ಕಚೇರಿ ನೀಡುವವರ ಸಂಖ್ಯೆ ಕೂಡ ವೃದ್ಧಿಯಾಗುತ್ತಿದೆ.

ಸಂಗೀತ ಕಲೆ ಜನತೆಯನ್ನು ತಲುಪುವ ಮಾಧ್ಯಮಗಳು ನಾಲ್ಕು: ವೇದಿಕೆ ಸಂಗೀತ, ಆಕಾಶವಾಣಿ ಮತ್ತು ದೂರದರ್ಶನ, ಧ್ವನಿಸುರುಳಿ ಮತ್ತು ಶಾಲಾ ಕಾಲೇಜುಗಳಲ್ಲಿಯ ಪಠ್ಯಪತ್ರಿ.

ವರ್ಷದ ಪ್ರಮುಖ ಚಟುವಟಿಕೆಗಳಲ್ಲಿ ಹೆಸರಿನಬಹುದಾದವು-

೧. ಕರ್ನಾಟಕ ಸರ್ಕಾರ ಏರ್ಪಡಿಸುವ ಮೈಸೂರು ದಸರಾ ಸಂಗೀತ ನೃತ್ಯೋತ್ಸವ. ಇದರಲ್ಲಿ ದೇಶದ ಪ್ರಮುಖ ಸಂಗೀತ ವಿದ್ವಾಂಸ ವಿದುಷಿಯರು ಪಾಲ್ಗೊಳ್ಳುತ್ತಾರೆ. ಮೈಸೂರು ಅರಮನೆ ಸಂಭಾಗಣದಲ್ಲಿ ಸಂಗೀತ ಕಾರ್ಯಕ್ರಮಗಳೂ ಮೈಸೂರಿನ ವಿವಿಧ ಕೇಂದ್ರಗಳಲ್ಲಿ ನೃತ್ಯ ಕಾರ್ಯಕ್ರಮಗಳೂ ಜರಗುವುವು.

೨. ಬೆಂಗಳೂರು ಗಾಯನ ಸಮಾಜದ ವಾರ್ಷಿಕ ಸಂಗೀತ ಸಮ್ಮೇಳನ.

೩ ಬೆಂಗಳೂರಿನ ಕರ್ನಾಟಕ ಗಾನಕಲಾ ಪರಿಷತ್ತು ಕುಕ್ಕೆ ಶ್ರೀಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಏರ್ಪಡಿಸಿದ ವಾರ್ಷಿಕ ಸಂಗೀತ ಸಮ್ಮೇಳನ.

೪ ಬೆಂಗಳೂರಿನ ಕರ್ನಾಟಕ ಗಾನಕಲಾ ಪರಿಷತ್ತಿನ ಯುವಜನ ವಿಭಾಗ ಮೈಸೂರಿನಲ್ಲಿ ನಡೆಸಿದ ವಾರ್ಷಿಕ ಯುವಸಂಗೀತ ಸಮ್ಮೇಳನ.

೫ ಮೈಸೂರಿನ ಜಗದ್ಗುರು ಶ್ರೀ ಶಿವರಾತ್ರೀಶ್ವರ ಸಭಾದವರು ವ್ಯವಸ್ಥೆಗೊಳಿಸಿದ ಸಂಗೀತ ಸಮ್ಮೇಳನ. ಮೇಲಿನ ಎಲ್ಲ ಸಮ್ಮೇಳನಗಳಲ್ಲೂ ವಿದ್ವತ್‌ಗೋಷ್ಠಿ, ಪ್ರಾತ್ಯಕ್ಷಿಕೆ, ಭಾಷಣ ಮತ್ತು ಯುವ, ಅನುಭವಿ ಮತ್ತು ವೃತ್ತಿ ಕಲಾವಿದರ ಸಂಗೀತ ಕಚೇರಿಗಳು ಪ್ರಸಾರವಾಗಿವೆ.

೬ ಬೆಂಗಳೂರಿನ ಚೌಡಯ್ಯ ಸ್ಮಾರಕ ಸಂಸ್ಥೆಯ ವಾರ್ಷಿಕ ಸಂಗೀತೋತ್ಸವ.

೭ ಬೆಂಗಳೂರಿನ ಶ್ರೀ ಪುರಂದರೋತ್ಸವ ಸಮಿತಿ ಮುಳಬಾಗಿಲಿನಲ್ಲಿ ನಡೆಸಿದ ವಾರ್ಷಿಕ ಶ್ರೀ ಪುರಂದರ ಆರಾಧನೋತ್ಸವ.

೮ ಬೆಂಗಳೂರಿನ ಶ್ರೀ ತ್ಯಾಗರಾಜ ಆರಾಧನೋತ್ಸವ ಸಮಿತಿ ಶ್ರೀ ರಂಗಪಟ್ಟಣದಲ್ಲಿ ಏರ್ಪಡಿಸಿದ ಶ್ರೀ ತ್ಯಾಗರಾಜ ಆರಾಧನೋತ್ಸವ.

೯ ಮೈಸೂರಿನ ಶ್ರೀ ಪುರಂದರ ಆರಾಧನೋತ್ಸವ ಸಮಿತಿ ಪ್ರದರ್ಶಿಸಿದ ಹರಿದಾಸ ಸಂಗೀತ ನೃತ್ಯೋತ್ಸವ, ಮೇಲಿನ ಉತ್ಸವಗಳಲ್ಲಿ ನಾಡಿನ ಹಿರಿಯ ಕಿರಿಯ ಕಲಾವಿದರೆಲ್ಲ ಭಾಗವಹಿಸುತ್ತಾರೆ.

೧೦ ನಂಜನಗೂಡಿನ ಶ್ರೀಕಂಠೇಶ್ವರ ದೇವಸ್ಥಾನವು ಗಿರಿಜಾ ಕಲ್ಯಾಣದ ಸಂದರ್ಭದಲ್ಲಿ ಸಂಗೀತ ನೃತ್ಯ ಕಾರ್ಯಕ್ರಮಗಳನ್ನು ಜರುಗಿಸಿದೆ.

೧೧ ಮೈಸೂರಿನ ಬಿಡಾರಂ ಕೃಷ್ಣಪ್ಪ ರಾಮಮಂದಿರ ಮತ್ತು ಚೌಡಯ್ಯ ಸ್ಮಾರಕ ರಾಮೋತ್ಸವ ಸಮಿತಿಗಳು ರಾಮೋತ್ಸವ ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸಿವೆ.

೧೨ ಬೆಂಗಳೂರಿನ ಶೇಷಾದ್ರಿಪುರಂ ರಾಮೋತ್ಸವ ಸಮಿತಿ, ಶ್ರೀ ರಾಮ ಸೇವಾಮಂಡಲಿ,ಫೋರ್ಟ್ ಹೈಸ್ಕೂಲಿನಲ್ಲೂ ರಾಮೋತ್ಸವ ಕಚೇರಿಗಳನ್ನು ನಡೆಸಿವೆ. ಇವುಗಳ ಜೊತೆಗೆ ರಾಜ್ಯದ ವಿವಿಧ ಸ್ವಯಂಸೇವಾ ಸಾಂಸ್ಕೃತಿಕ ಸಂಸ್ಥೆಗಳು ಮಾಸಿಕವಾಗಿಯೂ, ನಿಯತಕಾಲಿಕವಾಗಿಯೂ ಸಂಗೀತ ನೃತ್ಯ ಕಾರ್ಯಕ್ರಮಗಳನ್ನು ಪ್ರದರ್ಶಿಸಿವೆ.

ಪ್ರಶಸ್ತಿಗಳು: ನಾಡಿನ ಪ್ರಸಿದ್ಧ ಕಲಾವಿದರನ್ನು ಸರ್ಕಾರ ಗುರುತಿಸಿ ನೀಡುವ ಪ್ರತಿಷ್ಠಿತ "ಕನಕ ಪುರಂದರ "ಪ್ರಶಸ್ತಿ, "ಕರ್ನಾಟಕ ಸಂಗೀತ ವಿದ್ವಾನ್" ಪ್ರಶಸ್ತಿ. ಇವುಗಳ ಜೊತೆಗೆ ವಿವಿಧ ಸಂಘ ಸಂಸ್ಥೆಗಳು ತಮ್ಮ ವಾರ್ಷಿಕ ದಿನಾಚರಣೆಗಳ ಸಂದರ್ಭದಲ್ಲಿ ವಿದ್ವಾಂಸ, ವಿದುಷಿಯರಿಗೆ ಪ್ರಧಾನಿಸಿದ ಗೌರವ ಪ್ರಶಸ್ತಿಗಳು ಇವೆ. ಈ ವರ್ಷ ಕಲಾವಿದರ ಜೀವನ ಚಿತ್ರಗಳು, ಸಂಗೀತದ ಲಕ್ಷ್ಯ ಲಕ್ಷಣಗಳ ಬಗೆಗಿನ ಪುಸ್ತಕಗಳು ಮತ್ತು ಮಹಾಪ್ರಬಂಧಗಳು ಸಾಕಷ್ಟು ಸಂಖ್ಯೆಯಲ್ಲಿ ಪ್ರಕಟವಾಗಿವೆ. ಧ್ವನಿ ಸುರುಳಿಗಳಲ್ಲಿ ಗಾಯನದ ವಿವಿಧ ಪ್ರಕಾರಗಳು ಶಾಸ್ತ್ರೀಯ ಸಂಗೀತ, ವಾದ್ಯಸಂಗೀತ, ಶಾಸ್ತ್ರೀಯ ಲಘುಸಂಗೀತ, ಸುಗಮಸಂಗೀತ, ಹರಿಕಥೆ ಮತ್ತು ಭಜನೆ ಮುಂತಾದ ಪ್ರಕಾರಗಳು ಸಮೃದ್ಧವಾಗಿ ಪ್ರಕಟವಾಗಿವೆ.

ಸಂಗೀತ ಪ್ರವರ್ಧಿಸಲು ಅವಕಾಶಗಳು ವಿಪುಲವಾಗಿವೆ ಎಂಬ ತಪ್ಪು ಕಲ್ಪನೆ ಈ ಮೇಲಿನ ವಿವರಗಳಿಂದ ಮೂಡಬಹುದು. ಕಲಾವಿದರ, ವಿದ್ಯಾರ್ಥಿಗಳ ಮತ್ತು ಸಂಘ ಸಂಸ್ಥೆಗಳ ಸಂಖ್ಯೆ, ಧ್ವನಿ ಸುರುಳಿಗಳ ಮಹಾಪೂರ ಮುಂತಾದವು ಹೊಸ ಕಿನ್ನರ ಲೋಕವನ್ನೇ ಸೃಷ್ಟಿಸಿವೆ ಎಂಬ ಚಿತ್ರವೂ ಸುಳಿಯಬಹುದು. ಆದರೆ ಕಲೆಯ ಗಂಭೀರ

ಆಸಕ್ತರಲ್ಲಿ ಈ ಅತಿ ಆಲಂಬನದ ಪರಿಣಾಮವಾಗಿ ನೈಜ ಸಂಗೀತಕಲೆಯ ಮಟ್ಟ ಕುಸಿದಿದೆಯೋ, ಅದರ ವ್ಯವಸ್ಥಿತ ಅಧ್ಯಯನಕ್ಕೆ ಅವಕಾಶ ಕಡಿಮೆಯಾಗಿದೆಯೋ ಎಂಬ ಸಂದೇಹ ಸಹಜವಾಗಿಯೇ ಮೂಡುತ್ತದೆ.

ಸಂಗೀತದಂತಹ ಸೃಜನಶೀಲ ಕಲಾಕ್ಷೇತ್ರದಲ್ಲಿ ನಿಜವಾದ ಪ್ರತಿಭೆ ವಿಕಾಸವಾಗಬೇಕಾದರೆ ಆವಶ್ಯಕತೆಗಳು ಹಲವು: ೧. ಯುವ ಪ್ರತಿಭೆಯು ಸಮಾಜದ ಯಾವ ಸ್ತರದಲ್ಲಿ ಎಲ್ಲಿದ್ದರೂ, ಅದನ್ನು ಗುರುತಿಸುವ ವ್ಯವಸ್ಥೆ. ೨. ಯುವ ಪ್ರತಿಭೆಯನ್ನು ನಿಧಿ ಎಂಬ ಭಾವದಿಂದ ಲಾಲಿಸಿ, ಪಾಲಿಸಿ, ಪೋಷಿಸುವ ಪರಿಸರ. ೩.ಹೀಗೆ ಅರಳುವ ಪ್ರತಿಭೆಗೆ ಯೋಗ್ಯ ಅಭಿವ್ಯಕ್ತಿ, ಅವಕಾಶ ಮತ್ತು ಜೀವನ ಸ್ವಾಸ್ಥ್ಯ. ಇದೊಂದು ಆದರ್ಶ ಪರಿಸ್ಥಿತಿ. ಪ್ರಾಯಶಃ ಎಲ್ಲಿಯೂ ಎಂದೂ ಒದಗದು. ಆದರೆ ಈ ದಿಶೆಯಲ್ಲಿ ಸಮಾಜ, ಸರಕಾರ ಯೋಚಿಸಿ ಕಾರ್ಯಪ್ರವೃತ್ತವಾಗುವುದು ಅಗತ್ಯ.

ಸಂಗೀತ ಪ್ರಸಾರದ ದೃಷ್ಟಿಯಿಂದ ೧೯೯೪ ಪ್ರಗತಿ ಸಾಕಷ್ಟು ಉತ್ತೇಜನಕಾರಿಯಾಗಿದೆ. ಆದರೆ ಈ ಸಂಗೀತ ಯಾರಿಗೆ? ಶ್ರೋತೃಗಳಿಗೆ ತಲುಪಿ ಅವರ ಸಂಗೀತ ಪ್ರಜ್ಞೆಯನ್ನು ಕಲಾಭಿರುಚಿಯನ್ನು ಅಭಿವರ್ಧಿಸಿ ಅವರ ಬದುಕನ್ನು ಇದು ಹಸನುಗೊಳಿಸಿದೆಯೆ? ಧ್ವನಿಸುರುಳಿ, ರೇಡಿಯೋ, ದೂರದರ್ಶನ ಹೀಗೆ ಎಲ್ಲಿ ಬೇಕೆಂದರೆ ಅಲ್ಲಿ, ಬೇಕಾದ ಸಂಗೀತ ಬೇಕಾದಾಗ ದೊರೆಯುವ ಈ ಯುಗದಲ್ಲಿ, ಜೀವಂತ ಸಂಗೀತ ಕಚೇರಿಗಳಲ್ಲಿ ಶ್ರೋತೃಗಳ ಸಂಖ್ಯೆ ಕಡಿಮೆ ಆಗುತ್ತಿರುವುದೊಂದು ಕಹಿಸತ್ಯ. ಅಲ್ಲಿಯೂ "ತಾರಾಮೌಲ್ಯ" ಇರುವ ಕಲಾವಿದರಿಗೇ ಪ್ರಾಶಸ್ತ್ಯ. ನೈಜಕಲಾವಿದ ಕೇವಲ ಕಲೆಯ ಮೂಲಕವೇ ತನ್ನ ಅಸ್ತಿತ್ವ ಟಂಕಿಸಿ ರಸಿಕರನ್ನು ಮುದಗೊಳಿಸಿ ತಾನು ಅಭಿವೃದ್ಧಿ ಪಥದಲ್ಲಿ ಮುನ್ನಡೆಯುತ್ತಾನೆ- ಎಂಬ ಪರಿಸರ ವಿರಳವಾಗುತ್ತಿದೆ. ಕಲಾವಿಮರ್ಶೆಗಳು ಪತ್ರಿಕಾ ಮಾಧ್ಯಮಗಳ ಅವಿಭಾಜ್ಯ ಅಂಗಗಳಾಗಿವೆ. ಇಲ್ಲಾದರೂ ಸಿದ್ಧ-ಸೂತ್ರ ವಿಮರ್ಶೆಗಳೇ ಅಥವಾ ಕೇವಲ ವರದಿ ನಿರೂಪಣೆಗಳೇ ಅಧಿಕವಾಗಿ, ನೈಜಸಂಗೀತ ಅನಾಥವಾಗುತ್ತಿದೆಯೇ ಎಂಬ ಅನುಭವ ಸುಳಿಯುತ್ತದೆ.

ಜನಜೀವನದ ವಿಸ್ತರಣೆಯೇ ಕಲೆ. ಕಲೆಯ ಸೆಲೆ ಪರಿಸರ ಆದಾಗ ಮಾತ್ರ ನೈಜಕಲೆ ವರ್ಧಿಸೀತು. ಸದ್ಯ ಅಂಥ ಪರಿಸ್ಥಿತಿ ಗೋಚರವಾಗುತ್ತಿಲ್ಲ.

# ದೃಶ್ಯಕಲೆ

*ಜಿ. ಜಯಕುಮಾರ್*

ಕರ್ನಾಟಕದ ಚಿತ್ರ ಮತ್ತು ಶಿಲ್ಪಕ್ಷೇತ್ರಕ್ಕೆ ೧೯೯೪ನೇ ವರ್ಷ ಬಹಳ ಮಹತ್ವವಾದುದು. ಈ ವರ್ಷದಲ್ಲಿ ಕರ್ನಾಟಕ ಸರಕಾರವು ಪ್ರಥಮ ಬಾರಿಗೆ ಹೆಸರಾಂತ ಕಲಾವಿದ ಕೆ. ವೆಂಕಟಪ್ಪ ಅವರ ಹೆಸರಿನಲ್ಲಿ ಕಲೆಗಾಗಿ ಪ್ರಶಸ್ತಿಯನ್ನು ಸ್ಥಾಪಿಸಿತು. ಈ ಪ್ರಶಸ್ತಿಯು ಒಂದು ಲಕ್ಷರೂಪಾಯಿ ನೆನಪಿನ ಕಾಣಿಕೆ ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿದೆ. ಈ ಪ್ರಶಸ್ತಿಯನ್ನು ಪಡೆದ ಮೊದಲನೆಯವರೆ ಕೆ. ಕೆ. ಹೆಬ್ಬಾರರು. ಅಂತಾರಾಷ್ಟ್ರಿಯ ಮಟ್ಟದಲ್ಲಿ ಹೆಸರು ಮಾಡಿರುವ ಹೆಬ್ಬಾರರಿಗೆ ಈ ಪ್ರಶಸ್ತಿಯನ್ನು ನೀಡಿದ್ದು ಹೆಚ್ಚು ಅರ್ಥಪೂರ್ಣವಾಗಿದೆ. ಅವರ ಕಿರೀಟಕ್ಕೆ ಮತ್ತೊಂದು ಗರಿ ಸೇರಿತು. ಕರ್ನಾಟಕ ಶಿಲ್ಪಕಲಾ ಪಾತ್ರದಲ್ಲಿ ದುಡಿದ ಮಹನೀಯರಿಗೆ ಪ್ರಶಸ್ತಿಯನ್ನು ನೀಡಿ ಗೌರವಿಸಲು 'ಜಕಣಾಚಾರ್ಯ' ಎಂಬ ಹೆಸರಿನ ಪ್ರಶಸ್ತಿಯನ್ನು ಸಹ ಸರಕಾರ



ಸ್ಥಾಪಿಸಿದೆ. ಶಿಲ್ಪಕಲೆಯ ಅಭಿವೃದ್ಧಿಗಾಗಿ ಪ್ರತ್ಯೇಕವಾಗಿ 'ಶಿಲ್ಪಕಲಾ' ಅಕಾಡೆಮಿಯನ್ನು ಸಹ ಸ್ಥಾಪಿಸಿದೆ. ಇಂತಹದೊಂದು ಅಕಾಡೆಮಿ. ಸ್ಥಾಪಿತವಾಗಿರುವುದು ಭಾರತದಲ್ಲೇ ಪ್ರಥಮ.

ರಾಜ್ಯದಲ್ಲಿ ಸರಕಾರ ಮತ್ತು ಅನೇಕ ಖಾಸಗಿ ಸಂಸ್ಥೆಗಳು ಕಲೆಯ ಬಗ್ಗೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಕಲಾ ವಾತಾವರಣವನ್ನು ಸೃಷ್ಟಿಸುವಲ್ಲಿ ಪ್ರಯತ್ನಿಸುತ್ತಿವೆ. ಇವುಗಳಲ್ಲಿ ಮುಖ್ಯವಾಗಿ ಹೆಸರಿಸಬೇಕಾದ ಕಲಾ ಚಟುವಟಿಕೆಗಳೆಂದರೆ, ಬಿಜಾಪುರದ ಶ್ರೀ ಸಿದ್ದೇಶ್ವರ ಕಲಾಮಂದಿರದ್ದು. ಪ್ರಥಮ ಬಾರಿಗೆ ಇದು ಅಖಿಲ ಭಾರತ ಕಲಾಪ್ರದರ್ಶನವನ್ನು ಮಾರ್ಚ್ ೩ ರಿಂದ ೯ರವರೆಗೆ ಏರ್ಪಡಿಸಿತ್ತು. ಈ ಕಲಾಪ್ರದರ್ಶನದಲ್ಲಿ ಪ್ರದರ್ಶಿತಗೊಂಡ ಕೃತಿಗಳಲ್ಲಿ ಐದನ್ನು ಅತ್ಯುತ್ತಮ ಕಲಾಕೃತಿಗಳೆಂದು ಆಯ್ದು, ತಲಾ ಐದುಸಾವಿರ ರೂಪಾಯಿ ಹಾಗೂ ಹತ್ತು ಕಲಾವಿದರಿಗೆ ಮೆರಿಟ್ ಸರ್ಟಿಫಿಕೇಟ್ ನೀಡಲಾಯಿತು. ಅಖಿಲ ಭಾರತ ಕಲಾವಿದರ ಶಿಬಿರವನ್ನು ಸಹ ಶ್ರೀ ಸಿದ್ದೇಶ್ವರ ಕಲಾಮಂದಿರದವರು ಏರ್ಪಡಿಸಿದ್ದರು. ಈ ಶಿಬಿರದಲ್ಲಿ ರಾಜ್ಯದ ಹಾಗೂ ಇತರೆ ರಾಜ್ಯಗಳ ಹೆಸರಾಂತ ಕಲಾವಿದರು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಕಲೆಯನ್ನು ಕುರಿತು ವಿಚಾರ ಸಂಕಿರಣವನ್ನು ಸಹ ಏರ್ಪಡಿಸಲಾಗಿತ್ತು. ಈ ಭಾಗದಲ್ಲಿ ಅಖಿಲಭಾರತ ಮಟ್ಟದ ಇಂತಹ ಕಾರ್ಯಕ್ರಮಗಳು ಪ್ರಥಮ ಬಾರಿಗೆ ನಡೆದು ಕಲಾವಿದರ, ಸಾರ್ವಜನಿಕರ ಮೆಚ್ಚುಗೆ ಗಳಿಸಿದವು.

ಬೆಂಗಳೂರಿನ ಕ್ರಿಯಾಚೇತನ ಸಾಂಸ್ಕೃತಿಕ ಸಂಸ್ಥೆ ಜೂನ್ ೧೪ ರಿಂದ ೧೮ರವರೆಗೆ 'ತುಳಿತಕ್ಕೊಳಗಾದವರು ಮತ್ತು ನಾವು' ಎಂಬ ಶೀರ್ಷಿಕೆಯಡಿ ಚಿತ್ರಕಲಾ ಶಿಬಿರವನ್ನು ಬೆಂಗಳೂರಿನ ಗಾಂಧಿಭವನದಲ್ಲಿ ಏರ್ಪಡಿಸಿತ್ತು. ಈ ಶಿಬಿರದಲ್ಲಿ ಹೆಸರಾಂತ ಕಲಾವಿದರಾದ ಎಸ್.ಜೆ. ವಾಸುದೇವ, ಆರ್.ಎಂ. ಹಡಪದ, ಜಿ.ಎಸ್.ಶೆಣೈ, ವಿ.ಜಿ. ಅಂದಾನಿ, ಎಂ.ಜಿ. ಪಾಟೀಲ್, ಶ್ರೀಮತಿ ಎಸ್. ಧನಲಕ್ಷ್ಮಿ, ವೈ.ಎಚ್. ಸೂಗೂರ್, ಕೆ.ಟಿ. ಶಿವಪ್ರಸಾದ್, ಜೆ.ಎಂ.ಎಸ್. ಮಣಿ, ಚಂದ್ರಶೇಖರ್, ಪ.ಸ.ಕುಮಾರ್ ಮುಂತಾದವರು ಭಾಗವಹಿಸಿದ್ದರು. ಬಹುಪಾಲು ಕಲಾವಿದರು ಶೋಷಣೆಗೆ ಒಳಗಾದ ವರ ಹಾಗೂ ಸಾಮಾಜಿಕ ಪ್ರಜ್ಞೆಯ ವಸ್ತುವನ್ನು ತಮ್ಮ ಚಿತ್ರಗಳಲ್ಲಿ ಅಭಿವ್ಯಕ್ತಿಸಿದ್ದರು.

ನಮ್ಮ ರಾಜ್ಯದ ಅತ್ಯಂತ ಹಳೆಯ ಕಲಾಶಾಲೆಯಾದ ಅ.ನ.ಸು. ಕಲಾಮಂದಿರವು ತನ್ನ ಅಮೃತೋತ್ಸವವನ್ನು ಆಗಸ್ಟ್ ತಿಂಗಳಲ್ಲಿ ಆಚರಿಸಿತು. ಎಪ್ಪತ್ತೈದು ವರ್ಷಗಳ ಹಿಂದೆ ಬಳೆಪೇಟೆಯ ಒಂದು ಚಿಕ್ಕ ಅಂಗಡಿಯಲ್ಲಿ ಜನ್ಮತಾಳಿದ ಈ ಕಲಾಮಂದಿರವು, ತನ್ನ ಜೀವನದಲ್ಲಿ ನಾನಾ ಏರಿಳಿತಗಳನ್ನು ಅನುಭವಿಸಿದೆ. ನೂರಾರು ವಿದ್ಯಾರ್ಥಿಗಳು ಈ ಸಂಸ್ಥೆಯಿಂದ ಕಲಾಶಿಕ್ಷಣ ಪಡೆದಿದ್ದಾರೆ. ಕಲಾಮಂದಿರದ ಕೆಲವು ಸಾಧನೆಗಳು ಬಹು ಮುಖ್ಯವಾಗಿದ್ದು, ಈ ವರ್ಷ ಅಮೃತೋತ್ಸವ ಆಚರಿಸಿದ್ದು ಗಮನಾರ್ಹವಾದುದಾಗಿತ್ತು.

ನಮ್ಮ ನಾಡಿನ ಹಿರಿಯ ಕಲಾವಿದರಾಗಿದ್ದ ದಿ. ಎಸ್. ಎಂ. ಪಂಡಿತರ ಕಲಾಪ್ರದರ್ಶನ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಅಕ್ಟೋಬರ್ ತಿಂಗಳಿನಲ್ಲಿ ನಡೆಯಿತು. ಪ್ರಥಮ ಬಾರಿಗೆ ಬೆಂಗಳೂರಿನಲ್ಲಿ ನಡೆದ ಕಲಾ ಪ್ರದರ್ಶನದಲ್ಲಿ. ಈ 'ರೊಮ್ಯಾಂಟಿಕ್ ಕಲೆಯ ರಸಋಷಿ' ರಚಿಸಿದ ಚಿತ್ರಗಳನ್ನು ನೋಡುವ ಅವಕಾಶ ದೊರೆಯಿತು. ಗುಲ್ಬರ್ಗಾದ ಎಸ್.ಎಂ. ಪಂಡಿತರ ಚಿತ್ರಗಳು, ರವಿವರ್ಮನ ನೆನಪು ತರುತ್ತವೆ. ರವಿವರ್ಮನ ಪರಂಪರೆಯಲ್ಲಿಯೇ ರಚಿಸಿದ ಭಾವಚಿತ್ರಗಳು, ಕಥಾ ಸಂದರ್ಭಗಳು, ಪ್ರಕೃತಿಚಿತ್ರಗಳು, ಪೋಸ್ಟರ್‌ಗಳು ಈ ಸಂದರ್ಭದಲ್ಲಿ ಪ್ರದರ್ಶನಗೊಂಡಿದ್ದವು. ಪಂಡಿತರು ಪೌರಾಣಿಕ ಚಿತ್ರಗಳನ್ನು ರಚಿಸುವುದರಲ್ಲಿ ಸಿದ್ಧಹಸ್ತರಾಗಿದ್ದವರು. ಇಂದಿನ ಯುವಪೀಳಿಗೆಯ ಕಲಾವಿದರಿಗೆ ಈ ಕಲಾ ಪ್ರದರ್ಶನ ಹಲವು ವಿಧದಲ್ಲಿ ಸ್ಫೂರ್ತಿ ನೀಡಿತು.



ಕಲಾ ಚಟುವಟಿಕೆಗಳು ಕೇವಲ ನಗರಗಳಿಗೆ ಸೀಮಿತವಾಗಿರದೆ, ಗದುಗಿನಂತಹ ಸ್ಥಳದಲ್ಲಿಯೂ ನಡೆಯುತ್ತಿರುವುದು ಸಂತೋಷದ ಸಂಗತಿ. ನವೆಂಬರ್ ತಿಂಗಳಲ್ಲಿ ವಿಜಯಾ ಕಲಾ ಮಂದಿರದವರು 'ಕಲಾಮೇಳ'ವನ್ನು ಏರ್ಪಡಿಸಿದ್ದರು. ಈ ಸಂದರ್ಭದಲ್ಲಿ ಅಖಿಲ ಭಾರತ ಕಲಾಶಿಬಿರ, ಸಂವಾದ ಮುಂತಾದ ಕಾರ್ಯಕ್ರಮಗಳು ನಡೆದವು. ಆಧುನಿಕ ಕಲೆಯ ಬಗ್ಗೆ ತಿಳುವಳಿಕೆ ಉಂಟುಮಾಡಲು ಇಂತಹ ಕಾರ್ಯಕ್ರಮಗಳ ಅಗತ್ಯತೆ ಇದೆ. ಈ ಕಾರ್ಯಕ್ರಮ ಸಾರ್ವಜನಿಕರ ಮತ್ತು ಕಲಾವಿದರ ಮೆಚ್ಚುಗೆ ಗಳಿಸಿತು.

೧೯೯೪ರಲ್ಲಿ ಅನೇಕ ಕಲಾವಿದರು ಕಲಾ ಪ್ರದರ್ಶನಗಳನ್ನು ಏರ್ಪಡಿಸಿದ್ದರು. ಅವೆಲ್ಲವುಗಳ ಬಗ್ಗೆ ಬರೆಯಲು ಇಲ್ಲಿ ಸಾಧ್ಯವಿಲ್ಲದಿದ್ದರೂ ಗಮನಾರ್ಹವೆನಿಸಿದ ಕೆಲವು ಕಲಾ ಪ್ರದರ್ಶನಗಳ ಬಗ್ಗೆ ಬರೆಯಲೇಬೇಕು. ಜನವರಿ ತಿಂಗಳಿನ ಪ್ರಾರಂಭದಲ್ಲಿ ನಡೆದ ಭಾರತದ ಹೆಸರಾಂತ ೧೮ ಕಲಾವಿದರ ಕೃತಿಗಳ ಪ್ರದರ್ಶನ ಇವುಗಳಲ್ಲಿ ಬಹಳ ಮುಖ್ಯವಾದುದು. ಈ ಕಲಾ ಪ್ರದರ್ಶನದಲ್ಲಿ ಅಬನೀಂದ್ರನಾಥ ಟಾಗೂರ್, ನಂದಲಾಲ್ ಬೋಸ್ ಆರಾ, ರಾಮಕುಮಾರ್, ಸೋಮನಾಥ ಹೋರ್, ಸುನಿಲ್‌ದಾಸ್ ಮುಂತಾದವರ ಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಭಾರತದ ಆಧುನಿಕ ಚಿತ್ರಕಲೆ ಬೆಳೆದು ಬಂದ ದಾರಿಯನ್ನು ಇಲ್ಲಿ ಕಾಣಬಹುದಿತ್ತು. ಅಂತರಾಷ್ಟ್ರೀಯ ಕಲಾವಿದ ಎಂ.ಎಫ್. ಹುಸೇನ್ ಅವರು ಬೆಂಗಳೂರಿನ ಹುಸೇನ ಸಂಕಲನದಲ್ಲಿ, ಟ್ಯಾಪೆಸ್ಟ್ರೀ ಮಾಧ್ಯಮದಲ್ಲಿ ರಚಿಸಿದ ಚಿತ್ರಗಳನ್ನು ಜನವರಿಯಲ್ಲಿ ಪ್ರದರ್ಶಿಸಿದರು. ರಾಮಾಯಣ, ಕೇರಳದ ಭೂದೃಶ್ಯಗಳು, ಗಣಪತಿ, ಕುದುರೆಗಳು ಮುಂತಾದವುಗಳನ್ನು ಹುಸೇನ್ ಚಿತ್ರಿಸಿದ್ದರು.



ರಾಜ್ಯದ ಸಮಕಾಲೀನ ಕಲಾವಿದ ಯು.ರಮೇಶ್‌ರಾವ್ ಜನವರಿ ತಿಂಗಳಿನಲ್ಲಿ ಬೆಂಗಳೂರಿನ ಕ್ರಿಮ್ಸನ್ ಗ್ಯಾಲರಿಯಲ್ಲಿ ತಮ್ಮ ಚಿತ್ರಗಳನ್ನು ಪ್ರದರ್ಶಿಸಿದ್ದರು. ಇವರ ಕೃತಿಗಳಲ್ಲಿ ವಸ್ತು 'ಸಾಮಾನ್ಯ'ವಾದುದು. ಮತ್ತೊಬ್ಬ ಸಮಕಾಲೀನ ಕಲಾವಿದ ನಟರಾಜಶರ್ಮ ತಮ್ಮ ಕೃತಿಗಳನ್ನು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ಪ್ರದರ್ಶಿಸಿದ್ದರು. ತಮ್ಮ ಸುತ್ತಲು ಕಾಣುವ ದೃಶ್ಯಗಳನ್ನು ನೋಡಿ ಚಿತ್ರಿಸುವುದು ಇವರ ಹೆಗ್ಗಳಿಕೆ. ಜ್ಞಾನ್‌ದೇವರಾಜ್ ಆಸ್ಟಿನ್‌ಟೌನ್‌ನಲ್ಲಿ ಬೃಹತ್ ಫೈಬರ್ ಶಿಲ್ಪವನ್ನು ತಮ್ಮ ಗೆಳೆಯರ ಸಹಕಾರದಿಂದ (ಫೆಬ್ರುವರಿ ತಿಂಗಳಲ್ಲಿ) ರಚಿಸಿದ್ದಾರೆ. ಹಲವು ದೃಷ್ಟಿಯಿಂದ ಈ ಶಿಲ್ಪ ಮುಖ್ಯವೆನಿಸಿತು. ಪರಿಸರದ ಮಧ್ಯದಲ್ಲಿ ಇಂಥಹ ಶಿಲ್ಪಗಳ ರಚನೆಯಿಂದ ಕಲೆಯ ಬಗ್ಗೆ ಆಸಕ್ತಿ ಮೂಡಿಸಲು ಸಹಾಯಕವಾಗುವುದು.

ಮಂಗಳೂರಿನ ಕೊಲಾಜ್ ಸಂಸ್ಥೆ, ಕಲೆಯ ಬಗ್ಗೆ ಅನೇಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದು, ಜನವರಿ ತಿಂಗಳಿನಲ್ಲಿ ವಿಶಿಷ್ಟವಾದ ಕೊಲಾಜ್ ಕಾರ್ಯಾಗಾರವನ್ನು ಏರ್ಪಡಿಸಿತ್ತು. ಕಾರ್ಯಾಗಾರಕ್ಕೆ ಆಗಮಿಸಿದ್ದ ನೂರಕ್ಕಿಂತಲೂ ಹೆಚ್ಚು ಶಿಬಿರಾರ್ಥಿಗಳು ಹಳೆಯ ಪತ್ರಿಕೆಗಳಿಂದ ಚಿತ್ರಗಳನ್ನು ರಚಿಸಿದರು. ಹಳೆಯ ಪತ್ರಿಕೆಗಳ ಚೂರು ಚೂರುಗಳು ಒಂದು ರೂಪ ಪಡೆದುಕೊಂಡ ಕೃತಿಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಕರ್ನಾಟಕದ ಕಡಲತೀರ ಕಲಾವಿದರಿಗೆ ಬಹುಪ್ರಿಯವಾದ ಸ್ಥಳವಾಗಿದ್ದು, ಮಂಗಳೂರಿನ ಆರ್ಟಿಸ್ಟ್ ಕಂಬೈನ್ಸ್‌ರವರು ಕಡಲತೀರದ ಕಲಾಶಿಬಿರವನ್ನು ಮಾರ್ಚ್ ತಿಂಗಳಲ್ಲಿ ಏರ್ಪಡಿಸಿದ್ದರು. ಈ ಶಿಬಿರದಲ್ಲಿ ಎಂ.ಎಸ್.ಚಂದ್ರಶೇಖರ, ಪಿ.ಎಸ್.ಪುಣಿಂಚತ್ತಾಯ ಎಂ.ಎಸ್.ಹಳ್ಳಿ, ಗಣೇಶ ಸೋಮಯಾಜಿ, ಕೆ. ಸಂಜೀವಶೆಟ್ಟಿ ಮುಂತಾದವರು ಭಾಗವಹಿಸಿದ್ದರು.

ನಮ್ಮಲ್ಲಿ ಕಲಾವಿದರಾಗಿ, ಛಾಯಾಚಿತ್ರಗಾರರಾಗಿ, ವೈದ್ಯರಾಗಿ ಜನಪ್ರಿಯರಾಗಿದ್ದ ಡಾ. ರವೀಶ ಕಾಸರವಳ್ಳಿ ಬಹುಮುಖ ಪ್ರತಿಭೆಯುಳ್ಳವರು. ಅವರು ಕ್ಯಾಮರಾವನ್ನು ಬಳಸಿಕೊಂಡು ಚಿತ್ರಕಲೆಗೆ ಸಮನಾಗಿ ಅಮೂರ್ತ ಚಿತ್ರಗಳನ್ನು ತೆಗೆದು, ಅವುಗಳ ಪ್ರದರ್ಶನವನ್ನು ಬೆಂಗಳೂರಿನ ವೆಂಕಟಪ್ಪ ಚಿತ್ರಶಾಲೆಯಲ್ಲಿ ಏಪ್ರಿಲ್ ತಿಂಗಳಿನಲ್ಲಿ ಪ್ರದರ್ಶಿಸಿದ್ದರು. ಅಮೂರ್ತತೆಯ ಛಾಯಾಚಿತ್ರಗಳಲ್ಲಿ ಒಂದು ವಿಶಿಷ್ಟ ಅನುಭವವನ್ನು ನೀಡುವ ಹಾಗೂ ಪ್ರಯೋಗಶೀಲತೆಯನ್ನು ಕಾಣಬಹುದಿತ್ತು. ನಮ್ಮ ಹಿರಿಯ ಸಮಕಾಲೀನ ಕಲಾವಿದರಲ್ಲಿ ಕೆ.ಅಪ್ಪುಕುಟ್ಟನ್ ಆಚಾರಿ ಅವರು ಒಬ್ಬರು. ಅವರುತಮ್ಮ ಕಲಾ ಪ್ರದರ್ಶನವನ್ನು ಮ್ಯಾಕ್ಸ್‌ಮುಲ್ಲರ್ ಭವನದಲ್ಲಿ ಮೇ ತಿಂಗಳಲ್ಲಿ ಏರ್ಪಡಿಸಿದ್ದರು. ಈ ಕಲಾಪ್ರದರ್ಶನದಲ್ಲಿ ರೇಖಾಚಿತ್ರ, ದಾರುಶಿಲ್ಪ ಮತ್ತು ತೈಲವರ್ಣದ ಕೃತಿಗಳನ್ನು ಸಹ ಪ್ರದರ್ಶಿಸಿದ್ದರು.

ಇಂಗ್ಲೆಂಡಿನ ಹೆಸರಾಂತ ಶಿಲ್ಪ ಬಾಯ್ನವೆಟ್ ಅವರ ಕೃತಿಗಳ ಪ್ರದರ್ಶನ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಮೇ ತಿಂಗಳಿನಲ್ಲಿ ಏರ್ಪಡಿಸಲಾಗಿತ್ತು. ಅತ್ಯಂತ ವಿಶಿಷ್ಟವಾದ ಈ ಕಲಾಪ್ರದರ್ಶನ ಬೆಂಗಳೂರಿನಲ್ಲಿ ನಡೆದುದು ಅಭಿನಂದನೀಯ ವಾದುದು. ಉಡುಪಿಯ ಅಭಿರುಚಿ ವೇದಿಕೆ ಹದಿನೈದು ದಿನಗಳ 'ಹೊಯ್ಸಳ ಶಿಲ್ಪಕಲಾ ಶಿಬಿರ'ವನ್ನು ಮೇ ತಿಂಗಳಿನಲ್ಲಿ ಏರ್ಪಡಿಸಿತ್ತು. ಶಿಬಿರದ ಪ್ರಮುಖ ಉದ್ದೇಶ ಕಲಾವಿದರನ್ನು ಮತ್ತು ಕಲಾಭಿಮಾನಿಗಳನ್ನು ಮುಖಾಮುಖಿ ಭೇಟಿಯಾಗಿ ಕಲೆಯ ಬಗ್ಗೆ ವಿಚಾರವಿನಿಮಯ ನಡೆಸುವುದಾಗಿತ್ತು. ಈ ಶಿಬಿರದಲ್ಲಿ ಹೆಸರಾಂತ ಶಿಲ್ಪಿಗಳಾದ ವೆಂಕಟರಮಣಭಟ್, ನಾಗರಾಜ ಎಸ್. ಕಮ್ಮಾರ, ಡಿ.ವಿ. ರಾಘುವೇಂದ್ರ ಗುಡಿಗಾರ್, ಉಮೇಶ ಗುಡಿಗಾರ್ ಮುಂತಾದವರು ಭಾಗವಹಿಸಿದ್ದರು. ಯುವ ಕಲಾವಿದ ವೀರೇಂದ್ರ ಷಾ ತಮ್ಮ ಕೃತಿಗಳ ಪ್ರದರ್ಶನವನ್ನು ಕ್ರಿಸ್‌ಮಸ್ ಗ್ಯಾಲರಿಯಲ್ಲಿ ಸೆಪ್ಟೆಂಬರ್ ತಿಂಗಳಲ್ಲಿ ಏರ್ಪಡಿಸಿದ್ದರು. ಇಲ್ಲಿ ಪ್ರದರ್ಶಿತವಾಗಿದ್ದ ಕೃತಿಗಳಲ್ಲಿ ನಿರ್ವಹಣೆ ಮತ್ತು ಬಣ್ಣಗಳ ಸಂಯೋಜನೆ ಮುಖ್ಯವಾಗಿದ್ದು ಅವರ ಪ್ರಯೋಗಶೀಲತೆಗೆ ಸಾಕ್ಷಿಯಾಗಿದ್ದವು. ನಮ್ಮ ತರುಣ ಕಲಾವಿದರು ರಾಷ್ಟ್ರೀಯ ಶಿಷ್ಯವೇತನ ಪಡೆಯುತ್ತಿರುವುದು ಸಂತೋಷದ ಸಂಗತಿ. ಪ್ರತಿಷ್ಠಿತ ಸಂಸ್ಥೆ ಇನ್‌ಲ್ಯಾಕ್ಸ್ ಸಂಸ್ಥೆಯವರು ನೀಡುತ್ತಿರುವ ಈ ಶಿಷ್ಯವೇತನಗಳಲ್ಲಿ, ಕಳೆದ ಹತ್ತು ವರ್ಷಗಳಲ್ಲಿನ ಐದು ಶಿಷ್ಯವೇತನಗಳು ನಮ್ಮ ರಾಜ್ಯಕ್ಕೆ ದೊರಕಿರುವುದು ಹೆಮ್ಮೆಯ ಸಂಗತಿ. ಈ ವರ್ಷದ ಶಿಷ್ಯವೇತನವು ಕೆನ್ ಕಲಾಶಾಲೆಯ ಯು.ಎಸ್. ರಮೇಶ್ ಅವರಿಗೆ ದೊರಕಿದೆ. ತರುಣ ಕಲಾವಿದ ರಮೇಶ್ ಬಾಬು ಅವರಿಗೆ ಬಾಂಬೆ ಆರ್ಟ್ಸ್ ಸೊಸೈಟಿ 'ಬೇಂದ್ರೆ-ಹುಸೇನ್'ಹೆಸರಿನಲ್ಲಿ ನೀಡುತ್ತಿರುವ ಶಿಷ್ಯವೇತನ (ಮೊತ್ತ ರೂ. ೨೫,೦೦೦-೦೦) ದೊರೆತಿದೆ. ರಾಜ್ಯಕ್ಕೆ ಸತತವಾಗಿ ಈ ಪ್ರಶಸ್ತಿ ಬರುತ್ತಿರುವುದು ಎರಡನೇ ಬಾರಿ.

ಹೆಸರಾಂತ ಕಲಾವಿದರಾದ ಕೆ.ಕೆ. ಹೆಬ್ಬಾರರಿಗೆ ಮಂಗಳೂರು ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ರಾಜ್ಯದ ಕುಶಲ ಕಲಾವಿದರಾದ ಶ್ರೀಮತಿ ಅನಿತಾ ಚೌಡಾಪುರಕರ್ ಹಾಗೂ ಅಶೋಕ್‌ಗುಡಿಗಾರ್ ಅವರಿಗೆ ೯೪ನೇ ಸಾಲಿನ ರಾಷ್ಟ್ರೀಯ ಪ್ರಶಸ್ತಿಯನ್ನು ನೀಡಲಾಗಿದೆ. ಕಲಾವಿದ ಎಸ್. ಮರಿಶಾಮಾಚಾರ್ ಅವರಿಗೆ ಅಂಬಾಲ ಕ್ಯಾಂಟ್‌ನಲ್ಲಿ 'ದಿ ಕ್ರಿಯೇಟರ್' ಏರ್ಪಡಿಸಿದ್ದ ಅಖಿಲಭಾರತ ಕಲಾ ಪ್ರದರ್ಶನದಲ್ಲಿ ಇವರ ಗ್ರಾಫಿಕ್ ಕೃತಿಗೆ 'ಸರ್ಟಿಫಿಕೇಟ್ ಆಫ್ ಮೇರಿಟ್ ಪ್ರಶಸ್ತಿ' ದೊರೆತಿದೆ. ಈ ವರ್ಷ ಶ್ರೀ ವಿ.ಜಿ. ಅಂದಾನಿ ಅವರು ಕೇಂದ್ರ ಲಲಿತಕಲಾ ಅಕಾಡೆಮಿಗೆ ಸದಸ್ಯರಾಗಿ ನೇಮಕಗೊಂಡಿದ್ದು ಸಂತೋಷದ ಸಂಗತಿ. ಇವರ ಅವಧಿಯಲ್ಲಿ ಕಲಾ ಕ್ಷೇತ್ರಕ್ಕೆ ಹೆಚ್ಚಿನ ಸೇವೆಯನ್ನು ನಿರೀಕ್ಷಿಸಬಹುದು. ಇನ್ನೊಂದು ಸಂತೋಷದ ಸಂಗತಿಯೆಂದರೆ, ಇತ್ತೀಚಿನ ದಿನಗಳಲ್ಲಿ ನಮ್ಮಲ್ಲಿ ಕಲಾ ಚಟುವಟಿಕೆಗಳು ನಡೆಯುತ್ತಿವೆ. ಆದರೆ ಇವು ಹೆಚ್ಚು

ಕ್ರಿಯಾಶೀಲವಾಗಬೇಕಾದ ಅನಿವಾರ್ಯತೆ ಇದೆ. ಕಲಾ ಕ್ಷೇತ್ರದಲ್ಲಿ ಹಲವಾರು ವ್ಯಕ್ತಿಗಳು ಖಾಸಗಿ ಸಂಸ್ಥೆಗಳು ನಡೆಸಿರುವ ಕಲಾ ಚಟುವಟಿಕೆಗಳು ಜತೆಯಲ್ಲಿ ಸರಕಾರ ಮತ್ತು ಸರಕಾರದ ಸಂಸ್ಥೆಗಳು ಸಹ ಕಲಾ ಚಟುವಟಿಕೆಗಳನ್ನು ಗಂಭೀರವಾಗಿ ಪರಿಗಣಿಸಬೇಕಿದೆ.

ದೃಶ್ಯಕಲಾ ಕ್ಷೇತ್ರದಲ್ಲಿ ಭರವಸೆ ಮೂಡಿಸುವಂತಹ ಪ್ರಯತ್ನಗಳು ಅಲ್ಲಲ್ಲಿ ಕಂಡುಬಂದರೂ, ಇತರೆ ರಾಜ್ಯಗಳಾದ ಬಂಗಾಲ, ಗುಜರಾತ್ (ಬರೋಡ)ಗಳಲ್ಲಿ ಆದಂಥಹ ಒಂದು ರೀತಿಯ ಕಲಾಪುನರ್‌ಅಭಿವೃದ್ಧಿಯಂತಹ ಪ್ರಯತ್ನಗಳು ನಮ್ಮಲ್ಲಿ ಸಹ ಆಗಬೇಕಿದೆ. ಒಟ್ಟಾರೆ ನಮ್ಮ ರಾಜ್ಯದ ದೃಶ್ಯಕಲಾ ಕ್ಷೇತ್ರದಲ್ಲಿ ರಾಷ್ಟ್ರದ ಗಮನವನ್ನು ಸೆಳೆಯುವಷ್ಟು ಕಲಾ ಚಟುವಟಿಕೆಗಳು ನಡೆಸುವತ್ತ ನಮ್ಮ ಗಮನ ಹರಿಸಬೇಕಿದೆ.

**ಕರ್ನಾಟಕ ಲಲಿತಕಲಾ ಅಕಾಡೆಮಿಯ ಮುಖ್ಯ ಚಟುವಟಿಕೆಗಳು**

ಲಲಿತಕಲಾ ಅಕಾಡೆಮಿ ಸತತವಾಗಿ ನಡೆಸಿಕೊಂಡು ಬರುತ್ತಿರುವ ಕಲಾ ಶಿಬಿರಗಳು, ಕಾರ್ಯಾಗಾರ, ಕಲಾ ಪ್ರದರ್ಶನ ಹಾಗೂ ಕಲಾ ಪುಸ್ತಕಗಳ ಪ್ರಕಟಣೆಗಳು ಗಮನಾರ್ಹವಾಗಿವೆ. ೧೯೯೪ನೇ ಸಾಲಿನಲ್ಲಿ ಬೇಲೂರಿನಲ್ಲಿ ಶಿಲ್ಪಶಿಬಿರವನ್ನು ಹಾಗೂ, ಕಲಾ ವಿದ್ಯಾರ್ಥಿಗಳಿಗಾಗಿ ಹುಬ್ಬಳ್ಳಿಯ ವಿಜಯ ಮಹಾಂತೇಶ್ವರ ಲಲಿತಕಲಾ ಮಹಾವಿದ್ಯಾಲಯದಲ್ಲಿ ಗ್ರಾಫಿಕ್ ಶಿಬಿರವನ್ನು [ಲಿನೋಕಟ್ ಮತ್ತು ವುಡ್‌ಕಟ್] ಏರ್ಪಡಿಸಲಾಗಿತ್ತು. ಶಿಬಿರದ ನಿರ್ದೇಶಕರಾಗಿ ಸಿ. ಚಂದ್ರಶೇಖರ್ ಹಾಗೂ ಶ್ರೀಧರ್ ಮೂರ್ತಿ ಈ ಕಾರ್ಯ ನಿರ್ವಹಿಸಿದರು. ಅಕಾಡೆಮಿಯ ಗ್ರಾಫಿಕ್ ಸ್ಟುಡಿಯೋದಲ್ಲಿ ಗ್ರಾಫಿಕ್ ಶಿಬಿರ ಕಾರ್ಯಗಾರ ಹಾಗೂ ಗ್ರಾಫಿಕ್ ಕಲಾ ಪ್ರದರ್ಶನವನ್ನು ನಡೆಸುತ್ತಿದ್ದ ಪದ್ಧತಿಯನ್ನು ಮುಂದುವರಿಸುತ್ತಿರುವುದು ಒಳ್ಳೆಯ ಕೆಲಸ. ಆದರೆ ಈಗ ಗ್ರಾಫಿಕ್ ಸ್ಟುಡಿಯೋ ಕಾರಣಾಂತರಗಳಿಂದ ಸ್ಥಗಿತಗೊಂಡಿರುವುದು ಕಲಾವಿದರಿಗೆ ಅಸಮಾಧಾನ ಉಂಟು ಮಾಡಿದೆ. ಆದರೆ ನಿರ್ಲಕ್ಷ್ಯಕ್ಕೆ ಒಳಗಾಗದೆ ತನ್ನ ಸಂಗ್ರಹದಿಂದ ಗ್ರಾಫಿಕ್ ಕೃತಿಗಳ ಪ್ರದರ್ಶನವನ್ನು ಮೈಸೂರಿನ 'ಕಾವಾ ಆರ್ಟ್ಸ್‌ಗ್ಯಾಲರಿ'ಯಲ್ಲಿ ಹಾಗೂ ಬೆಂಗಳೂರಿನ ನಿರ್ಮಲ್ಸ್ ಆರ್ಟ್ ವರ್ಕ್‌ಶಾಪ್‌ನಲ್ಲಿ ಪ್ರದರ್ಶಿಸಲಾಗಿದೆ. ಈ ಸಂಗ್ರಹದ ಕಲಾ ಪ್ರದರ್ಶನಗಳು ರಾಜ್ಯದ ಎಲ್ಲ ಕೇಂದ್ರಗಳಲ್ಲಿ ಜನರಿಗೆ ತಲುಪುವ ಹಾಗೆ ಏರ್ಪಡಿಸುವುದು ಉಪಯುಕ್ತವೆನಿಸುತ್ತದೆ.

ಕೇಂದ್ರ ಲಲಿತಕಲಾ ಅಕಾಡೆಮಿಯು ಏಳನೇ "ರಾಷ್ಟ್ರೀಯ ಕಲಾ ಮೇಳ"ದಲ್ಲಿ ಕರ್ನಾಟಕ ಕಲಾವಿದರ ಕಲಾ ಪ್ರದರ್ಶನವನ್ನು ಏರ್ಪಡಿಸಿತ್ತು. ಹಿಮಾಚಲ ಪ್ರದೇಶದ ಕಲಾವಿದರ ಕಲಾಕೃತಿಗಳ ಪ್ರದರ್ಶನವನ್ನು ತುಮಕೂರು ಹಾಗೂ ಬಿಜಾಪುರಗಳಲ್ಲಿ ಏರ್ಪಡಿಸಿತ್ತು. ಇವು ಅಕಾಡೆಮಿಯ ಚಟುವಟಿಕೆಗಳಲ್ಲಿ ಮುಖ್ಯವಾದವು. ಇಂತಹ ಅಂತರರಾಜ್ಯ ವಿನಿಮಯ ಯೋಜನೆಗಳು ಪರಸ್ಪರರ ಕಲಾಸ್ಥಿತಿ ಹಾಗೂ ಬೆಳವಣಿಗೆಗೆ ಅತಿ ಅವಶ್ಯಕ.

ಅಕಾಡೆಮಿಯ ೨೪ನೇ 'ವಾರ್ಷಿಕ ಕಲಾ ಪ್ರದರ್ಶನ' ಬಿಜಾಪುರದ ಶ್ರೀ ಸಿದ್ದೇಶ್ವರ ಆರ್ಟ್ಸ್ ಇನ್‌ಸ್ಟಿಟ್ಯೂಟ್‌ನಲ್ಲಿ ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ಆರ್.ರಾಜು, ಕಿಶೋರ್‌ಕುಮಾರ್, ವಿಜಯಕುಮಾರ್, ಚಂದ್ರಹಾಸ್ ಮತ್ತು ಪ್ರಕಾಶ್ ಪ್ರಭು ಇವರುಗಳು ತಮ್ಮ ಕಲಾಕೃತಿಗಳಿಗೆ ಬಹುಮಾನ ಪಡೆದರು. ಕೆಲವು ವರ್ಷಗಳಿಂದ ವಾರ್ಷಿಕ ಕಲಾ ಪ್ರದರ್ಶನಗಳು ರಾಜ್ಯದ ಬೇರೆ ಬೇರೆ ಕೇಂದ್ರಗಳಲ್ಲಿ ನಡೆಯುತ್ತ ವಿಕೇಂದ್ರೀಕರಣವಾಗಿರುವುದು ಬಹಳ ಒಳ್ಳೆಯ ಕೆಲಸ.

ಈ ಬಾರಿ ಚಿತ್ರ, ಶಿಲ್ಪ ಹಾಗೂ ಛಾಯಾಚಿತ್ರ ಕಲೆಯಲ್ಲಿ ದುಡಿದ ಗಣ್ಯ ವ್ಯಕ್ತಿಗಳಿಗೆ ಅಕಾಡೆಮಿಯ ಪ್ರಶಸ್ತಿಯನ್ನು ನೀಡಲಾಯಿತು. ಪ್ರೊ.ಎಸ್.ಕೆ. ರಾಮಚಂದ್ರರಾವ್, ಶ್ರೀ ಆರ್. ಸೀತಾರಾಂ, ಶ್ರೀ ವಿ.ಜಿ. ಅಂದಾನಿ, ಶ್ರೀ ಜಯವಂತ ಸಂಗಪ್ಪ ಮುನ್ನೊಳಿ, ಶ್ರೀ ಕೆ. ಶ್ಯಾಮರಾಯ ಆಚಾರ್ಯ, ಶ್ರೀ ಎಂ.ವೈ. ಘೋರ್ಪಡೆ ಹಾಗೂ ಸಿ. ರಾಜಗೋಪಾಲ್ ಇವರುಗಳು ಪ್ರಶಸ್ತಿ ಪಡೆದರು.



ಅಕಾಡೆಮಿಯ ಕಲಾ ಪುಸ್ತಕಗಳನ್ನು ಪ್ರಕಟಿಸಿ ಅತ್ಯಂತ ಕಡಿಮೆ ಬೆಲೆಗೆ ನೀಡುತ್ತಿರುವುದು, ಓದುಗರ ವ್ಯಾಪ್ತಿಯನ್ನು ಬೆಳೆಸುವಲ್ಲಿ ಯಶಸ್ಸು ಪಡೆದಿದೆ. ಕನ್ನಡಕ್ಕೆ ಭಾಷಾಂತರಿಸಿದ ಹಲವಾರು ಪುಸ್ತಕಗಳು ಬಹಳ ಆವಶ್ಯಕವಾದವು. ಅಕಾಡೆಮಿ ಹಿರಿಯ ಕಲಾವಿದರ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಿ ಹೆಮ್ಮೆಪಡುವ ಕೆಲಸ ಮಾಡಿದೆ.



'ಶಿಲ್ಪವನ'ದ ಒಂದು ದೃಶ್ಯ

# ಶಿಲ್ಪವನ

ಕನ್ನಡ ವಿಶ್ವವಿದ್ಯಾಲಯದ ಆವರಣ 'ವಿದ್ಯಾರಣ್ಯ'ದಲ್ಲಿ ಇರುವ ಪ್ರಕೃತಿ ನಿರ್ಮಿತ ಬಂಡೆಗಳಿಗೆ ಅವುಗಳು ಇರುವ ಸ್ಥಳದಲ್ಲೇ ಅವುಗಳಿಗೊಂದು ರೂಪ ಕೊಡುವ ಪ್ರಯತ್ನವೇ 'ಶಿಲ್ಪವನ'. ಶಿಲ್ಪವನ ಯೋಜನೆಯಲ್ಲಿ ಈಗಾಗಲೇ ಹತ್ತು ಹಲವು ಬಂಡೆಗಳು ವಿವಿಧ ಶಿಲ್ಪಗಳ ಸೌಂದರ್ಯ ಮೈತಾಳಿ ನಿಂತಿವೆ. ಶಿಲ್ಪವನದ ಬಂಡೆಗಳನ್ನು ಒಂದೊಂದಾಗಿ ನೋಡುತ್ತಾ ಹೋದಂತೆ ಅಲ್ಲಿ ಶಿಲ್ಪಗಳು ಕಾಣಸಿಗುತ್ತವೆ. ಇಲ್ಲಿಯ 'ಪರಿಸರ ಗಣಪ' ಜನಸಾಮಾನ್ಯರನ್ನು ಹಾಗೂ ವಿದ್ವಾಂಸರ ಗಮನವನ್ನು ಸೆಳೆದಿದೆ. ಒಂದು ಕೈಯಲ್ಲಿ ಮರ ಹಾಗೂ ಇನ್ನೊಂದು ಕೈಯಲ್ಲಿ ಪಾರಿವಾಳ ಹಿಡಿದಿರುವ ಈ ಗಣಪ, ಪರಿಸರದ ಬಗ್ಗೆ ಹೆಚ್ಚು ಕಾಳಜಿ ಹೊಂದಿರುವ ಅಪರೂಪದ ಶಿಲ್ಪವಾಗಿದೆ. ಇದೇ ರೀತಿ ಹೋರಿ, ಸಿಂಹ ಹಾಗೂ ಇನ್ನಿತರ ಹಲವಾರು ಶಿಲ್ಪಗಳು ಇವೆ.

ಶಿಲ್ಪಗಳ ಈ ತೋಟದಲ್ಲಿ ಕಲ್ಲಿನಲ್ಲಿ ಅರಳಿರುವ ಅಮೆರೂಪದ ಶಿಲ್ಪ ಹೆಚ್ಚು ಆಕರ್ಷಕವಾಗಿದೆ. ಅವರವರ ಭಾವಕ್ಕೆ ತಕ್ಕಂತೆ ಕಾಣುತ್ತದೆ. ಕೇವಲ ಕಲ್ಲುಗಳಿಂದ ಕೆತ್ತಿದ ಶಿಲ್ಪಗಳಿಗಷ್ಟೆ ಸೀಮಿತವಾಗಿರದೆ ಕಬ್ಬಿಣ, ಸಿಮೆಂಟ್ ಸಹ ಇಲ್ಲಿ ಕಲಾತ್ಮಕತೆ ಪಡೆದುಕೊಂಡಿವೆ. ಸುಮಾರು ೧೪ ಅಡಿ ಎತ್ತರದ 'ತಾಯಿ' ಶಿಲ್ಪ ಇಡೀ ವಿದ್ಯಾರಣ್ಯದ ಆಕರ್ಷಣೆಯ ಕೇಂದ್ರ. ಭೂಮಿಯಿಂದ ಉದ್ಭವಿಸಿದ ಮೂರ್ತಿಯಂತೆ ಈ ಶಿಲ್ಪ ಕಾಣುತ್ತದೆ. ಶಿಲ್ಪವನದ ಇನ್ನೊಂದು ಆಕರ್ಷಣೆ 'ಸಹಜ ಕೊಳ'. ಇಲ್ಲಿರುವ ಕಲ್ಲುಗಳನ್ನು ಅವು ಇರುವ ಹಾಗೆಯೇ ಒಂದುಗೂಡಿಸಿ ನಿರ್ಮಿಸಿದ ಕೊಳವಿದು.

ಸ್ಥಳೀಯ ಕಲ್ಲುಕುಟಿಗರನ್ನು ಈ ಯೋಜನೆಗೆ ಬಳಸಿಕೊಳ್ಳುತ್ತ ಅವರನ್ನು ಸಹ ಶಿಲ್ಪಿಗಳನ್ನಾಗಿ ಪರಿವರ್ತಿಸುವ ಪ್ರಯತ್ನವಿದೆ. ನಮ್ಮ ಪಾರಂಪರಿಕ ಹಾಗೂ ಸಮಕಾಲೀನ ಕಲೆಗಳನ್ನು ಒಂದುಗೂಡಿಸುವ ಪ್ರಯತ್ನ ಶಿಲ್ಪವನದ ಯೋಜನೆಯಲ್ಲಿದೆ. ದೇಶದಲ್ಲೇ ಮಾದರಿ ಶಿಲ್ಪವನವಾಗಿ ರೂಪುಗೊಳ್ಳುವ ಈ ಶಿಲ್ಪವನ ಹಲವು ವರ್ಷಗಳ ನಂತರ ಪಾರಂಪರಿಕೆ ಹಾಗೂ ಸಮಕಾಲಿನ ಕಲೆಗಳ ಬಗ್ಗೆ ಅಧ್ಯಯನ ಮಾಡುವವರಿಗೆ ಹೊಸ ಆಯಾಮವನ್ನು ಕಲ್ಪಿಸಿಕೊಡಲಿದೆ.

'ಶಿಲ್ಪವನ'ಕ್ಕೆ ಭೇಟಿ ನೀಡಿ ಇಲ್ಲಿಯ ಶಿಲ್ಪಗಳನ್ನು ಕಂಡ ಖ್ಯಾತ ಕಲಾವಿದರು, ವಿದ್ವಾಂಸರು ಹಾಗೂ ಗಣ್ಯರು ಮೆಚ್ಚಿಗೆ ವ್ಯಕ್ತಪಡಿಸಿದ್ದಾರೆ. ಡಾ. ಯು.ಆರ್. ಅನಂತಮೂರ್ತಿ, ಶ್ರೀ ಜಿ. ನಾರಾಯಣ, ಶ್ರೀ ಕೀರ್ತಿನಾಥ ಕುರ್ತಕೋಟಿ, ಶ್ರೀ ವೀರಪ್ಪಮೊಯ್ಲಿ ಹಾಗೂ ಅನೇಕ ದೇಶಿಯ- ವಿದೇಶಿಯ ಕಲಾವಿದರು ಭೇಟಿ ಕೊಟ್ಟಿದ್ದಾರೆ.

# ಹೊರನಾಡ ಕನ್ನಡಿಗರ ಚಟುವಟಿಕೆಗಳು

*ವಿಶ್ವನಾಥ ಬದಿಕಾನ*

ಇವತ್ತು ಕನ್ನಡಕ್ಕೆ ಸಂಬಂಧಿಸಿದಂತೆ ಹೊರನಾಡಲ್ಲಿ ನೂರಾರು ಚಟುವಟಿಕೆಗಳು ನಡೆಯುತ್ತಿವೆ. ಅವುಗಳು ಒಂದಲ್ಲ ಒಂದು ರೀತಿಯ ಭಾಷಾಭಿಮಾನದ ನೆನಕೆಗಳು. ಅಗಲಿದ ಸಾಹಿತಿಗಳ ಅಥವಾ ಪ್ರಶಸ್ತಿ ಪಡೆದ ಸಾಹಿತಿಗಳ ಬಗೆಗೆ ಹಲವು ವಿಚಾರಗೋಷ್ಠಿಗಳು ಜರುಗುತ್ತವೆ. ನಾಟಕ, ಯಕ್ಷಗಾನ, ತಾಳಮದ್ದಲೆ, ಸಂಗೀತ, ಗಾಯನ ಮೊದಲಾದ ವೈವಿಧ್ಯಮಯ ಕಾರ್ಯಕ್ರಮಗಳು ಏರ್ಪಡುತ್ತವೆ. ಕರ್ನಾಟಕದ ಹೊರನಾಡಾದ ಮುಂಬೈ ಮಹಾನಗರದಲ್ಲಿ ೧೦ ಲಕ್ಷಕ್ಕಿಂತಲೂ ಹೆಚ್ಚು ಕನ್ನಡಿಗರಿದ್ದಾರೆ. ಅವರು ನೂರಕ್ಕಿಂತ ಹೆಚ್ಚುಕನ್ನಡ ಸಂಘಗಳನ್ನು ಕಟ್ಟಿಕೊಂಡಿದ್ದಾರೆ. ಕನ್ನಡ ಭಾಷೆ, ಕನ್ನಡ ಸಂಸ್ಕೃತಿಯ ಮೇಲಿರುವ ಅಭಿಮಾನದಿಂದ ಕನ್ನಡದ ವಿಶೇಷ ಹಬ್ಬಗಳನ್ನು ಆಚರಿಸುತ್ತಾರೆ. ಹೀಗೆಯೇ ದೆಹಲಿ, ಮಧುರೈ, ಮದರಾಸು, ಅನಂತಪುರ, ಕಾಸರಗೋಡು, ಥಾಣೆ, ಪಣಜಿ, ಪುಣೆ, ಹೈದರಾಬಾದ್ ಕಡೆಗಳಲ್ಲೂ ಕನ್ನಡ ಕಾರ್ಯಕ್ರಮಗಳು ನೆರವೇರುತ್ತವೆ.

ಪ್ರಸ್ತುತ ಲೇಖನದಲ್ಲಿ ೧೯೯೯ರ ಹೊರನಾಡ ಕನ್ನಡ ಚಟುವಟಿಕೆಗಳ ಸಮೀಕ್ಷೆ ಮಾಡಲಾಗಿದೆ.

**೧. ಅನಂತಪುರ**

ಅನಂತಪುರದ 'ಸಾಹಿತ್ಯ ಸಂಗಮ' ಸಂಘಟನೆಯು 'ಪುರಂದರ ಸ್ಮರಣೆ' ಎಂಬ ಕಾರ್ಯಕ್ರಮವನ್ನು ನಡೆಸಿತು. ಡಾ. ಸದಾನಂದ ಅವರು ತೆಲುಗು ಭಾಷೆಗೆ ಅನುವಾದಿಸಿರುವ ಪುರಂದರದಾಸರ ಕೆಲವು ಕೀರ್ತನೆಗಳನ್ನು ಕನ್ನಡ ಮತ್ತು ತೆಲುಗು ಭಾಷೆಯಲ್ಲಿ ಹಾಡಲಾಯಿತು. ಡಾ. ಶಲಾಕಿ ರಘುನಾಥಶರ್ಮ, ಪ್ರೊ.ಟಿ.ಎಸ್.ರಾಘವನ್ ಮೊದಲಾದವರು ಅನುವಾದ ಕೃತಿಯ ಕುರಿತಂತೆ ಮಾತನ್ನಾಡಿದರು.

**೨. ಕಾಸರಗೋಡು**

ಕಾಸರಗೋಡಿನ ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗಕ್ಕೆ ಈಗ ಬೆಳ್ಳಿಹಬ್ಬದ ವರ್ಷ. ಕನ್ನಡ ಧ್ವನಿ ಮತ್ತು ಸ್ನೇಹರಂಗ ಎಂಬ ಎರಡು ಪತ್ರಿಕೆಗಳು ಬೆಳ್ಳಿಹಬ್ಬದ ವಿಶೇಷಾಂಕಗಳನ್ನು ಪ್ರಕಟಿಸಿದುವು. ಫೆಬ್ರವರಿ ೫ ಮತ್ತು ೬ ರಂದು

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯವರು ' ಕಾಸರಗೋಡು ಪ್ರದೇಶದ ಹಿಂದುಳಿದ ವರ್ಗಗಳ ಜನಾಂಗಿಕ ಅಧ್ಯಯನ' ಎಂಬ ವಿಚಾರ ಸಂಕಿರಣ ಏರ್ಪಡಿಸಿದ್ದರು. ಇದಲ್ಲದೆ ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ, ಎ.ಆರ್. ಕೃಷ್ಣಶಾಸ್ತ್ರಿ ಮೊದಲಾದ ಹಿರಿಯ ಚೇತನಗಳ ಜನ್ಮದಿನೋತ್ಸವವನ್ನು ಸಂದರ್ಭ ಸೂಚಕವಾಗಿ ಆಚರಿಸುತ್ತಾರೆ. ಕಾಸರಗೋಡಿನ ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನದ ವತಿಯಿಂದ 'ಕಳ್ಳಿಗೆ ಮಹಾಬಲ ಭಂಡಾರಿ ಪ್ರಶಸ್ತಿ 'ಯನ್ನು ಮೂವರು ಮಹಿಳೆಯರಿಗೆ ನೀಡಲಾಯಿತು. ೧೯೯೨, ೯೩ ಮತ್ತು ೯೪ರಲ್ಲಿ ಗಡಿನಾಡಲ್ಲಿ ಪ್ರಕಟವಾದ ಉತ್ತಮ ಪುಸ್ತಕಗಳನ್ನು ಆಯ್ದು ಬರಹಗಾರರನ್ನು ಸನ್ಮಾನಿಸಿ ಗೌರವಿಸಲಾಯಿತು.

೩. ಥಾಣೆ

ಥಾಣೆಯ ಆದಿಶಕ್ತಿ ಕನ್ನಡ ಶಾಲೆಯ ವತಿಯಿಂದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಸ್ಥಳೀಯರಾದ ಅಶೋಕ ಜೋಶಿಯವರು ಕನ್ನಡತನವನ್ನು ಜಾಗೃತಗೊಳಿಸಬೇಕೆಂದು ಕರೆಕೊಟ್ಟರು. ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷ ಉಳ್ಳೂರು ಗುತ್ತುವಾಮನ ಕೆ. ಶೆಟ್ಟಿಯವರು ಕನ್ನಡ ನಾಡು-ನುಡಿ-ಸಂಸ್ಕೃತಿಯ ಕುರಿತು ಅಭಿಮಾನ ವ್ಯಕ್ತಪಡಿಸಿದರು. ಡಾ. ಸಂಜೀವ ಶೆಟ್ಟಿಯವರು ಹೊರನಾಡಿಗರು ಪರಸ್ಪರ ಮಾತನಾಡುವಾಗ ಜನಸಮೂಹ, ಹೋಟೇಲುಗಳಲ್ಲಿ, ಮನೆ- ಶಾಲೆಗಳಲ್ಲಿ ಕನ್ನಡದಲ್ಲೇ ಮಾತನಾಡಬೇಕೆಂದು ಒತ್ತಿ ನುಡಿದರು.

೪. ದೆಹಲಿ

ದೆಹಲಿ ಕರ್ನಾಟಕ ಸಂಘ ಮತ್ತು 'ದೆಹಲಿ ಕನ್ನಡಿಗ' ಪತ್ರಿಕೆ ಇವೆರಡೂ ಇಲ್ಲಿನ ಪ್ರಮುಖ ಸಂಘಟನೆಗಳು. ಇವು ವರ್ಷಪೂರ್ತಿ ವಿಚಾರಗೋಷ್ಠಿ, ಸಾಹಿತ್ಯ ಸಂವಾದ, ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತವೆ.

ದೆಹಲಿ ಕರ್ನಾಟಕ ಸಂಘವು ಜನವರಿ ತಿಂಗಳಲ್ಲಿ ಏಕಾಂಕ ನಾಟಕಗಳ ಸ್ಪರ್ಧೆಯನ್ನು ಏರ್ಪಡಿಸಿತ್ತು. ಫೆಬ್ರುವರಿ ತಿಂಗಳಲ್ಲಿ ನೃತ್ಯ, ನಾಟಕ, ಸಂಗೀತೋತ್ಸವ ಕಾರ್ಯಕ್ರಮವಾಯಿತು. ಇದೇ ಸಂದರ್ಭದಲ್ಲಿ ಗಂಧರ್ವ ಮಹಾವಿದ್ಯಾಲಯದವರೊಂದಿಗೆ ಜಂಟಿಯಾಗಿ ಎರಡು ದಿನಗಳ ನಾಟಕ ಮತ್ತು ನೃತ್ಯ ಪ್ರದರ್ಶನ ಏರ್ಪಡಾಯಿತು. ಬೆಂಗಳೂರು ಸಮುದಾಯ ತಂಡದವರು 'ಮಹಾಚೈತ್ರ' ನಾಟಕವನ್ನು ಪ್ರದರ್ಶಿಸಿದರು. ಕನ್ಯಾರಾಮಚಂದ್ರನ್‌ರವರ ನೃತ್ಯಪ್ರದರ್ಶನದ ಜೊತೆಗೆ ಹಿಂದೂಸ್ಥಾನಿಗಾಯನ, ಹಾಸಣಗಿ ಗಣಪತಿ ಭಟ್ಟರ ಲಯಬದ್ಧ ಗಾಯನ ಕಾರ್ಯಕ್ರಮವಿತ್ತು. ಏಪ್ರಿಲ್ ತಿಂಗಳಲ್ಲಿ ನಾಟಕ ಅಕಾಡೆಮಿ ವತಿಯಿಂದ ನಾಟಕೋತ್ಸವ ಸಮಾರಂಭವಾಯಿತು. ಸಚಿವ ಎಚ್.ವಿಶ್ವನಾಥ್, ಅಧ್ಯಕ್ಷೆ ಬಿಂದೋಡಿ ಲೀಲಾ ಮತ್ತು ಸಚಿವ ಪ್ರಭಾಕರ ರಾಣೆ ಮೊದಲಾದ ಗಣ್ಯರು ಪಾಲ್ಗೊಂಡಿದ್ದರು. ಉತ್ಸವದ ಅಂಗವಾಗಿ ಕೊನೆಯ ದಿನ ನೀನಾಸಂ ತಂಡದವರಿಂದ 'ಅಥೆನ್ಸಿನ ಅರ್ಥವಂತ' ಎಂಬ ನಾಟಕ ಪ್ರದರ್ಶಿತವಾಯಿತು. ಮೇ ತಿಂಗಳಲ್ಲಿ 'ದೆಹಲಿಯ ಕನ್ನಡ ಚರಿತ್ರೆ' ಎಂಬ

೨೦೦ ಪುಟದ ಪುಸ್ತಕ ತಯಾರಿ ಯೋಜನೆ ರೂಪುಗೊಂಡಿತು. ದೆಹಲಿ ಮತ್ತು ಕನ್ನಡಿಗರ ಸಂಬಂಧ, ಕನ್ನಡಿಗರು ನೆಲೆಯೂರಿ ಬಾಳಿ ಬದುಕಿದ ರೀತಿ, ಎದುರಿಸಬೇಕಾದ ಸಾಂಸ್ಕೃತಿಕ ಸಾಮಾಜಿಕ ಸಮಸ್ಯೆಗಳು, ಕನ್ನಡಿಗರ ಒಂಟಿತನ, ಕನ್ನಡ ಸಂಘ ಸಂಸ್ಥೆಗಳು, ಮಠಮಂದಿರಗಳು, ಮನವಿ ಪತ್ರಗಳು, ದೆಹಲಿಗೆ ಭೇಟಿ ನೀಡಿದ ಹಿರಿಯ ಸಾಹಿತಿಗಳು-ಹೀಗೆ ಹಲವು ನೆಲೆಗಳಲ್ಲಿ ಕನ್ನಡ ಚಟುವಟಿಕೆಗಳು ರೂಪುಗೊಂಡ ಚಾರಿತ್ರಿಕ ವಿವರಗಳುಳ್ಳ ಯೋಜನೆಯಿದು. ಮೇ ತಿಂಗಳಲ್ಲಿ ಕರ್ನಾಟಕ ಸಂಘದ ವಾರ್ಷಿಕೋತ್ಸವ ನಡೆಯಿತು. ಸಂಘದ ಆವರಣದಲ್ಲಿ ಕನ್ನಡ ರಾಜ್ಯೋತ್ಸವ ಆಚರಿಸಲಾಯಿತು. ದೆಹಲಿ ಕನ್ನಡಿಗ ರಾಜಗೋಪಾಲರವರಿಗೆ 'ವಿಶಿಷ್ಟ ದೆಹಲಿಕನ್ನಡಿಗ' ಎಂಬ ಪ್ರಶಸ್ತಿ ನೀಡಿ ಗೌರವಿಸಲಾಯಿತು.

'ದೆಹಲಿ ಕನ್ನಡಿಗ' ಪತ್ರಿಕೆಯು ಜನವರಿ ತಿಂಗಳಲ್ಲಿ 'ಕನ್ನಡಕ್ಕೆ ಜಿ.ಬಿ. ಜೋಷಿಯವರ ಕೊಡುಗೆ' ಎಂಬ ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ಜಡಭರತ ಕಾವ್ಯನಾಮದ ಜೋಶಿಯವರ 'ಕದಡಿದ ನೀರು' 'ಸತ್ತವರ ನೆರಳು' 'ನಾನೇ ಬಿಜ್ಜಳ' ನಾಟಕಗಳ ಹಳತು ಹೊಸತು ವಿವರಣೆಗಳ ಸಂಘರ್ಷದ ಕುರಿತಂತೆ ಕೆ. ಗಣೇಶ್ ನಾಯಕ್ ವಿವರಣೆ ನೀಡಿದರು. ಮಾರ್ಚ್ ತಿಂಗಲಲ್ಲಿ ಕರ್ನಾಟಕ ಚಿತ್ರ ಕಲಾವಿದರಿಂದ ಒಂದು ದಿನದ ಸಮಾವೇಶ ಏರ್ಪಾಡಾಯಿತು. ಕರ್ನಾಟಕದ ಸುಪ್ರಸಿದ್ಧ ಚಿತ್ರಕಲಾವಿದರಾದ ಕಾಳಿದಾಸ ಪತ್ತಾರ್, ಅ.ಲ. ನರಸಿಂಹನ್, ಎನ್.ಮರಿಶಾಮಾಚಾರ್, ಎಸ್.ಎಂ. ನೀಲಾ, ಕಿಶೋರ್‌ಕುಮಾರ್, ವಲ್ಲೀಶ್. ವಿ. ಮೊದಲಾದವರು ವಿಚಾರ ಮಂಡನೆ ಮಾಡಿದರು. ಏಪ್ರಿಲ್ ೨ ಮತ್ತು ೩ ರಂದು ೧೧ನೆಯ ರಾಷ್ಟ್ರೀಯ ಕನ್ನಡ ಸಮ್ಮೇಳನವು ನಡೆಯಿತು. ಅಧ್ಯಕ್ಷರಾಗಿ ಡಾ. ಎಸ್.ಎಂ. ವೃಷಭೇಂದ್ರಸ್ವಾಮಿ ಮತ್ತು ಉದ್ಘಾಟಕರಾಗಿ ದೆಹಲಿ ಮುಖ್ಯಮಂತ್ರಿ ಮದನ್‌ಲಾಲ್ ಖುರಾನ ಭಾಗವಹಿಸಿದರು. ವಿಚಾರಗೋಷ್ಠಿ, ಕವಿಗೋಷ್ಠಿ, ಕನ್ನಡಿಗರ ಸರ್ವಾಂಗೀಣ ಪ್ರಗತಿ, ಬಾಲಗೋಷ್ಠಿ, ನಗರ ಜೀವನ ಮತ್ತು ಕನ್ನಡತನ ಕುರಿತ ಗೋಷ್ಠಿಗಳು ನಡೆದುವು. ಪ್ರೊ. ಐ.ಜಿ. ಸನದಿ ಸಮಾರೋಪ ಭಾಷಣ ಮಾಡಿದರು. ಏಪ್ರಿಲ್ ೧೦ ರಂದು ಕಿಟೆಲ್ ನಿಘಂಟು ಶತಮಾನೋತ್ಸವ ಕಾರ್ಯಕ್ರಮ ಏರ್ಪಡಿಸಲಾಯಿತು. ಕಿಟೆಲ್ಲರ ಕನ್ನಡ ಸೇವೆಯ ಕುರಿತಂತೆ ಎಚ್. ಸುಬ್ಬಣ್ಣಾಚಾರ್, ಡಾ. ವಿನೋದಾ ಬಾಯಿ, ಮೀನಾಕ್ಷಿ ತಂತ್ರಿ ಮೊದಲಾದ ವಿದ್ವಾಂಸರು ಚರ್ಚಿಸಿದರು. ನವೆಂಬರ್ ತಿಂಗಳಲ್ಲಿ 'ಹೊರನಾಡ ಕನ್ನಡಾಭಿವೃದ್ಧಿ' ಕುರಿತ ವಿಚಾರ ಸಂಕಿರಣ ಏರ್ಪಾಡಾಯಿತು.

೫. ಪಣಜಿ

ಸೆಪ್ಟೆಂಬರ್ ೨೪ ಮತ್ತು ೨೫ ರಂದು ಅಖಿಲಭಾರತ ಎರಡನೆಯ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಮ್ಮೇಳನವಾಯಿತು. 'ದೆಹಲಿ ಕನ್ನಡಿಗ' ಪತ್ರಿಕೆಯ ಆಶ್ರಯದಲ್ಲಿ ನಡೆದಿರುವ ಈ ಸಮ್ಮೇಳನದಲ್ಲಿ ಕನ್ನಡ ನಾಡು, ನುಡಿ, ಸಂಸ್ಕೃತಿಗೆ ಸಂಬಂಧಿಸಿದ ವಿಚಾರ

ಸಂಕಿರಣ, ಮಹಿಳಾ ಉತ್ಸವ, ಮಕ್ಕಳ ಉತ್ಸವ, ಸಂಗೀತ, ನೃತ್ಯ, ನಾಟಕ, ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಟ್ಟವು.

೬. ಪುಣೆ

ಮಹಾರಾಷ್ಟ್ರ ರಾಜ್ಯ ಪಠ್ಯಪುಸ್ತಕ ಮತ್ತು ಸಂಶೋಧನ ಮಂಡಳಿಯ ಕನ್ನಡ ವಿಭಾಗವು, ಬಾಲಭಾರತಿ ಕನ್ನಡ ೭ನೆಯ ವರ್ಗದ ಪಠ್ಯಕಮ್ಮಟವನ್ನು ನಡೆಸಿತು. ಮಹಾರಾಷ್ಟ್ರ ಹಾಗೂ ಗಡಿನಾಡು ಪ್ರದೇಶಗಳಾದ ಸೊಲ್ಲಾಪುರ, ಅಕ್ಕಲಕೋಟ, ಸಾಂಗಲಿ, ಜತ್ತ ಮುಂತಾದ ಭಾಗಗಳಿಂದ ಶಿಕ್ಷಣ ತಜ್ಞರು, ಪ್ರಾಥಮಿಕ, ಮಾಧ್ಯಮಿಕ ಮತ್ತು ಕಾಲೇಜು ಶಿಕ್ಷಕರು ಪಾಲ್ಗೊಂಡಿದ್ದರು. ಡಾ. ಶ್ರೀನಿವಾಸ ಹಾವನೂರು, ಎಸ್. ಕೆ. ಪೋರೆ, ಪ್ರೊ. ಸಂಕರಗೌಡ ಬಿರಾದಾರ, ಡಾ. ಸುನೀತಾ ಉದ್ಯಾವರ, ಬಿ. ಎಸ್. ಕುರ್ಕಾಲ, ಮೊದಲಾದವರು ಕಮ್ಮಟದಲ್ಲಿ ತಮ್ಮ ವಿಚಾರಗಳನ್ನು ಮಂಡಿಸಿದರು. ಮರಾಠಿ ಮೂಲವಾದ ' ವಾಲ್ಮೀಕಿ ರಾಮಾಯಣ ವರ ಆಣಿ ಶಾಪ' ಗ್ರಂಥವನ್ನು ಕನ್ನಡಕ್ಕೆ 'ವಾಲ್ಮೀಕಿ ರಾಮಾಯಣ ವರ ಮತ್ತು ಶಾಪ' ಎಂಬುದಾಗಿ ಅನುವಾದಿಸಿದ ರಾ. ಬಿಢೆಯವರನ್ನು, ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರವು ಪ್ರಶಸ್ತಿ ನೀಡಿ ಗೌರವಿಸಿತು.

೭. ಮದರಾಸು

ಮದರಾಸು ವಿಶ್ವವಿದ್ಯಾಲಯದ ಕನ್ನಡ ವಿಭಾಗ ಮತ್ತು ಇತರ ಹಲವು ಸಂಘಟನೆಗಳ ಆಶ್ರಯದಲ್ಲಿ ಕನ್ನಡ ಕಾರ್ಯಕ್ರಮಗಳು ನಡೆದಿವೆ. ವರ್ಷಾರಂಭದಲ್ಲಿ 'ಸ್ನೇಹ ಕೂಟ' ಸಂಘಟನೆಯು ಸಾಂಸ್ಕೃತಿಕ ಕಾರ್ಯಕ್ರಮವೊಂದನ್ನು ಏರ್ಪಡಿಸಿತ್ತು. ಉಸ್ಮಾನಿಯ ವಿಶ್ವವಿದ್ಯಾನಿಲಯದ ಪ್ರೊ. ಬಿ. ರಾಮಚಂದ್ರರಾವ್, ಭಾರತೀಯ ಸಂಸ್ಕೃತಿ ಮತ್ತು ಸಾಮರಸ್ಯ ಬದುಕಿನ ಸಮನ್ವಯ ಕುರಿತಂತೆ ವಿಷಯ ಮಂಡಿಸಿದರು. ಅಯನಾವರಂ ಕನ್ನಡ ಸಂಘದವರು ಹಮ್ಮಿಕೊಂಡ ರಾಜ್ಯೋತ್ಸವ ಕಾರ್ಯಕ್ರಮಕ್ಕೆ ಅ. ರಾ. ಮಿತ್ರ ಅವರು ಅಧ್ಯಕ್ಷರಾಗಿದ್ದರು. ಮಿತ ಅವರು 'ಕನ್ನಡ ಭಾಷಾ ಮಮತೆ' ಕುರಿತಂತೆ ಮಾತನಾಡುತ್ತಾ, ''ಭಾಷಾ ಮಮತೆಗಳು ಅತಿರೇಕಕ್ಕೆ ಹೋಗದೆ, ಅತಿರೇಕಕ್ಕೆ ಹೋಗಿ ಭಾಷಾ ಅಲ್ಪಸಂಖ್ಯಾತರಲ್ಲಿ ಒಂದು ಗೊಂದಲಕ್ಕೆ ಕಾರಣವಾಗದೆ, ಅದೊಂದು ಸಾಂಸ್ಕೃತಿಕ ಸಿದ್ಧಾಂತವಾಗಿ ಬೆಳೆಯುವುದು ಲೇಸೆಂದು'' ಅಭಿಪ್ರಾಯಪಟ್ಟರು. ಆ ದಿನ ಡುಂಡಿರಾಜ್ ಬರೆದ 'ಹುಡುಕಾಟ' ನಾಟಕವನ್ನು, ರಂಗಚೇತನ ಕಲಾವಿದರು ಪ್ರದರ್ಶಿಸಿದರು. ಈ ವರ್ಷ ಅಯನಾವರಂ ಕನ್ನಡ ಶಾಲೆಯ ೨೫ನೆಯ ವಾರ್ಷಿಕೋತ್ಸವ ನಡೆಯಿತು. ಕೃಷಿಮಂತ್ರಿ ಎಚ್. ಹುಚ್ಚುಮಾಸ್ತಿಗೌಡರು ಕಾರ್ಯಕ್ರಮಕ್ಕೆ ಭಾಗವಹಿಸಿ ಭಾಷಾ ಅಲ್ಪಸಂಖ್ಯಾತರ ಸವಲತ್ತುಗಳ ಬಗೆಗೆ ಮಾತನಾಡಿದರು.

ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಸಂಶೋಧನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಾಹಿತ್ಯಿಕ ಕಾರ್ಯಕ್ರಮ ನಡೆಯಿತು. ಮುಖ್ಯ ಅತಿಥಿಗಳಾಗಿ ಬನ್ನಂಜೆ ಗೋವಿಂದಾಚಾರ್ಯ ಮತ್ತು ನೆದರ್‌ಲ್ಯಾಂಡಿನ ರಾಬರ್ಟ್ ಜೆದೆನ್ ಬೋಸ್

ಪಾಲ್ಗೊಂಡರು. ಬನ್ನಂಜೆಯವರು ಮಾತನಾಡುತ್ತಾ, "ಪಾಶ್ಚಾತ್ಯರು ಒಂದು ಭಾಷೆ, ಸಾಹಿಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡುವ ಕಾಳಜಿ ವಹಿಸುತ್ತಾರೆ. ಆದರೆ ನಮ್ಮ ದೇಶದಲ್ಲಿ ಆಳಕ್ಕೆ ಇಳಿಯಲು ಅವಕಾಶವೇ ಇಲ್ಲ" ಎಂದು ಹೇಳಿದರು. ನವೆಂಬರ್‌ನಲ್ಲಿ ನಡೆದ ಸಾಹಿತ್ಯ ಸಂವಾದ ಕಾರ್ಯಕ್ರಮವೊಂದರಲ್ಲಿ ಮುಖ್ಯ ಅತಿಥಿಗಳಾಗಿ ಕೆ. ಎಸ್. ಭಗವಾನ್ ಮತ್ತು ಕಾಳೇಗೌಡ ನಾಗವಾರ ಪಾಲ್ಗೊಂಡರು.

**೮. ಮಧುರೈ**

ಮಧುರೈ ಕರ್ನಾಟಕ ಸಂಘಕ್ಕೆ ೩೫ ವರ್ಷಗಳಾದವು. ಪ್ರತಿ ವರ್ಷದಂತೆ ಈ ವರ್ಷವೂ ಶ್ರೀ ಪುರಂದರದಾಸರ ಆರಾಧನಾ ಮಹೋತ್ಸವ, ಕನ್ನಡ ರಾಜ್ಯೋತ್ಸವ ಮತ್ತು ಮಕ್ಕಳ ದಿನಾಚರಣೆಯನ್ನು ಆಚರಿಸಲಾಯಿತು. ವಿ. ಜಿ. ರಾಮಮೂರ್ತಿ ಅಧ್ಯಕ್ಷರಾಗಿಯೂ, ಜಿ. ಎಸ್. ಸಿದ್ಧಲಿಂಗಯ್ಯ ಮತ್ತು ಪಿ. ಆರ್. ಮಿತ್ರ ಮುಖ್ಯ ಅತಿಥಿಗಳಾಗಿಯೂ ರಾಜ್ಯೋತ್ಸವ ಸಮಾರಂಭದಲ್ಲಿ ಪಾಲ್ಗೊಂಡರು. ಡಾ. ಕಾಳೇಗೌಡ ನಾಗವಾರ ಅವರಿಂದ ಒಂದು ವಿಶೇಷ ಉಪನ್ಯಾಸ ಕಾರ್ಯಕ್ರಮವನ್ನು ಕರ್ನಾಟಕ ಸಂಘವು ಹಮ್ಮಿಕೊಂಡಿತ್ತು. ೧೯೯೫-೯೬ ನೆಯ ಸಾಲಿನಿಂದ ಮಧುರೈ ಕಾಮರಾಜ ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ. ಎ. ಸ್ನಾತಕೋತ್ತರ ಪದವಿ ತರಗತಿ ಆರಂಭಕ್ಕೆ ಅನುಮತಿ ದೊರೆಯಿತು.

**೯. ಮುಂಬೈ**

ಮುಂಬೈ ಮಹಾನಗರದಲ್ಲಿ ಮಾತುಂಗ ಕರ್ನಾಟಕ ಸಂಘವು ಪ್ರಮುಖವಾದುದು. ಜೊತೆಗೆ ಮುಂಬೈ ವಿಶ್ವವಿದ್ಯಾನಿಲಯ ಕನ್ನಡ ವಿಭಾಗ ಹಾಗೂ ಹಲವು ಕನ್ನಡ ಸಂಘಗಳು ನಾನಾ ರೀತಿಯ ಕನ್ನಡ ಚಟುವಟಿಕೆಗಳಲ್ಲಿ ನಿರತವಾಗಿವೆ.

ಕನ್ನಡ ಮರಾಠಿ ಬಾಂಧವ್ಯವನ್ನು ಬೆಸೆಯುವ ಕೆಲಸ ಮಾಡುವವರಿಗೆ ನೀಡಲಾಗುವ ಕರ್ನಾಟಕ ಸಂಘದ 'ವರದರಾಜ ಪ್ರಶಸ್ತಿ' ಯನ್ನು ಈ ಬಾರಿ ಮೀನಾ ವಾಂಗೀಕರ್ ಅವರಿಗೆ ನೀಡಲಾಯಿತು. ಮೀನಾ ವಾಂಗೀಕರ್ ಅವರು ವ್ಯಾಸರಾಯ ಬಲ್ಲಾಳರ 'ಬಂಡಾಯ' ಕಾದಂಬರಿಯನ್ನು ಮರಾಠಿಗೆ 'ಬಂಡ್' ಎಂಬ ಹೆಸರಿನಲ್ಲಿ ಅನುವಾದಿಸಿದರು. ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸುವ ಉದ್ದೇಶದಿಂದ ಸಂಘವು 'ಲಲಿತಾಕಲಾ ವೇದಿಕೆ' ಯೆಂಬ ಸಂಘಟನೆಯನ್ನು ಹುಟ್ಟುಹಾಕಿಕೊಂಡಿದೆ. ಸಂಘದ ಆಶ್ರಯದಲ್ಲಿ ಕೆ. ಕೆ. ಹೆಬ್ಬಾರ್ ಅವರಿಗೆ ಡಾಕ್ಟರೇಟ್ ಪದವಿ ಬಂದಿರುವ ಸಂದರ್ಭದ ನೆನಪಿಗಾಗಿ ಸಮಾರಂಭವನ್ನು ಹಮ್ಮಿಕೊಳ್ಳಲಾಯಿತು. ಸಂಘವು ಪ್ರತಿವರ್ಷ ಪೇಜಾವರ ಸದಾಶಿವರಾಯರ ನೆನಪಿನಲ್ಲಿ ೧೧೦೦ ರೂಪಾಯಿಗಳ ಬಹುಮಾನ ಮತ್ತು ಪ್ರಶಸ್ತಿ ಪತ್ರ ಕೊಡುವ ಯೋಜನೆಯನ್ನು ಅನುಷ್ಠಾನಕ್ಕೆ ತಂದಿದೆ. ಜೂನ್ ತಿಂಗಳಲ್ಲಿ ಸಂಘದ ವಜ್ರಮಹೋತ್ಸವವನ್ನು ಹಮ್ಮಿಕೊಳ್ಳಲಾಯಿತು. ಉತ್ಸವದ ಅಂಗವಾಗಿ ಜೂನ್ ೧ ರಿಂದ ೫ ರವರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಟ್ಟವು. ಆ ಸಂದರ್ಭದಲ್ಲಿ ಅಂತರ ಭಾರತಿ ಕವಿ ಸಮ್ಮೇಳನವನ್ನು ಏರ್ಪಡಿಸಲಾಯಿತು. ಸಿಂಧಿ, ಮರಾಠಿ, ತಮಿಳು,

ಕೊಂಕಣಿ, ಗುಜರಾತಿ ಮತ್ತು ತುಳು-ಹೀಗೆ ೬ ಭಾಷೆಗಳ ಕವಿಗಳು ಕವಿತೆಗಳನ್ನು ಓದಿದರು.

ಮುಂಬೈ ವಿಶ್ವವಿದ್ಯಾನಿಲಯ ಕನ್ನಡ ವಿಭಾಗವು "ಆದಿಕವಿ ಪಂಪ ಪ್ರತಿಷ್ಠಾನ ಅಣ್ಣಿಗೇರಿ" ಇದರ ಆಶ್ರಯದಲ್ಲಿ, ಜನವರಿ ತಿಂಗಳಲ್ಲಿ ರಾಷ್ಟ್ರೀಯ ಮಟ್ಟದ ವಿಚಾರಸಂಕಿರಣವನ್ನು ಏರ್ಪಡಿಸಿತ್ತು. ಡಾ. ಎಂ. ಎಂ. ಕಲುಬುರ್ಗಿ, ಡಾ. ಹಂಪನಾ, ಡಾ. ಕಮಲಾ ಹಂಪನಾ, ಮಲ್ಲೇಪುರಂ ಜಿ. ವೆಂಕಟೇಶ್, ಡಾ. ಶಾಂತಿನಾಥ ದಿಬ್ಬದ ಮೊದಲಾದವರು ಪ್ರಬಂಧ ಮಂಡಿಸಿದರು. ಡಾ. ಎಂ. ಎಂ. ಕಲಬುರ್ಗಿಯವರು. ಮೈಸೂರು ಎಸೋಸಿಯೇಷನ್‌ನ ಬಂಗಾರದ ಹಬ್ಬ ದತ್ತಿಉಪನ್ಯಾಸ ಕಾರ್ಯಕ್ರಮದಲ್ಲಿ 'ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣ, ನಾಶ, ನಿರಾಕರಣ' ಎಂಬ ವಿಷಯದ ಕುರಿತು ಮೂರು ಉಪನ್ಯಾಸಗಳನ್ನು ನೀಡಿದರು. ಕನ್ನಡ ವಿಭಾಗ ಹಾಗೂ ಮಹಾರಾಷ್ಟ್ರ ಘಟಕದ ಸಾಹಿತ್ಯ ಪರಿಷತ್ ಆಶ್ರಯದಲ್ಲಿ ನಾಲ್ಕು ಕಮ್ಮಟಗಳನ್ನು ನಡೆಸಲಾಯಿತು. ಕಾವ್ಯ ಕಮ್ಮಟವನ್ನು ಡಾ. ಎಚ್. ಎಸ್. ವೆಂಕಟೇಶಮೂರ್ತಿ, ನಾಟಕ ಕಮ್ಮಟವನ್ನು ಶ್ರೀ ಮಂಜುನಾಥಯ್ಯ ಮತ್ತು ಕಾದಂಬರಿ, ಸಣ್ಣಕತೆಗಳ ಕಮ್ಮಟವನ್ನು ಎಚ್. ಎಸ್. ರಾಘವೇಂದ್ರರಾವ್ ಅವರು ನಡೆಸಿಕೊಟ್ಟರು. ಹಿರಿಯ ಕವಿ ಸು. ರಂ. ಎಕ್ಕುಂಡಿಯವರೊಡನೆ ಸಾಹಿತ್ಯ ಸಂವಾದ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. 'ಕಿಟ್ಟೆಲ್ ಮತ್ತು ಕೆ. ಜಿ. ಕುಂದಣಗಾರ' ಸಂಸ್ಮರಣ ಕಾರ್ಯಕ್ರಮದಲ್ಲಿ ಡಾ. ವಿಲಿಯಂ ಮಾಡ್ತ 'ಕಿಟ್ಟೆಲ್ ನಿಘಂಟಿನ' ಕುರಿತಂತೆ ಹಾಗೂ ಕುಂದಣಗಾರರ ಜೀವನ ಸಾಧನೆ ಕುರಿತಂತೆ ಡಾ. ಮ. ಗು. ಬಿರಾದಾರ ಮಾತನಾಡಿದರು.

ಡಾ. ಎ. ಸುಬ್ಬಣ್ಣರೈ ಅವರ 'ದ. ಕ. ಜಿಲ್ಲೆಯ ಐತಿಹ್ಯಗಳು' ಎಂಬ ಸಂಶೋಧನ ಕೃತಿಯು ಕನ್ನಡ ವಿಭಾಗದ ವತಿಯಿಂದ ಪ್ರಕಟವಾಯಿತು. ಈ ವರ್ಷದಿಂದ ಕನ್ನಡ ಡಿಪ್ಲೊಮಾ ತರಗತಿಗಳನ್ನು ಜಾರಿಗೊಳಿಸಲಾಗಿದೆ. ಡಾ. ಗಿರಿಜಾಶಾಸ್ತ್ರಿ, ಡಾ. ಸರಸ್ವತಿ, ಹಾಗೂ ಡಾ. ಟಿ. ವಿ. ನಾಯಕ್ ಅವರಿಗೆ ಈ ಬಾರಿ ಪಿಎಚ್. ಡಿ., ಪದವಿ ಪ್ರಧಾನ ಮಾಡಲಾಯಿತು.

**೧೦. ಹೈದರಾಬಾದ್**

ಹೈದರಾಬಾದ್‌ನ 'ದೀನದಾರ್ ಅಂಜುಮಾನ್' ಸಂಸ್ಥೆಯ ಆಶ್ರಯದಲ್ಲಿ ಅಂತರರಾಷ್ಟ್ರೀಯ ಧರ್ಮ ಸಮ್ಮೇಳನವು ಜರುಗಿತು. ಸಮ್ಮೇಳನದ ಗೋಷ್ಠಿಯನ್ನುದ್ದೇಶಿಸಿ ಮಾತನಾಡಿದ ಪ್ರೊ. ಸಿದ್ದಣ್ಣ ಲಂಗೋಟಿಯವರು, ಬಸವಣ್ಣನವರು ಕನಸುಕಂಡ ಜಾತಿರಹಿತ ಸಮಾಜ ಕಾರ್ಯವು ದಾಸೋಹದ ಮೂಲಕ ಆರ್ಥಿಕ ಕ್ರಾಂತಿ ಸಾಧ್ಯ' ಎಂದು ಸಾರಿದರು.

ಇವತ್ತು ವಿದೇಶಗಳಲ್ಲೂ ಕನ್ನಡ ಸಂಘಟನೆ ಹಾಗೂ ಚಟುವಟಿಕೆಗಳು ಕೇಳಿಬರುತ್ತಿವೆ. ಕರ್ನಾಟಕದ ಹಲವಾರು ಸಾಹಿತಿಗಳು, ವಿದ್ವಾಂಸರು ಕುವೈಟ್, ದುಬೈ, ಬಹರೈನ್ ಮೊದಲಾದ ಅರಬ್ ಪಟ್ಟಣಗಳಲ್ಲಿ ನಡೆಯುವ ಕನ್ನಡ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ.

# ಡಾ. ಎಚ್. ಸುದರ್ಶನ್

*ಕೇಶವನ್ ಪ್ರಸಾದ್ .ಕೆ*

---



೧೯೮೦ ರಿಂದ ಬಿಳಿಗಿರಿರಂಗನ ಬೆಟ್ಟದಲ್ಲಿ (ಮೈಸೂರು ಜಿಲ್ಲೆ) ಸೋಲಿಗರ ಬದುಕಿನ ಬವಣೆಯನ್ನು ನೀಗುವ ಸಲುವಾಗಿ ಕಾರ್ಯ ಪ್ರವೃತ್ತರಾಗಿರುವ ಡಾ. ಎಚ್. ಸುದರ್ಶನ್ ಅವರಿಗೆ ಸ್ಫೂರ್ತಿ ಸ್ವಾಮಿವಿವೇಕಾನಂದರು. ಇದಕ್ಕೆ ಹಿನ್ನೆಲೆ ಸುದರ್ಶನ್ ಅವರ ಹನ್ನೆರಡನೇ ವಯಸ್ಸಿನಲ್ಲಿ ನಡೆದ ಒಂದು ಘಟನೆ. ವೈದ್ಯಕೀಯ ಸೌಲಭ್ಯದ ಕೊರತೆಯಿಂದ ತಂದೆಯವರು ಕಣ್ಣುಮುಂದೆಯೇ ಪ್ರಾಣಬಿಟ್ಟಾಗ ಅಪಾರ ದುಃಖಿತರಾದ ಸುದರ್ಶನ್ ಅವರಿಗೆ ವೈದ್ಯಕೀಯ ಅಧ್ಯಯನದ ಆಸೆ ನೆಲೆಯೂರಿತು. ಹದಿನಾರನೇ ವಯಸ್ಸಿನಲ್ಲೆ ವಿವೇಕಾನಂದ, ರಾಮಕೃಷ್ಣ ಪರಮಹಂಸ ಮುಂತಾದ ದಾರ್ಶನಿಕರ ಪುಸ್ತಕಗಳನ್ನು ಓದಿ ಅವರ ತತ್ವ ಆದರ್ಶಗಳನ್ನು ತಿಳಿದುಕೊಂಡು, ಅನೇಕ ಆಶ್ರಮಗಳಿಗೆ ಭೇಟಿ ಮಾಡಿ ಭವಿಷ್ಯದ ಬಗ್ಗೆ ಸುದರ್ಶನ್ ಒಂದು ನಿರ್ಧಾರಕ್ಕೆ ಬಂದಿದ್ದರು.

ಮುಂದೆ ವೈದ್ಯಕೀಯ ಅಧ್ಯಯವ ಮಾಡುತ್ತಿರುವಾಗ ಸುದರ್ಶನ್ ಒಮ್ಮೆ ನೀಲಗಿರಿ ಬೆಟ್ಟಕ್ಕೆ ಹೋಗಿದ್ದರು. ಅಲ್ಲಿ ಡಾ. ನರಸಿಂಹನ್ ಎಂಬುವರು ಗಿರಿಜನರ ಅಭಿವೃದ್ಧಿಗಾಗಿ ದುಡಿಯುತ್ತಿದ್ದರು. ಆಗ ಸುದರ್ಶನ ಅವರ ಮನಸ್ಸಿನಲ್ಲಿ ಇದೇ ಹಾದಿಯಲ್ಲಿ ಮುಂದುವರಿಯಬೇಕೆಂಬ, ಬಡವರ ಸೇವೆ ಮಾಡಬೇಕೆಂಬ ಆಸೆ ತೀವ್ರವಾಯಿತು. ವೈದ್ಯಕೀಯ ಅಧ್ಯಯನವನ್ನು ಅವರು ಮುಗಿಸಿದರು. ಬೆಂಗಳೂರು ವೈದ್ಯಕೀಯ ಕಾಲೇಜಿನಿಂದ ೧೯೭೪ ರಲ್ಲಿ ವೈದ್ಯಕೀಯ ಪದವಿ ಪಡೆದ ಮೇಲೆ ೧೯೭೫ ರಿಂದ ೧೯೭೮ ರವರೆಗೆ ರಾಮಕೃಷ್ಣ ಮಿಷನ್ನಿನ ಆರೋಗ್ಯಯೋಜನೆಗಳಲ್ಲಿ ಹಿಮಾಲಯ, ಹೌರಾ ಮತ್ತು ಕೊಡಗಿನ ಪೊನ್ನಂ ಪೇಟೆಯಲ್ಲಿ ಸೇವೆ ಸಲ್ಲಿಸಿದರು.

ಹೀಗೆ ಸೇವೆಯಲ್ಲಿ ತೊಡಗಿರುವಾಗಲೇ ತಮಗೊಂದು ಸೂಕ್ತ ಸ್ಥಳಕ್ಕಾಗಿ ಅರಸುತ್ತಾ ಬಿಳಿರಂಗನಬೆಟ್ಟವನ್ನು ಆಯ್ಕೆ ಮಾಡಿಕೊಂಡರು. ಸೋಲಿಗರಿಗೆ ವೈದ್ಯಕೀಯ

ಸೇವೆಯನ್ನು ನೀಡುವ ಸಲುವಾಗಿ ಬಂದವರು ಅವರ ಸರ್ವತೋಮುಖ ಏಳಿಗೆ ಬಗ್ಗೆ ಚಿಂತನೆ ನಡೆಸಿ, ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಮೊದಲಿಗೆ ಸೋಲಿಗರ ವಿಶ್ವಾಸವನ್ನು ಗಳಿಸಲು ಒಂದು ವರ್ಷವೇ ಹಿಡಿಯಿತು. ಹಾವು ಕಡಿದವರ ದೇಹಕ್ಕೆ ಏರುತ್ತಿದ್ದ ವಿಷವನ್ನು, ಬಾಯಿಂದ ಹೀರಿ ರೋಗಿಯನ್ನು ಬದುಕಿಸಿದಂಥ ಪ್ರಸಂಗಗಳಿಂದ ಅವರ ವಿಶ್ವಾಸ ಪಡೆಯಲು ಸಾಧ್ಯವಾಯಿತು. ಆ ಸಂದರ್ಭದಲ್ಲೇ ಅವರಲ್ಲಿ ಮನೆ ಮಾಡಿಕೊಂಡಿದ್ದ ದಾರಿದ್ರ್ಯ, ಅನಕ್ಷರತೆ, ಅಪೌಷ್ಟಿಕತೆ ಮುಂತಾದ ಸಮಸ್ಯೆಗಳನ್ನು ಬಹಳ ಹತ್ತಿರದಿಂದ ಕಂಡುಕೊಂಡ ಸುದರ್ಶನ್, ಅವರಿಗಾಗಿ ಸಮಗ್ರ ಪ್ರಗತಿಯ ಕಾರ್ಯಕ್ರಮವನ್ನು ರೂಪಿಸಿದರು. ಈ ಸವಾಲುಗಳನ್ನು ಎದುರಿಸಲು 'ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ' ಎಂಬ ಸ್ವಯಂಸೇವಾ ಸಂಘಟನೆ ೧೯೮೧ ರಲ್ಲಿ ಸ್ಥಾಪನೆಯಾಗಿದ್ದು ಹೀಗೆ.

ಬಿಳಿರಂಗನಬೆಟ್ಟದಲ್ಲಿ ಸ್ಥಾಪನೆಗೊಂಡ ಈ ಕೇಂದ್ರವು ಕ್ರಮೇಣ, ಬೆಟ್ಟದ ೬೦ ಕಿಲೋ ಮೀಟರ್ ಅಂತರದೊಳಗೆ ಬರುವ ಸುಮಾರು ಇಪ್ಪತ್ತೊಂದು ಸಾವಿರ ಸೋಲಿಗರ ಸರ್ವತೋಮುಖ ಏಳಿಗೆಯ ಜವಾಬ್ದಾರಿಯನ್ನು ಹೊತ್ತಿದೆ. ಈ ಕೇಂದ್ರದ ಆಡಳಿತ ಸಂಘದಲ್ಲಿ ಒಟ್ಟು ಹನ್ನೊಂದು ಸದಸ್ಯರಿದ್ದು, ಅವರಲ್ಲಿ ಒಂಬತ್ತು ಮಂದಿ ಸೋಲಿಗರಿದ್ದಾರೆ. ಈ ಸಂಘಟನೆಯ ಪರಿಣಾಮವಾಗಿ ಹಿಂದೆ ಅವರಿಂದ ಕಿತ್ತುಕೊಳ್ಳಲಾದ ಜಮೀನು ಮರಳಿ ದೊರಕಿತು. ಈ ಹಿನ್ನೆಲೆಯಲ್ಲಿ ಸುದರ್ಶನ್ ಅವರು ಜೈಲುವಾಸವನ್ನು ಅನುಭವಿಸಬೇಕಾಯಿತು. ಆದರೆ ಈಗ ಸೋಲಿಗರ ಮಕ್ಕಳಿಗೆ ಕೇವಲ ಅಕ್ಷರ ಕಲಿಸುವುದು ಮಾತ್ರವಲ್ಲ, ಅನಂತರ ನಿರುದ್ಯೋಗಿಗಳಾಗದೆ ಸ್ವಾವಲಂಬಿಗಳಾಗಿ ಬದುಕಲು ಅನುಕೂಲವಾಗುವಂತೆ ಕೇಂದ್ರವು ವಿವಿಧ ತರಬೇತಿಯನ್ನು ನೀಡುತ್ತಿದೆ.

ಕಾಡನ್ನೇ ನಂಬಿ ಬದುಕಿದ್ದ ಸೋಲಿಗರಿಗೆ ಗುಡಿಕೈಗಾರಿಕಾ ಕೇಂದ್ರದ ಅಡಿಯಲ್ಲಿ ಅಗರಬತ್ತಿ ಉದ್ಯಮ, ಜೇನುತುಪ್ಪ ಶುದ್ಧೀಕರಣ, ಅರಿಶಿನಪುಡಿ ತಯಾರಿಕಾ ಘಟಕ, ಮರಗೆಲಸ, ಚಪ್ಪಲಿ, ಬೆತ್ತದ ಕುರ್ಚಿ ಇತ್ಯಾದಿಗಳ ತಯಾರಿಕೆ, ಕೈಮಗ್ಗದ ಮೂಲಕ ಪಾಲಿವಸ್ತ್ರ ನಿರ್ಮಾಣ - ಇವೇ ಮೊದಲಾದ ಕೆಲಸಗಳಲ್ಲಿ ತೊಡಗಲು ಅವಕಾಶ ಕಲ್ಪಿಸಲಾಗಿದೆ. ಈ ಮೂಲಕ ಅವರ ಜೀವನದ ಏಳಿಗೆಗೆ ಸಹಾಯವಾಗಿದೆಯಲ್ಲದೆ, ಆರ್ಥಿಕಸ್ಥಿತಿ ಸುಧಾರಿಸಿದೆ.

ಸೋಲಿಗರ ಹನ್ನೆರಡು-ಹದಿನೈದು ವಯಸ್ಸಿನ ಬಾಲಕರು ಮುನ್ನೂರು ಜಾತಿಯ ಗಿಡಗಂಟೆಗಳ ಹೆಸರುಗಳನ್ನು ತಮ್ಮ ಸೋಲಿಗ ಭಾಷೆಯಲ್ಲಿ ಹೇಳಬಲ್ಲರು. ಇದು ಕಾಡಿಗೂ ಈ ಜನರಿಗೂ ಇರುವ ಸಂಬಂಧಗಳನ್ನು ಹೇಳುತ್ತದೆ. ಗಿಡ-ಮೂಲಿಕೆಗಳಾಗಿ ಬಳಕೆಯಾಗುತ್ತಿರುವ ನೂರಾರು ಜಾತಿಯ ಸಸ್ಯಗಳನ್ನು ವ್ಯವಸ್ಥಿತವಾಗಿ ಬೆಳೆಸುವ ಪ್ರಯತ್ನವನ್ನು ಮಾಡಿ, ಈಗಾಗಲೇ ಔಷಧೀಯ ಗುಣವುಳ್ಳ ನಾನೂರ ಐವತ್ತು ಗಿಡಮೂಲಿಕೆ ಬೀಜಗಳನ್ನು ಸಂಗ್ರಹಿಸಿ, ಅವುಗಳ ತಳಿಗಳನ್ನು ಬೆಳೆಸುವ ಸಲುವಾಗಿ ಹತ್ತು ಎಕರೆಯ 'ಸಂಜೀವಿನಿ ವನ' ವನ್ನು ಸುದರ್ಶನ ಮಾಡಿದ್ದಾರೆ.

ಹೀಗೆ ೧೯೮೧ ರಲ್ಲಿ ಬಿಳಿಗಿರಿ ರಂಗನ ಬೆಟ್ಟದಲ್ಲಿ ಆರಂಭಗೊಂಡ ಸ್ವಂಯಸೇವಾ ಸಂಘಟನೆಯೊಂದು ಇಂದು ಬೃಹತ್ ಸಂಸ್ಥೆಯಾಗಿ ಬೆಳೆದಿದೆ. ಸೋಲಿಗರ ಸರ್ವತೋಮುಖ ಏಳಿಗೆಗಾಗಿ ಅತ್ಯಂತ ಮಾನವೀಯ ತಳಹದಿಯಲ್ಲಿ ಸಲ್ಲಿಸಿದ ಸೇವೆಗಾಗಿ ಡಾ. ಎಚ್. ಸುದರ್ಶನ್ ಅವರಿಗೆ 'ಪರ್ಯಾಯ ನೊಬೆಲ್ ಪ್ರಶಸ್ತಿ' ಎಂದೇ ಹೆಸರಾದ, ಅಂತರರಾಷ್ಟ್ರೀಯ 'ರೈಟ್ ಲೈವ್ಲಿಹುಡ್ ಪ್ರಶಸಿ' ಲಭಿಸಿದೆ. ಮನುಕುಲದ ಉಳಿವಿಗಾಗಿ ಶ್ರಮಿಸಿದ ಗಣ್ಯರಿಗೆ ಈ ಬಹುಮಾನ ಮೀಸಲಾಗಿದ್ದು, ೧೯೯೪ ರಲ್ಲಿ ಡಾ. ಎಚ್. ಸುದರ್ಶನ್ ಅವರೂ ಸೇರಿದಂತೆ ಮೂರು ಮಂದಿ ಸಾಧಕರು ಈ ಬಹುಮಾನವನ್ನು ಹಂಚಿಕೊಂಡಿದ್ದಾರೆ. ಪ್ರಶಸ್ತಿಯಿಂದ ಬಂದ ೨೪ ಲಕ್ಷ ರೂಪಾಯಿ ಮೊತ್ತವನ್ನು ಸೋಲಿಗರ ಮಕ್ಕಳ ಉನ್ನತಶಿಕ್ಷಣ ಉದ್ದೇಶಕ್ಕಾಗಿ ಬಳಸಲಾಗುವುದೆಂದು ಅವರು ಹೇಳಿದ್ದಾರೆ. ಕನ್ನಡಿಗರೊಬ್ಬರಿಗೆ ಸಂದ ಈ ಗೌರವ ಹೆಮ್ಮೆಯ ಸಂಗತಿಯಾಗಿದೆ.



# ಡಾ. ಯು. ಆರ್. ಅನಂತಮೂರ್ತಿ

*ಮಾಧವ ಪೆರಾಜೆ*



ತಮ್ಮ ಸಾಹಿತ್ಯದ ಮೂಲಕ ಹಾಗೂ ವಾಗ್ವಾದ ಹುಟ್ಟು ಹಾಕಬಲ್ಲ ಸಾಂಸ್ಕೃತಿಕ ಚಿಂತನೆಗಳ ಮೂಲಕ ಕನ್ನಡಕ್ಕೆ ಚಿರಪರಿಚಿತರಾಗಿರುವ ಉಡುಪಿ ರಾಜಗೋಪಾಲಾಚಾರ್ ಅನಂತಮೂರ್ತಿ ಅವರು, ಈಗ ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿ ಪಡೆದುಕೊಂಡಿದ್ದಾರೆ. ಅನಂತಮೂರ್ತಿಯವರು ಆರನೆಯ ಜ್ಞಾನಪೀಠ ಪ್ರಶಸ್ತರು. ಡಿಸೆಂಬರ್ ೨೧, ೧೯೩೨ ರಂದು ಜನಿಸಿದ ಇವರ ಹುಟ್ಟೂರು, ಶಿವಮೊಗ್ಗ ಜಿಲ್ಲೆಯ, ತೀರ್ಥಹಳ್ಳಿ ತಾಲೂಕಿನ ಮೇಳಿಗೆ. ಹುಟ್ಟೂರಿನ ಸಂಸ್ಕೃತ ಪಾಠಶಾಲೆಯಲ್ಲಿ ಸಾಂಪ್ರದಾಯಿಕ ವಿದ್ಯೆಯನ್ನು ಪಡೆದ ಇವರು, ತೀರ್ಥಹಳ್ಳಿ, ಶಿವಮೊಗ್ಗಗಳಲ್ಲಿ ಆರಂಭಿಕ ಶಿಕ್ಷಣವನ್ನು ಪೂರೈಸಿ, ಮುಂದೆ ಮೈಸೂರು ವಿಶ್ವವಿದ್ಯಾಲಯದಿಂದ (೧೯೫೬) ಇಂಗ್ಲಿಷ್ ಎಂ. ಎ. ಪದವಿಯನ್ನು ಚಿನ್ನದ ಪದಕ ಸಹಿತ ಪಡೆದರು. ಬಳಿಕ ಬರ್ಮಿಂಗ್‌ಹಾಮ್ ವಿಶ್ವವಿದ್ಯಾಲಯದಲ್ಲಿ 'ಪಾಲಿಟಿಕ್ಸ್ ಆಂಡ್ ಫಿಕ್ಷನ್ ಇನ್ ದಿ ೧೯೩೦ಸ್ ' ಎಂಬ ಸಂಶೋಧನೆಗೆ (೧೯೬೬ರಲ್ಲಿ) ಡಾಕ್ಟರೇಟ್ ಪದವಿಯನ್ನು ಗಳಿಸಿದರು. ಶಿವಮೊಗ್ಗ, ಹಾಸನಗಳ ಇಂಟರ್‌ಮೀಡಿಯೆಟ್ ಕಾಲೇಜುಗಳಲ್ಲಿ, ಮಹಾರಾಜರವರ ಕಾಲೇಜು, ಮೈಸೂರಿನ ಪ್ರಾದೇಶಿಕ ಶಿಕ್ಷಣ ಕಾಲೇಜು ಹಾಗೂ ಮೈಸೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ವಿಭಾಗಗಳಲ್ಲಿ ಜನಪ್ರಿಯ ಅಧ್ಯಾಪಕರಾಗಿ ಅನಂತಮೂರ್ತಿಯವರು ಕಾರ್ಯನಿರ್ವಹಿಸಿದರು. ಜರ್ಮನಿಯ ತೂಬಿಂಗೆನ್ ಹಾಗೂ ಅಮೆರಿಕೆಯ ಅಯೋವಾ ವಿಶ್ವವಿದ್ಯಾನಿಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿಯೂ ಕೆಲಸ ಮಾಡಿದರು. ಶಿಕ್ಷಣಕ್ಷೇತ್ರದಲ್ಲಿ ಅತ್ಯಂತ ಪ್ರತಿಷ್ಠೆಯ ಹುದ್ದೆಯಾದ ಕುಲಪತಿ ಸ್ಥಾನದಲ್ಲಿ ಕೇರಳದ ಮಹಾತ್ಮಗಾಂಧಿ ವಿಶ್ವವಿದ್ಯಾಲಯ (ಕೊಟ್ಟಾಯಂ)ದಲ್ಲಿ ೧೯೮೭ ರಿಂದ ೯೧ ರವರೆಗೆ ಕಾರ್ಯನಿರ್ವಹಿಸಿದರು. ಅನಂತರ ೧೯೯೨ ರಲ್ಲಿ ನ್ಯಾಶನಲ್ ಬುಕ್‌ಟ್ರಸ್ಟಿನ ಅಧ್ಯಕ್ಷರಾದರು. ಸದ್ಯಕ್ಕೆ

ಅನಂತಮೂರ್ತಿಯವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರು; ಕನ್ನಡದಲ್ಲಿ 'ರುಜುವಾತು' ಪತ್ರಿಕೆಯ ಸಂಪಾದಕರು.

ಈ ತನಕ ಅನಂತಮೂರ್ತಿಯವರಿಗೆ ಸಂದಿರುವ ಪ್ರಶಸ್ತಿಗಳು ಹಲವು. ೧೯೯೩ ರ ಮಾಸ್ತಿ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ, ಮೊದಲಾದವು. ಈಗ ೧೯೯೪ ರ ಜ್ಞಾನಪೀಠ ಪ್ರಶಸ್ತಿ.

'ಸಂಸ್ಕಾರ' (೧೯೬೫), 'ಭಾರತೀಪುರ' (೧೯೭೩), 'ಅವಸ್ಥೆ' (೧೯೭೮), ಮತ್ತು 'ಭವ' (೧೯೯೪) ಅನಂತಮೂರ್ತಿಯವರ ಕಾದಂಬರಿಗಳು. 'ಎಂದೆಂದೂ ಮುಗಿಯದ ಕಥೆ' (೧೯೫೫) 'ಪ್ರಶ್ನೆ' (೧೯೬೩) 'ಮೌನಿ' ( ೧೯೭೨) 'ಆಕಾಶ ಮತ್ತು ಬೆಕ್ಕು' (೧೯೮೧) 'ಸೂರ್ಯನ ಕುದುರೆ' (೧೯೯೫) ಹೀಗೆ ಒಟ್ಟು ಎಪ್ಪತ್ತೆಂಟು ಕಥೆಗಳನ್ನೊಳಗೊಂಡ ಐದು ಕಥಾ ಸಂಕಲನಗಳು ಈತನಕ ಪ್ರಕಟವಾಗಿವೆ. 'ಪ್ರಜ್ಞೆ ಮತ್ತು ಪರಿಸರ' (೧೯೭೧) ' ಸನ್ನಿವೇಶ ' (೧೯೭೪) 'ಸಮಕ್ಷಮ' (೧೯೮೨) 'ಪೂರ್ವಾಪರ' (೧೯೯೦) ಇವು ಇವರ ವೈಚಾರಿಕ- ವಿಮರ್ಶಾತ್ಮಕ ಬರಹಗಳು; ಸಾಂಸ್ಕೃತಿಕ ಚಿಂತನೆಗಳು. 'ಹದಿನೈದು'ಪದ್ಯಗಳು (೧೯೭೦) 'ಮಿಥುನ' ( ೧೯೯೨) 'ಅಜ್ಜನ ಹೆಗಲಿನ ಸುಕ್ಕುಗಳು (೧೯೮೯) ಕವನ ಸಂಕಲನಗಳು. 'ಆವಾಹನೆ' (೧೯೬೮) ಅನಂತಮೂರ್ತಿ ಅವರು ಬರೆದಿರುವ ಏಕೈಕ ನಾಟಕವಾಗಿದೆ. 'ದಾವೂ ದ ಜಿಂಗ್' ಅಕ್ಷರ ಚಿಂತನ ಮಾಲೆಯಲ್ಲಿ ಪ್ರಕಟವಾದ ಅನುವಾದವಾಗಿದೆ. 'ಸಂಸ್ಕಾರ' ಕಾದಂಬರಿಯು ಭಾರತೀಯ ಭಾಷೆಗಳಲ್ಲದೆ ಜಗತ್ತಿನ ಹಲವಾರು ಭಾಷೆಗೂ ತರ್ಜುಮೆಗೊಂಡು ಅನಂತಮೂರ್ತಿಯವರಿಗೆ ಹೆಸರು ತಂದಿತು.

ಜ್ಞಾನಪೀಠ ಪ್ರಶಸ್ತಿ ಪುರಸ್ಕಾರವು ದೇಶದ ಅತ್ಯುತ್ತಮ ಸೃಜನಶೀಲ ಪ್ರತಿಭೆಗೆ ಸಲ್ಲುವಂತದ್ದು. ಅದೀಗ ಅನಂತಮೂರ್ತಿಯವರಿಗೆ ಸಹಜವಾಗಿಯೇ ಸಂದಿದೆ. ಈ ಪ್ರಶಸ್ತಿಯ ಹೊರತಾಗಿಯೂ ಅನಂತಮೂರ್ತಿಯವರು ಕನ್ನಡದ ಅತ್ಯುತ್ತಮ ಬರಹಗಾರರಾಗಿದ್ದಾರೆ. ಭಿನ್ನವಾಗಿ ಆಲೋಚಿಸಿ ದೃಢವಾಗಿ ಮಂಡಿಸುವ ಚಿಂತಕರಾಗಿದ್ದಾರೆ. ಒಳ್ಳೇ ಭಾಷಣಕಾರರಾಗಿದ್ದಾರೆ. ಕನ್ನಡ ಸಾಹಿತ್ಯದ ಅನನ್ಯತೆ ಬಗ್ಗೆ ದೇಶದಲ್ಲಿ ಮಾತಾಡುವವರಾಗಿದ್ದಾರೆ.



# ಡಾ. ಪು. ತಿ. ನರಸಿಂಹಾಚಾರ್

*ಅಶೋಕ ಕುಮಾರ ರಂಜೇರೆ.*



ಆಧುನಿಕ ಕನ್ನಡ ಕಾವ್ಯದ ಪ್ರಮುಖ ಕವಿಗಳಲ್ಲಿ ಪು. ತಿ. ನರಸಿಂಹಾಚಾರ್ ಅವರೂ ಒಬ್ಬರು. ತಮ್ಮ ಕಾವ್ಯರಚನೆ, ಗೀತನಾಟಕಗಳಿಂದ ಕನ್ನಡ ಸಾಹಿತ್ಯ ಲೋಕದಲ್ಲಿ ತಮ್ಮದೇ ಆದ ಒಂದು ನೆಲೆಯನ್ನು ನಿರ್ಮಿಸಿಕೊಂಡ ಪು.ತಿ.ನ. ಅವರು ಮಹಾಕಾವ್ಯ ಕೂಡ ರಚಿಸಿದರು. ೨೦ ನೇ ಶತಮಾನದಲ್ಲಿ ಮಹಾಕಾವ್ಯಗಳ ರಚನೆ ನಿಂತೇ ಹೋಗಿದೆ ಎನ್ನುವ ಸಂದರ್ಭದಲ್ಲಿ, ಕನ್ನಡ ಸಾಹಿತ್ಯದಲ್ಲಿ ಒಂದಾದ ಮೇಲೆ ಒಂದೆಂಬಂತೆ ಅನೇಕ ಮಹಾಕಾವ್ಯಗಳು ಸೃಷ್ಟಿಯಾಗುತ್ತಿವೆ. ಇಂಥ ಮಹಾಕಾವ್ಯಗಳ ಸಾಲಿಗೆ ಪು.ತಿ.ನ. ಅವರ 'ಶ್ರೀ ಹರಿಚರಿತ' ಕೂಡ ಸೇರುತ್ತದೆ.

ತಮ್ಮ ಕಾವ್ಯ ಸೃಷ್ಟಿಯಿಂದ ಅಪಾರ ಸಹೃದಯರನ್ನು ಆಕರ್ಷಿಸಿರುವ ಪು. ತಿ. ನ. ಅವರು, ಅನೇಕ ಪ್ರಶಸ್ತಿ ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. ಅನೇಕ ಸನ್ಮಾನಗಳೂ ಇವರನ್ನು ಹುಡುಕಿಕೊಂಡು ಬಂದಿವೆ. ಭಾರತ ಸರ್ಕಾರವು ಪದ್ಮಶ್ರೀ ನೀಡಿ ಮನ್ನಿಸಿದೆ. ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಗಳು ಇವರಿಗೆ ಪ್ರಶಸ್ತಿಗಳನ್ನು ನೀಡಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ, ಪು.ತಿ.ನ ಅವರಿಗೆ ಗೌರವ ಫೆಲೋಷಿಪ್ ಕೊಟ್ಟು ಗೌರವಿಸಿದೆ. ಅಷ್ಟೇ ಅಲ್ಲದೆ ೧೯೮೭ ರಲ್ಲಿ ಆರಂಭವಾದ ಕನ್ನಡದ ಶ್ರೇಷ್ಠ ಪ್ರಶಸ್ತಿಯಾದ "ಪಂಪ ಪ್ರಶಸ್ತಿ" ೧೯೯೧ ರಲ್ಲಿ ಪು.ತಿ.ನ ಅವರ 'ಶ್ರೀ ಹರಿಚರಿತೆ' ಮಹಾಕಾವ್ಯಕ್ಕೆ ನೀಡಲಾಗಿದೆ.

ಎಂಬತ್ತರ ಇಳಿಜಾರಿನಲ್ಲಿರುವ ಪು.ತಿ.ನರಸಿಂಹಚಾರ್ ಅವರ ಮೂಲ, ತಮಿಳು ನಾಡಿನ ತಿರುವಳ್ಳೂರು. ಇವರ ಹಿರಿಯರು ತಿರುವಳ್ಳೂರು ಬಿಟ್ಟು ಮೇಲುಕೋಟೆಗೆ ಬಂದು ನೆಲೆಸಿದ ನಂತರ ಇವರು ಜನಿಸಿದರು. ೧೯೦೫ ರಲ್ಲಿ ಜನ್ಮ ತಾಳಿದ ಪು.ತಿ.ನ, ಬಹುತೇಕ ಧಾರ್ಮಿಕ ಕಟ್ಟುನಿಟ್ಟಿನಲ್ಲೆ ಬೆಳೆದರೆನ್ನಬಹುದು. ಮೇಲುಕೋಟೆ, ಮೈಸೂರುಗಳಲ್ಲಿ ವಿದ್ಯಾಭ್ಯಾಸ ಮಾಡಿ ೧೯೨೬ ರಲ್ಲಿ ಬಿ.ಎ. ಪಡೆದುಕೊಂಡ ಪುತಿನ,

ಗುಮಾಸ್ತರಾಗಿ ವೃತ್ತಿ ಜೀವನ ಪ್ರಾರಂಭಿಸಿದರು. ಮನೆಯ ವಾತಾವರಣದಿಂದ ಸಾಹಿತ್ಯ ಮತ್ತು ಧರ್ಮದಲ್ಲಿ ವಿಶೇಷ ಆಸಕ್ತಿ ಬೆಳೆಸಿಕೊಂಡ ಪು.ತಿ.ನ, ಮುಂದೆ ಸಾಹಿತ್ಯಕ್ಕೂ ವೃತ್ತಿ ಜೀವನಕ್ಕೂ ಸಂಬಂಧವೇ ಇಲ್ಲದ ವಾತಾವರಣವಿದ್ದರೂ, ಕಾವ್ಯ ಮತ್ತು ನಾಟಕಗಳ ರಚನೆಗೆ ತಮ್ಮನ್ನು ತೊಡಗಿಸಿಕೊಂಡರು. ೧೯೨೮ ರಿಂದ ಇಲ್ಲಿವರೆಗೆ ಹಲವಾರು ಕವನ ಸಂಕಲನಗಳನ್ನು, ನಾಟಕಗಳನ್ನು, ಪ್ರಬಂಧಗಳನ್ನು ಅವರು ಪ್ರಕಟಿಸಿದ್ದಾರೆ. ಈಗ ಅವರು ಬಹುತೇಕ ಕಾವ್ಯಸೃಷ್ಟಿಯನ್ನು ನಿಲ್ಲಿಸಿದ್ದಾರೆ ಎಂದೇ ಹೇಳಬೇಕು. ಪುರಾಣ, ಇತಿಹಾಸಗಳಿಂದ ಪ್ರಭಾವಿತರಾಗಿ ಬರೆಯುವ ಪು.ತಿ.ನರಸಿಂಹಾಚಾರ್ ಅವರು, ತಮ್ಮದೇ ಶೈಲಿಯ ಗೀತ ನಾಟಕಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಅಪಾರವಾದ ಸಂಗೀತ ಜ್ಞಾನ ಇರುವ ಪು.ತಿ.ನ ಅವರ ವಿಶಿಷ್ಟ ಶೈಲಿಯ ಗೀತರೂಪಕಗಳು, ಸಾಹಿತ್ಯ ಮತ್ತು ಕಲಾತ್ಮಕ ದೃಷ್ಟಿಯಿಂದ ಯಶಸ್ಸು ಪಡೆದವು. ಅವರ 'ಹಂಸ ದಮಯಂತಿ ಮತ್ತು ಇತರ ಗೀತ ನಾಟಕಗಳು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು.

ನವೋದಯ ಸಂಪ್ರದಾಯದ ಬಹಳ ಮುಖ್ಯ ಕವಿಗಳಲ್ಲೊಬ್ಬರಾದ ಪು.ತಿ.ನರಸಿಂಹಾಚಾರ್ ಅವರು ' ಹಣತೆ', 'ಮಾಂದಳಿರು' 'ಗಣೇಶ ದರ್ಶನ' 'ಹಳೆ ಬೇರು ಹೊಸ ಚಿಗುರು' ಮುಂತಾದ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಕನ್ನಡದ ಲಲಿತ ಪ್ರಬಂಧಕಾರರೂ ಆದ ಪು.ತಿ.ನ ಅವರ ' ರಾಮಾಚಾರಿಯ ನೆನಪು, 'ಈಚಲು ಮರದ ಕೆಳಗೆ' 'ಧೇನುಕಪುರಾಣ' ಮೊದಲಾದ ಪ್ರಬಂಧ ಸಂಕಲನಗಳು ಹೊರಬಂದಿವೆ. ಅವರ 'ಹಂಸ ದಮಯಂತಿ', 'ಅಹಲ್ಯೆ', 'ಗೋಕುಲ ನಿರ್ಗಮನ' ಕನ್ನಡದ ಅತ್ಯುತ್ತಮ ಗೀತನಾಟಕಗಳಾಗಿವೆ. 'ಯದುಗಿರಿ' ಎಂಬ ಅಭಿನಂದನ ಗ್ರಂಥ ಪು.ತಿ.ನ ಅವರ ಕೊಡುಗೆಯನ್ನು ವಿಶ್ಲೇಷಿಸುವ, ನೆನೆಯುವ ಕೆಲಸ ಮಾಡುತ್ತದೆ.

'ಶ್ರೀ ಹರಿಚರಿತೆ' ಮಹಾಕಾವ್ಯವನ್ನು ಪೌರಾಣಿಕ ಹಿನ್ನೆಲೆಯ ಕತೆಯನ್ನು ಆಯ್ಕೆ ಮಾಡಿಕೊಂಡು, ತಮ್ಮವೇ ವಿಶಿಷ್ಟ ಶೈಲಿಯಲ್ಲಿ ಕಲಾತ್ಮಕತೆಯ ಚೌಕಟ್ಟನ್ನು ಕೊಟ್ಟು ಪು. ತಿ. ನ. ರಚಿಸಿದ್ದಾರೆ. ತಮ್ಮ ಈ ಕಾವ್ಯದಲ್ಲಿ ಆಧುನಿಕ ಚಿಂತನೆಗಳನ್ನು ತುಂಬುವಲ್ಲಿ ಅಷ್ಟೊಂದು ಯಶಸ್ಸು ಪಡೆಯದಿದ್ದರೂ ಛಂದಸ್ಸು, ಭಾಷಾ ಬಳಕೆ, ಕಾವ್ಯಾತ್ಮಕ ದೃಷ್ಟಿಯಿಂದ ಪುತಿನ ಅನೇಕ ಯಶಸ್ಸುಗಳನ್ನಿಲ್ಲಿ ಪಡೆದಿದ್ದಾರೆ. ಇದು ಕನ್ನಡದ ಆಧುನಿಕ ಮಹಾಕಾವ್ಯಗಳಲ್ಲಿ ಮುಖ್ಯವಾದುದು ಎನ್ನುವುದರಲ್ಲಿ ಸಂಶಯವಿಲ್ಲ. ಈ ಕೃತಿಗೆ ೧೯೯೨ "ಪಂಪ ಪ್ರಶಸ್ತಿ" ದೊರೆತಿದ್ದು, ಪು.ತಿ.ನ ಆಧುನಿಕ ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ಕೃತಜ್ಞತೆಯಿಂದ ನೆನೆಯಲು ಇದು ಪ್ರಚೋದಿಸುತ್ತದೆ.



# ಡಾ. ಎ. ಎನ್. ಮೂರ್ತಿರಾವ್

*ವಿಠಲರಾವ್ ಗಾಯಕ್ವಾಡ್*



ನವೋದಯ ಕಾಲದಿಂದಲೇ ಸಾಹಿತ್ಯ ರಚನೆಗೆ ತೊಡಗಿದ ಮೂರ್ತಿರಾಯರು ವಿವಿಧ ಘಟ್ಟಗಳನ್ನು ದಾಟಿ ಇತ್ತೀಚಿನವರೆಗೂ (ದೇವರು - ೧೯೯೧) ಬರೆಯುತ್ತಲೇ ಇದ್ದಾರೆ. ಬದುಕಿನಲ್ಲೂ ಬರೆಹದಲ್ಲೂ ಒಂದೇ ತರಹದ ಸದಭಿರುಚಿಯನ್ನು ಕಾಯ್ದುಕೊಂಡ 'ಮಾನವತಾ'ವಾದಿಯಾಗಿದ್ದಾರೆ.

ಮಂಡ್ಯ ಜಿಲ್ಲೆಯ ಅಕ್ಕಿಹೆಬ್ಬಾಳಿನವರಾದ ಮೂರ್ತಿರಾಯರು ೧೬ನೆಯ ಜೂನ್ ೧೯೦೦ ರಲ್ಲಿ ಜನಿಸಿದರು. ಇವರ ತಂದೆ ಎ. ಸುಬ್ಬರಾವ್, ತಾಯಿ ಪುಟ್ಟಮ್ಮ. ಅವರು ಹುಟ್ಟಿ ಬೆಳೆದಿದ್ದು ಅತ್ಯುತ್ತಮ ಸಾಂಸ್ಕೃತಿಕ ಪರಿಸರದಲ್ಲಿ; ಹೀಗಾಗಿ ಜಾತಿಯಿದ್ದರೂ ಇಲ್ಲದಂತೆ ಬದುಕುತ್ತಿದ್ದ ಸಾಮೂಹಿಕ ಜೀವನೋತ್ಸಾಹವುಳ್ಳ ಅಕ್ಕಿಹೆಬ್ಬಾಳು ಗ್ರಾಮದ ಜೀವನಾನುಭವ ಅವರ ಸಾಹಿತ್ಯದಲ್ಲಿ ಮತ್ತೆಮತ್ತೆ ಕಾಣಿಸಿಕೊಂಡಿದೆ. ತಂದೆಯವರು ತಮ್ಮ ನಡವಳಿಕೆಯಿಂದ ಊರಿನವರ ತುಂಬು ಪ್ರೀತಿಗೆ ಪಾತ್ರರಾಗಿದ್ದರು. ಅದನ್ನು ಬಾಲ್ಯದಿಂದಲೂ ಕಂಡಿದ್ದ ಮೂರ್ತಿರಾಯರಿಗೆ ಮಾನವತಾವಾದಿಯಾಗಿ ಬೆಳೆಯಲು ಹೆಚ್ಚು ಪ್ರೇರಕವಾಯಿತು.

ಮೂರ್ತಿರಾಯರು ಸಾಂಸ್ಕೃತಿಕ ಶ್ರೀಮಂತತೆಯಲ್ಲಿ ಬದುಕಿದ್ದರು. ಆದರೆ ಅವರ ಆರ್ಥಿಕ ಪರಿಸ್ಥಿತಿ ಹೆಚ್ಚು ಅನುಕೂಲಕರವಾಗಿರಲಿಲ್ಲ. ಅವರು ಕಷ್ಟದಲ್ಲಿಯೇ ೧೯೨೨ರಲ್ಲಿ ಬಿ.ಎ ಪದವಿ ಮುಗಿಸಿದರು. ಅನಂತರ ೧೯೨೪ ರಲ್ಲಿ ಎಂ.ಎ. ಪದವೀಧರರಾದರು. ೧೯೨೪ರಲ್ಲಿ ಟ್ಯೂಟರ್ ಆಗಿ ಮಹಾರಾಜ ಕಾಲೇಜಿನಲ್ಲಿ ಕೆಲಸಕ್ಕೆ ಸೇರಿದರು. ಮುಂದೆ ಹೈಸ್ಕೂಲು ಅಧ್ಯಾಪಕರಾಗಿ, ಅಸಿಸ್ಟೆಂಟ್ ಪ್ರೊಫೆಸರ್, ಪ್ರೊಫೆಸರ್, ಮೈಸೂರು ಆಕಾಶವಾಣಿಯ ಸಹಾಯಕ ನಿರ್ದೇಶಕರು, ಕಾಲೇಜಿನ ಪ್ರಿನ್ಸಿಪಾಲರು, ಸಂಸ್ಕೃತಿ ಪ್ರಸಾರ ಇಲಾಖೆಯ ಪ್ರಥಮ ನಿರ್ದೇಶಕರು, ಹೀಗೆ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ ೧೯೫೫ ರಲ್ಲಿ ನಿವೃತ್ತರಾದರು. ಅವರು ಕನ್ನಡ, ಸಂಸ್ಕೃತ, ಫ್ರೆಂಚ್, ಇಂಗ್ಲಿಷ್

ಭಾಷೆಗಳಲ್ಲಿ ಅಪಾರ ಪಾಂಡಿತ್ಯಗಳಿಸಿದ್ದರು. ಡಾ. ಎಸ್. ರಾಧಾಕೃಷ್ಣನ್ ಅವರ ಶಿಷ್ಯರಾಗಿದ್ದ ಮೂರ್ತಿರಾಯರ ಸಾಹಿತ್ಯವು ಭಾರತೀಯ ಮತ್ತು ಪಾಶ್ಚಾತ್ಯ ಜ್ಞಾನದಿಂದ ತುಂಬಿದೆ. ಜೊತೆಗೆ ಅವರ ಲೋಕಾನುಭವವಂತೂ ಅವರ 'ವ್ಯಕ್ತಿತ್ವ'ಕ್ಕೆ ಹೆಚ್ಚು ಪರಿಪಕ್ವತೆಯನ್ನು ತಂದುಕೊಟ್ಟಿದೆ.

ಮೂರ್ತಿರಾಯರು ೧೯೨೭-೨೮ ರಲ್ಲಿಯೇ ತಮ್ಮ ಸಾಹಿತ್ಯ ಕೃಷಿಯನ್ನು ಆರಂಭಿಸಿದರು. ಅವರಿಗೆ 'ಆಷಾಢಭೂತಿ' (ಮೋಲಿಯರ್‌ನ 'ಥಾರ್ತುಫ್' ನಾಟಕದ ಅನುವಾದ)ಕೃತಿಯು ಅಪಾರ ಗೌರವವನ್ನು ತಂದುಕೊಟ್ಟಿತು. ಇಲ್ಲಿಯವರೆಗೆ ಅವರು ಒಟ್ಟು ಇಪ್ಪತ್ತೆರಡಕ್ಕೂ ಹೆಚ್ಚು ಕೃತಿಗಳನ್ನು ಬರೆದಿದ್ದಾರೆ. ಅವುಗಳಲ್ಲಿ ನಾಲ್ಕು ಪ್ರಬಂಧ ಸಂಕಲನಗಳು, ಒಂದು ಪ್ರವಾಸ ಕಥನ, ಹತ್ತು ಅನುವಾದ ಕೃತಿಗಳು ಮತ್ತು ಆರು ವಿಮರ್ಶಾ ಸಂಕಲನಗಳಿವೆ.

ಮೂರ್ತಿರಾಯರ ಬರೆಹಗಳು ಖಡಾಖಂಡಿತ ವಿರೋಧವನ್ನು ಮಾಡುವಂಥವಲ್ಲ. ಬದಲಾಗಿ ಅನಿಸಿದ್ದನ್ನು ಕಾರಣಬದ್ಧವಾಗಿ ಹೇಳುತ್ತಲೇ ಮನಸ್ಸನ್ನು ನೋಯಿಸದೆ ತಿಳಿವಳಿಕೆ ನೀಡುವಂಥವು. ಅವರ ಬರಹಗಳನ್ನು ಸೃಜನಶೀಲ ಮತ್ತು ಸೃಜನೇತರವೆಂದು ವಿಂಗಡಿಸಬಹುದು. ಮೊದಲನೆಯದರಲ್ಲಿ ಲಲಿತಪ್ರಬಂಧಗಳನ್ನು ಎರಡನೆಯದರಲ್ಲಿ ಅನುವಾದ ವಿಮರ್ಶೆ ಮುಂತಾದ 'ಅನುಸೃಷ್ಟಿ'ಗಳನ್ನು ಗುರುತಿಸಬಹುದು. ಆದರೆ ಮೂರ್ತಿರಾಯರನ್ನು ಇಂದಿಗೂ ಗುರುತಿಸುವುದು ಕನ್ನಡದ ಶ್ರೇಷ್ಠ ಲಲಿತ ಪ್ರಬಂಧಕಾರರೆಂದು. ಅವರು ಕನ್ನಡದಲ್ಲಿ ಲಲಿತ ಪ್ರಬಂಧ ಪರಂಪರೆ ಮತ್ತು ಅದರ ಬೆಳವಣಿಗೆಗೆ ಮೊದಲ ಮತ್ತು ಖಚಿತವಾದ ಮೈಲಿಗಲ್ಲನ್ನು ಒದಗಿಸಿಕೊಟ್ಟಿದ್ದಾರೆ. ಭಾವುಕತೆ, ರಮ್ಯತೆ, ವಿವೇಚನೆ, ವಿಶ್ಲೇಷಣೆ ಮನಕ್ಕೆ ಮುದಕೊಡುವ ಭಾಷೆಯಲ್ಲಿ ಹೇಳುವ ರೀತಿ- ಈ ಎಲ್ಲವುಗಳಿಂದ ಅವರ ಪ್ರಬಂಧಗಳು ವಿಶಿಷ್ಟವಾಗಿವೆ. 'ಗೌರಜ್ಜಿ ', 'ಹರಕೆಗಳು', 'ದಿವಾನಖಾನೆಯ ಅಂದಚೆಂದ', 'ಮಹಾರಾಜ ಕಾಲೇಜಿನ ಕಾಮನ್‌ರೂಂ' - ಇತ್ಯಾದಿ ಪ್ರಬಂಧಗಳನ್ನು ಓದುವಾಗ ಕಾವ್ಯ ಓದುವಾಗ ಆಗುವಂಥ ಹಾಗೂ ವೈಚಾರಿಕ ಚಿಂತನೆಯನ್ನೋದುವಾಗ ಆಗುವಂಥ ಅನುಭವಗಳು ಒಟ್ಟಿಗೇ ಆಗುತ್ತವೆ. ಮೂರ್ತಿರಾಯರ ವಿಮರ್ಶಾ ಬರೆಹಗಳು ಗಂಭೀರವಾದುವು. ಅವರ ಜಿಜ್ಞಾಸು ಪ್ರವೃತ್ತಿ ವಿಶಿಷ್ಟವಾದುದು.

ಎ.ಎನ್. ಮೂರ್ತಿರಾಯರು ೧೯೮೪ ರಲ್ಲಿ ಕೈವಾರದಲ್ಲಿ ನಡೆದ ೫೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಕನ್ನಡಿಗರ ಗೌರವ ಪಡೆದಿದ್ದಾರೆ. ಅವರಿಗೆ 'ಕೇಂದ್ರ ಸಾಹಿತ್ಯ ಅಕಾಡೆಮಿ' ಹಾಗೂ 'ಕರ್ನಾಟಕ ಸಾಹಿತ್ಯ ಅಕಾಡೆಮಿ' ಪ್ರಶಸ್ತಿಗಳು, 'ದೇವರಾಜ ಬಹಾದ್ದೂರ್ ಪ್ರಶಸ್ತಿ ', 'ರಾಜ್ಯೋತ್ಸವ ಪ್ರಶಸ್ತಿ'ಗಳು ಲಭ್ಯವಾಗಿವೆ. ಈಗ ಅವರಿಗೆ ೧೯೯೩ರ 'ಪಂಪ ಪ್ರಶಸ್ತಿ' ದೊರೆತುದು ಸಹಜವಾಗಿದೆ.

ಕೇವಲ ಒಂದು ವರ್ಷದ ಹಿಂದಷ್ಟೆ 'ಪಂಪ ಪ್ರಶಸ್ತಿ'ಗೆ ಕಾರಣವಾದ ಅವರ 'ದೇವರು' ಕೃತಿ ಪ್ರಕಟವಾಗಿತ್ತು. ದೇವರ ಬಗೆಗೆ ಚೇತೋಹಾರಿಯಾದ, ವಿಚಾರಚೋದಕವಾದ ಸಂವಾದವನ್ನು ಒಳಗೊಂಡ ಈ ಕೃತಿಯು, ಸಮಕಾಲೀನ 'ವೈಚಾರಿಕ' ಚಿಂತನೆಗೆ ಅನೇಕ ಹೊಸ ಹೊಳಹುಗಳನ್ನು ಒದಗಿಸುತ್ತದೆ.



# ಡಾ. ಚದುರಂಗ

*ಕಲವೀರ ಮನ್ವಾಚಾರ್*



ಅರವತ್ತಮೂರನೆಯಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ ಮುದ್ದುರಾಜೇ ಅರಸ್ ಸುಬ್ರಹ್ಮಣ್ಯರಾಜೇ ಅರಸಿನವರು 'ಚದುರಂಗ' ಎಂಬ ಕಾವ್ಯನಾಮದಿಂದಲೇ ಪ್ರಸಿದ್ಧರು. ಸುಮಾರು ಐದು ದಶಕಗಳಿಂದ ಸಣ್ಣಕತೆ, ಕಾದಂಬರಿ, ನಾಟಕ ಹಾಗೂ ಕಾವ್ಯ ಪ್ರಕಾರಗಳಲ್ಲಿ ಬರೆಯುತ್ತಾ ಬಂದಿರುವ ಚದುರಂಗರ ಬರವಣಿಗೆ, ಕನ್ನಡ ಸಾಹಿತ್ಯದಲ್ಲಿ ಅನನ್ಯವಾದುದು. ಅವರ ಸೃಜನಶಕ್ತಿ ಸದಾ ಚಲನಶೀಲವಾದದ್ದು.

ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧನಾದ ಮೂರನೆಯ ಮಂಗರಸನ ಮನೆತನದವರಾದ ಇವರು, ಮೈಸೂರ ಜಿಲ್ಲೆಯ ಹುಣಸೂರು ತಾಲೂಕಿನ ಕಲ್ಲಹಳ್ಳಿಯಲ್ಲಿ ಮುದ್ದುರಾಜೇ ಅರಸ-ಗೌರಮ್ಮಣ್ಣಿಯವರ ಹದಿಮೂರನೆಯ ಮಗನಾಗಿ ಜನವರಿ ೧, ೧೯೧೬ ರಂದು ಜನಿಸಿದರು. ಕಲ್ಲಹಳ್ಳಿಯಲ್ಲಿಯೇ ಅಕ್ಷರಾಭ್ಯಾಸ ಪ್ರಾರಂಭಿಸಿ, ಮೈಸೂರಿನಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ವಿದ್ಯಾಭ್ಯಾಸ ಮಾಡಿದರು. ಬೆಂಗಳೂರಿನಲ್ಲಿ ಬಿ.ಎ. ವಿದ್ಯಾಭ್ಯಾಸ ಮಾಡಿ, ಕಾನೂನಿನಲ್ಲಿ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ಹೋದರಾದರೂ, ಅದನ್ನು ಮೊಟುಕುಗೊಳಿಸಿ ಮತ್ತೆ ಮೈಸೂರಿಗೆ ಬಂದರು.

ಚದುರಂಗರ ಜೀವನ ಹಲವಾರು ವೈರುಧ್ಯಗಳಿಂದ ಕೂಡಿದ್ದು, ತಾವು ಮೆಚ್ಚಿ ಇಷ್ಟಪಟ್ಟ ಹುಡುಗಿಗಾಗಿ ಅರಸು ಮನೆತನದ ವೈಭವವನ್ನು ತಿರಸ್ಕರಿಸಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ಸೇರಿದರು. ಅರಮನೆಯ ಸುಖವನ್ನು ಅನುಭವಿಸಬೇಕಾಗಿದ್ದ ಅವರು ಬಡತನವನ್ನು ಆರಿಸಿಕೊಂಡರು. ಅದೇ ಬಡತನ ಅವರನ್ನು ಹುಟ್ಟೂರಾದ ಕಲ್ಲಹಳ್ಳಿಗೆ ತಂದಿತು. ಅಲ್ಲಿಯೇ ಅವರ ಸಾಹಿತ್ಯ ಕೃಷಿಗೆ ಬೇಕಾದ ಸಾಮಗ್ರಿ ದೊರಕಿ, ಸಾಹಿತ್ಯ ಕೃಷಿಗೆ ತೊಡಗಿದರು. ಹಳ್ಳಿಯ ಬದುಕಿನಲ್ಲಿ

ಒಂದಾದ ಚದುರಂಗರಿಗೆ, ಹಳ್ಳಿಯ ಜೀವನ, ಅಲ್ಲಿಯ ಮನೆ-ಮನಗಳ ಸ್ವರೂಪವನ್ನು ತಮ್ಮ ಸಣ್ಣಕತೆ- ಕಾದಂಬರಿಗಳಲ್ಲಿ ಹಿಡಿದಿಡಲು ಸಾಧ್ಯವಾಯಿತು.

ನವೋದಯದ ಪ್ರಖರತೆಯಿನ್ನೂ ಇರುತ್ತ ನವ್ಯದ ಭರಾಟೆಯಲ್ಲಿ ಚದುರಂಗರು ಬರವಣಿಗೆಯನ್ನು ಪ್ರಾರಂಭಿಸಿದರು. ಪ್ರಗತಿಶೀಲ ಬರಹಗಾರರಲ್ಲಿ ಒಬ್ಬರಾಗಿ ಸಾಹಿತ್ಯ ರಚನೆಗೆ ತೊಡಗಿಕೊಂಡರೂ, ಆ ಪಂಥದಲ್ಲಿಯೇ ಉಳಿದುಕೊಳ್ಳಲಿಲ್ಲ. ತಮ್ಮ ಆಲೋಚನೆ, ಮನೋಧರ್ಮಗಳನ್ನು ಹೊರಳಿಸಿಕೊಳ್ಳುತ್ತಲೇ ಇಂದಿಗೂ ಅವರು ಪ್ರಸ್ತುತರಾಗಿದ್ದಾರೆ. ಅವರ ಕಾದಂಬರಿ, ಸಣ್ಣಕತೆಗಳಲ್ಲಿ ಮೊದಲ ನೋಟಕ್ಕೆ ಪ್ರಗತಿಶೀಲ ಆಶಯಗಳು ಕಂಡು ಬಂದರೂ, ಆಳದಲ್ಲಿ ಮಾನವೀಯತೆಯ ಮಿಡಿತ-ತುಡಿತಗಳನ್ನು ಕಾಣಬಹುದು.

ಚದುರಂಗರ ಕಾದಂಬರಿಗಳಲ್ಲಿ 'ಸರ್ವಮಂಗಳ' (೧೯೫೦) ಸ್ವಾತಂತ್ರ್ಯ ಪೂರ್ವದ ಹಳ್ಳಿಯ ಕುಟುಂಬದ ಚಿತ್ರಣವಾದರೆ, 'ಉಯ್ಯಾಲೆ' (೧೯೬೦) ನಗರ ಜೀವನದ ಹೆಣ್ಣಿನ ಮಾನಸಿಕ ತುಯ್ಯಲಾಟದ ವಸ್ತುವನ್ನು ಹೊಂದಿರುವ ಕಾದಂಬರಿ. 'ವೈಶಾಖ' (೧೯೮೧) ಚದುರಂಗರ ಮಹಾತ್ವಾಕಾಂಕ್ಷೆಯ ಕಾದಂಬರಿ. ಹೊಲೆಯರಲಕ್ಕ, ಬ್ರಾಹ್ಮಣ ಕೃಷ್ಣಶಾಸ್ತ್ರಿ ಹಾಗೂ ಅವರ ಸಕೇಶಿ ವಿಧವೆ ಸೊಸೆ ರುಕ್ಮಿಣಿಯರ ಬದುಕಿನ ಸುತ್ತ ಹೆಣೆದ ಕತೆ ಇದು. ಆದರೂ ಒಟ್ಟು ದರುಮನಹಳ್ಳಿಯ ಬದುಕಿನ ದುರಂತ ಚಿತ್ರಣವೇ ಈ ಕಾದಂಬರಿಯ ವಸ್ತುವಾಗಿದೆ. ಅಂತೆಯೇ ಚದುರಂಗರ ಜೀವನದರ್ಶನ ಈ ಕಾದಂಬರಿಯಲ್ಲಿ ಕಲಾತ್ಮಕವಾಗಿ ಅಭಿವ್ಯಕ್ತಿಯಾಗಿದೆ. 'ವೈಶಾಖ' ಕಾದಂಬರಿಯು 'ಸರ್ವಮಂಗಳ', ' ಉಯ್ಯಾಲೆ' ಕಾದಂಬರಿಗಳಿಗಿಂತ ಭಿನ್ನವಾದ ಭಾಷೆ, ತಂತ್ರದಿಂದ ಕೂಡಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಪಡೆದ ಈ ಕಾದಂಬರಿಯಲ್ಲಿ ಬಂಡಾಯದ ಸೂಕ್ಷ್ಮತೆಗಳನ್ನು ಕಾಣಬಹುದು.

ಚದುರಂಗರು ಸಾಹಿತ್ಯ ಕ್ಷೇತ್ರವಲ್ಲದೆ ಚಲನಚಿತ್ರ ನಿರ್ದೇಶನದಲ್ಲೂ ಕೈಯಾಡಿಸಿದವರು. ತಮ್ಮ ' ಸರ್ವಮಂಗಳ' ಕಾದಂಬರಿಯನ್ನೇ ಚಲನಚಿತ್ರ ಮಾಡಿ ಯಶಸ್ಸು ಗಳಿಸಿದವರು. ಕುವೆಂಪು ಹಾಗೂ ಕರ್ನಾಟಕದ ಬಗ್ಗೆ ಸಾಕ್ಷ್ಯಚಿತ್ರಗಳನ್ನು ನಿರ್ಮಿಸಿದ ಹಿರಿಮೆ ಅವರದು.

ಸಜ್ಜನಿಕೆಯ ಚದುರಂಗರಿಗೆ ಪದವಿ-ಗೌರವಗಳು ಅರಸಿಕೊಂಡು ಬಂದಿವೆ. 'ವೈಶಾಖ'ಕ್ಕೆ ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಗಳ ಪ್ರಶಸ್ತಿಗಳು ಬಂದವು. ಜತೆಗೆ ಕರ್ನಾಟಕ ರಾಜ್ಯಪ್ರಶಸ್ತಿ, ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ ಹಾಗೂ 'ಸರ್ವಮಂಗಳ' ಚಿತ್ರಕ್ಕೆ ಶ್ರೇಷ್ಠಚಿತ್ರ ಪ್ರಶಸ್ತಿ ಬಂದವು. ಇವುಗಳಲ್ಲದೇ ಸಂಘ ಸಂಸ್ಥೆಗಳಿಂದ ಅನೇಕ ಗೌರವಗಳು ದೊರಕಿದವು. ಇವೆಲ್ಲಕ್ಕೂ ಮಿಗಿಲಾದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ದೊರಕಿದೆ. ಇವರಿಗೆ 'ಚದುರಂಗ:ವ್ಯಕ್ತಿ-ಅಭಿವ್ಯಕ್ತಿ' ಎನ್ನುವ ಅಭಿನಂದನ ಗ್ರಂಥವನ್ನು ಅರ್ಪಿಸಿರುವ ನಾಡು ತನ್ನ ಕೃತಜ್ಞತೆಯನ್ನು, ಸಲ್ಲಿಸಿದೆ.

# ಗಿರೀಶ್ ಕಾರ್ನಾಡ್

*ಶಿವಾನಂದ ವಿರಕ್ತಮಠ*



೧೯೯೪ರ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯು ಕನ್ನಡದ ಶ್ರೇಷ್ಠ ನಾಟಕಕಾರ ಗಿರೀಶ್ ಕಾರ್ನಾಡ ಅವರಿಗೆ ದೊರಕಿದೆ. ೧೯೩೮ರ ಮೇ, ೨೯ರಂದು ಮಹಾರಾಷ್ಟ್ರದಲ್ಲಿ ಜನಿಸಿದ ಗಿರೀಶ್ ಕಾರ್ನಾಡರು ರಂಗಭೂಮಿ, ನಾಟಕ ಮತ್ತು ಚಲನಚಿತ್ರ ಈ ಮೂರು ರಂಗಗಳಲ್ಲಿಯೂ ತಮ್ಮ ಸಾಧನೆಯನ್ನು ಮಾಡಿದರು. ಪ್ರಶಸ್ತಿ ಪಡೆದಿರುವ 'ತಲೆದಂಡ' ಅವರ ಏಳನೆಯ ನಾಟಕವಾಗಿದೆ.

ಏಕಾಂಕ ನಾಟಕ 'ಮಾನಿಷಾಧ' ಮತ್ತು ಅವರ ಇತ್ತೀಚಿನ ನಾಟಕ 'ಅಗ್ನಿ ಮತ್ತು ಮಳೆ' ಸೇರಿದಂತೆ ಕಾರ್ನಾಡರು ಒಟ್ಟು ಒಂಬತ್ತು ನಾಟಕಗಳನ್ನು ಪ್ರಕಟಿಸಿದ್ದಾರೆ. ಈ ನಾಟಕಗಳು ತಮ್ಮ ವಿಶಿಷ್ಟತೆಯಿಂದಾಗಿ ಸಾಹಿತ್ಯವಲಯದಲ್ಲಿ ಅನೇಕ ವಾಗ್ವಾದ-ಚರ್ಚೆಗಳಿಗೆ ಹಾಗೂ ವಿಭಿನ್ನ ಚಿಂತನೆಗಳಿಗೆ ಕಾರಣವಾಗಿವೆ. ನಾಟಕ ಸಾಹಿತ್ಯಕ್ಕಷ್ಟೇ ತಮ್ಮ ಸಾಹಿತ್ಯ ಕೃಷಿಯನ್ನು ಮೀಸಲಾಗಿರಿಸಿದ ಕಾರ್ನಾಡರು, ಕನ್ನಡ ನಾಟಕ ಕ್ಷೇತ್ರದಲ್ಲಿ ಹೊಸಪರಂಪರೆಯ ನಾಟಕಗಳ ಸೃಷ್ಟಿಕರ್ತರು. ದೇಸೀಯ ಮೂಲವಾಗಿ ಜಾನಪದ ರಂಗಭೂಮಿ ಹಾಗೂ ಸಂಸ್ಕೃತ ನಾಟಕಗಳ ಪರಿಚಯವನ್ನೂ ಇಂಗ್ಲೆಂಡಿನಲ್ಲಿದ್ದಾಗ ಪಾಶ್ಚಾತ್ಯ ನಾಟಕ ರಂಗಭೂಮಿಗಳ ಪರಿಚಯವನ್ನೂ ಪಡೆದ ಕಾರ್ನಾಡರು ಪಾಶ್ಚಾತ್ಯ-ಪೌರ್ವಾತ್ಯ ಪ್ರೇರಣೆಗಳೆರಡರಿಂದಲೂ ತಮ್ಮ ಸಂವೇದನೆಯನ್ನು ರೂಢಿಸಿಕೊಂಡಿದ್ದಾರೆ. ಪುರಾಣ, ಜಾನಪದ, ಇತಿಹಾಸಗಳಿಂದ ವಸ್ತುಗಳನ್ನಾಯ್ದುಕೊಂಡು ವರ್ತಮಾನದ ಆಶಯಗಳನ್ನು ನಾಟಕದ ಕೇಂದ್ರದಲ್ಲಿ ಜೀವಂತಗೊಳಿಸಿ ಕಾರ್ನಾಡರು ನಾಟಕಗಳನ್ನು ಪ್ರಸ್ತುತವಾಗಿಸುತ್ತಾರೆ.

ಪಾತ್ರ ನಿರ್ವಹಣೆಯಲ್ಲಿ ಮಾತು, ಮೌನ, ಆಂಗಿಕ ಅಭಿನಯಗಳಿಗೂ ಪ್ರಾಶಸ್ತ್ಯವನ್ನು ಕಲ್ಪಿಸುವುದರ ಮೂಲಕ ನಾಟಕಕ್ಕೆ ವಿಶಿಷ್ಟ ರಂಗಪ್ರಜ್ಞೆಯ ಅಗತ್ಯವನ್ನು ಒತ್ತಿ ಹೇಳಿದವರು. 'ಯಯಾತಿ', 'ತುಘಲಕ್', 'ಹಯವದನ', 'ನಾಗಮಂಡಲ', 'ತಲೆದಂಡ' ನಾಟಕಗಳೇ ಇದಕ್ಕೆ ಸಾಕ್ಷಿ. ಈ ದೃಷ್ಟಿಯಲ್ಲಿ ರಂಗಭೂಮಿಯ

ಸಾಧ್ಯತೆಯನ್ನು ಹಿಗ್ಗಲಿಸಿದ ನಾಟಕಗಳಿವು. 'ಹಯವದನ', 'ನಾಗಮಂಡಲ' ನಾಟಕಗಳು ಭಾರತದ ಅನೇಕ ಭಾಷೆಗಳಲ್ಲಿ ಅನುವಾದಗೊಂಡಿವೆ; ವಿದೇಶಗಳಲ್ಲಿ ಪ್ರಯೋಗಗೊಂಡು ಕಾರ್ನಾಡರಿಗೆ ಅಂತಾರಾಷ್ಟ್ರೀಯ ಖ್ಯಾತಿಯನ್ನು ತಂದುಕೊಟ್ಟಿವೆ.

'ಯಯಾತಿ'ಯಲ್ಲಿ ಅಸ್ತಿತ್ವವಾದದ ಪ್ರತಿಪಾದನೆ ಮುಖ್ಯವಾಗಿದೆ. 'ಹಯವದನ' ದಲ್ಲಿ ದೈವ, ಪ್ರಾಣಿ ಮತ್ತು ಮನುಷ್ಯರ ಕಥಾನಕಗಳ ಮೂಲಕ ಅಪೂರ್ಣತೆಯ ತತ್ತ್ವವನ್ನು ಚರ್ಚಿಸಲಾಗಿದೆ. 'ನಾಗಮಂಡಲ'ದಲ್ಲಿ ವಿವಾಹ ನಂತರದ ಸಮಾಜಬಾಹಿರ ಪ್ರೇಮದ ಚಿತ್ರಣವು ಪುರುಷಪ್ರಧಾನ ಸಮಾಜ ವ್ಯವಸ್ಥೆಯನ್ನೇ ಪ್ರಶ್ನಿಸುತ್ತದೆ. 'ತುಘಲಕ್' ನಾಟಕವು ಧರ್ಮ ಮತ್ತು ರಾಜಕೀಯದ ವಸ್ತುವಿನೊಂದಿಗೆ ಆಧುನಿಕ ಬದುಕಿನ ಏಕಾಂಗಿತನ, ದ್ವಂದ್ವ, ಅವಿವೇಕ, ಅಹಂಕಾರಗಳನ್ನು ಸಂಕೀರ್ಣವಾಗಿ ಕಟ್ಟಿಕೊಡುತ್ತದೆ. ಅವರ ಇತ್ತೀಚಿನ ನಾಟಕ 'ಅಗ್ನಿ ಮತ್ತು ಮಳೆ'ಯಲ್ಲಿ ವೈದಿಕ ಸಂಸ್ಕೃತಿಯ ಯಜ್ಞ-ತಪಸ್ಸುಗಳ ಪೊಳ್ಳುತನವನ್ನು ಪರಿಶೋಧಿಸುವ ಮೂಲಕ ಬುಡಕಟ್ಟು ಸಂಸ್ಕೃತಿಯ ಅನನ್ಯತೆಯನ್ನು ಎತ್ತಿ ಹಿಡಿಯಲಾಗಿದೆ.

೧೨ನೇ ಶತಮಾನದ ವಚನಚಳುವಳಿಯನ್ನು ಆಧರಿಸಿ ಕಾರ್ನಾಡರು ರಚಿಸಿರುವ 'ತಲೆದಂಡ' ನಾಟಕವು ವಿವರಗಳೆಲ್ಲವನ್ನೂ ಚರಿತ್ರೆಯಿಂದಲೇ ಸ್ವೀಕರಿಸಿದರೂ, ಸೂಕ್ಷ್ಮವಾಗಿ ಇಂದಿನ ಸಾಮಾಜಿಕ ಸಂದರ್ಭದ ವೈರುಧ್ಯಗಳನ್ನು ಕಾಣಿಸುವಂಥ ಕೃತಿಯಾಗಿದೆ. ಸಂಪ್ರದಾಯಕ್ಕೇ ಕೊಡಲಿಪೆಟ್ಟು ಕೊಡುವ ಅಂತರ್‌ಜಾತಿ ವಿವಾಹವು, ಇಲ್ಲಿ ಪ್ರಭುತ್ವಶಕ್ತಿಗೆ ಸವಾಲಾಗಿ ಪರಿಣಮಿಸುತ್ತವೆ. ಸೋವಿದೇವನ ಮೂಲಕ ಕ್ರೌರ್ಯದಬ್ಬಾಳಿಕೆಗಳನ್ನು ಸೃಷ್ಟಿಸುವ ಪುರೋಹಿತಶಾಹಿಯು ಇಂದಿನ ಧರ್ಮಾಧಾರಿತ ರಾಜಕೀಯ ಮತ್ತು ಭಯೋತ್ಪಾದನೆಯ ಹಿಂಸೆಗಳನ್ನು ನೆನಪಿಗೆ ತರುತ್ತದೆ. ಸಮತಾವಾದ (ಬಸವಣ್ಣ) ಮುತ್ಸದ್ದಿತನ (ಬಿಜ್ಜಳ) ಗಳು ಚರಿತ್ರೆಯ ದುರಂತದಲ್ಲಿ ಕರಕಾಗಿ ಹೋಗುತ್ತವೆ ಎಂಬ ಸತ್ಯವನ್ನು 'ತಲೆದಂಡ' ನಾಟಕವು ಸ್ಪಷ್ಟಪಡಿಸುತ್ತದೆ.

ಗಿರೀಶ್ ಕಾರ್ನಾಡರು ಕನ್ನಡದ ಬಹು ಸಮ್ಮಾನಿತ ಲೇಖಕರಲ್ಲೊಬ್ಬರು. ಅವರ 'ಯಾಯಾತಿ' ಗೆ ಮೈಸೂರು ಸರ್ಕಾರದ ಪ್ರಶಸ್ತಿಯೂ 'ತುಘಲಕ್'ಗೆ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿಯೂ 'ಹಯವದನ' ಕ್ಕೆ ಭಾರತೀಯ ನಾಟ್ಯ ಸಂಘದ ಬಹುಮಾನ ಮತ್ತು ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿಗಳೂ ಬಂದವು. ಇವಲ್ಲದೆ ನಟನೆ, ನಾಟಕ-ಚಲನಚಿತ್ರ ರಂಗಗಳ ಒಟ್ಟು ಸಾಧನೆಯನ್ನು ಪರಿಗಣಿಸಿ ಅವರಿಗೆ ೧೯೭೪ರಲ್ಲಿ ಪದ್ಮಶ್ರೀ ಪ್ರಶಸ್ತಿಯೂ ೧೯೮೪ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿಯೂ ೧೯೯೨ ರಲ್ಲಿ ಪದ್ಮಭೂಷಣ ಪ್ರಶಸ್ತಿಯೂ ಲಭಿಸಿವೆ. ಕಾರ್ನಾಡರು ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರೂ ಆಗಿದ್ದರು. ೧೯೯೪ ರಲ್ಲಿ ಸಂಗೀತ ನಾಟಕ ಅಕಾಡೆಮಿಯು ಕಾರ್ನಾಡರನ್ನು 'ಫೆಲೊ' ಎಂದು ಆಯ್ಕೆ ಮಾಡಿತು. ನಾಟಕ ಸೃಷ್ಟಿಯ ಬಗೆಗೆ ಇರಿಸಿಕೊಂಡ ಅಪಾರ ಶ್ರದ್ಧೆ ಹಾಗೂ ಕಾಳಜಿಯಿಂದಾಗಿ ಗಿರೀಶ್ ಕಾರ್ನಾಡರು ಭಾರತೀಯ ರಂಗಭೂಮಿಯಲ್ಲಿ ಪ್ರಮುಖ ವ್ಯಕ್ತಿಯ ಸ್ಥಾನವನ್ನು ದೃಢಪಡಿಸಿಕೊಂಡಿದ್ದಾರಲ್ಲದೆ ರಾಷ್ಟ್ರೀಯ ಖ್ಯಾತಿಯನ್ನೂ ಹೊಂದಿದ್ದಾರೆ.



# ಕೆ. ಕೆ. ಹೆಬ್ಬಾರ್

*ಎನ್. ಮರಿಶಾಮಾಚಾರ್*



ಸಾಮಾನ್ಯ ನೆಲೆಯಿಂದ ಹೊರಟ ಕಲಾವಿದನೊಬ್ಬ ಬದುಕಿನುದ್ದಕ್ಕೂ ಸತತ ಹೋರಾಟ ನಡೆಸುತ್ತಲೇ ಸಿದ್ಧಿಪಡೆದರು. ಅಸಾಧಾರಣವಾದ ಗುರಿ ಮುಟ್ಟಿ ವಿಶ್ವದ ಚಿತ್ರಕಲೆಯಲ್ಲಿ ಭಾರತಕ್ಕೆ ವಿಶಿಷ್ಟ ಸ್ಥಾನ ದೊರಕಿಸಿಕೊಟ್ಟವರು ಹಾಗೂ ೮೩ರ ಇಳಿ ವಯಸ್ಸಿನಲ್ಲೂ ಸೃಜನಶೀಲ ಕಲಾಕೃತಿಗಳ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕಲೆಯಲ್ಲಿ ಸದಾ ಅನ್ವೇಷಕರಾಗಿರುವವರು ಕಟ್ಟಿಂಗೇರಿ ಕೃಷ್ಣ ಹೆಬ್ಬಾರರು.

ದಕ್ಷಿಣ ಕನ್ನಡದ ಕಟ್ಟಿಂಗೇರಿಯಲ್ಲಿ ೧೫ ನೇ ಜೂನ್, ೧೯೧೧ ರಂದು ಜನಿಸಿದ ಹೆಬ್ಬಾರರ ಕಲೆಯ ಮೂಲ ಸೆಲೆಗಳೆಂದರೆ ಕರಾವಳಿ ಜನರ ಬದುಕು, ಕಡಲತೀರದ ಪ್ರಕೃತಿ ಚೆಲುವು ಹಾಗೂ ಯಕ್ಷಗಾನ ಬಯಲಾಟದ ವೇಷಗಳು. ಬಾಲ್ಯ ಬಡತನದ ಬೇಗೆಯಲ್ಲಿ ಬೇಯುತ್ತಿದ್ದರೂ ಕಲೆಯ ಬಗ್ಗೆ ವಿಶೇಷ ಒಲವು. ಮನಸ್ಸನ್ನು ಶ್ರೀಮಂತಗೊಳಿಸಿಕೊಂಡ ಹೆಬ್ಬರರು ಚಿತ್ರಕಲೆಯ ಶ್ರೀಕಾರ ಹಾಕಿದ್ದು, ರವಿವರ್ಮನ ಚಿತ್ರದ ಅನುಕರಣೆಯಿಂದ. ಮೆಟ್ರಿಕ್ಯುಲೇಷನ್ ಅನ್ನು ಉಡುಪಿಯಲ್ಲಿ ಮುಗಿಸಿದ ಹೆಬ್ಬಾರರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಸೇರಿದ್ದು ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ. ಅಲ್ಲಿಯ ವಾತಾವರಣ ಹಿಡಿಸದೆ ಅವರು ಮುಂದೆ ಪ್ರಯಾಣ ಬೆಳೆಸಿದ್ದು ಮುಂಬೈಗೆ. ಜೀವನ ನಿರ್ವಹಣೆಗಾಗಿ ಸ್ಟುಡಿಯೋ ಒಂದರಲ್ಲಿ ಉದ್ಯೋಗ. ಪ್ರಾರಂಭದಲ್ಲಿ ದಂಡಾವತಿ ಮಠ ಅವರಿಂದ ಚಿತ್ರಕಲೆಯ ಬಗ್ಗೆ ಮಾರ್ಗದರ್ಶನ. ಅನಂತರ ಸೇರಿದ್ದು ಸರ್. ಜೆ. ಸ್ಕೂಲ್ ಆಫ್ ಆರ್ಟ್ಸ್.

ಜೆ. ಜೆ. ಸ್ಕೂಲಿನ ನಿರ್ದೇಶಕರಾಗಿದ್ದ ಚಾರ್ಲ್ಸ್ ಜೆರಾರ್ಡ್ ಹೆಬ್ಬಾರರ ಕಲೆ ಹಾಗೂ ಬದುಕಿನ ಮೇಲೆ ಬೀರಿದ ಪ್ರಭಾವ ಅಪಾರ. ಆಗ ಸೂಕ್ಷ್ಮ ಚಿತ್ರಗಳಲ್ಲಿ ರೇಖಾ ಗುಣವನ್ನು ಅರಿತು ಹೆಬ್ಬಾರರು ಚಿತ್ರ ರಚಿಸಿದರು. ಅವರು ಕಾರ್ಲ್ ಗುಹೆಗಳಿಗೆ ಭೇಟಿಯಿತ್ತಾಗ ರಚಿಸಿದ 'ಕಾರ್ಲ ಗುಹೆ' ಚಿತ್ರವು ಕಡುಬಣ್ಣಗಳ ವೈರುಧ್ಯವನ್ನು ಎತ್ತಿ

ತೋರಿಸುವ ಗಂಭೀರ ವಾತಾವರಣವನ್ನು ಅಭಿವ್ಯಕ್ತಿಸಿದೆ. ಕೆಲ ವಿಮರ್ಶಕರು ಹೆಬ್ಬಾರರನ್ನು ಅಮೃತಾಶೇರ್‌ಗಿಲ್‌ಳ ವಾರಸುದಾರರೆಂದು ಕರೆದರು. ೧೯೪೯ ರಲ್ಲಿ ಮೊದಲ ಬಾರಿಗೆ ವಿದೇಶ ಪ್ರವೇಶ ಕೈಗೊಂಡು ಇಂಗ್ಲೆಂಡ್, ಇಟಲಿ, ಪ್ಯಾರಿಸ್ ಮುಂತಾದ ಯೂರೋಪಿಯನ್ ದೇಶಗಳನ್ನು ಸಂದರ್ಶಿಸಿ, ಅಲ್ಲಿಯ ಕಲಾ ಚಟುವಟಿಕೆಗಳ ಅಧ್ಯಯನ ನಡೆಸಿ ಮರಳಿ ಸ್ವದೇಶಕ್ಕೆ ಬರುವ ವೇಳೆಗೆ ಹೆಬ್ಬಾರರ ಮನಸ್ಸು ಸ್ತಬ್ಧವಾಗಿತ್ತು. ಅವರ ನಿರಾಶಾ ಪ್ರವೃತ್ತಿಗೆ ಹಿರಿಯ ಮಗಳಾದ ರೇಖಾಳ ಚಿತ್ರಗಳು ಸವಾಲಾದವು. ಅನಂತರ ಹೊಸ ಆಯಾಮದಲ್ಲಿ ಜೀವನವನ್ನು ಅನುಭವಿಸುವ ವಿಕಾಸಶೀಲ ಅಂತರಿಕ ಸ್ವಾತಂತ್ರ್ಯ ಅವರ ಕೃತಿಗಳಲ್ಲಿ ಅಭಿವ್ಯಕ್ತಗೊಳಿಸಿರುವುದನ್ನು ಕಾಣಬಹುದು.

ಹೆಬ್ಬಾರರ ಇದುವರೆಗಿನ ಕೃತಿಗಳನ್ನು ಹಲವು ಘಟ್ಟಗಳಾಗಿ ನೋಡಬಹುದು. ಪ್ರಾರಂಭದಲ್ಲಿ ವಾಸ್ತವಿಕ ಚಿತ್ರಗಳನ್ನು ಅವರು ರಚಿಸಿದರು. ಚಿಕಣಿ ಚಿತ್ರಗಳ ಪ್ರಭಾವದಿಂದ ರಚಿಸಿದ ಚಿತ್ರಗಳು, ಸಾಮಾಜಿಕ ಕಳಕಳಿಯ ಚಿತ್ರಗಳು, ವೈಜ್ಞಾನಿಕ ಅನ್ವೇಷಣೆಯ ಚಿತ್ರಗಳು, ಸಾಂಕೇತಿಕ ನಿರೂಪಣಾ ಚಿತ್ರಗಳು, ಸಂಗೀತದ ಬಗೆಗಿನ ಚಿತ್ರಗಳು. ಕಲಾವಿದನಿಗೆ ಸಾಮಾಜಿಕ ಕಳಕಳಿ ಇರುತ್ತದೆ ಎನ್ನುವುದಕ್ಕೆ ಸಾಕ್ಷಿಯಾಗಿ ಹೆಬ್ಬಾರರು ರಚಿಸಿರುವ ಅನೇಕ ಚಿತ್ರಗಳು ನಮ್ಮ ಮುಂದೆ ನಿಲ್ಲುತ್ತವೆ. ಯುದ್ಧದ ಸನ್ನಿವೇಶ, ಅತ್ಯಾಚಾರ ಇಂತಹ ಮನಮಿಡಿಯುವ ಘಟನೆಗಳು ನಡೆದಾಗ ಅವುಗಳನ್ನು ಚಿತ್ರಗಳಲ್ಲಿ ಹೆಬ್ಬಾರರು ಅಭಿವ್ಯಕ್ತಿಸುತ್ತಾರೆ. ಅವರ ಅನನ್ಯ ಕಲಾ ಪ್ರತಿಭೆಯು ಮೊದಮೊದಲು ಚಿತ್ರಗಳ ರಚನೆಯಲ್ಲಿ ವಿಕಾಸಗೊಳ್ಳುತ್ತಾ ನಡೆಯಿತು. ಅದರೂ ಈ ಎಲ್ಲಾ ಹಂತಗಳಲ್ಲೂ ಅವರಿಗೆ, ಅವರ ಕಲಾದೃಷ್ಟಿಗೆ, ಮಾನವನ ಬದುಕು ಮತ್ತು ಅವನ ಸಾಮಾಜಿಕ ಪರಿಸರಗಳು ನಿರಂತರ ಪ್ರೇರಣೆಗಳಾಗಿವೆ. ಹೆಬ್ಬಾರರ ರೇಖಾಚಿತ್ರಗಳಿಗೆ ಕಲಾ ಪ್ರಪಂಚದಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಅವರ ರೇಖೆಗಳು ಮಾತನಾಡುತ್ತವೆ. ಕುಣಿಯುತ್ತವೆ, ಹಾಡುತ್ತವೆ ಮತ್ತು ಅವರ ಹೆಸರು ಕೇಳಿದ ತಕ್ಷಣ ನೆನಪಾಗುವುದು ಅವರ ರೇಖಾಚಿತ್ರಗಳು.

೧೯೭೭ ರಿಂದ ೧೯೮೦ ರವರೆಗೆ ಹೆಬ್ಬಾರರು ರಾಜ್ಯ ಲಲಿತಾಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಅಕಾಡೆಮಿ ಹೊಸ ದಿಕ್ಕಿನಲ್ಲಿ ಕೆಲಸ ಪ್ರಾರಂಭಿಸಿ, ರಾಷ್ಟ್ರಮಟ್ಟದಲ್ಲಿ ರಾಜ್ಯದ ಸಮಕಾಲೀನ ಕಲಾವಿದರು ಮನ್ನಣೆ ಪಡೆಯಲು ಸಾಧ್ಯವಾಯಿತು. ಹೊಸ ಅಲೆಗೆ ಕಾರಣಕರ್ತರಾದ ಹೆಬ್ಬಾರರು ೧೯೮೦ ರಲ್ಲಿ ಕೇಂದ್ರ ಲಲಿತಾಕಲಾ ಅಕಾಡೆಮಿಯ ಅಧ್ಯಕ್ಷರಾಗಿ ನೇಮಕಗೊಂಡರು. ಪ್ರಥಮ ಬಾರಿಗೆ ಸಮಕಾಲೀನ ಕಲಾವಿದರೊಬ್ಬರಿಗೆ ಈ ಸ್ಥಾನ ಲಭ್ಯವಾಯಿತು. ಕಲಾವಿದರ ಬಾಳಿನಲ್ಲಿ ಅವರ ಕೃತಿಗಳಿಗೆ, ಕಲಾಕ್ಷೇತ್ರಕ್ಕೆ ಅವರು ಸಲ್ಲಿಸಿದ ಸೇವೆಗೆ ಸಮಾಜ, ಸರ್ಕಾರ ಗೌರವಿಸುವುದು ಪದ್ಧತಿ. ಹೆಬ್ಬಾರರ ಕಲಾ ಜೀವನದ ಪಥದಲ್ಲಿ ಅವರ ಕೃತಿಗಳಿಗೆ ಅವರ ಕಲಾಸೇವೆಗ ಅನೇಕ ಪ್ರಶಸ್ತಿಗಳು ಲಭಿಸಿವೆ. ಅವುಗಳಲ್ಲಿ ಮುಖ್ಯವಾದುವುಗಳು ಕೇಂದ್ರ ಲಲಿತಕಲಾ ಅಕಾಡೆಮಿ ಪ್ರಶಸ್ತಿ. ೧೯೮೯ ರಲ್ಲಿ ಪದ್ಮಭೂಷಣ ಪ್ರಶಸ್ತಿ, ೧೯೭೬ ರಲ್ಲಿ ಕೇಂದ್ರ ಲಲಿತಕಲಾ ಅಕಾಡೆಮಿ

ಕಲಾವಿದರಿಗೆ ನೀಡುವ ಅತ್ಯುನ್ನತ ಗೌರವ 'ಫೆಲೋಶಿಪ್', ಮೈಸೂರ ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್, ೧೯೮೪ ರಲ್ಲಿ ರಾಜ್ಯ ಅಕಾಡೆಮಿ ಪ್ರಶಸ್ತಿ, ೧೯೮೫ ರಲ್ಲಿ ಕರ್ನಾಟಕ ಸರ್ಕಾರದ ಪ್ರಶಸ್ತಿ ಮುಂತಾದವು. ೧೯೮೪ ರಲ್ಲಿ ಹೆಬ್ಬಾರರು ಸೋವಿಯತ್ ಲ್ಯಾಂಡ್ ಪ್ರಶಸ್ತಿ, ಗಳಿಸಿದರು.

ಕರ್ನಾಟಕ ಸರ್ಕಾರವು ಕಲಾವಿದ ಕೆ. ವೆಂಕಟಪ್ಪನವರ ಹೆಸರಿನಲ್ಲಿ ಸ್ಥಾಪಿಸಿರುವ ಪ್ರಶಸ್ತಿಯನ್ನು ೧೯೯೪ನೇ ಸಾಲಿನಲ್ಲಿ ಪ್ರಥಮ ಬಾರಿಗೆ ಕೆ. ಕೆ. ಹೆಬ್ಬಾರರವರಿಗೆ ನೀಡಿದೆ. ಇದರಿಂದ ಅವರ ಮುಕುಟಕ್ಕೆ ಮತ್ತೊಂದು ಗರಿ ಬಂದಿದೆ. ಅಲ್ಲದೆ, ಅವರ ಆಯ್ಕೆ ಅತ್ಯಂತ ಉಚಿತವಾಗಿದೆ.



# ಬಿ.ವಿ. ಕಾರಂತ

*ಗಂಗಾಧರ ದೈವಜ್ಞ*



ಪ್ರಖ್ಯಾತ ರಂಗಕರ್ಮಿ ಬಿ.ವಿ. ಕಾರಂತರಿಗೆ ೧೯೯೫ರ ಮಧ್ಯಪ್ರದೇಶ ಸರ್ಕಾರದ ಪ್ರತಿಷ್ಠಿತ 'ಕಾಳಿದಾಸ ಸನ್ಮಾನ' ದೊರೆತದ್ದು ಸಂತೋಷದ ಸಂಗತಿ. ನಮ್ಮ ಪಾರಂಪರಿಕ ರಂಗಭೂಮಿಗೆ ಹೊಸ ಹೊಸ ರಂಗಪರಿಕಲ್ಪನೆಗಳನ್ನು ಶೋಧಿಸಿ ಕ್ರಿಯಾತ್ಮಕಗೊಳಿಸುವ ಅವರ ಪ್ರತಿಭೆ ಅದಮ್ಯವಾದದ್ದು. ಇಂಥ ಕ್ರಿಯಾತ್ಮಕತೆಗೆ ಅವರ ಅನುಭವ, ತನ್ಮಯತೆ, ಜನಪರ ಕಾಳಜಿ ಬಹುಮುಖ್ಯವಾದ ಕಾರಣ ಗಳಾಗಿವೆ.

ಬಾಬುಕೋಡಿ ವೆಂಕಟರಮಣ ಕಾರಂತರು ದಕ್ಷಿಣ ಕನ್ನಡ ಜಿಲ್ಲೆಯ ಮಂಚಿಗ್ರಾಮದ ಬಾಬುಕೋಡಿಯಲ್ಲಿ ೧೯೨೯ರಲ್ಲಿ ಜನಿಸಿದರು. ತಮ್ಮ ಹದಿನಾರನೇ ವಯಸ್ಸಿನಲ್ಲಿ ಗುಬ್ಬಿ ನಾಟಕ ಕಂಪನಿ ಸೇರಿದ ಕಾರಂತರು ಸಣ್ಣ ಪುಟ್ಟ ಪಾತ್ರಗಳ ಮೂಲಕ ಹೊಟ್ಟೆ ಹೊರೆಯುತ್ತಿದ್ದರು. ಮುಂದೆ ವಾರಣಾಸಿಗೆ ಹೋಗಿ ಹಿಂದಿಯಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಹಿಂದಿಭಾಷಾ ಸಾಹಿತ್ಯದಲ್ಲಿ ಅಧ್ಯಯನ ಮಾಡಿ ಪಿ.ಎಚ್‌ಡಿ., ಪಡೆದುಕೊಂಡರು. ನಂತರ ಪಂಡಿತ್ ಓಂಕಾರನಾಥ ಠಾಕೂರ ಹತ್ತಿರ ಸಂಗೀತಾಭ್ಯಾಸ ಮಾಡಿ ಬನಾರಸ ಹಿಂದೂ ವಿಶ್ವವಿದ್ಯಾಲಯದಲ್ಲಿ ಸಂಗೀತ ಡಿಪ್ಲೋಮಾ ಪದವಿ ಪಡೆದುಕೊಂಡರು. ರಾಷ್ಟ್ರೀಯ ನಾಟಕ ಶಾಲೆಯಲ್ಲಿ. ದೆಹಲಿಯ ಸರ್ದಾರ ಪಟೇಲ ಶಾಲೆಯಲ್ಲಿ ಕೆಲವರ್ಷ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ದೆಹಲಿಯ ವಿಶಾಂತರ ನಾಟಕ ತಂಡದಲ್ಲಿ ಸಕ್ರಿಯ ಪಾತ್ರ ವಹಿಸಿದ್ದರು. ಹೀಗೆ ವಿವಿಧ ಮುಖಗಳಿಂದ ತಮ್ಮನ್ನು ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು.

೧೯೭೭ ರಿಂದ ೧೯೮೧ ರವರೆಗೆ ದೆಹಲಿಯ ರಾಷ್ಟ್ರೀಯ ಶಾಲೆಯ ನಿರ್ದೇಶಕರಾಗಿದ್ದರು. ಭೂಪಾಲದ ಭಾರತ ಭವನದಲ್ಲಿರುವ ಮಧ್ಯಪ್ರದೇಶ

ರಂಗಮಂಡಲದ ಪ್ರಥಮ ನಿರ್ದೇಶಕರಾಗಿ ೧೯೮೧-೧೯೮೬ ರವರೆಗೆ ಸೇವೆ ಸಲ್ಲಿಸಿದರು. ೧೯೮೨-೮೬ರವರೆಗೆ ಕನ್ನಡದಲ್ಲಿ 'ಈಡಿಪಸ್', 'ಸಂಕ್ರಾಂತಿ,' 'ಜೋಕುಮಾರಸ್ವಾಮಿ', 'ಏವಂ' 'ಇಂದ್ರಜಿತ್', 'ಸ್ವರ್ಗಕ್ಕೆ ಮೂರೇ ಬಾಗಿಲು, 'ಬಿರುದೆಂತೆಂಬರ ಗಂಡ', 'ಸತ್ತವರ ನೆರಳು' 'ಹಯವದನ' 'ಪಂಜರ ಶಾಲೆ', 'ತದ್ರೂಪಿ', 'ಕಿಂದರ ಜೋಗಿ' ಮುಂತಾದ ರಂಗ ಪ್ರಯೋಗಗಳನ್ನು ಯಶಸ್ವಿಗೊಳಿಸಿದರು. ರಂಗಸ್ಥಳವನ್ನು ಎಳೆಯಿಸಿದರು. ಹವ್ಯಾಸಿ ರಂಗಭೂಮಿಯಲ್ಲಿ ತಮ್ಮ ಯಕ್ಷಗಾನ ವೃತ್ತಿ ನಾಟಕಗಳಲ್ಲಿಯ ಅನುಭಾವವನ್ನು ತುಂಬಿ ಮೆರಗು ಗೊಳಿಸಿದರು. ಹಿಂದಿಯಲ್ಲಿ ಅಂಧೇರ ನಗರಿ, ಚೌಪಟ್‌ರಾಜಾ, ಬರ್ನಂವನ, ಟೋಚೆಸ್ಸೈಯದ್, ಬಡೇಸೈಯದ್, ಭಗವದಜ್ಜುಕೀಯ, ಮುದ್ರಾರಾಕ್ಷಸ, ಮಾಲವಿಕಾಗ್ನಿಮಿತ್ರ, ಸ್ಕಂದಗುಪ್ತ ಮುಂತಾದ ಪ್ರಯೋಗಗಳನ್ನು ಯಶಸ್ವಿಗೊಳಿಸಿದರು. ಗಿರೀಶ ಕಾರ್ನಾಡರೊಂದಿಗೆ 'ವಂಶವೃಕ್ಷ' 'ತಬ್ಬಲಿಯು ನಿನಾದೆ ಮಗನೆ', ಚಿತ್ರಗಳ ನಿರ್ದೇಶನ ಮಾಡಿದರು. ಸ್ವತಃ ನಿರ್ದೇಶನ ಮಾಡಿದ 'ಚೋಮನ ದುಡಿ' ೧೯೭೫ರಲ್ಲಿ ವರ್ಷದ ಅತ್ಯುತ್ತಮ ಚಲನಚಿತ್ರ ಪ್ರಶಸ್ತಿ ಪಡೆದುಕೊಂಡಿತು. ಈ ಚಿತ್ರ ರಾಜ್ಯ ಹಾಗೂ ರಾಷ್ಟ್ರಪ್ರಶಸ್ತಿಗಳನ್ನಲ್ಲದೇ ಅಂತರಾಷ್ಟ್ರೀಯ ಚಲನ ಚಿತ್ರೋತ್ಸವ ಪ್ರಶಸ್ತಿಯನ್ನೂ ಪಡೆಯಿತು.

ಕಾಡು, ಹಂಸಗೀತೆ, ಪರಶುರಾಮ, ಏಕ್‌ದಿನ್, ಪ್ರತಿದಿನ್, ಚೋಮನದುಡಿ, ಆದಿಶಂಕರ (ಸಂಸ್ಕೃತ) ಫಣಿಯಮ್ಮ, ಘಟಶ್ರಾದ್ಧ, ಋಷ್ಯಶೃಂಗ, ಮುಂತಾದ ಚಲನಚಿತ್ರಗಳಿಗೆ ಕಾರಂತರು ಸಂಗೀತ ನಿರ್ದೇಶನ ಮಾಡಿದ್ದಾರೆ. ಅವರ ಸಂಗೀತ ನಿರ್ದೇಶನಕ್ಕೆ ರಾಷ್ಟ್ರ ಮತ್ತು ರಾಜ್ಯ ಪ್ರಶಸ್ತಿಗಳೂ ಬಂದಿವೆ. ಕೇಂದ್ರ ಸಂಗೀತ ನಾಟಕ ಅಕಾಡೆಮಿಗೆ 'ಭೂತಾರಾಧನೆ' ಮತ್ತು ವಾರ್ತಾ ಇಲಾಖೆಗೆ ಶಿವರಾಮ ಕಾರಂತರ ಬಗ್ಗೆ ಸಾಕ್ಷಚಿತ್ರ ನಿರ್ಮಿಸಿದ್ದಾರೆ. ಇವರು ಕೆಲಕಾಲ ಆದರ್ಶ ಫಿಲಂ ಇನ್ಸ್‌ಟಿಟ್ಯೂಟ್‌ನಲ್ಲಿ ಪ್ರಾಚಾರ್ಯರಾಗಿದ್ದರು. ಗಿರೀಶ ಕಾರ್ನಾಡ ಮತ್ತು ಶ್ರೀರಂಗರ ನಾಟಕಗಳಾದ ಹಯವದನ, ತುಘಲಕ್ ಮತ್ತು ಕೇಳು ಜನಮೇಜಯ ನಾಟಕಗಳನ್ನು ಹಿಂದಿಗೆ ಅನುವಾದ ಮಾಡಿದ್ದಾರೆ. ಕಾವ್ಯ, ಕಥೆ, ಜಾನಪದಗಳನ್ನಾಧರಿಸಿ ಪಂಜರ ಶಾಲೆ, ಹೆಡ್ಡಾಯಣ, ಅಳಿಲು ರಾಮಾಯಣ ಮುಂತಾದ ಮಕ್ಕಳ ನಾಟಕಗಳನ್ನು ರೂಪಾಂತರಿಸಿ ನಿರ್ದೇಶನ ಮಾಡಿದ್ದಾರೆ. ಕಾರಂತರಿಗೆ ೧೯೭೬ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ರಾಜ್ಯ ನಾಟಕ ಅಕಾಡೆಮಿ ಪ್ರಶಸ್ತಿ ಹಾಗೂ ೧೯೮೧ರಲ್ಲಿ 'ಪದ್ಮಶ್ರೀ' ಪ್ರಶಸ್ತಿಗಳು ಲಭಿಸಿವೆ.

ಬಿ.ವಿ. ಕಾರಂತರು ೧೯೮೦ರಲ್ಲಿ 'ರಂಗಾಯಣ' ರೆಪರ್ಟರಿಯನ್ನು ಅಸ್ತಿತ್ವಕ್ಕೆ ತಂದರು. ಇಲ್ಲಿ ಕರ್ನಾಟಕದ ನಾನಾ ಭಾಗಗಳಿಂದ ಬರುವ ಇಪ್ಪತ್ತೈದು ಪ್ರತಿಭಾವಂತ ತರುಣ ತರುಣಿಯರಿಗೆ ರಂಗತರಬೇತಿ ನೀಡಲಾಗುತ್ತದೆ. 'ರಂಗಾಯಣ'ಕ್ಕೆ ಈಗ ಆರು ವರ್ಷ. 'ರಂಗಾಯಣ' ತನಗಿದ್ದ ಹಲವಾರು ಆಕ್ಷೇಪ ಮತ್ತು ವೈಪರಿತ್ಯಗಳ

ನಡುವೆಯೂ ಕುತೂಹಲಕರವಾದ ಹೊಸ ಮಾದರಿಯ ಪ್ರಯೋಗಗಳನ್ನು ಮಾಡಿ ದೇಶಾದ್ಯಂತ ಪ್ರದರ್ಶನಗಳನ್ನು ನೀಡುತ್ತಿದೆ.

ಅರವತ್ತಾರರ ವಯಸ್ಸಿನಲ್ಲಿರುವ ಬಿ.ವಿ. ಕಾರಂತರು ಭೂಪಾಲದಲ್ಲಿದ್ದಾಗ ವಿಭಾ ಮಿಶ್ರಾ ಪ್ರಕರಣಗಳಂತಹ ಹಲವಾರು ಘಟನೆಗಳ ಕಹಿನೆನಪುಗಳಿಂದ ನೊಂದಿದ್ದರೂ, ಕೂಡ ಅವರ ರಂಗಾಸಕ್ತಿ ಕಡಿಮೆಯಾಗಿಲ್ಲ, ಅದು ಇನ್ನಷ್ಟು ಪಕ್ವವಾಗಿ ಬೆಳೆಯಲು ಸಾಧ್ಯವಾಗಿದೆ. ಇದಕ್ಕೆ ನಿದರ್ಶನ ಅವರಿಗೆ ಸಂದ 'ಕಾಳಿದಾಸ ಸನ್ಮಾನ'. ಹೀಗೆ ಕನ್ನಡ ರಂಗಭೂಮಿಗೆ ಒಂದು ಸ್ವಂತಿಕೆಯನ್ನು, ಅಸ್ತಿತ್ವವನ್ನು, ಸಂಗೀತವನ್ನು, ಸ್ವತಂತ್ರ ಶೈಲಿಯನ್ನು ತಂದುಕೊಟ್ಟ ಇವರಿಗೆ ಈ ಸನ್ಮಾನವು ಕಿರೀಟಪ್ರಾಯವಾಗಿದೆ.

# ಕೊಗ್ಗ ದೇವಣ್ಣ ಕಾಮತ್

*ಚೆಲುವರಾಜ್*



ಕರ್ನಾಟಕಕ್ಕೆ ದಕ್ಷಿಣ ಕನ್ನಡ ಜಿಲ್ಲೆಯ ಮತ್ತೊಂದು ಕೊಡುಗೆ ಯಕ್ಷಗಾನ - ಗೊಂಬೆಯಾಟ. ಕುಂದಾಪುರ ತಾಲ್ಲೂಕು ಉಪ್ಪಿನಕುದ್ರುವಿನಲ್ಲಿರುವ 'ಶ್ರೀ ಗಣೇಶ ಯಕ್ಷಗಾನ ಗೊಂಬೆಯಾಟ ಮಂಡಳಿ' ಕರ್ನಾಟಕಕ್ಕೆ ಗೌರವ ತಂದುಕೊಟ್ಟ ಒಂದು ಶ್ರೇಷ್ಠ ಕಲಾ ಸಂಘಟನೆ. ೧೯೯೫ರ ಸಾಲಿನ 'ತುಳಸೀ ಸಮ್ಮಾನ್' ಪ್ರಶಸ್ತಿ ಪಡೆದ ಇಲ್ಲಿನ ಭಾಗವತರ ಮನೆತನದ ಶ್ರೀ ಕೊಗ್ಗ ಕಾಮತರು ಸೂತ್ರದ ಗೊಂಬೆಯಾಟದ ಪ್ರತಿಭಾನ್ವಿತ ಕಲಾವಿದರು. ಶ್ರೀ ಕೊಗ್ಗ ಕಾಮತರ ಸೂತ್ರದ ಗೊಂಬೆಯಾಟವು ಬಡಗುತಿಟ್ಟು ಯಕ್ಷಗಾನ ಶೈಲಿಯದು. ಈ ಕಲೆ ಕಾಮತರ ಮನೆತನಕ್ಕೆ ತಲೆತಲಾಂತರಗಳಿಂದ ಬಂದುದಾಗಿದೆ. ಕೊಗ್ಗ ಕಾಮತರ ತಂದೆ ಶ್ರೀ ದೇವಣ್ಣ ಪದ್ಮನಾಭ ಕಾಮತರ ಕಾಲಕ್ಕೆ ಈ ಕಲೆ ಅವರಿಗೆ ಒಂದು ಅರೆಕಾಲಿಕ ವೃತ್ತಿಕಲೆಯಾಗಿತ್ತು. ಕಾಲ್ನಡಿಗೆಯಲ್ಲಿ ಅಥವಾ ಎತ್ತಿನ ಬಂಡಿಯಲ್ಲಿ ಅವರು ಊರಿಂದೂರಿಗೆ ಹೋಗಿ ಗೊಂಬೆಯಾಟದ ಪ್ರದರ್ಶನ ನೀಡುತ್ತಿದ್ದರು. ಇವರ ಕುಟುಂಬ ಆರ್ಥಿಕ ಸಂಕಷ್ಟಕ್ಕೆ ಸಿಕ್ಕಿ ಹಾಕಿಕೊಂಡಾಗ ಈ ಕಲೆಯನ್ನು ಕೆಲ ಕಾಲ ಕೈಬಿಟ್ಟರು. ಆನಂತರ ಮತ್ತೆ ಈ ಕಲೆಯನ್ನು ಕೈಗೆತ್ತಿಕೊಂಡು ಬೆಳೆಸಿದ ಕೀರ್ತಿ ಶ್ರೀ ಕೊಗ್ಗ ಕಾಮತ್ ಅವರದ್ದು. ಸುಮಾರು ನಾಲ್ಕೈದು ತಲೆಮಾರಿನ ಇತಿಹಾಸ ಇವರ ಗೊಂಬೆಯಾಟದ ತಂಡಕ್ಕೆ ಇದೆ. ಇವರ ಕಲಾಪ್ರದರ್ಶನವನ್ನು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಪರಿಚಯಿಸಿ ಅದಕ್ಕೆ ಮತ್ತಷ್ಟು ಜೀವ ತುಂಬಿದವರು ಮಂಗಳೂರಿನ ಪತ್ರಕರ್ತ ದಿ. ಶ್ರೀ ಕೆ.ಎಸ್. ಉಪಾಧ್ಯಾಯರು. ಇವರು ಈ ತಂಡದ ನೇತೃತ್ವ ವಹಿಸಿ ಹಲವಾರು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಉತ್ಸವಗಳಲ್ಲಿ ಭಾಗವಹಿಸಿ ಕೀರ್ತಿ ತಂದರು.

ಕಾಮತರು ೧೯೭೮ರ ಮಾರ್ಚ್ ತಿಂಗಳಲ್ಲಿ ಫ್ರಾನ್ಸ್‌ನ ರೀನ್‌ನಲ್ಲಿ ನಡೆದ ೫ನೇ ಅಂತಾರಾಷ್ಟ್ರೀಯ ಸಾಂಪ್ರದಾಯಿಕ ಕಲೆಗಳ ಉತ್ಸವದಲ್ಲಿ ಯಶಸ್ವಿಯಾಗಿ ಭಾಗವಹಿಸಿ, ಭಾರತದ ಜಾನಪದ ಕಂಪನ್ನು ವಿದೇಶಗಳಲ್ಲೂ ಹರಡುವಲ್ಲಿ ಯಶಸ್ವಿಯಾದರು. ಶ್ರೀ ಕಾಮತ್ ಅವರು ಅದೇ ಸಂದರ್ಭದಲ್ಲಿ ಫ್ರಾನ್ಸ್‌ನ ರಾಜಧಾನಿ ಪ್ಯಾರಿಸ್ ಸೇರಿದಂತೆ ಹಲವು ನಗರಗಳಲ್ಲಿ ಒಟ್ಟು ೪೬ ಪ್ರದರ್ಶನಗಳನ್ನು ನೀಡಿದರು. ಹೀಗೆ ವಿದೇಶಿ ನೆಲದಲ್ಲಿ ಪ್ರದರ್ಶನ ನೀಡಿ ಕೀರ್ತಿಗಳಿಸಿದ ಕರ್ನಾಟಕದ ಮೊತ್ತಮೊದಲ ಯಕ್ಷಗಾನ ಸೂತ್ರದ ಗೊಂಬೆಯಾಟ ತಂಡ ಎಂಬ ಗೌರವಕ್ಕೆ ಈ ತಂಡ ಪಾತ್ರವಾಯಿತು.

೧೯೭೯ರ ನವೆಂಬರ್‌ನಲ್ಲಿ ಪ್ಯಾರಿಸ್‌ನ 'ಲಿಲೆ' ಉತ್ಸವದಲ್ಲಿ ಭಾಗವಹಿಸಿದ ಕಾಮತರು ಫ್ರಾನ್ಸ್‌ನ ಹಲವು ನಗರ ಹಾಗೂ ಹಾಲೆಂಡ್‌ಗಳಲ್ಲಿ ಪ್ರದರ್ಶನ ನೀಡಿದರು. ೧೯೮೩ರ ಜನವರಿ ತಿಂಗಳಲ್ಲಿ ಆಸ್ಟ್ರೇಲಿಯಾದ ಅಡಿಲೇಡ್‌ನಲ್ಲಿಯ ಅಂತಾರಾಷ್ಟ್ರೀಯ ಗೊಂಬೆಯಾಟ ಉತ್ಸವದಲ್ಲಿ ಭಾಗವಹಿಸಿದ್ದರು. ೧೯೮೩ರ ಮೇ ತಿಂಗಳಲ್ಲಿ ಯೂರೋಪ್ ಪ್ರವಾಸ ಕೈಗೊಂಡು ಪ್ಯಾರಿಸ್, ರೀನ, ಜಿನೇವಾ, ಹೀಗೆ ಅನೇಕ ಅಂತಾರಾಷ್ಟ್ರೀಯ ರಂಗಭೂಮಿಗಳಲ್ಲಿ ಗೊಂಬೆಯಾಟ ಪ್ರದರ್ಶನ ನೀಡಿದರು. ೧೯೮೫ ರಲ್ಲಿ ಎರಡು ತಿಂಗಳ ಸುದೀರ್ಘ ಕಾಲ ಫ್ರಾನ್ಸ್, ಹಾಲೆಂಡ್, ಜರ್ಮನಿ, ರುಮೇನಿಯಾ ೧೯೮೬ರಲ್ಲಿ ಗ್ರೀಸ್ ಮತ್ತೆ ೧೯೯೦ರಲ್ಲಿ ಹಾಲೆಂಡ್ - ಹೀಗೆ ಜಗತ್ತಿನ ಹಲವೆಡೆಗಳಿಗೆ ಪ್ರವಾಸ ಬೆಳೆಸಿ ಯಕ್ಷಗಾನ ಗೊಂಬೆಯಾಟದ ಪ್ರದರ್ಶನ ನೀಡಿ, ಕಲೆಗೆ ಹಾಗೂ ದೇಶಕ್ಕೆ ಕೀರ್ತಿ ತಂದರು. ಈ ಕಲೆಯ ಬಗೆಗೆ ಹೆಚ್ಚಿನ ಲೋಕಾನುಭವ ಪಡೆದಿರುವ ಕಾಮತರು ಸ್ವತಃ ಕಲಾವಿದರಾದರೂ ಗೊಂಬೆಯಾಟವನ್ನು ನೋಡುವ ಲೋಕದೃಷ್ಟಿ ಇತರರಿಗಿಂತ ಭಿನ್ನವಾದುದಾಗಿದೆ. ಇಂದು ನಮ್ಮ ಕಲೆಯಲ್ಲಿ ಆಗಬೇಕಾಗಿರುವ ಬದಲಾವಣೆ, ಪರಿಷ್ಕಾರಗಳು ಕಾಲಕಾಲಕ್ಕೆ ಅಗತ್ಯವಾದ ರೀತಿಯಲ್ಲಿ ಆಗಬೇಕಾಗಿದೆ ಎಂಬ ಚಿಂತನೆಗಳನ್ನು ಅವರು ಹೊಂದಿರುವವರು. ಈ ಪಾರಂಪರಿಕ ಕಲೆಯನ್ನುಳಿಸಿ ಬೆಳೆಸಿಕೊಂಡು ಬಂದಿರುವ ಕಾಮತರ ನಿಷ್ಠೆಗೆ, ಕಾಯಕಕ್ಕೆ ಹಾಗೂ ಪ್ರತಿಭೆಗೆ ೧೯೯೪ರ ತುಳಸೀ ಸಮ್ಮಾನ್ ಬಂದಿರುವುದು ಸಹಜವಾಗಿದೆ.



# ಡಾ. ಗಂಗೂಬಾಯಿ ಹಾನಗಲ್

*ವೀರೇಶ ಬಡಿಗೇರ*



'ಕಿರಾಣಾ ಘರಾಣೆ'ಯ ಅತಿಶ್ರೇಷ್ಠಗಾಯಕರಲ್ಲಿ ಗಂಗೂಬಾಯಿ ಒಬ್ಬರು. ಸಂಗೀತ ಗುರುಗಳಾದ ಸವಾಯಿ ಗಂಧರ್ವ, ಅಬ್ದುಲ್ ಕರೀಂಖಾನ್ ಇವರ ನಂತರ 'ಕಿರಾಣಾ ಘರಾಣೆ'ಯ ಜೀವಂತಿಕೆಗೆ ಅವಿರತ ದುಡಿದು ತಮ್ಮದೇ ಆದ ಶೈಲಿ ವಿಶೇಷದಿಂದ ಆದಕ್ಕೊಂದು ಮೂರ್ತ ಸ್ವರೂಪ ಕೊಟ್ಟವರು ಡಾ. ಗಂಗೂಬಾಯಿ ಹಾನಗಲ್ ಅವರು.

ಗಂಗೂಬಾಯಿ ಅವರು ೧೯೧೩ ಮಾರ್ಚ್, ೫ ರಂದು ಧಾರವಾಡದಲ್ಲಿ ಹುಟ್ಟಿದರು. ತಂದೆ ಚಿಕ್ಕೂರಾವ್ ನಾಡಗೇರ. ತಾಯಿ ಅಂಬಾಬಾಯಿ. ಅಂಬಾಬಾಯಿ ಸ್ವತಃ ಕರ್ನಾಟಕ ಸಂಗೀತದ ಸುಪ್ರಸಿದ್ಧ ಹಾಡುಗಾರ್ತಿ. ಹೀಗಾಗಿ ಕಲೆಯ ಕೂಸಾಗಿಯೇ ಗಂಗೂಬಾಯಿ ಬೆಳೆದರು. ಗಂಗಾಮತಸ್ಥರಾದ ಇವರ ತಲೆಮಾರಿನವರು, ಮೂಲತಃ ಹಾನಗಲ್ಲಿನವರು. ಅಲ್ಲಿಂದ ಇವರ ಕುಟುಂಬ ನರಗುಂದಕ್ಕೆ ವಲಸೆ ಹೋಯಿತು. ನರಗುಂದ ಬಂಡಾಯದ ಸಂದರ್ಭದಲ್ಲಿ ಗಂಗೂಬಾಯಿಯವರ ಅಜ್ಜಿ 'ಗಂಗೂಬಾಯಿ' ಧಾರವಾಡಕ್ಕೆ ಬಂದು ನೆಲೆಸಿದರು. ಈ. ಸಮಯದಲ್ಲಿ ಧಾರವಾಡ ಸಂಪೂರ್ಣ ಹಿಂದೂಸ್ಥಾನಿ ಸಂಗೀತದ ಗುಂಗಿನಿಂದ ಆವರಿಸಲ್ಪಟ್ಟಿತ್ತು. ಸವಾಯಿ ಗಂಧರ್ವ, ಅಬ್ದುಲ್ ಕರೀಂಖಾನರ ಸಂಪರ್ಕ, ಬಸವರಾಜ ರಾಜಗುರು, ಮಲ್ಲಿಕಾರ್ಜುನ ಮನ್ಸೂರ, ಭೀಮಸೇನ ಜೋಶಿ, ಕುಮಾರ ಗಂಧರ್ವ ಮುಂತಾದ ಸಾಧಕರಿಗೆ ಈ ಸಂದರ್ಭ ಪ್ರೇರಣೆ ನೀಡಿತು. ಇಂಥಹ ಅಪರೂಪದ ಪರಿಸರ ಬಾಲಕಿ ಗಂಗೂಬಾಯಿಯ ಸಂಗೀತ ಸಾಧನೆಯ ಆಕಾಂಕ್ಷೆಗೆ ಹೆಚ್ಚಿನ ಪ್ರೋತ್ಸಾಹ ಒದಗಿಸಿತು.

ಗಂಗೂಬಾಯಿಯವರಿಗೆ ಮನೆಯೇ ಮೊದಲ ಸಂಗೀತ ಪಾಠಶಾಲೆ. ತಾಯಿಯೇ ಮೊದಲಗುರು. ಪ್ರಾಥಮಿಕ ಸಾಧನೆಗೆ ಹಲಗೂರು ಕೃಷ್ಣಾಚಾರ್ಯ ಮತ್ತು ದತ್ತೋಪಂಥ ದೇಸಾಯಿ ಪ್ರೋತ್ಸಾಹ ನೀಡಿದರು. ಆದರೆ ತಾಯಿ ಅಂಬಾಬಾಯಿಗೆ ಮಗಳು ಹಿಂದೂಸ್ಥಾನಿ ಸಂಗೀತ ವಿದೂಷಿಯಾಗಬೇಕೆಂಬ ಆಕಾಂಕ್ಷೆ. ಇದು ಕಿರಾಣಾ

ಘರಾಣೆಯ ದಿಗ್ಗಜಗಳಾದ ಗುರು-ಶಿಷ್ಯರೂ ಆದ ಅಬ್ದುಲ್ ಕರೀಂಖಾನ್ ಮತ್ತು ಸವಾಯಿಗಂಧರ್ವರ ಶಿಷ್ಯಪಟ್ಟವನ್ನು ಗಂಗೂಬಾಯಿಯವರಿಗೆ ದಕ್ಕಿಸಿಕೊಟ್ಟಿತು. ಸವಾಯಿ ಗಂಧರ್ವರು ಗಂಗೂಬಾಯಿಯವರ ಗುರುಗಳಾದರೂ ಗುರುವಿನ ಗುರು ಕರೀಂಖಾನರ ಸಂಗೀತದ ಚಾಪುಗಳನ್ನು ಕೂಡ ಗಂಗೂಬಾಯಿ ರೂಢಿಸಿಕೊಂಡರು. ಇಬ್ಬರು ಮಹಾನ್ ಪಂಡಿತರ ಸಾನಿಧ್ಯ ಗಂಗೂಬಾಯಿಯವರನ್ನು ಕಠಿಣ ಪರಿಶ್ರಮಿ ಮತ್ತು ಹಠಯೋಗಿಯನ್ನಾಗಿಸಿತು.

ಈ ಬಗೆಯ ಅವಿರತ ಸಾಧನೆ ಸಿದ್ಧಿಯಿಂದ ಒಬ್ಬ ಪರಿಪೂರ್ಣ ಕಲಾವಿದೆಯಾಗಿ ಗಂಗೂಬಾಯಿ ರೂಪುಗೊಂಡರು. ಗಂಗೂಬಾಯಿಯವರ ಹಾಡಿನ ಲಕ್ಷಣವೆಂದರೆ ಕಂಚಿನ ಕಂಠ, ಬಿಗುವಾದ ಹಾಡುಗಾರಿಕೆ, ಸ್ವರಾಲಾಪ, ನಾದಮಾಧುರ್ಯ, ಶೃತಿಶುದ್ಧತೆ. ಈ ಲಕ್ಷಣಗಳು ಅವರು ಆಕಾಶವಾಣಿ, ಸಾರ್ವಜನಿಕ ಸಭೆ ಸಮಾರಂಭ, ಉತ್ಸವ ಸ್ಥಳಗಳಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ನೆಲೆಗಳಲ್ಲಿ ಸಂಗೀತ ಕಛೇರಿಯನ್ನು ಸಮೃದ್ಧವಾಗಿ ನಡೆಸಲು ಅನುಕೂಲವಾಗುತ್ತವೆ. ಸಂಗೀತವೇ ನನ್ನ ದೇವರು. ದೇವರ ಸಾಕ್ಷಾತ್ಕಾರಕ್ಕೆ ಸಾಧನೆ ಅಗತ್ಯ, ಕೇಳುಗರ ಹೃದಯ ಗೆಲ್ಮೆಯೆ ನನ್ನ ಕಲ್ಪನೆಯ " ಮೋಕ್ಷ" ವೆನ್ನುವುದು ಗಂಗೂಬಾಯಿಯವರ ಆದರ್ಶ.

ಒಂದು ಕಾಲದಲ್ಲಿ ಬೇರೆಯವರ ಧ್ವನಿಸುರುಳಿ ಕೇಳಿ ಆನಂದಿಸುತ್ತಿದ್ದ ಯುವತಿ ಗಂಗೂಬಾಯಿ, ಇಂದು ಎಚ್.ಎಂ.ವಿ. ಕಂಪನಿ ಮತ್ತು ಬೇರೆ ಬೇರೆ ಕಂಪನಿಗಳ ಸಹಾಯದಿಂದ ತಮ್ಮ ಧ್ವನಿಸುರುಳಿಗಳನ್ನು ಬಿಡುಗಡೆ ಮಾಡಿದ್ದಾರೆ. ಇವು ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಮಾರುಕಟ್ಟೆಗಳಲ್ಲಿ ಅಲ್ಲದೆ ಅನ್ಯ ಮಾರುಕಟ್ಟೆಗಳಲ್ಲೂ ಕೂಡ 'ಹಿಟ್' ಆಗಿವೆ. 'ಶ್ಯಾಮಸುಂದರ ತೋರಿ', 'ಆಂಖೆ ಚುರಾನಾ', ಎಂಬ ಗಝಲ್‌ಗಳಾಗಲೀ 'ಬಾಲಿಶತಾ ಕಾಲ ಕಸಬಾ, 'ಹದಿಚೋ ಗುಣಗಾವುಯಾ', ಎಂಬ ಮರಾಠಿ ಗೀತೆಗಳಾಗಲೀ 'ಕಹೆಲಾಡಲೀ' ಎಂಬ ಮೀಯಾಮಲ್ಹಾರ ಚೀಜ್ 'ರಾಮಹರಿಕಾ ಭೇದನ ತಾಯೋ', ಎಂಬ ಚೀಜ್‌ಗಳಾಗಲೀ ಅಪಾರ ಜನಮೆಚ್ಚುಗೆಯನ್ನು ಗಳಿಸಿಕೊಂಡಿವೆ.

ಈ ಎಲ್ಲ ಸಾಧನೆಗಳ ಹಿನ್ನೆಲೆಯಲ್ಲಿ ಅವರ ಪ್ರತಿಭೆಗೆ ಪುರಸ್ಕಾರವಾಗಿ ಹಲವಾರು ಪ್ರಶಸ್ತಿಗಳು, ಗೌರವಸ್ಥಾನ ಮಾನಗಳು ಅವರನ್ನು ಹುಡುಕಿಕೊಂಡು ಬಂದಿವೆ.

೧೯೪೮ರಲ್ಲಿ ಕಾಶಿನಾಗರೀ ಪ್ರಚಾರಿಣಿಸಭಾ 'ಭಾರತೀಯ ಕಂಠ' ಎಂಬ ಬಿರುದು ನೀಡಿ ಪುರಸ್ಕರಿಸಿದೆ. ೧೯೬೨ ರಲ್ಲಿ ಮೈಸೂರು ರಾಜ್ಯ 'ಸಂಗೀತನಾಟಕ ಅಕಾಡೆಮಿ ಪ್ರಶಸ್ತಿ', ೧೯೬೯ರಲ್ಲಿ ಪ್ರಯಾಗ ಸಮಿತಿಯ 'ಸ್ವರ ಶಿರೋಮಣಿ' ಪ್ರಶಸ್ತಿ, ೧೯೭೧ರ ಭಾರತ ಸರ್ಕಾರದ 'ಪದ್ಮಭೂಷಣ' ಪ್ರಶಸ್ತಿ, ೧೯೭೩ರ 'ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ', ೧೯೭೪ರ 'ಬೇಗಂ ಅಖ್ತಾರ ಅವಾರ್ಡ್,' ೧೯೭೬ ನವೆಂಬರ್ ೧ರ 'ರಾಜ್ಯೋತ್ಸವ' ಪ್ರಶಸ್ತಿ, ೧೯೭೭ರ ಆಕಾಶವಾಣಿಯ ಸುವರ್ಣ

ಮಹೋತ್ಸವದ 'ಮಿಮಿಂಟೋ ಪ್ರಧಾನ' ಪ್ರಶಸ್ತಿ, ೧೯೭೮ರ ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಗುಲ್ಬರ್ಗಾ ವಿಶ್ವವಿದ್ಯಾಲಯಗಳ 'ಗೌರವ ಡಾಕ್ಟರೇಟ್,' ೧೯೭೮ರಲ್ಲಿ ರಾಜ್ಯ ಸಂಗೀತ ಅಕಾಡೆಮಿ ಸದಸ್ಯತ್ವ, ೧೯೮೨ ರಿಂದ ೮೪ರವರೆಗೆ ರಾಜ್ಯ ಸಂಗೀತ ನೃತ್ಯ ಅಕಾಡೆಮಿ ಅಧ್ಯಕ್ಷತೆ, ೧೯೮೨ 'ಇಂಡಿಯನ್ ಟೊಬ್ಯಾಕೋ ಕಂಪನಿ ಪ್ರಶಸ್ತಿ' ೧೯೮೪ರ ಮಧ್ಯಪ್ರದೇಶ ಸರಕಾರದ 'ತಾನಸೇನ್ ಪ್ರಶಸ್ತಿ', - ಇವುಗಳನ್ನೆಲ್ಲ ಗಂಗೂಬಾಯಿ ಅವರು ಪಡೆದಿದ್ದಾರೆ. ಗಂಗೂಬಾಯಿಯವರು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಆಡಳಿತ ಮಂಡಳಿ ಸದಸ್ಯರೂ ಆಗಿದ್ದಾರೆ.

ತಮ್ಮ ಹಣ್ಣು ಹಣ್ಣು ವಯಸ್ಸಿನಲ್ಲೂ ಕಲಾಸೇವೆ ಮಾಡುತ್ತಿರುವ ಗಂಗೂಬಾಯಿಯವರಿಗೆ ಇತ್ತೀಚೆಗೆ ಕರ್ನಾಟಕ ಸರ್ಕಾರದ ' ಕನಕ ಪುರಂದರ ಪ್ರಶಸ್ತಿ', ಹಾಗೂ ಅಸ್ಸಾಮ್ ಸರಕಾರದ 'ಶಂಕರ ದೇವ ಪ್ರಶಸ್ತಿ' ಗಳು ಲಭ್ಯವಾಗಿವೆ.



# ಡಾ. ಶಿವರಾಮ ಕಾರಂತ

*ಮಂಜುನಾಥ ಬೇವಿನಕಟ್ಟೆ*

---

ಕನ್ನಡದ ಹಿರಿಯ ಸಾಹಿತಿ, ಖ್ಯಾತ ಪರಿಸರವಾದಿ ಡಾ. ಕೋಟ ಶಿವರಾಮ ಕಾರಂತರು ಈ ಶತಮಾನದ ದೊಡ್ಡ ಪ್ರತಿಭಾನ್ವಿತರು. ಇವರಿಗೆ ೧೯೯೪ರ ಸಾಲಿನ 'ಇಂದಿರಾಗಾಂಧಿ ಪರ್ಯಾವರಣ ಪ್ರಶಸ್ತಿ' ಸಂದಿದ್ದು, ಕಳೆದ ಆಗಸ್ಟ್ ೬ ರಂದು ದೆಹಲಿಯಲ್ಲಿ ರಾಷ್ಟ್ರಪತಿ ಅವರು ಪ್ರಶಸ್ತಿ ಪ್ರದಾನ ಮಾಡಿದರು. ಕಾರಂತರು ಪರಿಸರ ಸಂರಕ್ಷಣೆಯ ರಂಗದಲ್ಲಿ ಸಲ್ಲಿಸಿದ ಸೇವೆಯನ್ನು ಗುರುತಿಸಿ, ಕೇಂದ್ರ ಸರ್ಕಾರ ಈ ಪ್ರಶಸ್ತಿಯನ್ನು ನೀಡಿದೆ.

ಕನ್ನಡನಾಡು-ನುಡಿಗಳಿಗೆ ಅಭೂತಪೂರ್ವ ಕಾಣಿಕೆ ಸಲ್ಲಿಸಿರುವ ಕಾರಂತರು ದಕ್ಷಿಣ ಕನ್ನಡ ಜಿಲ್ಲೆಯ ಕುಗ್ರಾಮವೊಂದರಲ್ಲಿ, ಸಂಪ್ರದಾಯ ಶರಣರ ಎಡೆಯಲ್ಲಿ ಹುಟ್ಟಿ ಬೆಳೆದವರು. ಆದರೆ ಅವರು ಪಡೆದ ಅನುಭವಗಳು, ಪ್ರೇರಣೆಗಳು ಅಪಾರ. ಚಿಕ್ಕಂದಿನಲ್ಲೇ ಶಾಲೆ ಬಿಟ್ಟು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲುಗೊಂಡಿದ್ದ ಅವರು ಮುಂದೆ ಎಲ್ಲಾ ಜ್ಞಾನ ಶಾಖೆಗಳಲ್ಲೂ ಆಸಕ್ತಿ ಬೆಳೆಸಿಕೊಂಡಿದ್ದು, ಅವರ ಪ್ರತಿಭೆಯ ವೈಚಿತ್ರ್ಯಗಳಲ್ಲೊಂದು ಎನ್ನಲೇಬೇಕಾಗುತ್ತದೆ. ಸಹಜವಾಗಿಯೇ ಅವರಿಗೆ ಹಲವಾರು ವಿಶ್ವವಿದ್ಯಾಲಯಗಳ ಗೌರವ ಡಾಕ್ಟರೇಟುಗಳು, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ದಾದಾಬಾಯಿ ನವರೋಜಿ ಆವಾರ್ಡ್ ಹಾಗೂ ಜ್ಞಾನಪೀಠ ಪ್ರಶಸ್ತಿಯೂ ಸೇರಿದಂತೆ ಹಲವು ಹತ್ತು ಪ್ರಶಸ್ತಿಗಳು ಲಭ್ಯವಾಗಿವೆ.

ಕಾರಂತರ ಬದುಕು ಬೇರೆಯಲ್ಲ, ಬರವಣಿಗೆ ಬೇರೆಯಲ್ಲ. ಅವರು ಪರಿಸರ ಮಾಲಿನ್ಯದ ಬಗ್ಗೆಯಾಗಲಿ, ಪ್ರಾಕೃತಿಕ ಸಮತೋಲನದ ಬಗ್ಗೆಯಾಗಲಿ ಶಾಸ್ತ್ರೀಯವಾಗಿ ಬರೆಯುವಷ್ಟೇ ಕಾಳಜಿಯಿಂದ, ಅವುಗಳನ್ನು ಕುರಿತ ಚಳುವಳಿಗಳ ನೇತೃತ್ವವನ್ನು ವಹಿಸುತ್ತಾರೆ. ದೇಶಾದ್ಯಂತ ನಡೆಯುತ್ತಿರುವ ಪರಿಸರ ಆಂದೋಳನಗಳಲ್ಲಿ ಕಾರಂತರ ಸಕ್ರಿಯ ಪಾತ್ರ ಇದ್ದೇ ಇರುತ್ತದೆ. ಕಾರಂತ ಆಂಧ್ರಪ್ರದೇಶದ ವೈಝಾಕಿನ ಪರ್ಯಾವರಣ ಸಮಿತಿಯ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಸರಕಾರದ ವಿಜ್ಞಾನ, ತಂತ್ರಜ್ಞಾನ ಮತ್ತು ಪರಿಸರ ಇಲಾಖೆ ಸಂಘಟಿಸಿದ 'ಅಖಿಲ ಭಾರತ ಅಣುಸ್ಥಾವರ' ಯೋಜನೆಗಳ ಕಮ್ಮಟದಲ್ಲಿ ಕೈಗಾ ಅಣುಸ್ಥಾವರ ಗೋಷ್ಠಿಯ ಅಧ್ಯಕ್ಷರಾಗಿದ್ದರು. 'ನರ್ಮದಾ ಬಚಾವೊ' ಆಂದೋಳನದಲ್ಲಿ ಭಾಷಣಕಾರರಾಗಿದ್ದರು. ಕೇರಳದಲ್ಲಿ ನಡೆದ ಅಣುಸ್ಥಾವರ ವಿರೋಧಿ ಸಮ್ಮೇಳನದಲ್ಲಿ ಮುಖ್ಯ ಭಾಷಣಕಾರರಾಗಿದ್ದರು. ಕಾರವಾರ ನೌಕಾನೆಲೆಯಲ್ಲಿ ವಸತಿ ಕಳೆದುಕೊಂಡವರ ನಿರ್ವಾಸಿತರ ಹೋರಾಟದಲ್ಲಿ

ಪಾಲ್ಗೊಂಡಿದ್ದರು. ಹರಿಹರ ಪಾಲಿಫೈಬರ್ಸ್ ವಿರುದ್ಧ, ಶರಾವತಿ ಟೇಲ್‌ರೇಸ್ ವಿರುದ್ಧ, ನಂದಿಕೂರು ಉಷ್ಣ ವಿದ್ಯುತ್ ಸ್ಥಾವರ ವಿರುದ್ಧ - ಒಟ್ಟಾರೆ ಪರಿಸರ ಮಾಲಿನ್ಯ ತಡೆಗಾಗಿ ನ್ಯಾಯಾಲಯಗಳಲ್ಲಿ ವರ್ಷಾನುಗಟ್ಟಲೆಯಿಂದ ದಾವೆ ನಡೆಸುತ್ತಿರುವವರು. ಹಾಗಾಗಿ ಪರಿಸರದ ನಿಸರ್ಗ ಕಾರಂತರ ಸಾಹಿತ್ಯದ ಕಥಾವಸ್ತುವಲ್ಲ, ಕಾರ್ಯವ್ಯಾಪ್ತಿ. ನಿಸರ್ಗವೇ ಅವರ ಕೃತ್ಸತ್ವ ಶಕ್ತಿ, ಚೈತನ್ಯಸ್ಫೂರ್ತಿ.

ಕಾರಂತರು ತಮ್ಮ ಪರಿಸರದಲ್ಲಿನ ಅನುಭವಗಳನ್ನು ಹೆಕ್ಕಿ, ಅದಕ್ಕೆ ದನಿ ನೀಡಿ, ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಕಾರಂತರಿಗೂ ಇತರ ಲೇಖಕರಿಗೂ ಇರುವ ಒಂದು ಮುಖ್ಯ ವ್ಯತ್ಯಾಸವೆಂದರೆ, ಪ್ರಾಯಶಃ ಕಾರಂತರೊಬ್ಬರೇ ಬದುಕಿನ ಅನೇಕ ಕ್ಷೇತ್ರಗಳಲ್ಲಿ ಆಸಕ್ತಿ ಇಟ್ಟುಕೊಂಡಿರುವುದು ಮತ್ತು ಕ್ರಿಯಾಶೀಲರಾಗಿರುವುದು. ಸಾಹಿತ್ಯ, ರಂಗಭೂಮಿ, ಚಲನಚಿತ್ರ, ವಿಜ್ಞಾನ, ಚಿತ್ರಕಲೆ, ಸಂಗೀತ, ಶಿಕ್ಷಣ, ರಾಜಕೀಯ, ಪತ್ರಿಕೋದ್ಯಮ, ಭಾಷೆ, ಸಂಸ್ಕೃತಿ ಹೀಗೆ ಪಟ್ಟಿ ಬೆಳೆಯುತ್ತದೆ. ಕಾರಂತರು 'ಬಾಲ ಪ್ರಪಂಚ' 'ವಿಜ್ಞಾನ ಪ್ರಪಂಚ'ಗಳನ್ನು ಸಿದ್ಧಪಡಿಸಿ 'ಸಿರಿಗನ್ನಡ ಅರ್ಥಕೋಶ'ವನ್ನು ರಚಿಸಿದ್ದಾರೆ. ಯಕ್ಷಗಾನವನ್ನು ಕುರಿತ ಪುಸ್ತಕಗಳನ್ನು ಬರೆದಿದ್ದಾರೆ. ಶಿಲ್ಪಕಲೆ, ಚಿತ್ರಕಲೆ ಕುರಿತ ಪುಸ್ತಕಗಳನ್ನು ರಚಿಸಿದ್ದಾರೆ. ಸ್ವತಃ ತಾವೇ ಚಿತ್ರಗಳನ್ನು ಬರೆದಿದ್ದಾರೆ. ಚಲನಚಿತ್ರ ನಿರ್ಮಿಸಿದ್ದಾರೆ. ನಾಟಕಗಳನ್ನು ನಿರ್ದೇಶಿಸಿದ್ದಾರಲ್ಲದೆ ಹಲವಾರು ನಾಟಕಗಳನ್ನು ಸಹ ಬರೆದಿದ್ದಾರೆ. ನಾಟಕ, ಯಕ್ಷಗಾನ ಮತ್ತು ಚಲನಚಿತ್ರಗಳಲ್ಲೂ ನಟಿಸಿದ್ದಾರೆ.



ಕಾರಂತರಿಗೆ ಪ್ರಕೃತಿಯ ಅನುಭವದ ಮುಖವನ್ನು ಮಾತ್ರವಲ್ಲ ಅದರ ಬೌದ್ಧಿಕ ಮುಖದತ್ತಲೂ ತುಂಬ ಆಸಕ್ತಿ. ಅಂದರೆ ಹೂವೊಂದನ್ನು, ಪ್ರಾಣಿಯೊಂದನ್ನು, ಕೀಟವೊಂದನ್ನು ಅದರ ಸೊಗಸಿಗಾಗಿ ಮೆಚ್ಚಿಕೊಳ್ಳುವ ಕಾರಂತರು, ಅವುಗಳ ಜೈವಿಕ ಮೂಲವನ್ನು ಹುಡುಕಿಕೊಂಡು ಹೋಗುತ್ತಾರೆ. ಸೃಷ್ಟಿರಹಸ್ಯದ ವಿಸ್ಮಯ ಅಷ್ಟಕ್ಕೆ ನಿಲ್ಲದೆ ಬೌದ್ಧಿಕ ಕುತೂಹಲವನ್ನು ಪ್ರಚೋದಿಸಿ ತಿಳುವಳಿಕೆಯತ್ತ, ಜ್ಞಾನದತ್ತ, ಸತ್ಯದತ್ತ ಮುಖಮಾಡಿಸುತ್ತದೆ. ಆದ್ದರಿಂದಲೇ ಅವರು ಹೊಸ ಹೊಸ ವಿಚಾರದ ಆವಿಷ್ಕಾರಗಳಿಗೆ ತಮ್ಮ ಮನಸ್ಸಿನ ಕವಾಟವನ್ನು ಸದಾ ತೆರೆದಿಟ್ಟಿರುತ್ತಾರೆ. ಕಾರಂತರು ವಿಜ್ಞಾನ ಮಾನವತೆಯ ಏಳ್ಗೆಗೆ ಪೂರಕವಾಗಿರಬೇಕೆಂದು ಬಲವಾಗಿ ನಂಬಿದವರು. ಕರ್ನಾಟಕದ ಕೈಗಾದಲ್ಲಿ ಅಣುವಿದ್ಯುತ್ ಸ್ಥಾವರ ಸ್ಥಾಪನೆಗೆ ಸರ್ಕಾರ ಅನುಮತಿ ನೀಡಿದೊಡನೆಯೇ, ಅಣುವಿಕಿರಣದ ಪರಿಣಾಮವನ್ನು ತಮ್ಮ ದೂರಗಾಮಿ ದೃಷ್ಟಿಯಿಂದ ಬಿಚ್ಚು

ಮಾತುಗಳಲ್ಲಿ ಹೇಳಿ, ಕೈಗಾ ಅಣುಸ್ಥಾವರ ಮತ್ತು ಪರಿಸರ ನಾಶವನ್ನು ಕಟುವಾಗಿ ವಿರೋಧಿಸಿದರು. ಈ ವಿಷಯವನ್ನೇ ಪ್ರಧಾನವಾಗಿ ಇಟ್ಟುಕೊಂಡು, ಜನಾಭಿಪ್ರಾಯ ರೂಢಿಸುವ ಕ್ರಮವಾಗಿ ಕಾರಂತರು ಲೋಕಸಭಾ ಚುನಾವಣೆಗೆ ಸ್ಪರ್ಧಿಸಿದ್ದೂ ಉಂಟು. ವಿಪರ್ಯಾಸವೆಂದರೆ, ಕೇಂದ್ರ ಸರ್ಕಾರವೇ ''ಕೈಗಾ ಅಣುಸ್ಥಾವರ'' ವನ್ನು ಒಂದು ಕಡೆ ಜನರ ಮೇಲೆ ಹೇರುತ್ತಿದೆ. ಮತ್ತೊಂದು ಕಡೆ ಅಣುಸ್ಥಾವರದಿಂದ ಪರಿಸರ ಹಾಳಾಗುತ್ತಿದೆ ಎಂದು ಹೋರಾಟ ನಡೆಸುತ್ತಿರುವ ಕಾರಂತರಿಗೆ ''ಇಂದಿರಾಗಾಂಧಿ ಪರ್ಯಾವರಣ' ಪ್ರಶಸ್ತಿ ನೀಡಿದೆ. ಅದನ್ನು ಅವರು ಪಡೆದಿದ್ದಾರೆ.



# ಡಾ. ಪಾಟೀಲ ಪುಟ್ಟಪ್ಪ

*ವೆಂಕಟೇಶ ಇಂದ್ವಾಡಿ*



ಕನ್ನಡ ಪತ್ರಿಕೋದ್ಯಮಕ್ಕೆ ೧೫೦ ವರ್ಷ ತುಂಬಿದ ಸಂದರ್ಭದಲ್ಲಿ, ಕನ್ನಡ ಪತ್ರಿಕೋದ್ಯಮಕ್ಕೆ ಅನುಪಮ ಸೇವೆ ಸಲ್ಲಿಸಿದ ಪತ್ರಕರ್ತರೊಬ್ಬರಿಗೆ, ಟೀಯೆಸ್ಸಾರ್ ಹೆಸರಿನಲ್ಲಿ ಪ್ರಶಸ್ತಿಯೊಂದನ್ನು ನೀಡಲು ಕರ್ನಾಟಕ ಸರ್ಕಾರ ನಿರ್ಧರಿಸಿತು. ಕನ್ನಡದ ಕಾರ್ಯಕರ್ತ ಹಾಗೂ ಪತ್ರಕರ್ತರಾದ ಡಾ. ಪಾಟೀಲಪುಟ್ಟಪ್ಪನವರಿಗೆ ಈ ಪುರಸ್ಕಾರವನ್ನು ಪ್ರಥಮಬಾರಿಗೆ ನೀಡಿ ಗೌರವಿಸಲಾಗಿದೆ.

'ಟೀಯೆಸ್ಸಾರ್' ಎಂದೇ ಖ್ಯಾತನಾಮರಾಗಿದ್ದ ದಿವಂಗತ ಟಿ.ಎಸ್. ರಾಮಚಂದ್ರರಾವ್ ಅವರು 'ಪ್ರಜಾವಾಣಿ' ಪತ್ರಿಕೆಯ ಸಂಪಾದಕರಾಗಿ, ಸ್ವಾತಂತ್ರ್ಯೋತ್ತರ ಕಾಲದ ಕನ್ನಡ ಪತ್ರಿಕೋದ್ಯಮವನ್ನು ಜನಪರ ಪತ್ರಿಕೋದ್ಯಮವನ್ನಾಗಿ ರೂಪಿಸಿ ಅದರ ಎಲ್ಲಾ ಆಯಾಮಗಳನ್ನು ಕನ್ನಡಿಗರಿಗೆ ಪರಿಚಯಿಸಿದವರಾಗಿ ಮುಖ್ಯರು. ಟೀಯೆಸ್ಸಾರ್ ತಮ್ಮ ವಿಶಿಷ್ಟ ಬರವಣಿಗೆಯ ಅಂಕಣವಾದ 'ಛೂಬಾಣ'ದಿಂದ ಬಹುಬೇಗ ಜನಪ್ರಿಯರಾದವರು. ನಂಜಿಲ್ಲದ ವಿಡಂಬನೆ, ವ್ಯಂಗ್ಯ, ಹಾಸ್ಯಟೀಕೆ ನವಿರು ಭಾಷೆಗಳಿಂದ ಕೂಡಿದ 'ಛೂಬಾಣ' ಅನ್ಯಾಯ, ಅಕ್ರಮ, ಅವಮಾನಗಳ ವಿರುದ್ಧ ಕೂರಂಬು ಆಗಿ ಚುಚ್ಚುತ್ತಿತ್ತು. ಅಧಿಕಾರಸ್ಥ ವರ್ಗದ ಜನರಿಗೆ ಇದೊಂದು ಎಚ್ಚರಿಕೆಯ ಬಾಣವಾಗಿತ್ತು. ಇಂತಹ ಧೀಮಂತ ವ್ಯಕ್ತಿಯ ಹೆಸರಿನ ಪ್ರಶಸ್ತಿಯು, ಪತ್ರಿಕಾರಂಗದಲ್ಲಿ ವಿಶೇಷ ಸಾಧನೆಯನ್ನು ಮಾಡಿದ ಪಾಟೀಲ ಪುಟ್ಟಪ್ಪನವರಿಗೆ ಸಂದಿದೆ.

೧೯೨೨ರಲ್ಲಿ ಹಾವೇರಿ ತಾಲ್ಲೂಕಿನ ಕುರುಬಗೊಂಡದಲ್ಲಿ ಜನಿಸಿದ ಪಾಟೀಲ ಪುಟ್ಟಪ್ಪನವರು ಚಿತ್ರದುರ್ಗ, ಹಾವೇರಿ ಹಾಗೂ ಧಾರವಾಡದಲ್ಲಿ ಓದಿ ಬೆಳಗಾವಿಯಲ್ಲಿ ಕಾನೂನು ಪದವಿಯನ್ನು ಪಡೆದರು. ೧೯೩೦-೪೦ರ ದಶಕದಲ್ಲಿ ಸ್ವಾತಂತ್ರ್ಯ ಚಳುವಳಿ, ೧೯೪೨ರಲ್ಲಿ ಚಲೇಜಾವ್ ಚಳುವಳಿಯಲ್ಲಿ ಪಾಲ್ಗೊಂಡು ಜೈಲುವಾಸವನ್ನು

ಅನುಭವಿಸಿದರು. ನಂತರ ಕ್ಯಾಲಿಫೋರ್ನಿಯಾದಲ್ಲಿ ಪತ್ರಿಕೋದ್ಯಮಶಾಸ್ತ್ರ ಓದಿ ಬಂದು, ಕೆಲಕಾಲ ಮುಂಬೈನಲ್ಲಿ ವಕಾಲತ್ತು ಮಾಡಿ, ಕೊನೆಗೆ ಪತ್ರಿಕಾ ವ್ಯವಸಾಯಕ್ಕೆ ಕಾಲಿಟ್ಟರು. ಒಬ್ಬ ಸಮರ್ಥ ಪತ್ರಕರ್ತನಿಗೆ ಇರಬೇಕಾದ ಎಲ್ಲಾ ಗುಣಗಳನ್ನು ಮೇಳೈಸಿಕೊಂಡ ಪಾಟೀಲ ಪುಟ್ಟಪ್ಪನವರು, ಕಟ್ಟಾ ಕನ್ನಡಾಭಿಮಾನಿಯಾಗಿ ಪತ್ರಿಕಾರಂಗದಲ್ಲಿ 'ಪಾಪು' ಎಂಬ ಹೆಸರಿನಿಂದಲೇ ಖ್ಯಾತನಾಮರಾದರು.

ಪತ್ರಿಕೋದ್ಯಮದ ಪಿತಾಮಹ ಮೊಹರೆ ಹನುಮಂತರಾಯರ ಆದರ್ಶ ಹಾಗೂ ಡಿ.ವಿ.ಜಿ.ಯವರ ಪ್ರೇರಣೆಯಿಂದ ಹುಬ್ಬಳ್ಳಿಯಲ್ಲಿ ನೆಲೆನಿಂತು, ೧೯೪೭ರಲ್ಲಿ 'ವಿಶಾಲ ಕರ್ನಾಟಕ' ಪತ್ರಿಕೆಯನ್ನು ಆರಂಭಿಸಿದರು. ಇವರು ೧೯೫೨ರಲ್ಲಿ 'ನವಯುಗ' ಸಂಪಾದಕರಾಗಿ, ೧೯೫೪ರಲ್ಲಿ 'ಪ್ರಪಂಚ' ಸಾಪ್ತಾಹಿಕ, ೧೯೫೬ರಲ್ಲಿ 'ಸಂಗಮ' ಮಾಸಿಕ, ೧೯೫೯ರಲ್ಲಿ 'ವಿಶ್ವವಾಣಿ' ದೈನಿಕ, ೧೯೬೧ರಲ್ಲಿ ' ಮನೋರಮ' ಸಿನಿಮಾ ಪಾಕ್ಷಿಕ, ೧೯೬೪ರಲ್ಲಿ 'ಸ್ತ್ರೀ' ಮಾಸಿಕ ಪತ್ರಿಕೆಗಳಲ್ಲಿ ದುಡಿದು ಅಪಾರವಾದ ಅನುಭವ ಪಡೆದರು. 'ಪ್ರಪಂಚ' ವಾರಪತ್ರಿಕೆ ಮತ್ತು 'ವಿಶ್ವವಾಣಿ' ದಿನ ಪತ್ರಿಕೆಗಳಲ್ಲಿ ತಮ್ಮ ಪತ್ರಿಕಾ ಬರಹಗಳ ಮೂಲಕ ನಾಡಿನಾದ್ಯಂತ ಹೆಸರುವಾಸಿಯಾದರು.

ಪಾಪು ಅವರು ಗೋಕಾಕಚಳುವಳಿಯ ಸಂದರ್ಭದಲ್ಲಿ ಮುಖ್ಯ ಪಾತ್ರ ವಹಿಸಿದ್ದರು. ೧೯೮೦ರಲ್ಲಿ ಅಖಿಲಕರ್ನಾಟಕ ಕನ್ನಡ ಕೇಂದ್ರ ಕ್ರಿಯಾ ಸಮಿತಿಯ ಅಧ್ಯಕ್ಷರಾಗಿದ್ದರು. ನಂತರ ೧೯೮೫ರಲ್ಲಿ 'ಕನ್ನಡ ಕಾವಲು ಸಮಿತಿ'ಯ ಅಧ್ಯಕ್ಷರಾಗಿ ಆಡಳಿತದ ಎಲ್ಲ ಹಂತಗಳಲ್ಲಿ ಕನ್ನಡದ ಅನುಷ್ಠಾನಕ್ಕೆ ಶ್ರಮಿಸಿದರು. ಕೇವಲ ಪತ್ರಿಕಾ ರಂಗವಲ್ಲದೆ ಅವರು ಜನಪರ ಹೋರಾಟಗಳಲ್ಲಿ ಹಾಗೂ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸುಮಾರು ೧೭ ಕೃತಿಗಳನ್ನು ಬರೆದಿರುವ ಪಾಟೀಲಪುಟ್ಟಪ್ಪನವರು ತಮ್ಮೆಲ್ಲಾ ಕೃತಿಗಳಲ್ಲೂ ನಾಡು-ನುಡಿ ಹಾಗೂ ಸಂಸ್ಕೃತಿಗಳ ಬಗ್ಗೆ ಅಪಾರವಾದ ಕಾಳಜಿಯನ್ನು ತೋರಿಸಿದ್ದಾರೆ. ಇವರ ಸಾಧನೆಗಳನ್ನು ಗುರುತಿಸಿ ೧೯೯೩ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಇವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ನೀಡಿದೆ. ಹೀಗೆ ಪತ್ರಕರ್ತರಾಗಿ, ಕನ್ನಡ ಅಭಿಮಾನಿಗಳಾಗಿ, ಹೋರಾಟಗಾರರಾಗಿ ದುಡಿದ ಪಾಟೀಲ ಪುಟ್ಟಪ್ಪನವರಿಗೆ ಈಗ 'ಟೀಯೆಸ್ಸಾರ್' ಹೆಸರಿನ ಪ್ರಪ್ರಥಮ ಪ್ರಶಸ್ತಿ ಗೌರವ ಸಂದಿದೆ.



# ಬಿ.ಆರ್. ನಾರಾಯಣ

*ಪ್ರೇಮಕುಮಾರ್*



ತನ್ನ ಮಾತೃಭಾಷೆಯಲ್ಲಿ ಮೂಡಿಬಂದ ಸಾಹಿತ್ಯದ ಕೃತಿಗಳನ್ನು ಇತರ ಭಾಷೆಗಳಿಗೆ ಅನುವಾದಿಸುವ ಮೂಲಕ ತನ್ನ ನಾಡಿನ ಸಂಸ್ಕೃತಿ, ಸೃಜನಶೀಲತೆಗಳನ್ನು ಅನ್ಯಭಾಷಿಕರಿಗೆ ಪರಿಚಯಿಸುವ ಕಾರ್ಯವು ಬಹಳ ಮೌಲಿಕವಾದುದು ನಿಜ. ಆದರೆ ಈ ಕಾರ್ಯದಲ್ಲಿ ಯಶಸ್ಸು ಸಿಗುವುದು ಅಪರೂಪ ಹಾಗೂ ಈ ಕ್ಷೇತ್ರದಲ್ಲಿ ದುಡಿಯುವವರ ಸಂಖ್ಯೆಯೂ ಕಡಿಮೆ. ಇಂಥ ಸಂದರ್ಭದಲ್ಲಿ ಕನ್ನಡ ಭಾಷೆಯ ಶ್ರೇಷ್ಠ ಕೃತಿಗಳನ್ನು ಹಿಂದಿ ಭಾಷೆಗೆ ಅನುವಾದಿಸಿ ನಮ್ಮ ಲೇಖಕರನ್ನು ಅವರ ಸಾಹಿತ್ಯದ ಗರಿಮೆಯನ್ನು ಪರಿಚಯಿಸುವ ಹಾಗೂ ಎರಡು ಭಾಷೆಗಳ ನಡುವೆ ಸಾಂಸ್ಕೃತಿಕ ವಿನಿಮಯ ನಡೆಸುವ ದಿಸೆಯಲ್ಲಿ ದುಡಿದವರಲ್ಲಿ ಡಾ. ಬಿ.ಆರ್. ನಾರಾಯಣ್ ಒಬ್ಬರು. ಅವರ ದುಡಿಮೆಗೆ ತಕ್ಕನಾದ ಪುರಸ್ಕಾರವು ಅವರಿಗೆ ಈವರ್ಷ ಸಿಕ್ಕಿದೆ.

ಬೆಂಗಳೂರು ದಕ್ಷಿಣ ತಾಲ್ಲೂಕಿನ ಕಂಬೀಪುರದಲ್ಲಿ ೧೯೨೭ರಲ್ಲಿ ಜನಿಸಿದ ನಾರಾಯಣ್ ಅವರು, ಶಾಲೆಗೆ ವಿದಾಯ ಹೇಳಿ ೧೯೪೨ರಲ್ಲಿ ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸಲು ಲಾಹೋರಿಗೆ ತೆರಳಿದರು. ಸ್ವಾತಂತ್ರ್ಯಾನಂತರ ದೆಹಲಿಗೆ ಬಂದು ದೆಹಲಿ ವಿಶ್ವವಿದ್ಯಾಲಯದಿಂದ ಹಿಂದಿಯಲ್ಲಿ ಎಂ.ಎ. ಪದವಿಯನ್ನು ಪಡೆದರು. ಕೆಲವು ವರ್ಷ ಅಧ್ಯಾಪಕರಾಗಿದ್ದು ಅನಂತರ ಕೇಂದ್ರೀಯ ಹಿಂದಿ ನಿರ್ದೇಶನಾಲಯದಲ್ಲಿ ಅಧಿಕಾರಿಯಾದರು. ಕ್ಯಾಬಿನೆಟ್ ಸೆಕ್ರಟರಿಯೇಟ್‌ನಲ್ಲಿ ಸೇರಿ, ಡೆಪ್ಯುಟಿ ಡೈರಕ್ಟರ್ ಆಗಿ ನಿವೃತ್ತಿ ಹೊಂದಿದರು. ತಮ್ಮ ಈ ಅಧಿಕಾರವ್ಯವಸ್ಥೆಯ ಕರ್ತವ್ಯಗಳೊಂದಿಗೆ ಸಾಹಿತ್ಯವನ್ನು ಕೈಬಿಡದ ನಾರಾಯಣ ಅವರು, ಹಿಂದಿಯಿಂದ ಇಂಗ್ಲೀಷ್‌ಗೆ, ಹಿಂದಿಯಿಂದ ಕನ್ನಡಕ್ಕೆ ಹಾಗೂ ಕನ್ನಡದಿಂದ ಹಿಂದಿಗೆ ಅನೇಕ ಕೃತಿಗಳನ್ನು ಅನುವಾದಿಸಿದರು. ಹಿಂದಿಗೆ ಅನುವಾದಿಸಿದ ಅನೇಕ ಗ್ರಂಥಗಳಲ್ಲಿ ಮಾಸ್ತಿಯವರ 'ಚಿಕವೀರರಾಜೇಂದ್ರ', ಶಂಕರ ಮೊಕಾಶಿ ಪುಣೇಕರರ 'ಗಂಗವ್ವ ಗಂಗಾಮಾಯಿ',

ಶ್ರೀರಂಗರ 'ಅನಾದಿ ಅನಂತ', 'ರಂಗಭಾರತ', ಶಿವರಾಮ ಕಾರಂತರ 'ಮೈಮನಗಳ ಸುಳಿಯಲ್ಲಿ' ಎಸ್.ಎಲ್. ಭೈರಪ್ಪನವರ 'ಪರ್ವ', ಕುವೆಂಪು ಅವರ 'ಶೂದ್ರ ತಪಸ್ವಿ', 'ಬೆರಳ್‌ಗೆ ಕೊರಳ್', 'ಜಲಗಾರ', ಡಾ. ಯು. ಆರ್. ಅನಂತಮೂರ್ತಿಯವರ 'ಮೌನಿ', ಡಾ. ಚಂದ್ರಶೇಖರ ಕಂಬಾರ ಅವರ 'ಸಿರಿಸಂಪಿಗೆ' 'ಹರಕೆಯ ಕುರಿ', ಎಚ್.ಎಲ್. ನಾಗೇಗೌಡರ 'ಬೆಟ್ಟದಿಂದ ಬಟ್ಟಲಿಗೆ', ಸಿಂಪಿಲಿಂಗಣ್ಣನವರು ಸಂಪಾದಿಸಿದ 'ಉತ್ತರ ಕರ್ನಾಟಕದ ಜಾನಪದ ಕತೆಗಳು' ಗಿರೀಶ್ ಕಾರ್ನಾಡ್ ಅವರ 'ನಾಗಮಂಡಲ' - ಮುಂತಾದವು ಸೇರಿವೆ.

ಉತ್ತರ ಪ್ರದೇಶ ಹಿಂದಿ ಸಂಸ್ಥಾನದ ಬಹುಮಾನ, ಬಿಹಾರ ಸರ್ಕಾರದ 'ವಿಶಿಷ್ಟ ಸೇವಾ ಪುರಸ್ಕಾರ್' ಹಿಂದಿ ಅಕಾಡೆಮಿಯ 'ಹಿಂದಿ ಪ್ರಚಾರ್ ಔರ್ ಪ್ರಸಾರ್ ಪುರಸ್ಕಾರ್' ಉತ್ತರ ಪ್ರದೇಶದ ' ಇಂಟರ್‌ನ್ಯಾಷನಲ್ ಥಮ್ಸ್‌ಅಪ್ ಸಿಟಿ'ಯವರ 'ಮಾತಾ ಕುಸುಮ್ ಪ್ರಶಸ್ತಿ' ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರಗಳು ಇವರಿಗೆ ಸಂದಿವೆ. ಇವರ 'ಯಯಾತಿ' ಅನುವಾದಕ್ಕೆ 'ಭಿಲ್‌ವಾರ ಪ್ರಶಸ್ತಿ' ಲಭಿಸಿದೆ. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯನ್ನು ಹಿಂದಿಗೆ 'ಪಹಾಡೀ ಕನ್ಯಾ' ಎಂಬ ಹೆಸರಿನಿಂದ ನಾರಾಯಣ್ ಅನುವಾದಿಸಿದ್ದಾರೆ. ಮಲೆನಾಡಿನ ಸೊಬಗನ್ನು, ಸಂಸ್ಕೃತಿಯನ್ನು, ಆಚಾರ ವಿಚಾರಗಳನ್ನು, ಪ್ರಾಣಿ ಪಕ್ಷಿ-ಸಸ್ಯಸಂಕುಲಗಳನ್ನು, ಹಿಂದೀ ಭಾಷಿಕರಿಗೆ ಪರಿಚಯಿಸುವುದರ ಜೊತೆಗೆ ಕನ್ನಡದ ಶ್ರೇಷ್ಠ ಲೇಖಕನನ್ನು ಅವರ ಮನದಲ್ಲಿ ನೆಲೆಯೂರುವಂತೆ ಮಾಡಿದ್ದಾರೆ. ಶಾಂತಿನಾಥ ದೇಸಾಯಿ ಅವರ 'ಕ್ಷಿತಿಜ'(ಕಥಾಸಂಕಲನ)ವನ್ನು ಹಿಂದಿಗೆ ಅನುವಾದಿಸಿದಕ್ಕಾಗಿ ನಾರಾಯಣ್ ಅವರಿಗೆ ಅನುವಾದಕ್ಕಾಗಿ ಇರುವ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಈ ವರ್ಷ ಲಭಿಸಿರುವುದು.



# ಡಾ. ಪ್ರಧಾನ ಗುರುದತ್ತ

*ಪ್ರೇಮಕುಮಾರ್*

---



ಅನುವಾದ ಕಾರ್ಯಗಳಿಗಾಗಿ ಕೇಂದ್ರ ಸಾಹಿತ್ಯ ಅಕಾಡೆಮಿ ನೀಡುತ್ತಾ ಬಂದಿರುವ ಪ್ರಶಸ್ತಿಯನ್ನು ಪ್ರಧಾನ ಗುರುದತ್ತ ಅವರು ಪಡೆದುಕೊಂಡಿದ್ದಾರೆ. ಭಾಷಾಂತರ ಕೃಷಿಗೆ ಒಂದು ಹೊಸ ಆಯಾಮವನ್ನು ಕಲ್ಪಿಸಲು ಪ್ರಯತ್ನಿಸಿದವರಲ್ಲಿ ಡಾ. ಪ್ರಧಾನ ಗುರುದತ್ ಒಬ್ಬರು. ಅವರು ಅನುವಾದ ಕ್ಷೇತ್ರದಲ್ಲಿಯೇ ತಮ್ಮನ್ನು ಹೆಚ್ಚಾಗಿ ಗುರುತಿಸಿಕೊಂಡಿರುವವರು. ೩೦, ಮೇ, ೧೯೩೮ರಲ್ಲಿ ಪ್ರಧಾನ ತಿಮ್ಮಪ್ಪಯ್ಯ ಹಾಗೂ ಲಲಿತಮ್ಮನವರ ಮಗನಾಗಿ ಚಿಕ್ಕಬಳ್ಳಾಪುರದಲ್ಲಿ ಜನಿಸಿದ ಗುರುದತ್ತರು, ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ., ಎಂ.ಫಿಲ್ (ಭಾಷಾಂತರ) ಹಾಗೂ ಪಿಎಚ್.ಡಿ. ಪದವಿಗಳನ್ನು ಮುಗಿಸಿದರು. ಬನಾರಸ್ ಹಿಂದೂ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿಯನ್ನು ಪಡೆದಿರುವ ಗುರುದತ್ ಕನ್ನಡ, ಇಂಗ್ಲೀಷ್, ಹಿಂದಿ, ಸಂಸ್ಕೃತ, ತೆಲುಗು, ತಮಿಳು, ಮರಾಠಿ ಮತ್ತು ಬಂಗಾಳಿ ಭಾಷೆಗಳನ್ನು ಬಲ್ಲವರು. ಶ್ರೀಯುತರು ಇಂಗ್ಲೀಷ್, ಹಿಂದಿ, ತಮಿಳು ಭಾಷೆಗಳ ಅತ್ಯುತ್ತಮ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಕೇಂದ್ರ ಸರ್ಕಾರದ ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಳಿ ಆಯೋಗದ ಭಾಷಾತಜ್ಞರಾಗಿ ದುಡಿದಿದ್ದಾರೆ. ಸದ್ಯ ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ತೌಲನಿಕ ಸಾಹಿತ್ಯ, ಭಾಷಾಂತರ, ಕಾವ್ಯಮೀಮಾಂಸೆ, ಭಾಷಾವಿಜ್ಞಾನ, ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಆಸಕ್ತಿ ಹೊಂದಿರುವ ಗುರುದತ್ ಅವರು, ಅನೇಕ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ. ೮೦ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ೧೯೬೪ರಲ್ಲಿ ಕರ್ನಾಟಕ ಶಿಕ್ಷಣ ಸಮಿತಿಯ ಪ್ರಶಸ್ತಿ ಗಳಿಸಿದ ಇವರ 'ಊರ್ಮಿಳಾ' (ತೌಲನಿಕ ವಿಮರ್ಶೆ) ಕೃತಿಯು ಹಿಂದಿ

ಭಾಷೆಯಲ್ಲೂ ಬಂದಿದೆ. ೧೯೭೬ರಲ್ಲಿ 'ಆಡಳಿತ ಭಾಷೆ-ಕೆಲವು ವಿಚಾರಗಳು' ಕೃತಿ ಕರ್ನಾಟಕ ಸರ್ಕಾರ ಪ್ರಶಸ್ತಿಯನ್ನು ಪಡೆಯಿತು. ಡಾ. ಕೆ.ಎಲ್. ಶ್ರೀ ಮಾಲಿ ಅವರ 'ವರ್ಧಾ ಶಿಕ್ಷಣ'ಕುರಿಯನ್-ಪಾರೀಖ್ ಅವರ 'ಆರ್ಥಿಕ ಭೂಗೋಳಶಾಸ್ತ್ರ', ಟಿ.ಎಸ್. ರಾಮಚಂದ್ರನ್ ಅವರ 'ಹರಪ್ಪಾ ಮತ್ತು ಜೈನಧರ್ಮ', ವಿ. ಬ್ರೊಥೋಫ್ ಅವರ 'ಭಾರತೀಯ ತತ್ವಶಾಸ್ತ್ರ- ಆಧುನಿಕ ಯುಗದಲ್ಲಿ', ಮುಂತಾದವು ಇಂಗ್ಲೀಷ್‌ನಿಂದ ಕನ್ನಡಕ್ಕೆ ಬಂದ ಕೆಲವು ಮುಖ್ಯ ಕೃತಿಗಳು. 'ಅಂಗುಲೀ ಮಾಲಾ', 'ಪ್ರಾಚೀನ ಭಾರತ್‌ಮೆ ಜನಜೀವನ್', 'ಪ್ರೇಮಚಂದ್' ಮುಂತಾದ ಕೃತಿಗಳು ಕನ್ನಡದಿಂದ ಹಿಂದಿಗೆ ಅನುವಾದಗೊಂಡವು; ಮದನ್ ಗೋಪಾಲ್ ಅವರ 'ಭಾರತೇಂದು ಹರಿಶ್ಚಂದ್ರ', ಯಶಪಾಲ್ ಅವರ 'ದಿವ್ಯಾ' ಡಾ. ಮದನ್‌ಲಾಲ್ 'ಮಧು' ಅವರ 'ಗೋರ್ಕಿ ಮತ್ತು ಪ್ರೇಮಚಂದ್', ರಾಹುಲ್ ಸಾಂಕೃತ್ಯಾಯನ ಅವರ 'ದಿವೋದಾಸ್', ಹಾಗೂ 'ಜಯ ಯೌಧೇಯ' ಮುಂತಾದ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಇವರ ಮತ್ತೊಂದು ಕೃತಿ ' ಭಾಷಾಂತರ ಕಲೆ' ಕರ್ನಾಟಕ ಸರ್ಕಾರದ ಪ್ರಶಸ್ತಿ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳನ್ನು ತನ್ನದಾಗಿಸಿಕೊಂಡಿದೆ.

ಶ್ರೀ ಗುರುದತ್ತ ಅವರಿಗೆ, ರಾಹುಲ್ ಸಾಂಕೃತ್ಯಾಯನ ಅವರ 'ಜಯ ಯೌಧೇಯ' ಎಂಬ ಕೃತಿಯ ಕನ್ನಡಾನುವಾದಕ್ಕಾಗಿ (ಹಿಂದಿಯಿಂದ) ೧೯೯೪ರ ಕೇಂದ್ರ ಸಾಹಿತ್ಯ ಅಕಾಡೆಮಿಯ ಭಾಷಾಂತರ ಪ್ರಶಸ್ತಿ ಲಭಿಸಿದೆ. 'ಜಯಯೌಧೇಯ'ವು ಕ್ರಿ.ಶ. ೩೫೦ ರಿಂದ ೪೦೦ ವರೆಗಿನ ಭಾರತದ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳ ಚಿತ್ರಣವನ್ನು ಮಾಡುವ ಚಾರಿತ್ರಿಕ ಕಾದಂಬರಿ, ಸತ್‌ಲಜ್ ಚಂಬಲ್ ಹಾಗೂ ಹಿಮಾಲಯಗಳ ನಡುವೆ ನೆಲೆಗೊಂಡಿದ್ದ ಯೌಧೇಯರನ್ನು ಕುರಿತ ಕೃತಿಯಿದು. ಅಸ್ಥಿಪಂಜರದಂಥ ಐತಿಹಾಸಿಕ ಸಾಮಗ್ರಿಗೆ ರಾಹುಲ್ ಸಾಂಕೃತ್ಯಾಯನ ಅವರು ತಮ್ಮ ಕಲ್ಪನೆಯೆಂಬ ರಕ್ತಮಾಂಸವನ್ನು ತುಂಬಿ ಸುಂದರ ಕಾಯುವನ್ನಾಗಿ ರೂಪಿಸಿದ್ದಾರೆ. ವಿದೇಶಿಯರಾಗಿದ್ದ ಕುಶಾನ ಆಳ್ವಿಕೆಯನ್ನು ಭಾರತದಿಂದ ತೊಡೆದುಹಾಕಿದ್ದ ಯೌಧೇಯರು ಗುರುವತ್ತರ ಅನುವಾದದ ಮೂಲಕ ಕನ್ನಡದಲ್ಲಿ ಹೀಗೆ ಕಾಣಿಸಿಕೊಂಡಿದ್ದಾರೆ.

# ಕಾದಂಬರಿ

*ಎಚ್. ಎಸ್. ರಾಘವೇಂದ್ರರಾವ್*

ಎಂದಿನಂತೆ ಕನ್ನಡ ಕಾದಂಬರಿಗಳ ಸಂಖ್ಯಾಬಾಹುಳ್ಯಕ್ಕೂ, ಗುಣಮಟ್ಟಕ್ಕೂ ತಾಳಮೇಳವಿಲ್ಲ. ಕುತೂಹಲದ ಸಂಗತಿಯೆಂದರೆ, ಪತ್ತೇದಾರೀ ಕಾದಂಬರಿಗಳೂ ಸೇರಿದಂತೆ ಜನಪ್ರಿಯ ಕಾದಂಬರಿಗಳು ದೃಶ್ಯಮಾಧ್ಯಮದ ಸವಾಲನ್ನು ಹೇಗೆ ಎದುರಿಸುತ್ತವೆ ಎನ್ನುವುದು. ದೂರದರ್ಶನದಲ್ಲಿ ದೊರೆಯುವ ಭೂರಿಭೋಜನಕ್ಕೆ ಹೋಲಿಸಿದಾಗ, ಕನ್ನಡವೇ ಇರಲಿ, ಇಂಗ್ಲೀಶೇ ಇರಲಿ ಇಂಥ ಕಾದಂಬರಿಗಳು ಹಿನ್ನೆಲೆಗೆ ಸರಿಯುವುದು ಕ್ರಮೇಣ ಅನಿವಾರ್ಯವೆಂದು ತೋರುತ್ತದೆ. ಯಥಾಪ್ರಕಾರ ಅಲ್ಪಸಂಖ್ಯಾತರ ಅಧ್ಯಯನಕ್ಕೆ ಮಾತ್ರ ವಸ್ತುವಾಗಿರುವ ಸಾಹಿತ್ಯದ ಸ್ವರೂಪದ ಮೇಲೆ ಇದರಿಂದ ಏನು ಪರಿಣಾಮವಾಗುತ್ತದೆಯೋ ನೋಡಬೇಕು. ನಿಯತಕಾಲಿಕೆಗಳಲ್ಲಿ ಬರುತ್ತಿರುವ ಧಾರಾವಾಹಿಗಳನ್ನು ಗಮನಿಸಿದಾಗ ಅನುವಾದಗಳ ಕಡೆಗೋ ಅಥವಾ ಹಿಂದೆಂದೋ ಜನಪ್ರಿಯವಾಗಿದ್ದ ಕೃತಿಗಳ ('ದೌಲತ್', 'ಮುಯ್ಯಿಗೆ ಮುಯ್ಯಿ') ರಿಪೀಟ್ ಪರ್‌ಫಾರ್ಮನ್ಸ್ ಕಡೆಗೋ ಒಲವು ಇದೆಯೆಂದು ತೋರುತ್ತದೆ.

ಹಾಗೆಯೇ ಕಾದಂಬರಿಗಳ ಸ್ವರೂಪವನ್ನು ಗಮನಿಸಿದಾಗ, ಬೃಹತ್‌ಗಾತ್ರದ ವಾಸ್ತವವಾದೀ ಕಾದಂಬರಿಗಳ ರಚನೆ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಾಗಿರುವುದು ಸ್ಪಷ್ಟವಾಗುತ್ತದೆ. ತೇಜಸ್ವಿ, ಅನಂತಮೂರ್ತಿಯವರಂಥ ಹಿರಿಯರಿಂದ ಹಿಡಿದು ಹೊಸಬರವರೆಗೆ ಕಾದಂಬರಿಯ ಗಾತ್ರ ಸಂಕೋಚವು ಎದ್ದು ಕಾಣುತ್ತದೆ. ಕಿರಿಗಾತ್ರದವಾದರೂ ದಟ್ಟವಾದ ಸಾಂಕೇತಿಕತೆಯನ್ನೋ ಕಾವ್ಯಮಯವಾದ ಶೈಲಿಯನ್ನೋ ರೂಢಿಸಿಕೊಂಡಿದ್ದ ನವ್ಯ ಕಾದಂಬರಿಗಳ ಪುನರಾಗಮನವೂ ನಡೆದಿಲ್ಲ. 'ಸಾಕ್ಷಿ,' 'ಅಂಚು', 'ತಂತು', 'ಪುರುಷೋತ್ತಮ'ದಂತಹ ಕೃತಿಗಳು ಪಡೆದ ಉಗುರುಬೆಚ್ಚಗಿನ ಸ್ವಾಗತವು ಆಯಾ ಕೃತಿಗಳ ಮೌಲಿಕತೆಗೆ ಸಂಬಂಧಿಸಿದ್ದೋ ಅಥವಾ ದೊಡ್ಡ ಪುಸ್ತಕಗಳನ್ನು ಓದಲು ವ್ಯವಧಾನವಿಲ್ಲದ 'ರಭಸಮತಿಯ' ಪರಿಣಾಮವೋ ಹೇಳುವುದು ಕಷ್ಟ.. ೧೯೯ಳರಲ್ಲಂತೂ ಸುನಂದಾ ಬೆಳಗಾಂವಕರ್ ಅವರ 'ಝುವಾದಿ'ಯನ್ನು ಹೊರತುಪಡಿಸಿದರೆ, ಇನ್ನೂರು ಪುಟಗಳ ಮಿತಿ ಲಕ್ಷ್ಮಣರೇಖೆಯಾಗಿದೆ. ಈ ಪುಟಮಿತಿಯಲ್ಲಿಯೇ ಇಪ್ಪತ್ನಾಲ್ಕು ಘಂಟೆಗಳಿಂದ ಹಿಡಿದು ಇಪ್ಪತ್ನಾಲ್ಕು ವರ್ಷಗಳವರೆಗಿನ ಜೀವನವಿವರಗಳನ್ನು ಹಿಡಿದಿಡಲು ಸಾಧ್ಯವಾಗಿದೆ. ಈ ಬೆಳವಣಿಗೆಯನ್ನು ನಾನು ವರ್ಣನಾತ್ಮಕವಾಗಿ ಗುರುತಿಸುತ್ತಿರುವೆನೇ ವಿನಾ

ಮೌಲ್ಯಮಾಪನ ಮಾಡುತ್ತಿಲ್ಲ. ಏನೇ ಇರಲಿ ಇದು ಹಿಗ್ಗಿದ ಕಥೆಗಳ ಇಲ್ಲವೇ ಕುಗ್ಗಿದ ಕಾದಂಬರಿಗಳ ಕಾಲ.

ಮತ್ತೊಂದು ಗಮನೀಯ ಅಂಶವೆಂದರೆ, ವಾಸ್ತವದ ಘಟನೆಗಳನ್ನು ಯಾವುದೇ ಮಾರುವೇಷವಿಲ್ಲದೆ ಕಾದಂಬರಿಯ ಮೈಯೊಳಗೆ ಅಳವಡಿಸಿಕೊಳ್ಳುವ ಪ್ರಯತ್ನ. ಇಲ್ಲಿ ಇತಿಹಾಸ ಅಥವಾ ವರ್ತಮಾನಗಳು ನೇರವಾಗಿಯೇ ವ್ಯಾಖ್ಯಾನ ಹಾಗೂ ಮೌಲ್ಯಮಾಪನಗಳಿಗೆ ಒಳಪಡುತ್ತವೆ. ಕುಂದರನಾಡು ಪಾಟೀಲ ಅವರ `ಉಲ್ಲಂಘನೆ' ಹಾಗೂ ಶಿವರುದ್ರ ಕಲ್ಲೋಳಿಕರ ಅವರ `ಹೊಲಗೇರಿಯ ರಾಜಕುಮಾರ' ಈ ಮಾತಿಗೆ ಒಳ್ಳೆಯ ನಿದರ್ಶನಗಳು. ಇಂಥ ಪ್ರಯತ್ನಗಳನ್ನು 'ಜುಗಾರಿಕ್ರಾಸ್'ನಂತಹ ಕಾದಂಬರಿಗಳಿಗೆ ಹೋಲಿಸಿದಾಗ ಕಾಲ್ಪನಿಕತೆಯನ್ನು ತಿಧರಿಸಿದ ವಾಸ್ತವದ ಪ್ರತಿನಿಧೀಕರಣಕ್ಕೂ ವಾಸ್ತವವನ್ನು ನಿರೂಪಿಸುವುದಕ್ಕೂ ಇರುವ ಅಂತರ ಸ್ಪಷ್ಟವಾಗುತ್ತದೆ. ಪಾಶ್ಚಾತ್ಯ ಸಂದರ್ಭದಲ್ಲಿ ಕಾಸಿಗೆ ಪಂಚೇರಿನಂತೆ ದೊರೆಯುವ 'ಕನ್ನಡಿವಾಸ್ತವ'ದ ಇಂಥ ಪ್ರಯತ್ನಗಳು ಕ್ರಮೇಣ ಸೃಜನಶೀಲ ಸಾಧ್ಯತೆಗಳನ್ನು ಕಂಡುಕೊಳ್ಳಬಹುದು.

ಈ ಹಿನ್ನೆಲೆಯಲ್ಲಿ ೧೯೯೪ರ ಪ್ರಮುಖ ಕಾದಂಬರಿಗಳ ಸ್ಥೂಲಪರಿಚಯವನ್ನು ಇನ್ನು ಮುಂದೆ ನೀಡಲಾಗಿದೆ.

'ಜುಗಾರಿಕ್ರಾಸ್' ತೇಜಸ್ವಿಯವರ ಸೃಜನಶೀಲತೆಯ ಮಹಾಪೂರದಲ್ಲಿ ಮತ್ತೊಂದು ಅಲೆ. ಕಾದಂಬರಿಗೆ ಬೇಕಾದ ಮೂಲದ್ರವ್ಯ ಹಾಗೂ ವೈಚಾರಿಕತೆಗಳಿಗಾಗಿ ಕನ್ನಡದ ಸಂದರ್ಭದಲ್ಲಂತೂ ಅನನ್ಯವಾದ ಆಕರಗಳನ್ನು ಬಳಸಿಕೊಂಡಿರುವ ತೇಜಸ್ವಿಯವರು ಆಧುನಿಕತೆಯ ವ್ಯಾಪ್ತಿ ಮತ್ತು ತಲ್ಲಣಗಳನ್ನು ,ಅವು ಗ್ರಾಮೀಣ ಸಮಾಜದಲ್ಲಿ ಪ್ರತಿಫಲಿಸಿರುವಂತೆ ಹುಡುಕುತ್ತಾರೆ. ಇದೊಂದು ಚೈನ್‌ರಿಯಾಕ್ಷನ್. ಇದರ ಒಂದು ತುದಿಯಾದ ಮಹಾನಗರಗಳನ್ನು ಯಶವಂತ ಚಿತ್ತಾಲರು ಕಂಡರಿಸಿದರೆ ಮತ್ತೊಂದು ತುದಿಯಾದ ಊರು ಮತ್ತು ಹಳ್ಳಿಗಳು ತೇಜಸ್ವಿಯವರ ಹತ್ತು ಹಲವು ಬರಹಗಳ ಕೇಂದ್ರವಾಗಿವೆ. ಇಲ್ಲಿ ನಗರಗಳು ಕಾರಣ, ಹಳ್ಳಿಯ ದುರಂತಗಳು ಪರಿಣಾಮ ಎಂಬ ಸರಳೀಕರಣ ಮೂಡಿಬರುವುದಿಲ್ಲ. ಏಕೆಂದರೆ ಹಳ್ಳಿಯ ಜನರೂ ಮನುಷ್ಯರೇ ಆಗಿರುವುದರಿಂದ ಮನುಷ್ಯ ಸ್ವಭಾವದ ಎಲ್ಲ ಓರೆಕೋರೆಗಳಿಗೂ ಉತ್ತರಾಧಿಕಾರಿಗಳೇ ಆಗಿರುತ್ತಾರೆ.

`ಜುಗಾರಿಕ್ರಾಸ್', 'ಚಿದಂಬರ ರಹಸ್ಯ'ಕ್ಕಿಂತ ಹೇಗೆ ಭಿನ್ನವಾಗುತ್ತದೆ ಎನ್ನುವುದು ಮಹತ್ವದ ಪ್ರಶ್ನೆ. ಸುರೇಶ, ಗೌರಿಯರೂ ಸೇರಿದಂತೆ `ಜುಗಾರಿಕ್ರಾಸ್'ನ ಎಲ್ಲ ಪಾತ್ರಗಳು ಸನ್ನಿವೇಶದ ಸೆರೆಯಾಳುಗಳು. ಅವರಿಗಿರುವ ಕ್ರಿಯಾಸ್ವಾತಂತ್ರ್ಯವು ಅತ್ಯಂತ ಸೀಮಿತ. ಗುರುತಿಸಲೂ ಸಾಧ್ಯವಿಲ್ಲದ ಶಕ್ತಿಗಳು ಅವರ ಬದುಕನ್ನು ನಿಯಂತ್ರಿಸುತ್ತವೆ. ಅಷ್ಟೇಕೆ, ಕಾದಂಬರಿಯ ಕೊನೆಯಲ್ಲಿ ಸುರೇಶ, ಗೌರಿ ಮತ್ತು ರಾಜಪ್ಪ ತೆಗೆದುಕೊಳ್ಳುವ ನಿರ್ಧಾರ ಕೂಡ ಒಂದು ಬಗೆಯ ಟೋಕನ್ ಪ್ರೊಟೆಸ್ಟ್

ಮಾತ್ರ. ಅವರು ನಿಧಿಯನ್ನೋ ಕಾವ್ಯದ ಹಸ್ತಪ್ರತಿಯನ್ನೋ ಹುಡುಕತೊಡಗಿದ ಕೂಡಲೇ ಮತ್ತೆ ಕಾಣದಕೈಗಳ ಹತೋಟಿಗೆ ಒಳಪಡುತ್ತಾರೆ. 'ಚಿದಂಬರ ರಹಸ್ಯ'ದ ಸರೋಜ ಮತ್ತು ರಫಿಯರ ಪ್ರೇಮ ವಿವಾಹ ಕೆಸರೂರಿನ ಎಲ್ಲ ಸಮಸ್ಯೆಗಳ ಪರಿಹಾರವಲ್ಲ. ಹಾಗೆಯೇ ಸುರೇಶ್-ಗೌರಿಯರೂ ಕೂಡ ಮನುಷ್ಯನ ಸಾಹಸ ಪ್ರವೃತ್ತಿ ಹಾಗೂ ಇಚ್ಛಾಶಕ್ತಿಗಳು ಬಂಡೆಯೊಡನೆ ಬಡಿದಾಡಬೇಕಾಗಿರುವುದಕ್ಕೆ ಸಂಕೇತಗಳಾಗಿದ್ದಾರೆ. ವೈಯಕ್ತಿಕ ನೆಲೆಯಲ್ಲಿ ಕಂಡುಕೊಳ್ಳುವ ಯಾವುದೇ ಪರಿಹಾರ ಕೇವಲ ಅಷ್ಟು ಮಾತ್ರವೇ ಆಗಿರುತ್ತದೆ.

ಆದರೆ 'ಜುಗಾರಿಕ್ರಾಸ್' ಅಗುಳಿನಿಂದ ಅನ್ನ ಪರೀಕ್ಷೆ ಮಾಡುವ ಕೆಲಸದಲ್ಲಿ ಯಶಸ್ವಿಯಾಗುತ್ತದೆ. ರಾಜಕೀಯ, ವ್ಯಾಪಾರ ಮತ್ತು ಮನುಷ್ಯ ಸ್ವಭಾವಗಳ ವ್ಯಾಪ್ತಿಯ ಫಲವಾಗಿಯೇ ನಾಡಿನ ಯಾವುದೊಂದು ಭಾಗವೂ ತನ್ನ ಸ್ವಯಮಧಿಕಾರವನ್ನು ಉಳಿಸಿಕೊಳ್ಳಲಾಗದ, ಅಷ್ಟೇಕೆ, ತನ್ನ ನಾಶಕ್ಕೆ ತಾನೇ ಪರವಾನಿಗೆ ಕೊಡಬೇಕಾಗಿರುವ ಸ್ಥಿತಿಯನ್ನು ಕಾದಂಬರಿ ಹಿಡಿದಿಡುತ್ತದೆ. ಮೇದರಹಳ್ಳಿಯು ಪ್ಲಾಸ್ಟಿಕ್ಕಿನ ಪ್ರಾಬಲ್ಯದಿಂದ ಅವಸಾನಗೊಳ್ಳುವ ದುರಂತವನ್ನು ತಂತ್ರಜ್ಞಾನದ ಬೆಳವಣಿಗೆಯ ಹಿನ್ನೆಲೆಯಲ್ಲಿ ನೋಡಿದಾಗ ತಕರಾರಿಲ್ಲದೆ ಸ್ವೀಕರಿಸುವುದು ಅನಿವಾರ್ಯವಾಗುತ್ತದೆ.

ವಿವರಗಳ ಬಾಹುಳ್ಯವನ್ನು ತೇಜಸ್ವಿಯವರು ಬಳಸಿಕೊಳ್ಳುವ ರೀತಿ ಕುತೂಹಲಕಾರಿಯಾದುದು. ಅವರು ರೋಚಕವಾದ ಪತ್ತೇದಾರಿಯನ್ನಾಗಲೀ, ಕಾಮಿಕ್ ಧಾಟಿಯನ್ನೇ ಪ್ರಧಾನವಾಗಿ ಹೊಂದಿರುವ ಬರಹವನ್ನಾಗಲೀ ರಚಿಸುತ್ತಿಲ್ಲ. ಅವರ ಕಾಳಜಿಗಳು ಹಾಗೂ ಆಶಯಗಳು ಅಷ್ಟೊಂದು ಗಂಭೀರವಾದವು. ಆದರೆ ಬದುಕನ್ನು ನೋಡುವ ಸ್ಲಾಂಟೆಡ್ ಆದ ದೃಷ್ಟಿಕೋನ ಅವರ ಬರವಣಿಗೆಯ ವಿವರಗಳ ಮೇಲಿನ ಕಡಿವಾಣವನ್ನು ಅಲ್ಲಲ್ಲಿ ಸಡಿಲಗೊಳಿಸುತ್ತದೆ. ಆದ್ದರಿಂದ ಕಾದಂಬರಿಕಾರರು ಉದ್ದೇಶಿಸಿರುವ ಪರಿಣಾಮಕ್ಕೂ, ವಾಸ್ತವವಾಗಿ ಉಂಟಾಗುವ ಪರಿಣಾಮಕ್ಕೂ ಅಂತರ ಉಂಟಾಗುವುದೇನೋ ಎಂಬ ಗುಮಾನಿ ಸ್ವತಃ ಲೇಖಕರಿಗೆ ಇದೆ. ಇಲ್ಲವಾದರೆ ಮುನ್ನುಡಿಯೊಳಗಿನ ವಿವರಣೆ ಅನಗತ್ಯವಾಗುತ್ತಿತ್ತು. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಬರವಣಿಗೆ ಇಷ್ಟೊಂದು ಮುಖ್ಯವಲ್ಲದಿದ್ದರೂ ಅವರೂ ಇದೇ ರೀತಿಯ ಸಮಸ್ಯೆಯನ್ನು ಹೊಂದಿದ್ದರು. ಉದಾಹರಣೆಗೆ ರಾಜಪ್ಪನು ಸಂಪಾದನೆ ಮಾಡಹೊರಟ ಕಾವ್ಯಕ್ಕೆ ಕಾದಂಬರಿಯಲ್ಲಿ ಸಿಂಹಪಾಲು ಸಿಗುವುದು ಅನಿವಾರ್ಯವಾಗಿರಲಿಲ್ಲ. ಹಾಗೆಯೇ ಖುದ್ದೂಸ್ ಎಕ್ಸ್‌ಪ್ರೆಸ್‌ನಲ್ಲಿ ನಡೆದ ಜಗಳ ಕೂಡ. ಇವೆಲ್ಲವೂ ತಮ್ಮಷ್ಟಕ್ಕೆ ತಾವು ಚೆನ್ನಾಗಿದ್ದರೂ ಕಾದಂಬರಿಯ ಕೇಂದ್ರದೊಡನೆ ಅರ್ಥಪೂರ್ಣ ಸಂಬಂಧವನ್ನು ಪಡೆದುಕೊಳ್ಳುವುದಿಲ್ಲ.

'ಜುಗಾರಿ' ಎನ್ನುವ ಮಾತಿಗಿರುವ ಜೂಜು ಎಂಬ ಅರ್ಥವೂ ಒಟ್ಟು ಬದುಕಿನ ಅನೂಹ್ಯತೆಯನ್ನು ಹೇಳುತ್ತಲೇ, ಅದರಲ್ಲಿ ಗೆಲ್ಲುವ ಎಲ್ಲ ಪ್ರಯತ್ನಗಳ ಅಸಂಭಾವ್ಯತೆಯನ್ನು ಹೇಳುತ್ತದೆ.

ಅಂತಮೂರ್ತಿಯವರ 'ಭವ' ಈ ವರ್ಷ ಮುನ್ನೆಲೆಯಲ್ಲಿದ್ದ ಮತ್ತೊಂದು ಕಾದಂಬರಿ. ಲೇಖಕನ ವೈಯಕ್ತಿಕವಾದ ಹುಡುಕಾಟ ಹಾಗೂ ಸಮುದಾಯವು ಒಟ್ಟಂದದಲ್ಲಿ ತೊಡಗಿಕೊಂಡಿರುವ ಶೋಧನೆಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಹೊರಟಾಗ ಕೃತಿಯ ಕಲಾತ್ಮಕ ನೆಲೆಗಳು ಏನೇ ಇರಲಿ - ಅದರ ಒಟ್ಟು ಮಹತ್ವ ಗೌಣವಾಗುತ್ತದೆ. 'ಭವ'ದ ಸಮಸ್ಯೆ ಈ ಬಗೆಯದು. ಅನಂತಮೂರ್ತಿಯವರ ಕಾದಂಬರಿಗಳ ಒಂದು ತುದಿಯಲ್ಲಿ ಜೀವನಮುಖಿಯಾದ ಹೆಜ್ಜೆಗಳನ್ನಿಡತೊಡಗುವ ಪ್ರಾಣೇಶಾಚಾರ್ಯ ಇದ್ದರೆ ಮತ್ತೊಂದು ತುದಿಯಲ್ಲಿ ಸನ್ಯಾಸದ ಮೂಲಕ, ಕೊನೆಗೆ ಅದರ ಹಂಗನ್ನೂ ತೊರೆದು ನಿರ್ಲಿಪ್ತನಾಗುವ ಮೂಲಕ, ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರನಾಗುವ ಪ್ರಸಾದ ಇರುವುದು ಆಕಸ್ಮಿಕವಲ್ಲ. 'ವಂಶವೃಕ್ಷ', 'ಪುರುಷೋತ್ತಮ'ದಂತಹ ಕಾದಂಬರಿಗಳು ಜನ್ಮರಹಸ್ಯವನ್ನು ಅರಸಿಕೊಂಡು ಹೋದಾಗ ಅನುಭವಿಸಿದ ಸ್ಫೋಟ -ವಿಕಾಸಗಳು ನಮಗೆ ಸುಪರಿಚಿತ. 'ಭವ' ದ ಶಾಸ್ತ್ರಿ, ದಿನಕರ ಮುಂತಾದ ಪಾತ್ರಗಳ ತಹತಹಗಳು ಸಿಂಬಳದಲ್ಲಿ ಬಿದ್ದ ನೊಣಗಳ ತಡಕಾಟದಂತೆ ಅಮುಖ್ಯವಾಗಿ ಕಾಣುವುದು ಏಕೆಂದರೆ ಅವರಿಗೆ ಒದಗಬಹುದಾದ ಯಾವುದೇ ದಿವ್ಯಜ್ಞಾನ, ಸಾಕ್ಷಾತ್ಕಾರಗಳು ಅವರ ಜೀವನಕ್ರಮದಲ್ಲಿ ಮಹತ್ವದ ಪರಿವರ್ತನೆಯನ್ನು ತರಬಲ್ಲವೆಂದು ನಮಗೆ ತೋರದಿರುವುದರಿಂದ. ತನ್ನ ಮಾಜೀ ಪ್ರೇಯಸಿಯರಿಗೆ, ಮಹಾಮಾತೆಗೆ ಪೇಟ್ರನೈಸಿಂಗ್ ಆಗಿ ಕಾಗದ ಬರೆಯುವ ದಿನಕರ, ಪ್ರಾಣೇಶಾಚಾರ್ಯ, ಕೃಷ್ಣಪ್ಪರ ಹಾಗೆ ಅಗ್ನಿದಿವ್ಯಗಳನ್ನು ದಾಟಿ ಬಂದು ಗೌರವಪಾತ್ರನಾಗುವುದಿಲ್ಲ. ಲೈಂಗಿಕ ಆಕರ್ಷಣೆ ಮತ್ತು ಲೈಂಗಿಕ ಈರ್ಷೆಗಳ ನೆಟ್‌ವರ್ಕ್ ಕಾದಂಬರಿಯಲ್ಲಿ ಹರಡಿಕೊಂಡಿದೆ. ಆದರೆ ಕಾದಂಬರಿಯ ಕೊನೆಯಲ್ಲಿ ಬರುವ ಅಧ್ಯಾತ್ಮಿಕ ವಿಕಸನದ ಸಾಧ್ಯತೆಗಳಿಗೂ ಈ ನೆಟ್‌ವರ್ಕನಿಂದ ಮೂಡಬಹುದಾದ ತಿಳಿವಳಿಕೆಗೂ ನೇರ ಸಂಬಂಧ ಏರ್ಪಡುವುದಿಲ್ಲ. ಗಂಗಮ್ಮ, ರಾಧೆ, ಸೀತಮ್ಮ ಮುಂತಾದವರಲ್ಲಿ ಕಂಡು ಬರುವ ಪ್ರೀತಿಯ ಸೆಲೆಯನ್ನು ಕಿಂಚಿತ್ತಾದರೂ ಹೊಂದಿರದಂತೆ ತೋರುವ ದಿನಕರ ಹಾಗೂ ಅವನದೇ ವ್ಯಾವಹಾರಿಕ ಕ್ಲೋನ್ ಆದ ನಾರಾಯಣ ನಿರ್ಲಿಪ್ತತೆಯನ್ನೇ ಮೂಲ ನೆಲೆಯಾಗಿ ಹೊಂದಿದ್ದಾರೆ. ಅವರ 'ನಾನೆಸರಿತನ' ಸಮರ್ಥನೀಯವೆನಿಸುವುದಿಲ್ಲ. ತಮ್ಮ ತಮ್ಮ ಮಕ್ಕಳಾದ (?) ದಿನಕರ ಮತ್ತು ಪ್ರಸಾದನ ಎದುರಿಗೆ ಶಾಸ್ತ್ರಿಗಳು ಹಾಗೂ ದಿನಕರ ಅನುಭವಿಸುವ ನೈಚ್ಯಾನುಸಂಧಾನಕ್ಕೆ ಕೂಡ ತಾಳಿಕೆಯ ಗುಣವಿಲ್ಲ.

ಈಗಾಗಲೇ ಹೇಳಿದಂತೆ ಕಾದಂಬರಿಯೆನ್ನುವ ಪ್ರಕಾರವು ಕಿರುಗಾತ್ರದಲ್ಲಿ ಮೈದಳೆಯಬೇಕಾಗಿ ಬಂದರ 'Father Sergius' ಅಥವಾ 'Death of Ivan Illych'ಗಳಂತಹ ತೀವ್ರತೆಯನ್ನು ಬಯಸುತ್ತದೆ ಅಥವಾ ಸ್ವತಃ 'ಸಂಸ್ಕಾರ'ದಲ್ಲಿ ಆದ ಹಾಗೆ ಒಂದೆರಡು ದಿನಗಳ ಕನ್ನಡಿಚೂರಿನಲ್ಲಿ ಬದುಕಿನ ಕ್ರೈಸಿಸ್ ಒಂದನ್ನು ಹಿಡಿದಿಡಬೇಕಾಗುತ್ತದೆ. ಸುಮಾರು ಮೂರು ಪೀಳಿಗೆಗಳಲ್ಲಿ ಹರಡಿಕೊಂಡಿರುವ ಈ ಕಥೆ ಜೀವನವಿವರಗಳಿಂದ ತನಗೆ ಬೇಕಾದುದನ್ನು ಆಯ್ದುಕೊಳ್ಳುವುದರಿಂದ ಸಂಗ್ರಾಹ್ಯತೆಯನ್ನು ಪಡೆದುಕೊಳ್ಳುತ್ತದೆ. ಸಂಗಡವೇ ದೈನಿಕದ ವಿವರಗಳನ್ನು ಹಿಗ್ಗಿಸಿ ಕೊಡುವುದರಿಂದ ವೇಗಪಿರದ ಕ್ಯಾಷುಯಲ್ ಆದ ಧಾಟಿಯನ್ನು ರೂಢಿಸಿಕೊಂಡಿದೆ.

ಅನಂತಮೂರ್ತಿಯವರಂಥ ಪ್ರತಿಭಾವಂತರಿಗೆ ಸಹಜವಾದ ಕಾವ್ಯಾತ್ಮಕವಾದ ಭಾಗಗಳು, ವೈಚಾರಿಕವಾಗಿ ಪ್ರಚೋದಿಸುವ ಅಂಶಗಳು ಕಾದಂಬರಿಯಲ್ಲಿ ಇಡಿಕಿರಿದಿವೆ. ಅದರ ಆಶಯ ಮತ್ತು ಮಹತ್ವಾಕಾಂಕ್ಷೆಗಳ ಹೊಳಹನ್ನು ನೀಡುವುದರಲ್ಲಿ ಕೃತಿಯು ಯಶಸ್ವಿಯಾಗುತ್ತದೆ. ಕಾದಂಬರಿಯ ಹಿನ್ನುಡಿಯಲ್ಲಿ ಡಿ. ಆರ್. ನಾಗರಾಜ್ ಅವರು ಹೇಳಿರುವ ಕೆಲವು ಮಾತುಗಳೊಂದಿಗೆ ಈ ಪರಿಶೀಲನೆಯನ್ನು ಮುಗಿಸಬಹುದು.

''ಇಲ್ಲಿಯ ನಾಯಕರೆಲ್ಲರೂ ಸಂಸಾರದ ಒಡಲೊಳಗೆ ತೀವ್ರವಾಗಿ ಮುಳುಗಿದ್ದೂ ನಿರ್ವಾಣಕ್ಕೆ ಹಂಬಲಿಸುವವರು. ಆದರೆ ಸರಿಯಾದ ದಾರಿ ಸಿಗದೆ ಕಂಗಾಲಾದವರು. ವಿಶ್ವನಾಥ ಶಾಸ್ತ್ರಿಗಳಲ್ಲಿ ಪ್ರಾರಂಭವಾದ ಪ್ರಯಾಣ ಪ್ರಸಾದನಲ್ಲಿ ಸಾರ್ಥಕತೆ ಕಾಣುತ್ತದೆ.

ಸಂಸಾರ ನಿರ್ವಾಣಗಳ ನಡುವೆ ವ್ಯತ್ಯಾಸವೇ ಇಲ್ಲ ಎಂಬ ಘನವಾದ ಬೌದ್ಧ ದಾರ್ಶನಿಕ ಸತ್ಯವನ್ನು ತೀರ ಆಕರ್ಷಕವಾದ ಲೌಕಿಕ ರೀತಿಯಲ್ಲೇ ಕಾದಂಬರಿ ಮಂಡಿಸುತ್ತದೆ. ಉಪನಿಷತ್ ಇದೇ ಇದ್ದೀತು.

ಬಹುಮುಖ ಕಥನದ ದನಿಗಳಲ್ಲಿ ಈ ಕಾದಂಬರಿಯನ್ನು ಬರೆಯಲಾಗಿದೆ. ಒಮ್ಮೆ ಉತ್ಕಟ ಕೌತುಕದ ಕಥೆಯಾಗಿ, ಒಮ್ಮೆ ಅಂತರಂಗ ವಿಶ್ಲೇಷಣೆಯ ಪ್ರಜ್ಞಾವಾಹಿನಿಯಾಗಿ, ಒಮ್ಮೆ ನಿರ್ಲಿಪ್ತ ಸಾಕ್ಷೀಪ್ರಜ್ಞೆಯ ನಿರೂಪಣೆಯಾಗಿ.

ಹೀಗೆ ಈ ಪುಟ್ಟ ಕೃತಿಯಲ್ಲಿ ಒಂದು ಎಪಿಕ್ ಕಾದಂಬರಿಯ ತಂತ್ರ ತುಂಬಿದೆ. ಎಲ್ಲಕ್ಕಿಂತ ಹೆಚ್ಚಾಗಿ ಜೀವನವನ್ನು ಪೊಳ್ಳು ನೈತಿಕಮೌಲ್ಯಗಳ ತೀರ್ಮಾನವೆನ್ನದೆ, ಪ್ರೀತಿ ತುಂಬಿದ ವಿನಯವಾಗಿ ಇಲ್ಲಿ ಕಾಣಲಾಗಿದೆ.''

ಕರ್ನಾಟಕದ ವಿವಿಧ ಪ್ರದೇಶಗಳ ದಲಿತ ಜೀವನ ಕ್ರಮದ ಕೇಂದ್ರವನ್ನು ಹೊಂದಿರುವ ಮೂರು ಕಾದಂಬರಿಗಳನ್ನು ಇನ್ನು ಮುಂದೆ ಪರಿಶೀಲಿಸಲಾಗಿದೆ. ಬೆಂಗಳೂರು ಗ್ರಾಮಾಂತರ ಪ್ರದೇಶದ ಮಾದಿಗ ಸಮುದಾಯ, ರಾಯಚೂರು ಪಟ್ಟಣದ ಆಸುಪಾಸಿನಲ್ಲಿ ಬದುಕುವ ಕೊರಮರ ಸಮುದಾಯ ಹಾಗೂ ಮಹಾರಾಷ್ಟ್ರ ಮತ್ತು ಕರ್ನಾಟಕಗಳ ನಡುವೆ ಚಲಿಸುವ ಒಂದು ದಲಿತ ಕುಟುಂಬದ ಸುತ್ತ 'ಬದುಕು' 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಹಾಗೂ 'ಹೊಲಗೇರಿಯ ರಾಜಕುಮಾರ' ಕಾದಂಬರಿಗಳು ರಚಿತವಾಗಿದೆ. ಬಂಡಾಯ - ದಲಿತ ಕಾವ್ಯದಲ್ಲಿ ನೆನ್ನೆ -ಮೊನ್ನೆಯವರೆಗೆ ಸಹಜವೆನ್ನಿಸಿದ್ದ ಏಕತಾನತೆ ಈ ಕಾದಂಬರಿಗಳಲ್ಲಿ ಕಾಣಿಸುವುದಿಲ್ಲ. ಹೀಗಾಗಲು ಜೀವನ ವಿವರಗಳ ವೈವಿಧ್ಯ ಹಾಗೂ ಪ್ರಾದೇಶಿಕ ನುಡಿಗಟ್ಟುಗಳ ಅನನ್ಯತೆ ಮಾತ್ರ ಕಾರಣವಲ್ಲ. ಪ್ರಮುಖ ಲೇಖಕರು ದಲಿತ ಜೀವನ ಸಂಕೀರ್ಣ ವರ್ತಮಾನವನ್ನು ಗ್ರಹಿಸಿ ತಮ್ಮ ತಮ್ಮ ವ್ಯಕ್ತಿತ್ವಕ್ಕೆ ಮತ್ತು ಸೃಜನಶೀಲ ವೈವಿಧ್ಯಕ್ಕೆ ತಕ್ಕಂತಹ ಪ್ರತಿಕ್ರಿಯೆಯನ್ನು ತೋರಿಸುತ್ತಾ ಹೋದಹಾಗೆಲ್ಲ ಈ ವೈವಿಧ್ಯವು ಬೆರಗು ಮೂಡಿಸುವಷ್ಟು ವಿಶಾಲವಾಗುವುದರಲ್ಲಿ ಸಂಶಯವಿಲ್ಲ. ಕಳೆದ ವರ್ಷದ ಕಾವ್ಯವನ್ನು ಪರಿಶೀಲಿಸುವಾಗ ಈ ವಿಮರ್ಶಕನು ಹೇಳಿದಂತೆ ಹೊಸೂರು ಮುನಿಶ್ಯಾಮಪ್ಪ. ಬಿ. ಚೆನ್ನಸ್ವಾಮಿ, ಸರಜೂ ಕಾಟ್ಕರ್. ಜಂಬಣ್ಣ ಅಮರಚಿಂತ ಮುಂತಾದವರ ಕವಿತೆಯು ಅಭಿವ್ಯಕ್ತಿಯ ವಿಶಿಷ್ಟ

ಬಗೆಗಳನ್ನು ರೂಪಿಸಿಕೊಂಡ ಹಾಗೆ ಈ ದಲಿತ ಕಾದಂಬರಿಗಳೂ ಲೇಖಕ ವಿಶಿಷ್ಟ ನೆಲೆಗಳನ್ನು ಪಡೆದುಕೊಂಡಿವೆ.

ಇಂಥ ಕಾದಂಬರಿಗಳು ಸಮುದಾಯಗಳ ಆತ್ಮಕಥೆಗಳಂತೆ ನಿರೂಪಿತವಾಗುವುದು ಅನಿವಾರ್ಯ. ಶಿಕ್ಷಣ, ಉದ್ಯೋಗ ಮುಂತಾದ ಅಂಶಗಳಿಂದ ಸಮುದಾಯದಿಂದ ಪ್ರತ್ಯೇಕಿತನಾದಂತೆ ತೋರುವ ಲೇಖಕನೂ ಅದರೊಂದಿಗಿನ ಕರುಳು ಬಳ್ಳಿಯ ಸಂಬಂಧವನ್ನು ಇನ್ನೂ ಕಳೆದುಕೊಂಡಿರುವುದಿಲ್ಲ. ಹಾಗಾಗಿ ತನ್ನ ವೈಯಕ್ತಿಕತೆಯನ್ನು ತನ್ನವರ ಬವಣೆಗಳ ಚೌಕಟ್ಟಿನಲ್ಲಿ ನೋಡುವುದು ಅವನಿಗೆ ಕೇವಲ ಸಹಜ. ಇಂಥ ಕಡೆ ಕುವೆಂಪು, ಕಾರಂತ, ಮಹಾದೇವ, ಕುಂವೀಯವರ ಮಾದರಿಗಳು ನೆರವು ನೀಡಿರುವಂತೆ ನವ್ಯಲೇಖಕರ ಕಾದಂಬರಿಗಳು ಕೆಲಸ ಮಾಡಿರುವುದಿಲ್ಲ. ಅವೆರಡೂ ಮಾರ್ಗಗಳ ಉತ್ತಮಾಂಶಗಳ ಸಂಯೋಜನೆಯು ದಲಿತ ಕೃತಿಗಳನ್ನು ಇನ್ನಷ್ಟು ಎತ್ತರಗಳಿಗೆ ಕರೆದೊಯ್ಯಬಹುದು.

ಮರಾಠಿಯಲ್ಲಿ ಪ್ರಚಲಿತವಾಗಿರುವ ದಲಿತರ ಆತ್ಮಕಥೆಗಳು ಕನ್ನಡದ ದಲಿತ ಕಾದಂಬರಿಗಳ ಹಾಗೂ ನಡುವಿನ ತೌಲನಿಕ ಅಧ್ಯಯನ ಉಪಯುಕ್ತವಾದೀತು.

'ಬದುಕು' ಲಕ್ಷ್ಮಣ ಅವರ ಎರಡನೆಯ ಕಾದಂಬರಿ. ಮಾಳಕ್ಕಜ್ಜಿ ಎನ್ನುವ ದಲಿತ ಕೃಷಿ ಕಾರ್ಮಿಕಳ ಕುಟುಂಬದ ಕೇಂದ್ರದಿಂದ ಹೊರಟು ಇಡೀ ಹಳ್ಳಿಯ ಚಲನಶೀಲ ನೆಲೆಗಳನ್ನು ಒಳಗೊಳ್ಳುವ ಕಾದಂಬರಿಯು ಒಂದೆರಡು ಅಂಶಗಳಿಗಾಗಿ ಮುಖ್ಯವಾಗಿದೆ. 'ಒಡಲಾಳ', 'ಮಾಗಿ', 'ಕಾರ್ಯ' ಮುಂತಾದ ಕೃತಿಗಳ ಹಿನ್ನೆಲೆಯಲ್ಲಿ ನೋಡಿದಾಗ ಇಲ್ಲಿ ವಿಷಾದ -ಅಸಹಾಯಕತೆಗಳಿಗಿಂತ ಭಿನ್ನವಾದ ಸ್ಥಾಯಿಯನ್ನು ಗುರುತಿಸಬಹುದು. ತನಗಾಗುತ್ತಿರುವ ಅನ್ಯಾಯದ ಬಗೆಗಿನ ದಟ್ಟ ಅರಿವಿನ ಜೊತೆಗೆ ಕ್ರಮೇಣ ಮೂಡಿಬರುತ್ತಿರುವ ಆತ್ಮವಿಶ್ವಾಸ ಹಾಗೂ ಪ್ರತಿಭಟನೆಗಳು ಇಲ್ಲಿ ಗಮನೀಯ. ಈ ಪ್ರತಿಭಟನೆಯು ದಲಿತ ಸಂಘರ್ಷ ಸಮಿತಿಯ ಹಾಡುಗಳಿಗೆ ಸೀಮಿತವಾಗದೆ ಅವುಗಳನ್ನು ಒಳಗು ಮಾಡಿಕೊಂಡ ಜೀವಂತಪಾತ್ರಗಳ ಮಾತಿನಲ್ಲಿ, ವರ್ತನೆಯಲ್ಲಿ ಕಂಡುಬರುವುದು ಇಲ್ಲಿನ ವಿಶಿಷ್ಟತೆ. ಅಮಾಸ ಕಥೆಯ ಗ್ಯಾಂಗ್‌ಮನ್ ಸಿದ್ದಪ್ಪ ಕುಡಿದಾಗ ಹೇಳಿದಂತಹ ಮಾತುಗಳನ್ನು ಇಲ್ಲಿನ ಮಾಳಕಜ್ಜಿ, ತೋಟಿ ಮತ್ತಿತರ ಪಾತ್ರಗಳು ಶೋಷಕರ ಎದುರೆದುರಿಗೆ ಹೇಳುವುದು ದಲಿತ ಸನ್ನಿವೇಶದಲ್ಲಿ ಆಗಿರುವ ಬದಲಾವಣೆಗೆ ಸಾಕ್ಷಿಯಾಗಿದೆ. ಕಾದಂಬರಿಯ ಉದ್ದಕ್ಕೂ ವಾಸ್ತವದ ನೆಲೆಯಲ್ಲಿ ತನ್ನ ನೆಲೆಯನ್ನು ಉಳಿಸಿಕೊಂಡರೂ ಧ್ವನಿಪೂರ್ಣವೂ, ಸಾಂಕೇತಿಕವೂ ಆಗುವಂತಹ ಸನ್ನಿವೇಶಗಳಿವೆ. ವಿವರಗಳ ಬಾಹುಳ್ಯದಿಂದಲೂ ಕವಿತೆಗೆ ಪ್ರಾಪ್ತವಾಗದ ಅಧಿಕೃತತೆ ಕಾದಂಬರಿಗೆ ಬರುತ್ತದೆ. ಪ್ರಾದೇಶಿಕ ಭಾಷೆ ಮತ್ತು ಶಿಷ್ಟಭಾಷೆಗಳ ಸೂಕ್ತ ಸಂಯೋಜನೆಯಿಂದ ಸಂವಹನ ಸುಲಭ ಸಾಧ್ಯವಾಗಿದೆ. ಇಲ್ಲಿನ ಪ್ರಪಂಚ ತಮ್ಮೆಲ್ಲ ಬವಣೆಗಳ ನಡುವೆಯೂ ಆತ್ಮವಿಶ್ವಾಸವನ್ನು ಕಳೆದುಕೊಳ್ಳದ ಕುಟುಂಬಗಳ ರಥ ನಡೆಸುವ ಹೆಣ್ಣುಮಕ್ಕಳಿಂದ ತುಂಬಿರುವುದು ಆಕಸ್ಮಿಕವಲ್ಲ. ಇದೊಂದು ಓದಲೇ ಬೇಕಾದ ಕಾದಂಬರಿ.

೧೯೯೩ರಲ್ಲಿ ಜಂಬಣ್ಣ ಅಮರಚಿಂತರ ಕವಿತೆಯನ್ನು ವಿಮರ್ಶೆ ಮಾಡಬೇಕಾಗಿ ಬಂದಿತ್ತು. ಈ ವರ್ಷ ಅವರ ಮೊದಲ ಕಾದಂಬರಿಯಾದ 'ಕುರುಮಯ್ಯ ಮತ್ತು ಅಂಕುಶದೊಡ್ಡಿ'ಯನ್ನು ಪರಿಶೀಲಿಸಬೇಕಾಗಿದೆ. ಹಂದಿಗಳನ್ನು ಸಾಕುವುದು ಮತ್ತು ಬೆತ್ತದ ಸಾಮಾನುಗಳನ್ನು ತಯಾರಿಸುವುದನ್ನು ಮುಖ್ಯವೃತ್ತಿಯಾಗಿ ಹೊಂದಿರುವ ಕೊರವರ ಸಮುದಾಯವು ಆಧುನಿಕತೆ ಹಾಗೂ ಅದರ ಒಡನಾಡಿಯೆನ್ನಿಸುವ ರಾಜಕಾರಣದ ಫಲವಾಗಿ ಅನುಭವಿಸಬೇಕಾದ ತಲ್ಲಣಗಳು ಈ ಕಾದಂಬರಿಯ ಕೇಂದ್ರದಲ್ಲಿವೆ ತಾಂಡೆಯ ಮುಖಂಡನಾದ ಕುರುಮಯ್ಯ ಎದುರಿಸಬೇಕಾದ ಸವಾಲುಗಳು ಹೊರಗಿನವು ಮಾತ್ರವಲ್ಲ. ತಾಂಡೆಯ ಹೊರಗಿನ ಸನ್ನಿವೇಶವು ಬೀರಿದ ಪರಿಣಾಮಗಳಿಂದ ವಿಭಿನ್ನವಾದ ಚಿಂತನೆ-ಕ್ರಿಯೆಗಳಲ್ಲಿ ತೊಡಗುವ ತಾಂಡೆಯ ಒಡನಾಡಿಗಳು, ಕಿರಿಯರು ಅವನನ್ನು ಚಿಂತನೆಗೆ ಹಚ್ಚುತ್ತಾರೆ. ಬಹಳ ಆರೋಗ್ಯಕರ ಸಂಗತಿಯೆಂದರೆ, ಕುರುಮಯ್ಯ ಹಳೆಯದೆಲ್ಲವನ್ನು ಸಾರಾಸಗಟಾಗಿ ಒಪ್ಪಿಕೊಂಡು ಅಧಿಕಾರ ನಡೆಸುವ ಜಡನಾಗಿಲ್ಲ. ತನ್ನ ಸಮುದಾಯದಲ್ಲಿಯೇ ಇರುವ ಹೆಂಗಸರ ಮಾರಾಟ, ವಿಷಮ ವಿವಾಹ ಮುಂತಾದವುಗಳನ್ನು ವಿಮರ್ಶಾತ್ಮಕವಾಗಿ ನೋಡಬಲ್ಲ, ಬದಲಾವಣೆಗಾಗಿ ತಹತಹ ಪಡಬಲ್ಲ ಗುಣಗಳಿಂದ ಅವನು ಮುದುಕನಾದರೂ ಆಧುನಿಕ ನಾಯಕನಾಗುತ್ತಾನೆ. ಬುಡಕಟ್ಟು ಜನಾಂಗದ ಎಲ್ಲ ನೆಲೆಗಳನ್ನು ರೊಮಾಂಟಿಸೈಸ್ ಮಾಡದ, ಅದರ ತನ್ನತನವನ್ನು ಕಾಪಾಡಿಕೊಳ್ಳಬಯಸುವ ಈ ಧೋರಣೆ ಆರೋಗ್ಯಕರವಾದುದು. ಆಧುನಿಕ ರಾಜಕಾರಣಗಳ ಸ್ವಾರ್ಥಪೂರಿತ ಚಟುವಟಿಕೆಗಳ ನಿರೂಪಣೆಯಲ್ಲಿ ಅಂತಹ ಹೊಸತನವಿಲ್ಲದಿದ್ದರೂ, ಅದು ಬುಡಕಟ್ಟಿನ ಜೀವನಕ್ರಮದಲ್ಲಿ ತರುವ ಪಲ್ಲಟಗಳು ಸಮರ್ಥವಾಗಿ ಮೂಡಿಬಂದಿವೆ.

ಇತರ ಎರಡು ಕಾದಂಬರಿಗಳಂತೆ ಇದರದೂ ಶಕ್ತಿಯಿರುವುದು ಆವೇಶ, ಅತ್ಯುಕ್ತಿ ಹಾಗೂ ಮೆಲೋಡ್ರಾಮಾಗಳಿಂದ ಮುಕ್ತವಾದ, ನಿರ್ಲಿಪ್ತವಲ್ಲದಿದ್ದರೂ ಸಮತೋಲ ಉಳಿಸಿಕೊಂಡ ಶೈಲಿಯಲ್ಲಿ. ಹಂದಿಗಳ ಹತ್ಯಾಕಾಂಡವಿರಲಿ, ಕೋಳಿ ಜಗಳವಿರಲಿ, ಜಲಪ್ರಳಯವಿರಲಿ, ತಾಂಡೆಯೊಳಗಿನ ಏರುಪೇರುಗಳಿರಲಿ, ಲೇಖಕರು ವಾದವನ್ನು ಕಟ್ಟಲು ಬಳಸುವ ಇಟ್ಟಿಗೆಗಳು ವಿವರಗಳೇ ಹೊರತು, ವೈಚಾರಿಕವಾದ ಮಧ್ಯಪ್ರವೇಶಗಳಲ್ಲ.

ತಮ್ಮ ಸಾಮುದಾಯಕ ನೆಲೆಗಳನ್ನು ಉಳಿಸಿಕೊಂಡರೂ, ತೀವ್ರವಾದ ವೈಯಕ್ತಿಕತೆಯನ್ನು ಉಳಿಸಿಕೊಳ್ಳುವ ಪಾತ್ರಗಳು ಈ ಕಾದಂಬರಿಯಲ್ಲಿ ವಿಪುಲವಾಗಿದೆ. ಕುರುಮಯ್ಯ, ಬುಡ್ಡಮ್ಮ, ಜಂಬಯ್ಯ, ತಾಯೇರಿ, ಮಾರೆವು ಮುಂತಾದ ಪಾತ್ರಗಳು 'ಇದೂ ಒಂದು ದಲಿತ ಪಾತ್ರ' ಎಂಬ ಭಾವನೆಯನ್ನು ಬರಿಸದೆ ಸ್ವಂತಿಕೆಯನ್ನು ಪಡೆದುಕೊಳ್ಳುತ್ತವೆ. ದುರಂತವೆಂದರೆ ಇಂಥ ಕಾದಂಬರಿಗಳು ವಿಮರ್ಶೆಯ, ಅಧ್ಯಯನದ ವ್ಯಾಪ್ತಿಯಲ್ಲಿ ಬರದೆ ಕೇವಲ ಅವಸರದ ಓದಿಗೆ, ವರ್ಗೀಕರಣಕ್ಕೆ ಸೀಮಿತವಾಗಿಬಿಡುವುದು. 'ಅಂಕುಶದೊಡ್ಡಿ' ಎಂಬ ಹೆಸರಿನಿಂದ ಹಿಡಿದು, ಕತ್ತಲದಾಹದ ಕೊರವರು ತಲೆಯ ಮೇಲೆ ಹೊರಬೇಕಾದ ದೀಪಗಳವರೆಗೆ ಅನೇಕ

ವಿವರಗಳು ಸಾಂಕೇತಿಕವಾಗುತ್ತ ಸಾಹಿತ್ಯಮಾಧ್ಯಮದ ಮೇಲೆ ಈ ಹೊಸ ಲೇಖಕರು ಸಂಪಾದಿಸಿಕೊಳ್ಳುತ್ತಿರುವ ಪ್ರಭುತ್ವಕ್ಕೆ ಸಾಕ್ಷಿಯಾಗಿದೆ. ಇಂಥ ಬರವಣಿಗೆಯನ್ನು ಕೇವಲ ಡಾಕ್ಯುಮೆಂಟರಿ ಎಂದು ಕರೆಯುವುದು ಸರಿಯಲ್ಲ.

'ಹೊಲಗೇರಿಯ ರಾಜಕುಮಾರ' ಇವರಡಕ್ಕಿಂತ ಭಿನ್ನವಾದ ಭಿತ್ತಿಯನ್ನು ಪಡೆದಿದೆ. ಅದು ಇತಿಹಾಸ, ವರ್ತಮಾನಗಳನ್ನು ಮಾತ್ರವಲ್ಲದೆ ಪಾತ್ರಗಳ ಮನಶ್ಯಾಸ್ತ್ರೀಯ ಆಯಾಮಗಳನ್ನೂ ಗಣನೆಗೆ ತಂದುಕೊಳ್ಳುತ್ತದೆ. ದಲಿತರ ನಡುವೆ ಬೆಳೆದು ವಿದ್ಯಾಭ್ಯಾಸ ಪಡೆದು, ಮದುವೆಯಾಗಿ, ಸಂಸಾರ ನಡೆಸುತ್ತಿರುವ ಸರ್ಕಾರೀ ಉದ್ಯೋಗಿಯೊಬ್ಬ, ಇದ್ದಕ್ಕಿದ್ದಂತೆ ತಾನು ರಾಜವಂಶಕ್ಕೆ ಸೇರಿದವನೆಂಬ ಸತ್ಯವನ್ನು ತಿಳಿದುಕೊಳ್ಳುತ್ತಾನೆ. ಅನಂತರ ದಲಿತತ್ವದ ಬೇಲಿಯನ್ನು ದಾಟಿ ಅಪವರ್ಗೀಕರಣ (de classification)ಗೊಳ್ಳಲು ಅವನು ಮಾಡುವ ಪ್ರಯತ್ನಗಳು ಸಾಮಾಜಿಕವಾದ ಸಮ್ಮತಿಯನ್ನು ಪಡೆಯದಿರುವುದು ಯಾರ ಗ್ರಹಿಕೆಗೂ ಸಿಗಬಹುದಾದ ಸತ್ಯ. ಆದರೆ ತಾನು ಮೇಲುಜಾತಿಗೆ ಸೇರಿದವನೆಂಬ 'ತಿಳುವಳಿಕೆ'ಯು ಅವನ ಸ್ವಭಾವದಲ್ಲಿಯೇ ತರುವ ಬಿಗುವು- ಬಿಸಿಪುಗಳನ್ನು ಹಿಡಿದಿರುವುದರಲ್ಲಿ ಈ ಕಾದಂಬರಿ ಅನನ್ಯವಾಗಿದೆ. ಹೆಂಡತಿ -ಮಕ್ಕಳೂ ಸೇರಿದಂತೆ ತನ್ನ ಆತ್ಮೀಯರ ವಲಯವನ್ನೇ ಪರಕೀಯರಂತೆ 'ಕೀಳು' ಎನ್ನುವಂತೆ ನೋಡತೊಡಗುವ ವರ್ತನೆ ಮನುಷ್ಯ ಸ್ವಭಾವದ ಆಳದಲ್ಲಿಯೇ ಅಡಗಿರಬಹುದಾದ ಫ್ಯಾಸಿಸ್ಟ್ ನೆಲೆಗಳನ್ನು ಬೆಳಕಿಗೆ ತರುತ್ತದೆ. ನಾಯಕನು ದಲಿತತ್ವದ ಕಡೆಗೆ ಹೋರಾಟದ ಕಡೆಗೆ ಮರುಪ್ರಯಾಣ ನಡೆಸಿ, ಚಳುವಳಿಯ ಮುಂಚೂಣಿಗೆ ಸೇರಿ ಕೊಳ್ಳುತ್ತಾನೆ ಎನ್ನುವುದು ಕಾದಂಬರಿಯ ಫಲಶ್ರುತಿ. ಇದು ಆಶಾಚಿಂತನವೇ ಇದ್ದೀತು. ಆದರೆ ಜೀವನದ ಅನಂತ ಸಾಧ್ಯತೆಗಳಲ್ಲಿ ತನಗೆ ಸೂಕ್ತವೆನಿಸಿದ್ದನ್ನು ಆರಿಸಿಕೊಳ್ಳುವುದು ಸೃಜನಶೀಲ ಸ್ವಾತಂತ್ರ್ಯದ ಭಾಗವೇ ಅಲ್ಲವೇ? 'ಹೊಲಗೇರಿಯ ರಾಜಕುಮಾರ', ಲಕ್ಷ್ಮಣ ಗಾಯಕವಾಡರ 'ಉಚಲ್ಯಾ'ದ ಹಾಗೆ ಮಹಾರಾಷ್ಟ್ರದಲ್ಲಿ ಪ್ರಬಲವಾಗಿ ಬೆಳೆದಿರುವ ದಲಿತರ ಹೋರಾಟದ ನೆಲೆಗಳನ್ನು ಬಳಸಿಕೊಳ್ಳುತ್ತದೆ. ಕರ್ನಾಟಕದಲ್ಲಿ ಸಂಭವಿಸಬಹುದಾದ್ದರ ಮುನ್ಸೂಚನೆಯಂತಿರುವ ಇಲ್ಲಿನ ವಿವರಗಳು ಮಹತ್ವದ ಒಳನೋಟಗಳನ್ನು ನೀಡುತ್ತವೆ. ವೈಯಕ್ತಿಕ ಪ್ರತಿಭಟನೆಗೆ ಸಾಮಾನ್ಯವಾಗಿ ಇಲ್ಲದ ಬೆನ್ನೆಲುಬುಗಳು ಸುಸಂಘಟಿತವಾದ ಹೋರಾಟಗಳಿಗೆ ಇರುತ್ತದೆ. ಈ ಕಾದಂಬರಿಯು ರೂಕ್ಷವಾದರೂ, ಸಂಕ್ಷಿಪ್ತವಾದರೂ ಅಂಥ ಸಾಧ್ಯತೆಗಳನ್ನು ಸೂಚಿಸುವುದರಿಂದ ಮುಖ್ಯವಾಗುತ್ತದೆ.

ಈ ವರ್ಷದ ಅತ್ಯುತ್ತಮ ಆತ್ಮಕಥೆಯಾದ ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಕನ್ನಡ ವಾರ್ಷಿಕದ ಬೇರೊಂದು ಕಡೆ ವಿಮರ್ಶಿತವಾಗಿದೆ. ಆದರೆ ಇದುವರೆಗೆ ಚರ್ಚಿಸಿದ ಕಾದಂಬರಿಗಳ ಜೊತೆಗೆ ಅದನ್ನು ಓದಬೇಕೆಂಬುದು ನನ್ನ ಅಭಿಪ್ರಾಯ. ದೇವನೂರ ಮಹಾದೇವರು 'ಕುಸುಮಬಾಲೆ' ಯಲ್ಲಿ ಕಂಡುಕೊಂಡ ರಾಚನಿಕ ನೆಲೆಗಳಿಗಿಂತ ಭಿನ್ನವಾದ ವಾಸ್ತವತಾವಾದಿ ಮಂಡನೆಯ ಮಾರ್ಗವನ್ನೇ ಕನ್ನಡ ದಲಿತ ಕಥಾಸಾಹಿತ್ಯ ಹಿಡಿಯುತ್ತದೆಯೇ ಎನ್ನುವುದು ಈ ಕಾದಂಬರಿಗಳಿಗೆ ಸಿಗುವ

ಪ್ರಸರಣ ಮತ್ತು ಯಶಸ್ಸುಗಳಿಂದ ತೀರ್ಮಾನವಾಗಬಹುದು. ಆದರೆ ಈ ಮೂರು ಕಾದಂಬರಿಗಳು ಕನ್ನಡಕ್ಕೆ ಹೊಸದನ್ನು ಸೇರಿಸಿವೆಯೆಂಬುದು ಖಂಡಿತ. ಕೇವಲ ಪ್ರಮಾಣದಲ್ಲಿ ಅಲ್ಲ, ಗುಣದಲ್ಲಿ ಕೂಡ.

ಕುಂದರನಾಡು ಪಾಟೀಲರ 'ಉಲ್ಲಂಘನೆ' ಕಾದಂಬರಿಯನ್ನು ಇನ್ನು ಮುಂದೆ ಪರಿಶೀಲಿಸಬಹುದು. ಈಗಾಗಲೇ ಹೇಳಿದಂತೆ ಇದು ಇತಿಹಾಸ ಮತ್ತು ವರ್ತಮಾನಗಳ ದಾಖಲೀಕರಣದ ಹಿನ್ನೆಲೆಯಲ್ಲಿ ಕಾಲ್ಪನಿಕ ಕಥೆಯೊಂದನ್ನು ಪೋಣಿಸುವ ಪ್ರಯತ್ನ. ಈ ರೀತಿಯ ಪ್ರಯತ್ನದಲ್ಲಿ ಹಲವು ರಿಸ್ಕ್‌ಗಳಿವೆ. ಕಾದಂಬರಿಕಾರನ ವೈಚಾರಿಕ ಧೋರಣೆಗಳಿಗೂ ಕೃತಿಯ ಸೃಜನಶೀಲ ಸಾಧ್ಯತೆಗಳಿಗೂ ನಡುವೆ ಬಿಕ್ಕಟ್ಟು ಏರ್ಪಡುತ್ತದೆ ಸತ್ಯವಾದ ಸಂಗತಿಗಳ ಆಯ್ಕೆ ಹಾಗೂ 'ಬಿಡುವಿಕೆ'ಗಳು ಕೃತಿಯ ಸ್ವರೂಪವನ್ನು ತೀರ್ಮಾನಿಸುತ್ತದೆ.

ಕನ್ನಡಿಗರು ಮತ್ತು ಮರಾಠಿಗರ ನಡುವೆ ಬೆಳಗಾವಿಯಲ್ಲಿ ಏರ್ಪಟ್ಟಿರುವ ಸಮಸ್ಯೆಯು ರಾಜಕಾರಣಿಗಳ ಸೃಷ್ಟಿಯೇ ವಿನಾ ಅವೆರಡು ಸಮುದಾಯಗಳ ಆಂತರಿಕ ಪ್ರೇರಣೆಯಿಂದ ಮೂಡಿ ಬಂದುದಲ್ಲ ಎನ್ನುವುದು ಕೃತಿಯ ಮೂಲ ನೆಲೆಗಟ್ಟು. ಸಮುದಾಯಗಳ ಮೈತ್ರಿ ಹಾಗೂ ವಿಶಿಷ್ಟತೆಗಳನ್ನು ತೋರಿಸಿರುವ ಹಲವು ಸನ್ನಿವೇಶಗಳು ಕೃತಿಯಲ್ಲಿವೆ. ಪಕ್ಷಪಾತದ ಆಕ್ಷೇಪಣೆ ಮಾಡುವಂತಿಲ್ಲ. ಆದರೆ ಕಲ್ಪನೆಯನ್ನು ಆಧರಿಸಿದ ಇತಿಹಾಸದ ಪುನಾರಚನೆ ವಿವಾದಗಳಿಗೆ ಕಾರಣವಾಗಬಹುದು. ಉದಾಹರಣೆಗೆ ಇಂದಿರಾಗಾಂಧಿ, ನಿಜಲಿಂಗಪ್ಪ, ವೈ. ಬಿ. ಚವಾಣ್, ಅತುಲ್ಯಘೋಷ, ಕಾಮರಾಜ್ ಮುಂತಾದ ನಾಯಕರು ಒಟ್ಟುಗೂಡಿ ಮಹಾಜನ್ ಆಯೋಗದ ನೇಮಕಾತಿ ಮಾಡುವ ಹುನ್ನಾರವನ್ನು ಹೆಸರಿಸಬಹುದು. ಕೃತಿಯು ನಂಬಲರ್ಹವೆನಿಸಿದರೂ ಅತಿಸರಳೀಕರಣವಾಯಿತೇನೋ ಎಂಬ ಅನುಮಾನಕ್ಕೆ ಅವಕಾಶ ಉಳಿಯುತ್ತದೆ.

ಗಡಿಸಮಸ್ಯೆಯ ಹಿನ್ನೆಲೆಯೊಂದಿಗೆ ಬೆರೆತುಕೊಂಡಿರುವ ನಾಯಕನ ಜೀವಂತ ವೃತ್ತಾಂತವು ತನ್ನದೇ ಹಾದಿ ಹಿಡಿಯುತ್ತದೆ. ಅವನ ವಿದ್ಯಾಭ್ಯಾಸ, ಪ್ರಣಯಪ್ರಸಂಗಗಳು ಚಳುವಳಿಯೊಂದಿಗೆ ಅವನಿಗೆ ಬಂದ ಸಂಪರ್ಕ ಮುಂತಾದವು ತಮ್ಮಷ್ಟಕ್ಕೆ ತಾವು ರೋಚಕವೆನಿಸಿದರೂ ಕೃತಿಯ ಆಶಯದೊಂದಿಗೆ ಸಂಯೋಜಿತವಾಗುವುದಿಲ್ಲ. ಬೆಳಗಾವಿಯ ಸಮಸ್ಯೆಯ ಕಥನದ ಕೋಟನ್ನು ತೂಗುಹಾಕಲು ಬಳಸುವ ಮೊಳೆಯಂತೆ ನಾಯಕನ ಆತ್ಮವೃತ್ತಾಂತವು ಬಳಕೆಯಾಗಿದೆ.

ಈ ವರ್ಷ ಮಹಿಳೆಯರು ಬರೆದ ಮೂರು ಕಾದಂಬರಿಗಳು ವಿಶೇಷ ಪರಿಶೀಲನೆಗೆ ಅರ್ಹವಾಗಿವೆ. ಸಾರಾ ಅಬೂಬಕರ್ ಅವರ 'ಸುಳಿಯಲ್ಲಿ ಸಿಕ್ಕವರು'. ಸುನಂದಾ ಬೆಳಗಾಂವಕರ್ ಅವರ 'ಝುವಾದಿ' ಮತ್ತು ತಾರಾಭಟ್ ಅವರ 'ಅವ್ಯಕ್ತ'ಗಳು ಬೇರೆ ಬೇರೆ ಕಾರಣಗಳಿಗಾಗಿ ಮುಖ್ಯವಾಗುತ್ತವೆ.

'ಅವ್ಯಕ್ತ' ಆಧುನಿಕ ಮಹಿಳಾಲೋಕದ ವಿಭಿನ್ನ ನೆಲೆಗಳ ನಿರ್ಭಾವುಕ ಪರಿಶೀಲನೆಗೆ ಮೀಸಲಾಗಿದೆ ಭಾವನೆಗಳ ಜಗತ್ತು ಹಾಗೂ ವಾಣಿಜ್ಯ ವ್ಯವಹಾರ ಜಗತ್ತುಗಳ ಸಂಘರ್ಷವನ್ನು ಈಗಾಗಲೇ 'ಶಿಕಾರಿ', 'ಬಂಡಾಯ' 'ಉತ್ತರಾಯಣ'ಗಳಂತಹ ಕಾದಂಬರಿಗಳು ಹಿಡಿದಿಟ್ಟಿವೆ. ಆದರೆ 'ಅವ್ಯಕ್ತ' ಅದೇ ಜಗತ್ತನ್ನು ಹೆಣ್ಣಿನ ದೃಷ್ಟಿಕೋನದಿಂದ ನೋಡುತ್ತದೆ. ಅಮೆರಿಕನ್ ಆಗಿ ಹಾಗೂ ಗಂಡಸಾಗಿ ತನಗೆ ಅಧಿಕೃತವಾಗದಿರಬಹುದಾದ ಜೋಫ್ರೆ ಕ್ಲಾರ್ಕನ ನೆಲೆಯಿಂದ ಸನ್ನಿವೇಶವನ್ನು ಹಿಡಿಯಲು ಯತ್ನಿಸುವುದರಲ್ಲಿಯೇ ಲೇಖಕಿ ರಿಸ್ಕ್ ತೆಗೆದುಕೊಳ್ಳುತ್ತಾರೆ. ಆದರೆ ಅಯಶಸ್ವಿಯಾಗುವುದಿಲ್ಲ. ಏಕೆಂದರೆ ಜೋಫ್ರೆಯತ್ತ ನೋಡುವ ಹಾಗೂ ಅವನ ಮೂಲಕ ನೋಡುವ ಬಗೆಗಳನ್ನು ಒಟ್ಟಿಗೆ ಬಳಸಿಕೊಳ್ಳುವುದರ ಮೂಲಕ ಸಮತೋಲನ ಸಾಧಿತವಾಗುತ್ತದೆ. ಜೋಫ್ರೆ ಕಾದಂಬರಿಯಲ್ಲಿ ಏಕೆ ಅಗತ್ಯವೆಂದರೆ ಅವನಿಗೆ ನಿಕಟವಾದ ಸಂಸ್ಕೃತಿ ಲೋಕದಲ್ಲಿ ಹೆಣ್ಣಿಗಿರುವ ಸವಲತ್ತುಗಳ ಅರಿವು ಅವನಿಗಿದೆ. ಆದ್ದರಿಂದಲೇ ಭಾರತೀಯ ಪುರುಷರಿಗೆ ಸಹಜವಾಗಿಯೇ ಬರುವ 'ಲಿಂಗದರ್ಪ' ಅವನಿಗಿಲ್ಲ. ಹಾಗೆಯೇ ಹೆಣ್ಣಿನಲ್ಲಿ ಲೈಂಗಿಕವಲ್ಲದ ಸೃಜನಶೀಲತೆಯನ್ನು ಗುರುತಿಸುವುದು ಅವನಿಗೆ ಸಾಧ್ಯ. ಆದರೆ ಅವನು ಕೂಡ ಅದಿತಿಗೆ ಮಾರ್ಗದರ್ಶನ ನೀಡತೊಡಗಿದಾಗ ತನ್ನ ವಿಶ್ವಸನೀಯತೆಯನ್ನು ಕಳೆದುಕೊಳ್ಳುತ್ತಾನೆ. ಕಾದಂಬರಿಯ ರೂಪಕವನ್ನು ಬಳಸುವುದಾದರೆ ನೋವರಿಯದಂತೆ ರಕ್ತ ಹೀರುವ ಇಂಬಳವಾಗುತ್ತಾನೆ.

ಕಾದಂಬರಿಯಲ್ಲಿ ಬರುವ ಇತರ ಹಲವು ಹೆಣ್ಣುಗಳ 'ಅಸಹಜ' ಸ್ಥಿತಿಗೆ ಕಾರಣವನ್ನು ತಮ್ಮ ನಿಯಂತ್ರಣದಲ್ಲಿರದ ಪರಿಸರಕ್ಕೆ ಅವರು ತೋರಿಸುವ ಪ್ರತಿಕ್ರಿಯೆಯ ವಿಭಿನ್ನತೆಯಲ್ಲಿ ಹುಡುಕಲಾಗಿದೆ. 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆಯ ಪ್ರತಿಕ್ರಿಯೆ ಹೇಗೆ ಕ್ರಾಂತಿಕಾರಕವಾದರೂ ಆತ್ಮಘಾತಕವೂ, ಹಾಗೆಯೇ ಇಲ್ಲಿನ ಹೆಣ್ಣುಗಳೂ ವಿನಾಶದ ಸಾಧ್ಯತೆಗಳನ್ನು ಮಾತ್ರ ಪಡೆದಿದ್ದಾರೆ. ಇದು ಸ್ತ್ರೀ ಪ್ರಜ್ಞೆಯ ವಿಕಸನದ ಸದ್ಯದ ಸ್ಥಿತಿಯಲ್ಲಿ ಮಾತ್ರ ಅನಿವಾರ್ಯ. ಅದಿತಿ, ರೋಜಿಯರಿಗೆ ತೆರೆಯದ ಬಾಗಿಲುಗಳು ಮುಂದೆ ಯಾರಿಗೋ ತೆರೆಯಬಹುದೆನ್ನುವ ಸಾಧ್ಯತೆ ಮಾತ್ರ ಕಾದಂಬರಿಯ ಅಂತ್ಯದ ಗಾಢವಿಷಾದಕ್ಕೆ ಆಂಟಿಡೋಟ್ ಆಗಿದೆ. ಫೆವಿಕಾಲ್‌ಗೆ ಬಿದ್ದ ಹಲ್ಲಿಯ ರೂಪಕ ಕಾದಂಬರಿಯ ಸ್ತ್ರೀ ಪಾತ್ರಗಳಿಗೆ ಸೂಕ್ತವೆನಿಸಿದರೂ ಇಂಥದೊಂದು ಸೃಜನಶೀಲ ಅಭಿವ್ಯಕ್ತಿಯನ್ನು ಸಾಧಿಸಿರುವ ಲೇಖಕರಿಗೆ ಉಚಿತವಾಗುವುದಿಲ್ಲ ಎಂದರೆ 'ಅವ್ಯಕ್ತ' ಕಾದಂಬರಿಯ ರಚನೆಯೇ ಹೆಣ್ಣನ್ನು ಆವರಿಸಿರುವ ಹಲವು ಭ್ರಮೆಗಳ ಬಲೂನುಗಳಿಗೆ ವಾಸ್ತವದ ಸೂಜಿ ಚುಚ್ಚುವುದರ ಮೂಲಕ ಸಿಗ್ನಿಫಿಕೆಂಟ್ ಆಗುತ್ತದೆ.

ಸಾರಾ ಅಬೂಬಕರ್ ಅವರ ' ಸುಳಿಯಲ್ಲಿ ಸಿಕ್ಕವರು', ಅವರ ಇತರ ಕೃತಿಗಳ ಹಾಗೆ ಒಂದು ಹೆಣ್ಣಿನ ಬವಣೆಗೆ ಸೀಮಿತವಾಗಿಲ್ಲ. ಶ್ರೀಮಂತಿಕೆ ಮತ್ತು ಬಡತನಗಳ ಚಲನಶೀಲತೆಯ ಫಲವಾಗಿ ಮನುಷ್ಯ ಸಂಬಂಧಗಳಲ್ಲಿ ಆಗುವ ಬದಲಾವಣೆಯನ್ನು ಅವರು ಶೋಧಿಸುತ್ತಿದ್ದಾರೆ. ಅಷ್ಟೇ ಅಲ್ಲ, ಶ್ರೀಮಂತಿಕೆಯನ್ನು ಅಥವಾ ಬಡತನದ ಬವಣೆಯಿಂದ ಬಿಡುಗಡೆಯನ್ನು ಪಡೆಯಲು ಅನುಸರಿಸಬೇಕಾಗುವ 'ಮಾರ್ಗ'ದ

ನೈತಿಕತೆಯ ಪ್ರಶ್ನೆಯನ್ನು ಅವರು ಮುಖ್ಯವಾಗಿ ತಿಳಿದಿದ್ದಾರೆ. ಕಾದಂಬರಿಯ ನಾಯಕ ಬಡವನಾಗಿ ಅನುಭವಿಸಿದ ಕಷ್ಟಗಳು ಅವನ ಸ್ವಭಾವದ ವೈಭವೀಕರಣಕ್ಕೆ ನೆಪವಾಗುವುದಿಲ್ಲ. ಬಡವನಾದಾಗ ಹಾಗೂ ಅನಂತರ ಅವನು ಸೌಜನ್ಯ - ಕೃತಜ್ಞತೆಗಳಂತಹ ಕೆಲವು ಮೌಲ್ಯಗಳಿಗೆ ಮಾತ್ರ ಕಟ್ಟು ಬೀಳುತ್ತಾನೆ. ಉಳಿದಂತೆ ಅವನು ಉಪ್ಪುಹುಳಿ ತಿನ್ನುವ ಮನುಷ್ಯ. ಬದಲಾಗಿ ಅವನನ್ನು 'ಶೋಷಣೆ' ಮಾಡುತ್ತಿದ್ದ ಮನೆಯ ಹೆಣ್ಣುಮಕ್ಕಳಲ್ಲಿ ಮಾನವತೆಯ ಸೆಲೆಯನ್ನು ಜೀವಂತವಿಡಲಾಗಿದೆ. ಆದರೆ ನಾಯಕನ ಪತ್ನಿ ಮತ್ತು ತಾಯಿಯರಲ್ಲಿಯೇ ಮೂಡಿಬರುವ ದರ್ಪವು ನಿಷ್ಠುರವಾಗಿ ಚಿತ್ರಿತವಾಗಿದೆ. ಹೀಗೆ ಪಾತ್ರಗಳ ವರ್ಗ -ವರ್ಣ ಹಿನ್ನೆಲೆಯನ್ನು ಆಧರಿಸಿದ ಕಪ್ಪು - ಬಿಳುಪು ವರ್ಗೀಕರಣದಲ್ಲಿ ತೊಡಗದೆ, ಮನುಷ್ಯ ಸ್ವಭಾವದ ಸಂಕೀರ್ಣ ಗ್ರಹಿಕೆಯನ್ನು ಪಡೆದಿರುವುದು ಸಾರಾ ಅವರ ಈ ಕಾದಂಬರಿಯ ಹಾಗೂ ಇತರ ಮುಖ್ಯ ಕೃತಿಗಳ ಹೆಚ್ಚುಗಾರಿಕೆ. ಇದನ್ನು ಸಾಧಿಸುವಾಗ ಅವರು ಎಲ್ಲಿಯೂ ಬಂಡಾಯ ಮೌಲ್ಯಗಳನ್ನು ತ್ಯಜಿಸುವ ರಿಯಾಯತಿಯನ್ನು ತೋರಿಸುವುದಿಲ್ಲ. ಕಾದಂಬರಿಗಳ ಸರಣಿಯೊಂದರ ಮೊದಲಭಾಗವಾದ ಈ ಕೃತಿಯು ಸ್ವಯಂಪೂರ್ಣವಾಗಿದೆ.

ಕಾದಂಬರಿಯ ವಿವರಗಳಲ್ಲಿ ತೋರಿಸುವ ಪ್ರಮಾಣದ ಪ್ರಾದೇಶಿಕತೆಯನ್ನು ಅದರ ಭಾಷಿಕ ನೆಲೆಗಳಲ್ಲಿ ಸಾರಾ ಅವರು ತೋರಿಸುವುದಿಲ್ಲ. 'ಚಂದ್ರಗಿರಿಯ ತೀರದಲ್ಲಿ', 'ಸಹನಾ' ಮುಂತಾದ ಕಾದಂಬರಿಗಳ ನಾಯಕಿಯರ ಹಾಗೆ ಲೇಖಕಿಯ ಸಂಪೂರ್ಣ ಭಾವಕೋಶವನ್ನು ಸೂರೆಗೊಂಡಿರುವ ಪಾತ್ರಗಳು ಇಲ್ಲಿ ಇಲ್ಲ. ಆದರೆ ಇವೆಲ್ಲವೂ ಸಾರಾರವರು ಅನಿವಾರ್ಯವಾಗಿಯೇ ನಡೆಯಬೇಕಾದ ಹಾದಿಯ ಹೆಜ್ಜೆಗಳು. ಸ್ತ್ರೀಲೋಕ, ಸ್ವಂತ ಅನುಭವ ಲೋಕ, ತನಗೆ ಪರಿಚಿತವಲ್ಲದ ಪುರುಷ ಲೋಕದ ಹೀಗೆಯೇ ಎಲ್ಲ ಜಗತ್ತುಗಳ ಹೃದಯವನ್ನು ಒಳಹೋಗುವ ಕಲ್ಪಕತೆಯನ್ನು ಬಳಸಿಕೊಳ್ಳುವುದು ಸೃಜನಶೀಲತೆಯ ಅನಿವಾರ್ಯ ಲಕ್ಷಣ. 'ಸುಳಿಯಲ್ಲಿ ಸಿಕ್ಕವರು' ಅಂಥ ಶಕ್ತಿಯನ್ನು ಸಾರಾರವರು ಸಾಧಿಸಿಕೊಳ್ಳ ತೊಡಗಿರುವುದಕ್ಕೆ ಸಾಕ್ಷಿ. ಚಂದ್ರಗಿರಿಯ ತೀರದಲ್ಲಿ 'ಕಾದಂಬರಿಯ ಅಪಾರ ಯಶಸ್ಸಿನ ನಂತರ ಬಂದ ವಜ್ರಗಳು, 'ತಳ ಒಡೆದ ದೋಣಿಯಲ್ಲಿ', 'ಸಹನಾ' ಮುಂತಾದ ಕೃತಿಗಳು ಒಂದಲ್ಲ ಒಂದು ರೀತಿಯಲ್ಲಿ ಹೊಸದನ್ನು ಮೈಗೂಡಿಸಿಕೊಂಡ ಪ್ರಯತ್ನಗಳು. ಮೊದಲ ಕಾದಂಬರಿಗೆ ದೊರಕಿದ ಕಲಾತ್ಮಕ ಯಶಸ್ಸು ನಂತರದವುಗಳಿಗೆ ಸಿಕ್ಕದಿರಬಹುದು. ಹಾಗೆಂದು ಅಂಥ ಪ್ರಯತ್ನಗಳ ಮೌಲಿಕತೆಯನ್ನು ಅಲ್ಲಗಳೆಯುವುದು ಸೂಕ್ತವೆನಿಸುವುದಿಲ್ಲ. ವರ್ತಮಾನದ ಚೌಕಟ್ಟಿನಲ್ಲಿ ಇತಿಹಾಸವನ್ನು ಧ್ವನಿಸುವ ಅವರ ಕೃತಿಗಳು, ಸಮುದಾಯದ ಇತಿಹಾಸವನ್ನೇ ಪ್ರಧಾನಭಿತ್ತಿಯಾಗಿಸಿಕೊಂಡು ಬರೆಯಹೊರಟಾಗ ಎದುರಾಗುವ ಸವಾಲುಗಳು ಅವರ ಸೃಜನಶೀಲತೆಯನ್ನು ಹೊಸ ಎತ್ತರಗಳಿಗೆ ಕರೆದೊಯ್ಯಬಹುದು. ಈ ಹಿನ್ನೆಲೆಯಲ್ಲಿ 'ಸುಳಿಯಲ್ಲಿ ಸಿಕ್ಕವರು' ಕಾದಂಬರಿಯ ಬರಲಿರುವ ಭಾಗಗಳನ್ನು ಕುತೂಹಲದಿಂದ ಎದುರುನೋಡಬಹುದು.

'ಕಜ್ಜಾಯ' ಎಂಬ ಪ್ರಬಂಧ ಸಂಕಲನ ಹಾಗೂ 'ನಾಸೂ' ಕಾದಂಬರಿಗಳ ನಂತರ ಸುನಂದಾ ಬೆಳಗಾಂವಕರ ಅವರು 'ಝುವಾದಿ' ಯನ್ನು ಬರೆದಿದ್ದಾರೆ 'ಝುವಾದಿ' ಎಂದರೆ ಸ್ವಹೀಲಿ ಭಾಷೆಯಲ್ಲಿ ಕಾಣಿಕೆ ಎಂದು ಅರ್ಥ.

ಕೌಟುಂಬಿಕ ನೆಲೆಯಲ್ಲಿನ ಮನುಷ್ಯ ಸಂಬಂಧಗಳಲ್ಲಿ ಸಾಕ್ಷಾತ್ಕಾರವಾಗುವ ಸತ್ಯಗಳ ಹುಡುಕಾಟ ಕನ್ನಡ ಕಾದಂಬರಿಗಳಲ್ಲಿ ಹೊಸದೇನೂ ಅಲ್ಲದಿದ್ದರೂ ಅದು ಗಂಭೀರವಾದ ಆಯಾಮಗಳನ್ನು ಪಡೆದುದು ಅಪರೂಪ. ಎಂದರೆ ನಾನು ಪ್ರಸ್ತಾಪಿಸುತ್ತಿರುವುದು ಕುಟುಂಬದ ಕಥೆಯಾಚೆಗಿನ ಜಗತ್ತಿನ ಬಗ್ಗೆ ಯಾವುದೇ ಆಸಕ್ತಿಯನ್ನು ತಳೆಯದ ಕಥಾನಕಗಳನ್ನು. ಶಂಕರ ಮೊಕಾಶಿಯವರ 'ಗಂಗವ್ವ ಮತ್ತು ಗಂಗಾಮಾಯಿ' ಯಂತಹ ಕೃತಿಗಳಿಂದ ವೇದ್ಯವಾಗುವಂತೆ ಇಂಥ ಕಾದಂಬರಿಗಳು ಅಮೋಘ ಸಾಧನೆ ಮಾಡಬಲ್ಲವು. ಕುಟುಂಬ -ಸಮಾಜಗಳ ನಡುವಿನ ಪರಸ್ಪರ ಕೊಳುಕೊಡೆಗಳನ್ನು ಹುಡುಕಬಯಸುವ ಕಾದಂಬರಿಗಳು ಇವಕ್ಕಿಂತ ಭಿನ್ನವಾದವು. ಇಂಥ ಕಾದಂಬರಿಗಳು ಯಶಸ್ವಿಯಾಗುವುದು ತಾವು ಚಿತ್ರಿಸುವ ಕುಟುಂಬ ಜೀವನದ ಪ್ರಾತಿನಿಧಿಕತೆ ಮತ್ತು ಅಧಿಕೃತತೆಗಳಲ್ಲಿ.

ಈ ಹಿನ್ನೆಲೆಯಲ್ಲಿ ನೋಡಿದಾಗ 'ಝುವಾದಿ' ಕುತೂಹಲಕಾರಿಯಾಗಿದೆ. ಶಂಕರ ಗಿಳಿಯಾರನ ಕುಟುಂಬದ ಭೂತ -ಭವಿಷ್ಯ -ವರ್ತಮಾನಗಳ ಈ ಕಥಾನಕವು ನೂರಾರು ವ್ಯಕ್ತಿಗಳಲ್ಲಿ, ಹತ್ತಾರು ಕುಟುಂಬಗಳಲ್ಲಿ ಹರಡಿಕೊಂಡಿದೆ. ಆದರೆ ಅದು ನಿಜವೆನಿಸುವುದು ಮನುಷ್ಯನ ಭಾವನೆಗಳ ಲೋಕವನ್ನು ಅದರ ಎಲ್ಲ ವಿಕ್ಷಿಪ್ತತೆ - ಸಂಕೀರ್ಣಗಳೊಂದಿಗೆ ಹಿಡಿದಿಡುವುದರಲ್ಲಿ ಲೇಖಕಿ ಪಡೆದಿರುವ ಯಶಸ್ಸಿನಿಂದ. ಅಧಿಕೃತವೆನಿಸುವ ಭಾವಲೋಕ ಮತ್ತು ಅನಗತ್ಯವೂ ಅತಿದೀರ್ಘವೂ ಆದ 'ವಿವರಗಳ ಲೋಕ' ಈ ಕೃತಿಯ ವಿಶಿಷ್ಟತೆಗಳು.

ಆಫ್ರಿಕಾದ ಸಿಂಹ - ಸಿಂಹಿಣಿಯರ ಕುಟುಂಬದ ಆಕರ್ಷಣೆ - ವಿಕರ್ಷಣೆಗಳ ಈರ್ಷೆ-ದ್ವೇಷಗಳ ಲೋಕವು ಕಾದಂಬರಿಯ ನಾಯಕನ ಜೀವನಲೋಕಕ್ಕೆ ಒಡ್ಡಿದ ರೂಪಕವಾಗಿರುವಂತೆಯೇ ಅವನಿಗೆ ಜೀವನಪಾಠಗಳನ್ನು ಕಲಿಸುವ ಶಾಲೆಯೂ ಆಗಬೇಕೆಂಬುದು ಕಾದಂಬರಿಗಾರರ ಉದ್ದೇಶ. ಆದರೆ ಅದು 'ವಾಚಾಳಿತನ' ಹಾಗೂ ಅತಿವಿವರಗಳಲ್ಲಿ ಮರೆಯಾಗಿದೆ ಅಥವಾ ತುಂಬಾ ಆಬ್ವಿಯಸ್ ಎನ್ನಿಸಿಬಿಡುತ್ತದೆ. ಶಂಕರರಾಯನಲ್ಲಿ ಪರಿವರ್ತನೆಯಾಗುವುದೇ ತಡ, ಉಳಿದವರೆಲ್ಲರೂ ಎಲ್ಲವನ್ನು ಮರೆತು, ಸುಖಸಂಕಥಾವಿನೋದದಲ್ಲಿ ಮಗ್ನರಾಗುವುದು ಕೊಂಚ ಕೃತಕವೆನ್ನಿಸುತ್ತದೆ. ಆದ್ದರಿಂದಲೇ ಈ ಕಾದಂಬರಿಯ ಮಿತಿ ಇರುವುದು ತಾನೂ ರೂಪಿಸಿಕೊಂಡಿರುವ ತಾತ್ವಿಕತೆ ಹಾಗೂ ಪಾತ್ರಗಳ ಬಗೆಗಿನ ಅತಿ ವ್ಯಾಮೋಹದಲ್ಲಿ.

ಇಷ್ಟು ಮಿತಿಗಳನ್ನು ಗುರುತಿಸಿದರೂ ಕಾದಂಬರಿಕಾರ್ತಿಯು ತಮ್ಮ ಅನುಭವ ದ್ರವ್ಯವನ್ನು ಇನ್ನಷ್ಟು ಕಲಾತ್ಮಕವಾಗಿ ಬಳಸಿಕೊಂಡರೆ, ಅವರಿಂದ ಅತ್ಯುತ್ತಮವೂ ಕನ್ನಡದ ಸಂದರ್ಭದಲ್ಲಿ ಅನನ್ಯವೂ ಆದ ಕಾದಂಬರಿಗಳು ಬರಬಹುದೆಂಬುದನ್ನು

ಹೇಳಬೇಕು. ಏಕೆಂದರೆ 'ಕಜ್ಜಾಯ' ಮೂಡಿಸಿದ ಭರವಸೆಯು ಹುಸಿಹೋಗುವುದು ಸಾಧ್ಯವಿಲ್ಲ.

ಪ್ರಸ್ತುತ ಸಮೀಕ್ಷಕನಿಗೆ ದೊರೆಯದಿರುವ, 'ದೊರೆ'ತರೂ ಸಮಗ್ರ ಪರಿಶೀಲನೆಯು ಅನಗತ್ಯವೆಂದು ಭಾವಿಸಿದ ಕಾದಂಬರಿಗಳು ಹಲವು ಇವೆ. ಇಂಥ ಸಮೀಕ್ಷೆಯು ಹಾಗೆ ಅತಿವಿವರವಾದ ಸರ್ವೆಯಲ್ಲಿ ತೊಡಗಿದಾಗ ಮುನ್ನೆಲೆಗೆ ಬರಲೇಬೇಕಾದ ಕೃತಿಗಳು ಮರವೆಗೆ ಸಂದು ಬಿಡುತ್ತವೆ. ಕೊನೆಗೂ ವಿಮರ್ಶಕನು ಸತೃಣಾಭ್ಯವ್ಯವಹಾರಿಯಾಗದೆ, ಆಯ್ಕೆ ಮಾಡಬೇಕಾಗುವುದು ಅನಿವಾರ್ಯ, ಸಹಜ.

## ಸಣ್ಣ ಕತೆ

*ಮೋಹನ ಕುಂಟಾರ್*

---

ಈ ವರ್ಷ ಇಪ್ಪತ್ತಕ್ಕೂ ಮಿಕ್ಕಿದ ಕಥಾಸಂಕಲನಗಳು ಪ್ರಕಟವಾಗಿವೆ. ಅವುಗಳಲ್ಲಿ ಹಿರಿಯ ಲೇಖಕರಾದ ಚದುರಂಗರ ಸಂಕಲನವಿದೆ. ವಿಮರ್ಶಕರಾದ ರಾಜೇಂದ್ರ ಚೆನ್ನಿಯವರೂ ಸಂಕಲನವೊಂದರ ಮೂಲಕ ಕಥಾಲೋಕವನ್ನು ಪ್ರವೇಶಿಸಿದ್ದಾರೆ. ಮಲ್ಲಯ್ಯ ಬರಗೂರಂತಹ ಹೊಸಬರು ಕಥಾಪ್ರಯತ್ನಗಳ ಮೂಲಕ ಮೆಲ್ಲಡಿಯಿಡುತ್ತಿದ್ದಾರೆ. ಬಹುತೇಕ ಕತೆಗಳು ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಬಳಿಕ ಸಂಕಲನಗಳಲ್ಲಿ ಒಂದೆಡೆ ಕಲೆಹಾಕಲಾಗಿದೆ. ಇವುಗಳಲ್ಲಿ ಗಂಭೀರ ರಚನೆಗಳೂ ಇವೆ. ಮನರಂಜನೆಯ ಉದ್ದೇಶದಿಂದ ರಚನೆಗೊಂಡ ಕತೆಗಳ ಸಂಖ್ಯೆಯೇ ದೊಡ್ಡದು. ಪತ್ರಿಕೆಗಳು ಹುಟ್ಟುಹಾಕಿದ ಇಂತಹ ಕತೆಗಳಿಗೆ ಅವುಗಳದೇ ಆದ ಓದುಗವರ್ಗವಿದೆ. ಸಂಶೋಧನೆ, ವಿಮರ್ಶೆಗಳನ್ನು ಅಪೇಕ್ಷಿಸದೆ ನಿಸ್ಪೃಹವಾಗಿ ಒಂದು ಹೊತ್ತಿನ ಸಂತೋಷಕ್ಕಾಗಿಯೇ ಓದುವ ಓದುಗರಿವರು. ಕಾವ್ಯ, ಕಾದಂಬರಿಗಳಿಗಿಂತಲೂ ಹೆಚ್ಚಿನ ಓದುಗ ವರ್ಗವುಳ್ಳ ಸಣ್ಣಕತೆ, ಸಾಹಿತ್ಯದ ಅತ್ಯಂತ ಜನಪ್ರಿಯ ಪ್ರಕಾರವೂ ಹೌದು. ಈ ಹಿನ್ನೆಲೆಯಲ್ಲಿ ಪ್ರಕಟಗೊಂಡ ಎಲ್ಲಾ ಸಣ್ಣಕತೆಗಳೂ ಗಮನಾರ್ಹವಾಗುತ್ತವೆ. ನಿರ್ದಿಷ್ಟ ಓದುಗರನ್ನು ತಲುಪುವ ಈ ಸಣ್ಣಕತೆಗಳು ಸಾಹಿತ್ಯದ ಗಂಭೀರ ಓದುಗರಿಗೆ ರುಚಿಸದೇ ಹೋಗಬಹುದು. ಆದರೆ ಸಾಹಿತ್ಯದ ಬೆಳವಣಿಗೆಯ ಇತಿಹಾಸದಲ್ಲಿ ಇವು ಪ್ರತ್ಯಕ್ಷವಲ್ಲದೇ ಹೋದರೂ ಪರೋಕ್ಷವಾಗಿ ಮುಖ್ಯ ಪಾತ್ರವಹಿಸುತ್ತವೆ. ಅವುಗಳಲ್ಲಿ ಎರಡು ಪ್ರಮುಖ ಪ್ರಕ್ರಿಯೆಗಳನ್ನು ಗುರುತಿಸಬಹುದು. ಒಂದು, ಸಾಹಿತ್ಯಾಸಕ್ತ ಓದುಗರ ಸೃಷ್ಟಿ. ಇನ್ನೊಂದು ಸಾಹಿತ್ಯವಲಯದ ಪ್ರಮುಖ ಸಣ್ಣಕತೆಗಳ ಹುಟ್ಟಿಗಾಗಿ ನಡೆಯುವ ಪ್ರಾಯೋಗಿಕ ರಚನೆಗಳು ಎಂಬ ನೆಲೆಯಿಂದಲೂ ಪ್ರಕಟಗೊಂಡ ಸಣ್ಣಕತೆಗಳು ಮುಖ್ಯವಾಗುತ್ತವೆ. ಈ ನೆಲೆಯಲ್ಲಿ ಈ ವರ್ಷ ಪ್ರಕಟವಾದ ಲಭ್ಯ ಸಂಕಲನಗಳ ಕೆಲವು ಸಣ್ಣಕತೆಗಳನ್ನು, ಅವುಗಳ ಒಲವು- ನಿಲುವುಗಳನ್ನು ಸಮೀಕ್ಷಿಸುವುದರ ಮೂಲಕ, ಈ ವರ್ಷದ ಕತೆಗಳ ಪ್ರಮುಖ ಕಾಳಜಿಗಳನ್ನು, ಇತಿಮಿತಿಗಳನ್ನು ಗುರುತಿಸಬಹುದು.

ಈಗಾಗಲೇ ನಾಲ್ಕು ಕಥಾಸಂಕಲನಗಳನ್ನು ಪ್ರಕಟಿಸಿರುವ ವೀರಭದ್ರ ಕನ್ನಡದ ಪ್ರಮುಖ ಕತೆಗಾರರಲ್ಲೊಬ್ಬರು. 'ಕನ್ನಡಿ ನೋಡಿದ ನಾಯಿ' ಇವರ ಐದನೆಯ ಕಥಾಸಂಕಲನ. ೧೯೮೧ ರಲ್ಲಿ ಪ್ರಜಾವಾಣಿ ದೀಪಾವಳಿ ವಿಶೇಷಾಂಕದಲ್ಲಿ ಪ್ರಥಮ ಬಹುಮಾನ ಪಡೆದ ಕತೆ 'ವ್ಯವಸ್ಥೆ'ಯೂ ಸೇರಿಕೊಂಡಂತೆ ಸಂಕಲನದಲ್ಲಿ ಹತ್ತು

ಕತೆಗಳಿವೆ. ಪ್ರಗತಿಪರ ಧೋರಣೆಗಳನ್ನು ನೂತನ ತಂತ್ರದಲ್ಲಿ ಅಳವಡಿಸಿಕೊಂಡಿರುವ ಇವರ ಕತೆಗಳು ಒಂದಕ್ಕಿಂತ ಇನ್ನೊಂದು ಹೊಸದು. ಬಂಡವಾಳಶಾಹಿ ಪ್ರವೃತ್ತಿಗಳನ್ನು, ವ್ಯವಸ್ಥೆಯಲ್ಲಿನ ಬೂಟಾಟಿಕೆಗಳನ್ನು ಇಲ್ಲಿನ ಅನೇಕ ಕತೆಗಳ ಮೂಲಕ ಅನಾವರಣಗೊಳಿಸಿದ್ದಾರೆ. ಚಿಕ್ಕ ಪುಟ್ಟ ವಾಕ್ಯಗಳಲ್ಲಿಯೇ ಕತೆಯ ಸನ್ನಿವೇಶವನ್ನು ಇವರು ಸೃಷ್ಟಿಸಬಲ್ಲರು. ವ್ಯಾಪಕವಾದ ಅನುಭವಗಳನ್ನು ಹಿಡಿದಿಡುವಲ್ಲಿ ಇಲ್ಲಿನ ಕತೆಗಳು ಯಶಸ್ವಿಯಾಗಿವೆ. 'ವ್ಯವಸ್ಥೆ', 'ಅವರಲ್ಲಿಲ್ಲದ್ದು' ಮೊದಲಾದ ಕತೆಗಳಿಗೆ ಈ ದೃಷ್ಟಿಯಿಂದಲೂ ಪ್ರಾಮುಖ್ಯತೆ ಇದೆ. ವಾಸ್ತವ ಚಿತ್ರಣಗಳ ಮೂಲಕ ವೈಚಾರಿಕವಾಗಿಯೂ ಗಟ್ಟಿಗೊಳಿಸುವ, ದರ್ಶನವೊಂದನ್ನು ನೀಡುವ ಚಾಣಾಕ್ಷತೆ ಇವರಿಗೆ ಸಿದ್ಧಿಸಿದೆ. 'ಕಾಣೆಯಾಗಿದ್ದಾರೆ', 'ಹಾವು ತಿಂದವರು ' ತನ್ನ ಕಥನ ತಂತ್ರಗಳಿಂದಾಗಿಯೇ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುತ್ತವೆ. ಬರವಣಿಗೆಯಲ್ಲಿನ ಸಂಕೀರ್ಣತೆಯಿಂದಾಗಿ ಇಲ್ಲಿನ ಎಲ್ಲಾ ಕತೆಗಳು ಓದುಗರಿಂದ ಸಂಯಮವನ್ನು ಅಪೇಕ್ಷಿಸುತ್ತವೆ.

'ವ್ಯವಸ್ಥೆ' ಕತೆಯ ಬಗ್ಗೆ ನಿರಂಜನರು ಹೇಳಿದ ಮಾತುಗಳನ್ನಿಲ್ಲಿ ಉಲ್ಲೇಖಿಸಬಹುದು. ''ವ್ಯವಸ್ಥೆ ಯಲ್ಲಿ ರಮ್ಯ ಕಥನವಿದೆ. ಸಮಾಜದ ಧನಾಢ್ಯರು ಐದನೆಯವನನ್ನು (ಜೋಕೆ, ಆರನೆಯ ಮೆಟ್ಟಲಿಲ್ಲ!) ಹರಿದು ತಿನ್ನುವ ಕ್ರೂರ ಚಿತ್ರಣವಿದೆ. (ಪ್ರಗತಿಶೀಲ ಪರಂಪರೆ) ನವ್ಯದ ಸಂಕೀರ್ಣ ಶೈಲಿ ಹದವಾಗಿ ಬೆರೆತು ಮೆರುಗು ನೀಡಿದೆ. ಮಹಾಭಾರತದ ದ್ಯೂತದ ಪ್ರಸ್ತಾಪ ಕತೆಯನ್ನು ದಟ್ಟಗೊಳಿಸಿದೆ. ಬಹುರೂಪೀ ವ್ಯವಸ್ಥೆಯ ಒಂದು ಕರಾಳಮುಖ ಕಂಡು ಓದುಗರು ಬೆಚ್ಚುವಂತೆ ಮಾಡುವ 'ಬಂಡಾಯ ಪ್ರವೃತ್ತಿ' ಸ್ಫುಟವಾಗಿದೆ.'' ಈ ಬಂಡಾಯ ಪ್ರವೃತ್ತಿ ಇಲ್ಲಿನ ಎಲ್ಲಾ ಕತೆಗಳಲ್ಲೂ ಓದುಗರನ್ನು ಬೆರಗುಗೊಳಿಸುವ ರೀತಿಯಲ್ಲಿ ವ್ಯಕ್ತವಾಗಿದೆ.

'ಮೃಗಯಾ' ಚದುರಂಗರ ಏಳುಕತೆಗಳ ಸಂಕಲನ. ಕನ್ನಡದ ಈ ಹಿರಿಯ ಕತೆಗಾರರು ಆಧುನಿಕ ಸಮಾಜದಲ್ಲಿ ಮಾನವೀಯತೆಗೆ ಒದಗಿದ ದುಸ್ಥಿತಿಯನ್ನು ಕುರಿತ ತಲ್ಲಣಗಳನ್ನು ಹಿಡಿದಿಟ್ಟಿದ್ದಾರೆ. ಇಲ್ಲಿನ ಕತೆಗಳು ಸಾಮಾಜಿಕ ಚೌಕಟ್ಟಿನಲ್ಲಿ ವಸ್ತುಸ್ಥಿತಿಗೆ ಸ್ಪಂದಿಸುತ್ತಿವೆ. ಸಮಸ್ಯೆಗಳು ಪರಿಹಾರದಲ್ಲಿ ಮುಕ್ತಾಯವಾಗದೆ ತಲ್ಲಣವಾಗಿಯೇ ಉಳಿಸಿಕೊಂಡ ಇಲ್ಲಿನ ಕತೆಗಳು ಓದುಗನನ್ನು ಚಿಂತನೆಗೆ ಗುರಿ ಮಾಡುತ್ತವೆ.

'ಮೃಗಯಾ' ಮತ್ತು 'ಕಲ್ಲಿನ ಕೊಳಲು' ಸಂಕಲನದ ಮುಖ್ಯ ಕತೆ. ಸೋಮ ಮತ್ತು ಜಿಂಕೆಯ ಆತ್ಮೀಯ ಬೆಸುಗೆ ಸಮಾಜದ ಮಾನವೀಯತೆಗೆ ದೊಡ್ಡ ಸವಾಲು. ಜಿಂಕೆಯನ್ನು ಗೌಡ ಕೊಂದು ತಿನ್ನುವುದು, ಸೇಡಿನ ನೆವದಲ್ಲಿ ಸೋಮ ಗೌಡನನ್ನು ಕೊಂದು ಗಲ್ಲಿಗೇರುವ ದುರಂತ ಕತೆ ಇಡೀ ನಮ್ಮ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಜಿಂಕೆ ಮಾನವೀಯತೆಗೆ ಸಂಕೇತವಾಗುತ್ತಾ ಅದನ್ನು ಬಲಿಗೊಟ್ಟು ಬೆಳೆಯುವ ದುಷ್ಟ ವ್ಯವಸ್ಥೆಯಲ್ಲಿ ಅಮಾಯಕರ ಬದುಕು ದುರ್ಭರವಾಗುವುದನ್ನು ಕತೆ ದಟ್ಟ ಅನುಭವವಾಗಿ ಮುಂದಿಡುತ್ತದೆ. ಸಮಾಜವನ್ನು ನಿಯಂತ್ರಿಸುವ ಮಂದಿ ಸಾಮಾನ್ಯ

ಜನರ ಮಾನವೀಯ ಗುಣಗಳನ್ನು ಮೆಟ್ಟಿ ಮೆರೆಯುವ ಹಂತಕ್ಕಿಳಿದಾಗ, ಮಾನವನ ಬದುಕು ಪಡೆಯಬಹುದಾದ ದುರಂತವನ್ನು ಈ ಕತೆ ಹಿಡಿದಿಟ್ಟಿದೆ. ಸಾಲದ ನೆವದಲ್ಲಿ ಸೋಮನ ಹೆಂಡತಿ ಪುಟ್ಟೇರಿಯ ದೇಹವನ್ನು ಬಯಸುವ, ಪ್ರೀತಿ ಪಾತ್ರವಾದ ಜಿಂಕೆಯನ್ನು ಕದ್ದೊಯ್ದು ತಿನ್ನುವ ಗೌಡ ವ್ಯವಸ್ಥೆಯ ದುಷ್ಟಶಕ್ತಿಯ ಪ್ರತಿನಿಧಿಯಾಗುತ್ತಾನೆ. ತನ್ನ ಆಪತ್ತಿಗೆ ಸಾಲ ನೀಡಿದ ಸೋಮನ ಹಣವನ್ನು ಜೈಲಿನಲ್ಲಿದ್ದಾಗಲೇ ತಂದು ತೀರಿಸಿ ಋಣಮುಕ್ತನಾಗುವ ಗಿರಿಯ ತನ್ನತನವನ್ನು ಉಳಿಸಿಕೊಳ್ಳಲಾರದ ಅಮಾಯಕರ ಪ್ರತಿನಿಧಿಯಾಗುತ್ತಾನೆ. ಜಿಂಕೆಯನ್ನು ಪ್ರೀತಿಸುವ ಮುಗ್ಧನೂ ಸಂದರ್ಭ ಒದಗಿದರೆ ಮಾನವೀಯತೆಯನ್ನು ಮೀರಿನಿಂತು ಹೇಗೆ ಸೇಡು ತೀರಿಸಿಕೊಳ್ಳುತ್ತಾನೆಂಬುದನ್ನು ಸೋಮನ ಪಾತ್ರದ ಮೂಲಕ ಚಿತ್ರಿಸಲಾಗಿದೆ.

'ಕಲ್ಲಿನ ಕೊಳಲು' ಕತೆಯ ಕಲ್ಲು ಸಮಾಜದ ಸಾಂಸ್ಕೃತಿಕ ಬದುಕಿನ ನಿಯಂತ್ರಣ ಶಕ್ತಿಯನ್ನು ಸಂಕೇತಿಸುತ್ತದೆ. ಅದನ್ನೇ ನಂಬಿ ಬದುಕುವ ಸಮಾಜ, ಅದರ ಮೇಲೆ ವ್ಯವಸ್ಥೆ ತನ್ನ ಕ್ರೂರಹಸ್ತವನ್ನು ಚಾಚಿದಾಗ ಆಗುವ ದುರಂತವನ್ನು ಕತೆ ಮುಂದಿಡುತ್ತದೆ. ಮೊಮ್ಮಗ ಮಲ್ಲುವಿನ ಕೊಳಲಗಾನವೇ ಕಲ್ಲಿನಿಂದ ಕೇಳಿಬರುತ್ತಿದೆ ಎಂದು ನಂಬಿ, ಅದನ್ನಾಲಿಸಿ ನೆಮ್ಮದಿ ಕಾಣುವ ಅಜ್ಜಯ್ಯ ಎರಡು ತಲೆಮಾರುಗಳನ್ನು ಕಂಡ ಹಿರಿಯ ಜೀವ. ನಾಗರಿಕ ಬದುಕಿನ ಸ್ಥಿತ್ಯಂತರದ ವಿಕೃತ ರೂಪವನ್ನು ಸೂಕ್ಷ್ಮವಾಗಿ ಅವಲೋಕಿಸುವ ಪರಂಪರೆಯ ಪ್ರತಿನಿಧಿ ಕೂಡ. ಸಮಾಜದ ನಂಬಿಕೆಯೊಂದರ ಮೇಲೆ ಆಧುನಿಕತೆಯ ಅತಿಕ್ರಮಣಕ್ಕೆ ಕತೆಗಾರರ ಪ್ರತಿಭಟನೆಯು ಸುಪ್ತವಾಗಿ ಪ್ರಕಟವಾಗಿದೆ.

'ಚಾಕೊಲೆಟ್ ಮಾಮ' ಪುಟ್ಟದಾದರೂ ಪರಿಣಾಮಕಾರಿಯಾದ ಚೊಕ್ಕ ಕತೆ. 'ಸ್ವಪ್ನ' ಕತೆಯ ಸಮಸ್ಯೆ ಗಂಭೀರವಾದುದಾದರೂ ಅದು ಜನಪ್ರಿಯತೆಯ ಹಾದಿ ತುಳಿದಿದೆ. ಚದುರಂಗರಿಗೆ ಕರಗತವಾದ ಕಥನ ಕಲೆಯಿಂದಾಗಿ ಎಲ್ಲಾ ಕತೆಗಳು ಓದುಗನ ಮೇಲೆ ಕನಿಷ್ಠ ಪ್ರಭಾವವನ್ನು ಉಂಟು ಮಾಡುತ್ತವೆ. ಗ್ರಾಮೀಣ ಬದುಕಿನ ಸುಖ-ಸಂತೋಷಗಳು, ನಾಗರಿಕ ಬದುಕಿನ ತಲ್ಲಣಗಳು, ಲೈಂಗಿಕ ಶೋಷಣೆಗಳೇ ಕತೆಗಳ ಕೇಂದ್ರ ಪ್ರಜ್ಞೆಯಾಗಿವೆ. ತಮ್ಮ ಹಿಂದಿನ ಕತೆಗಳಿಗಿಂತ ಭಿನ್ನವಾದುದನ್ನು, ಇವುಗಳಲ್ಲಿ ನಿರೀಕ್ಷಿಸುವಂತಿಲ್ಲ.

'ಶೂದ್ರದೀಕ್ಷೆ' ಸಂಕಲನದಲ್ಲಿ ಪರಂಜ್ಯೋತಿಯವರು ಬರೆದ ಹತ್ತು ಕತೆಗಳನ್ನು ಕ್ರೋಢೀಕರಿಸಲಾಗಿದೆ. ೧೯೭೭ ರಿಂದ ೧೯೯೦ ರ ಅವಧಿಯಲ್ಲಿ ಬರೆದು ವಿವಿಧ ಪತ್ರಿಕೆಗಳಲ್ಲಿ ಬೆಳಕು ಕಂಡ ಕತೆಗಳಿವು. ತ.ರಾ.ಸು. ಸುಧಾಕರ ಮೊದಲಾದವರ ಕತೆಗಳನ್ನು ನೆನಪಿಗೆ ತರುವ ಇಲ್ಲಿನ ಕತೆಗಳ ಒಲವು, ನಿಲುವುಗಳು, ಸಹ ಸಮಕಾಲೀನ ಬರಹಗಾರರಲ್ಲಿ ಪ್ರಕಟಗೊಂಡವುಗಳೇ ಆಗಿವೆ. ಆವರಣ, ಕಥಾಪಾತ್ರಗಳ ಹೆಸರುಗಳೇ ಸೂಚಿಸುವಂತೆ ತಮಿಳು ಜನರನ್ನು ಹಿನ್ನೆಲೆಯಾಗುಳ್ಳ ಕತೆಗಳಿವು. ಮಡಿವಂತ ಬ್ರಾಹ್ಮಣರ ಮತ್ತು ಆಧುನಿಕತೆಯ ಸಂಘರ್ಷ, ರಿಕ್ಷಾವಾಲಾರ ಬದುಕಿನ ಆಳನಿರಾಳಗಳು ಬಹುತೇಕ ಕತೆಗಳಲ್ಲಿ ದಾಖಲಾಗಿವೆ. ಇಲ್ಲಿನ ಪ್ರತಿಯೊಂದು ಕತೆಯ ಹಿಂದಿರುವ ಕತೆಗಾರರ ಸಾಮಾಜಿಕ ಎಚ್ಚರ ಮತ್ತು ಸಹಾನುಭೂತಿ ಓದುಗನ ಗಮನ

ಸೆಳೆಯುತ್ತವೆ. ಹಾಗೆಯೇ ಅಭಿವ್ಯಕ್ತಿಯ ಭಾಷೆಯಲ್ಲಿನ ನಿರರ್ಗಳತೆಯೂ ಮುಖ್ಯವಾಗಿ ಮನ ಸೆಳೆಯುತ್ತದೆ.

ಇಲ್ಲಿನ ಎಲ್ಲಾ ಕತೆಗಳನ್ನು ಗಮನಿಸಿದರೆ ಕತೆಗಾರರ ಪ್ರಗತಿಪರ ಚಿಂತನೆಗಳು ಮುಖ್ಯ ಕಾಳಜಿಯಾಗಿ ಬಂದಿದೆಯೆಂಬುದು ವೇದ್ಯವಾಗುತ್ತದೆ. ಪರಂಪರಾಗತ ನಡವಳಿಕೆಗಳ ಅರ್ಥಶೂನ್ಯತೆಯನ್ನು, ಜಾತಿಪ್ರಜ್ಞೆಯನ್ನು ಮೀರಿನಿಂತ ಮಾನವೀಯತೆಯೊಂದೇ ಬದುಕಿನ ಮೂಲ ತಳಹದಿ ಎಂಬುದನ್ನು ಇಲ್ಲಿನ ಕತೆಗಳಲ್ಲಿ ಪ್ರತಿಪಾದಿಸಲಾಗಿದೆ. ಇವರ ಕತೆಗಳ ಧ್ಯೇಯ, ಧೋರಣೆಗಳು, ಅಭಿವ್ಯಕ್ತಿ ವಿಧಾನಗಳು ಕನ್ನಡ ಕಥಾಸಾಹಿತ್ಯದ ಮುಖ್ಯ ಧಾರೆಯಲ್ಲೊಂದಾಗಿಯೇ ಪ್ರಕಟವಾಗಿವೆ.

'ಮುಖಗಳು' ಜಯಪ್ರಕಾಶ ಮಾವಿನಕುಳಿಯವರ ಎರಡನೆಯ ಕಥಾಸಂಕಲನ. ಇದರಲ್ಲಿ ಹದಿನಾಲ್ಕು ಕತೆಗಳಿವೆ. ಮಧ್ಯಮ ವರ್ಗದ ಕುಟುಂಬಗಳ ಸ್ಥಿತಿಗತಿಗಳನ್ನು, ಸಾಮಾಜಿಕ ವ್ಯವಸ್ಥೆಯ ಲೋಪದೋಷಗಳು ಅವುಗಳನ್ನು ನಿಯಂತ್ರಿಸುವುದನ್ನು ಇಲ್ಲಿನ ಕತೆಗಳಲ್ಲಿ ಜೀವಂತ ಪ್ರತೀಕಗಳ ಮೂಲಕ ಹಿಡಿದಿಟ್ಟದ್ದಾರೆ. ಕೋಮು ಗಲಭೆಗಳ ದುರಂತವನ್ನು ಅಂತರ್ಜಾತೀಯ ವಿವಾಹಗಳಿಂದಾಗಿ ಪರಂಪರೆಯೊಂದಿಗೆ ನಡೆಸಬೇಕಾದ ವೈಯಕ್ತಿಕ ಸಂಘರ್ಷಗಳನ್ನು ಅನೇಕ ಕತೆಗಳಲ್ಲಿ ಕಾಣಬಹುದು. ಪ್ರಗತಿಪರ ಚಿಂತನೆಗಳ ಮೂಲಕ ಬದುಕಿನ ಸಂಕ್ರಮಣ ಸ್ಥಿತಿಯನ್ನು ಹಿಡಿದಿಡುವ ಕತೆಗಾರರಿವರು. ಮಧ್ಯಮವರ್ಗದ ಭಾರತೀಯ ಮನಸ್ಸು ಆಧುನಿಕತೆಯತ್ತ ತನ್ನನ್ನು ತೆರೆದುಕೊಳ್ಳುವ ಮತ್ತು ಅದನ್ನು ಸ್ವೀಕರಿಸುವ ಧೈರ್ಯ ಮಾಡಿರುವುದನ್ನು ಇಲ್ಲಿನ ಕತೆಗಳಲ್ಲಿ ಕಾಣಬಹುದು. ಕತೆಗಳು ಸ್ತ್ರೀಪರ ಸಂವೇದನೆಯನ್ನು ಮುಖ್ಯವಾಗಿ ಪರಿಗಣಿಸಿವೆ. ವರ್ತಮಾನದ ವೈಚಾರಿಕ ಚಿಂತನೆಯ ಪ್ರಮುಖ ಭಾಗವಾಗಿದ್ದೂ ಇಲ್ಲಿನ ಕತೆಗಳಲ್ಲೂ ಅವು ಜೀವಂತವಾಗಿ ಮೈದಳೆದಿವೆ.

'ಅನುಗಾಲವು ಚಿಂತೆ ಜೀವಕೆ' ಇಲ್ಲಿ ದುಡಿಮೆಯ ಮೂಲಕ ಮಗನಿಗಾಗಿ ಕೂಡಿಟ್ಟ ಆಸ್ತಿಯನ್ನು ಮಗನೇ ಊರ ಪೋಕರಿಗಳ ಮಾತು ಕೇಳಿ ತಂದೆಗೆ ತಿರುಗಿ ಬೀಳುವ ಕತೆಯಿದೆ. ದುಡಿಯುವ ಹಿರಿಯ ತಲೆಮಾರು ಹಾಗೂ ಅವರಿವರ ಮಾತು ಕೇಳಿ ತನ್ನವರನ್ನು ಧಿಕ್ಕರಿಸುವ ಸೋಮಾರಿ ಕಿರಿಯ ತಲೆಮಾರುಗಳ ಸಂಘರ್ಷ ಇದರಲ್ಲಿದೆ. ಈ ಕತೆಯಲ್ಲಿ ಕತೆಗಾರರು ಮನುಷ್ಯ ಸಂಬಂಧದ ನಿಗೂಢತೆಯ ಅನ್ವೇಷಣೆಯಲ್ಲಿ ತೊಡಗಿದ್ದಾರೆ. ಕೌಟುಂಬಿಕ ವಿಘಟನೆಗಳಿಂದ ದುರಂತ ಅನುಭವಿಸುತ್ತಿರುವುದು ಶಿಕ್ಷಿತ ಜನಾಂಗವೇ ಎಂಬುದನ್ನು ಗುರುತಿಸುವುದರ ಮೂಲಕ, ಶಿಕ್ಷಣ ವ್ಯವಸ್ಥೆಯ ಅರ್ಥಹೀನತೆಯನ್ನು ಬೊಟ್ಟು ಮಾಡುತ್ತಾರೆ. ಸಂತೆಯೊಳಗೊಂದು ಮನೆಯ ಮಾಡಿ ಕತೆಯ ನಾಯಕ ಹಾಗೂ ಅವನ ಕ್ರಿಶ್ಚಿಯನ್ ಹೆಂಡತಿಯ ಬದುಕು ಆಧುನಿಕತೆಯ ಒಲವಿನಿಂದ ಹೊಸ ಜಗತ್ತನ್ನು ಸೃಷ್ಟಿಸುತ್ತದೆ. ಇಲ್ಲಿ ಪರಂಪರೆ ಮತ್ತು ಆಧುನಿಕತೆಯ ಸಂಘರ್ಷದ ಚಿತ್ರಣ ತೀವ್ರವಾಗಿದೆ. ಈ ಕತೆಯಲ್ಲದೆ 'ಸೋರುತಿಹುದು ಮನೆಯ ಮಾಳಿಗೆ' ಮೊದಲಾದ ಕತೆಗಳು 'ಸ್ತ್ರೀ ಸಂವೇದನೆಯ' ನೈತಿಕ ಪ್ರಜ್ಞೆಯಲ್ಲಿ ಬೆಳೆಯುತ್ತವೆ. 'ಗಾಂಧಾರಿ ಕನ್ನಡಿ ನೋಡಿದಳು' ಮಾವಿನಕುಳಿಯವರ ಸೃಜನಶೀಲತೆಯ

ವಿವರಗಳು ಸಾಂಕೇತಿಕವಾಗುತ್ತ ಸಾಹಿತ್ಯಮಾಧ್ಯಮದ ಮೇಲೆ ಈ ಹೊಸ ಲೇಖಕರು ಸಂಪಾದಿಸಿಕೊಳ್ಳುತ್ತಿರುವ ಪ್ರಭುತ್ವಕ್ಕೆ ಸಾಕ್ಷಿಯಾಗಿದೆ. ಇಂಥ ಬರವಣಿಗೆಯನ್ನು ಕೇವಲ ಡಾಕ್ಯುಮೆಂಟರಿ ಎಂದು ಕರೆಯುವುದು ಸರಿಯಲ್ಲ.

'ಹೊಲಗೇರಿಯ ರಾಜಕುಮಾರ' ಇವರಡಕ್ಕಿಂತ ಭಿನ್ನವಾದ ಭಿತ್ತಿಯನ್ನು ಪಡೆದಿದೆ. ಅದು ಇತಿಹಾಸ, ವರ್ತಮಾನಗಳನ್ನು ಮಾತ್ರವಲ್ಲದೆ ಪಾತ್ರಗಳ ಮನಶ್ಶಾಸ್ತ್ರೀಯ ಆಯಾಮಗಳನ್ನೂ ಗಣನೆಗೆ ತಂದುಕೊಳ್ಳುತ್ತದೆ. ದಲಿತರ ನಡುವೆ ಬೆಳೆದು ವಿದ್ಯಾಭ್ಯಾಸ ಪಡೆದು, ಮದುವೆಯಾಗಿ, ಸಂಸಾರ ನಡೆಸುತ್ತಿರುವ ಸರ್ಕಾರೀ ಉದ್ಯೋಗಿಯೊಬ್ಬ, ಇದ್ದಕ್ಕಿದ್ದಂತೆ ತಾನು ರಾಜವಂಶಕ್ಕೆ ಸೇರಿದವನೆಂಬ ಸತ್ಯವನ್ನು ತಿಳಿದುಕೊಳ್ಳುತ್ತಾನೆ. ಅನಂತರ ದಲಿತತ್ವದ ಬೇಲಿಯನ್ನು ದಾಟಿ ಅಪವರ್ಗೀಕರಣ (de classification)ಗೊಳ್ಳಲು ಅವನು ಮಾಡುವ ಪ್ರಯತ್ನಗಳು ಸಾಮಾಜಿಕವಾದ ಸಮ್ಮತಿಯನ್ನು ಪಡೆಯದಿರುವುದು ಯಾರ ಗ್ರಹಿಕೆಗೂ ಸಿಗಬಹುದಾದ ಸತ್ಯ. ಆದರೆ ತಾನು ಮೇಲುಜಾತಿಗೆ ಸೇರಿದವನೆಂಬ 'ತಿಳುವಳಿಕೆ'ಯು ಅವನ ಸ್ವಭಾವದಲ್ಲಿಯೇ ತರುವ ಬಿಗುವು- ಬಿಸಿಪುಗಳನ್ನು ಹಿಡಿದಿರುವುದರಲ್ಲಿ ಈ ಕಾದಂಬರಿ ಅನನ್ಯವಾಗಿದೆ. ಹೆಂಡತಿ -ಮಕ್ಕಳೂ ಸೇರಿದಂತೆ ತನ್ನ ಆತ್ಮೀಯರ ವಲಯವನ್ನೇ ಪರಕೀಯರಂತೆ 'ಕೀಳು' ಎನ್ನುವಂತೆ ನೋಡತೊಡಗುವ ವರ್ತನೆ ಮನುಷ್ಯ ಸ್ವಭಾವದ ಆಳದಲ್ಲಿಯೇ ಅಡಗಿರಬಹುದಾದ ಫ್ಯಾಸಿಸ್ಟ್ ನೆಲೆಗಳನ್ನು ಬೆಳಕಿಗೆ ತರುತ್ತದೆ. ನಾಯಕನು ದಲಿತತ್ವದ ಕಡೆಗೆ ಹೋರಾಟದ ಕಡೆಗೆ ಮರುಪ್ರಯಾಣ ನಡೆಸಿ, ಚಳುವಳಿಯ ಮುಂಚೂಣಿಗೆ ಸೇರಿ ಕೊಳ್ಳುತ್ತಾನೆ ಎನ್ನುವುದು ಕಾದಂಬರಿಯ ಫಲಶ್ರುತಿ. ಇದು ಆಶಾಚಿಂತನವೇ ಇದ್ದೀತು. ಆದರೆ ಜೀವನದ ಅನಂತ ಸಾಧ್ಯತೆಗಳಲ್ಲಿ ತನಗೆ ಸೂಕ್ತವೆನಿಸಿದ್ದನ್ನು ಆರಿಸಿಕೊಳ್ಳುವುದು ಸೃಜನಶೀಲ ಸ್ವಾತಂತ್ರ್ಯದ ಭಾಗವೇ ಅಲ್ಲವೇ? 'ಹೊಲಗೇರಿಯ ರಾಜಕುಮಾರ', ಲಕ್ಷ್ಮಣ ಗಾಯಕವಾಡರ 'ಉಚಲ್ಯಾ'ದ ಹಾಗೆ ಮಹಾರಾಷ್ಟ್ರದಲ್ಲಿ ಪ್ರಬಲವಾಗಿ ಬೆಳೆದಿರುವ ದಲಿತರ ಹೋರಾಟದ ನೆಲೆಗಳನ್ನು ಬಳಸಿಕೊಳ್ಳುತ್ತದೆ. ಕರ್ನಾಟಕದಲ್ಲಿ ಸಂಭವಿಸಬಹುದಾದ್ದರ ಮುನ್ಸೂಚನೆಯಂತಿರುವ ಇಲ್ಲಿನ ವಿವರಗಳು ಮಹತ್ವದ ಒಳನೋಟಗಳನ್ನು ನೀಡುತ್ತವೆ. ವೈಯಕ್ತಿಕ ಪ್ರತಿಭಟನೆಗೆ ಸಾಮಾನ್ಯವಾಗಿ ಇಲ್ಲದ ಬೆನ್ನೆಲುಬುಗಳು ಸುಸಂಘಟಿತವಾದ ಹೋರಾಟಗಳಿಗೆ ಇರುತ್ತದೆ. ಈ ಕಾದಂಬರಿಯು ರೂಕ್ಷವಾದರೂ, ಸಂಕ್ಷಿಪ್ತವಾದರೂ ಅಂಥ ಸಾಧ್ಯತೆಗಳನ್ನು ಸೂಚಿಸುವುದರಿಂದ ಮುಖ್ಯವಾಗುತ್ತದೆ.

ಈ ವರ್ಷದ ಅತ್ಯುತ್ತಮ ಆತ್ಮಕಥೆಯಾದ ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಕನ್ನಡ ವಾರ್ಷಿಕದ ಬೇರೊಂದು ಕಡೆ ವಿಮರ್ಶಿತವಾಗಿದೆ. ಆದರೆ ಇದುವರೆಗೆ ಚರ್ಚಿಸಿದ ಕಾದಂಬರಿಗಳ ಜೊತೆಗೆ ಅದನ್ನು ಓದಬೇಕೆಂಬುದು ನನ್ನ ಅಭಿಪ್ರಾಯ. ದೇವನೂರ ಮಹಾದೇವರು 'ಕುಸುಮಬಾಲೆ' ಯಲ್ಲಿ ಕಂಡುಕೊಂಡ ರಾಚನಿಕ ನೆಲೆಗಳಿಗಿಂತ ಭಿನ್ನವಾದ ವಾಸ್ತವತಾವಾದಿ ಮಂಡನೆಯ ಮಾರ್ಗವನ್ನೇ ಕನ್ನಡ ದಲಿತ ಕಥಾಸಾಹಿತ್ಯ ಹಿಡಿಯುತ್ತದೆಯೇ ಎನ್ನುವುದು ಈ ಕಾದಂಬರಿಗಳಿಗೆ ಸಿಗುವ

ಪ್ರಸರಣ ಮತ್ತು ಯಶಸ್ಸುಗಳಿಂದ ತೀರ್ಮಾನವಾಗಬಹುದು. ಆದರೆ ಈ ಮೂರು ಕಾದಂಬರಿಗಳು ಕನ್ನಡಕ್ಕೆ ಹೊಸದನ್ನು ಸೇರಿಸಿವೆಯೆಂಬುದು ಖಂಡಿತ. ಕೇವಲ ಪ್ರಮಾಣದಲ್ಲಿ ಅಲ್ಲ, ಗುಣದಲ್ಲಿ ಕೂಡ.

ಕುಂದರನಾಡು ಪಾಟೀಲರ 'ಉಲ್ಲಂಘನೆ' ಕಾದಂಬರಿಯನ್ನು ಇನ್ನು ಮುಂದೆ ಪರಿಶೀಲಿಸಬಹುದು. ಈಗಾಗಲೇ ಹೇಳಿದಂತೆ ಇದು ಇತಿಹಾಸ ಮತ್ತು ವರ್ತಮಾನಗಳ ದಾಖಲೀಕರಣದ ಹಿನ್ನೆಲೆಯಲ್ಲಿ ಕಾಲ್ಪನಿಕ ಕಥೆಯೊಂದನ್ನು ಪೋಣಿಸುವ ಪ್ರಯತ್ನ. ಈ ರೀತಿಯ ಪ್ರಯತ್ನದಲ್ಲಿ ಹಲವು ರಿಸ್ಕ್‌ಗಳಿವೆ. ಕಾದಂಬರಿಕಾರನ ವೈಚಾರಿಕ ಧೋರಣೆಗಳಿಗೂ ಕೃತಿಯ ಸೃಜನಶೀಲ ಸಾಧ್ಯತೆಗಳಿಗೂ ನಡುವೆ ಬಿಕ್ಕಟ್ಟು ಏರ್ಪಡುತ್ತದೆ ಸತ್ಯವಾದ ಸಂಗತಿಗಳ ಆಯ್ಕೆ ಹಾಗೂ 'ಬಿಡುವಿಕೆ'ಗಳು ಕೃತಿಯ ಸ್ವರೂಪವನ್ನು ತೀರ್ಮಾನಿಸುತ್ತದೆ.

ಕನ್ನಡಿಗರು ಮತ್ತು ಮರಾಠಿಗರ ನಡುವೆ ಬೆಳಗಾವಿಯಲ್ಲಿ ಏರ್ಪಟ್ಟಿರುವ ಸಮಸ್ಯೆಯು ರಾಜಕಾರಣಿಗಳ ಸೃಷ್ಟಿಯೇ ವಿನಾ ಅವೆರಡು ಸಮುದಾಯಗಳ ಆಂತರಿಕ ಪ್ರೇರಣೆಯಿಂದ ಮೂಡಿ ಬಂದುದಲ್ಲ ಎನ್ನುವುದು ಕೃತಿಯ ಮೂಲ ನೆಲೆಗಟ್ಟು. ಸಮುದಾಯಗಳ ಮೈತ್ರಿ ಹಾಗೂ ವಿಶಿಷ್ಟತೆಗಳನ್ನು ತೋರಿಸಿರುವ ಹಲವು ಸನ್ನಿವೇಶಗಳು ಕೃತಿಯಲ್ಲಿವೆ. ಪಕ್ಷಪಾತದ ಆಕ್ಷೇಪಣೆ ಮಾಡುವಂತಿಲ್ಲ. ಆದರೆ ಕಲ್ಪನೆಯನ್ನು ಆಧರಿಸಿದ ಇತಿಹಾಸದ ಪುನಾರಚನೆ ವಿವಾದಗಳಿಗೆ ಕಾರಣವಾಗಬಹುದು. ಉದಾಹರಣೆಗೆ ಇಂದಿರಾಗಾಂಧಿ, ನಿಜಲಿಂಗಪ್ಪ, ವೈ. ಬಿ. ಚವಾಣ್, ಅತುಲ್ಯಘೋಷ, ಕಾಮರಾಜ್ ಮುಂತಾದ ನಾಯಕರು ಒಟ್ಟುಗೂಡಿ ಮಹಾಜನ್ ಆಯೋಗದ ನೇಮಕಾತಿ ಮಾಡುವ ಹುನ್ನಾರವನ್ನು ಹೆಸರಿಸಬಹುದು. ಕೃತಿಯು ನಂಬಲರ್ಹವೆನಿಸಿದರೂ ಅತಿಸರಳೀಕರಣವಾಯಿತೇನೋ ಎಂಬ ಅನುಮಾನಕ್ಕೆ ಅವಕಾಶ ಉಳಿಯುತ್ತದೆ.

ಗಡಿಸಮಸ್ಯೆಯ ಹಿನ್ನೆಲೆಯೊಂದಿಗೆ ಬೆರೆತುಕೊಂಡಿರುವ ನಾಯಕನ ಜೀವಂತ ವೃತ್ತಾಂತವು ತನ್ನದೇ ಹಾದಿ ಹಿಡಿಯುತ್ತದೆ. ಅವನ ವಿದ್ಯಾಭ್ಯಾಸ, ಪ್ರಣಯಪ್ರಸಂಗಗಳು ಚಳುವಳಿಯೊಂದಿಗೆ ಅವನಿಗೆ ಬಂದ ಸಂಪರ್ಕ ಮುಂತಾದವು ತಮ್ಮಷ್ಟಕ್ಕೆ ತಾವು ರೋಚಕವೆನಿಸಿದರೂ ಕೃತಿಯ ಆಶಯದೊಂದಿಗೆ ಸಂಯೋಜಿತವಾಗುವುದಿಲ್ಲ. ಬೆಳಗಾವಿಯ ಸಮಸ್ಯೆಯ ಕಥನದ ಕೋಟನ್ನು ತೂಗುಹಾಕಲು ಬಳಸುವ ಮೊಳೆಯಂತೆ ನಾಯಕನ ಆತ್ಮವೃತ್ತಾಂತವು ಬಳಕೆಯಾಗಿದೆ.

ಈ ವರ್ಷ ಮಹಿಳೆಯರು ಬರೆದ ಮೂರು ಕಾದಂಬರಿಗಳು ವಿಶೇಷ ಪರಿಶೀಲನೆಗೆ ಅರ್ಹವಾಗಿವೆ. ಸಾರಾ ಅಬೂಬಕರ್ ಅವರ 'ಸುಳಿಯಲ್ಲಿ ಸಿಕ್ಕವರು'. ಸುನಂದಾ ಬೆಳಗಾಂವಕರ್ ಅವರ 'ಝುವಾದಿ' ಮತ್ತು ತಾರಾಭಟ್ ಅವರ 'ಅವ್ಯಕ್ತ'ಗಳು ಬೇರೆ ಬೇರೆ ಕಾರಣಗಳಿಗಾಗಿ ಮುಖ್ಯವಾಗುತ್ತವೆ.

'ಅವ್ಯಕ್ತ' ಆಧುನಿಕ ಮಹಿಳಾಲೋಕದ ವಿಭಿನ್ನ ನೆಲೆಗಳ ನಿರ್ಭಾವುಕ ಪರಿಶೀಲನೆಗೆ ಮೀಸಲಾಗಿದೆ ಭಾವನೆಗಳ ಜಗತ್ತು ಹಾಗೂ ವಾಣಿಜ್ಯ ವ್ಯವಹಾರ ಜಗತ್ತುಗಳ ಸಂಘರ್ಷವನ್ನು ಈಗಾಗಲೇ 'ಶಿಕಾರಿ', 'ಬಂಡಾಯ' 'ಉತ್ತರಾಯಣ' ಗಳಂತಹ ಕಾದಂಬರಿಗಳು ಹಿಡಿದಿಟ್ಟಿವೆ. ಆದರೆ 'ಅವ್ಯಕ್ತ' ಅದೇ ಜಗತ್ತನ್ನು ಹೆಣ್ಣಿನ ದೃಷ್ಟಿಕೋನದಿಂದ ನೋಡುತ್ತದೆ. ಅಮೆರಿಕನ್ ಆಗಿ ಹಾಗೂ ಗಂಡಸಾಗಿ ತನಗೆ ಅಧಿಕೃತವಾಗದಿರಬಹುದಾದ ಜೋಫ್ರೆ ಕ್ಲಾರ್ಕನ ನೆಲೆಯಿಂದ ಸನ್ನಿವೇಶವನ್ನು ಹಿಡಿಯಲು ಯತ್ನಿಸುವುದರಲ್ಲಿಯೇ ಲೇಖಕಿ ರಿಸ್ಕ್ ತೆಗೆದುಕೊಳ್ಳುತ್ತಾರೆ. ಆದರೆ ಅಯಶಸ್ವಿಯಾಗುವುದಿಲ್ಲ. ಏಕೆಂದರೆ ಜೋಫ್ರೆಯತ್ತ ನೋಡುವ ಹಾಗೂ ಅವನ ಮೂಲಕ ನೋಡುವ ಬಗೆಗಳನ್ನು ಒಟ್ಟಿಗೆ ಬಳಸಿಕೊಳ್ಳುವುದರ ಮೂಲಕ ಸಮತೋಲನ ಸಾಧಿತವಾಗುತ್ತದೆ. ಜೋಫ್ರೆ ಕಾದಂಬರಿಯಲ್ಲಿ ಏಕೆ ಅಗತ್ಯವೆಂದರೆ ಅವನಿಗೆ ನಿಕಟವಾದ ಸಂಸ್ಕೃತಿ ಲೋಕದಲ್ಲಿ ಹೆಣ್ಣಿಗಿರುವ ಸವಲತ್ತುಗಳ ಅರಿವು ಅವನಿಗಿದೆ. ಆದ್ದರಿಂದಲೇ ಭಾರತೀಯ ಪುರುಷರಿಗೆ ಸಹಜವಾಗಿಯೇ ಬರುವ 'ಲಿಂಗದರ್ಪ' ಅವನಿಗಿಲ್ಲ. ಹಾಗೆಯೇ ಹೆಣ್ಣಿನಲ್ಲಿ ಲೈಂಗಿಕವಲ್ಲದ ಸೃಜನಶೀಲತೆಯನ್ನು ಗುರುತಿಸುವುದು ಅವನಿಗೆ ಸಾಧ್ಯ. ಆದರೆ ಅವನು ಕೂಡ ಅದಿತಿಗೆ ಮಾರ್ಗದರ್ಶನ ನೀಡತೊಡಗಿದಾಗ ತನ್ನ ವಿಶ್ವಸನೀಯತೆಯನ್ನು ಕಳೆದುಕೊಳ್ಳುತ್ತಾನೆ. ಕಾದಂಬರಿಯ ರೂಪಕವನ್ನು ಬಳಸುವುದಾದರೆ ನೋವರಿಯದಂತೆ ರಕ್ತ ಹೀರುವ ಇಂಬಳವಾಗುತ್ತಾನೆ.

ಕಾದಂಬರಿಯಲ್ಲಿ ಬರುವ ಇತರ ಹಲವು ಹೆಣ್ಣುಗಳ 'ಅಸಹಜ' ಸ್ಥಿತಿಗೆ ಕಾರಣವನ್ನು ತಮ್ಮ ನಿಯಂತ್ರಣದಲ್ಲಿರದ ಪರಿಸರಕ್ಕೆ ಅವರು ತೋರಿಸುವ ಪ್ರತಿಕ್ರಿಯೆಯ ವಿಭಿನ್ನತೆಯಲ್ಲಿ ಹುಡುಕಲಾಗಿದೆ. 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆಯ ಪ್ರತಿಕ್ರಿಯೆ ಹೇಗೆ ಕ್ರಾಂತಿಕಾರಕವಾದರೂ ಆತ್ಮಘಾತಕವೂ, ಹಾಗೆಯೇ ಇಲ್ಲಿನ ಹೆಣ್ಣುಗಳೂ ವಿನಾಶದ ಸಾಧ್ಯತೆಗಳನ್ನು ಮಾತ್ರ ಪಡೆದಿದ್ದಾರೆ. ಇದು ಸ್ತ್ರೀ ಪ್ರಜ್ಞೆಯ ವಿಕಸನದ ಸದ್ಯದ ಸ್ಥಿತಿಯಲ್ಲಿ ಮಾತ್ರ ಅನಿವಾರ್ಯ. ಅದಿತಿ, ರೋಜಿಯರಿಗೆ ತೆರೆಯದ ಬಾಗಿಲುಗಳು ಮುಂದೆ ಯಾರಿಗೋ ತೆರೆಯಬಹುದೆನ್ನುವ ಸಾಧ್ಯತೆ ಮಾತ್ರ ಕಾದಂಬರಿಯ ಅಂತ್ಯದ ಗಾಢವಿಷಾದಕ್ಕೆ ಆಂಟಿಡೋಟ್ ಆಗಿದೆ. ಫೆವಿಕಾಲ್‌ಗೆ ಬಿದ್ದ ಹಲ್ಲಿಯ ರೂಪಕ ಕಾದಂಬರಿಯ ಸ್ತ್ರೀ ಪಾತ್ರಗಳಿಗೆ ಸೂಕ್ತವೆನಿಸಿದರೂ ಇಂಥದೊಂದು ಸೃಜನಶೀಲ ಅಭಿವ್ಯಕ್ತಿಯನ್ನು ಸಾಧಿಸಿರುವ ಲೇಖಕರಿಗೆ ಉಚಿತವಾಗುವುದಿಲ್ಲ ಎಂದರೆ 'ಅವ್ಯಕ್ತ' ಕಾದಂಬರಿಯ ರಚನೆಯೇ ಹೆಣ್ಣನ್ನು ಆವರಿಸಿರುವ ಹಲವು ಭ್ರಮೆಗಳ ಬಲೂನುಗಳಿಗೆ ವಾಸ್ತವದ ಸೂಜಿ ಚುಚ್ಚುವುದರ ಮೂಲಕ ಸಿಗ್ನಿಫಿಕೆಂಟ್ ಆಗುತ್ತದೆ.

ಸಾರಾ ಅಬೂಬಕರ್ ಅವರ ' ಸುಳಿಯಲ್ಲಿ ಸಿಕ್ಕವರು', ಅವರ ಇತರ ಕೃತಿಗಳ ಹಾಗೆ ಒಂದು ಹೆಣ್ಣಿನ ಬವಣೆಗೆ ಸೀಮಿತವಾಗಿಲ್ಲ. ಶ್ರೀಮಂತಿಕೆ ಮತ್ತು ಬಡತನಗಳ ಚಲನಶೀಲತೆಯ ಫಲವಾಗಿ ಮನುಷ್ಯ ಸಂಬಂಧಗಳಲ್ಲಿ ಆಗುವ ಬದಲಾವಣೆಯನ್ನು ಅವರು ಶೋಧಿಸುತ್ತಿದ್ದಾರೆ. ಅಷ್ಟೇ ಅಲ್ಲ, ಶ್ರೀಮಂತಿಕೆಯನ್ನು ಅಥವಾ ಬಡತನದ ಬವಣೆಯಿಂದ ಬಿಡುಗಡೆಯನ್ನು ಪಡೆಯಲು ಅನುಸರಿಸಬೇಕಾಗುವ 'ಮಾರ್ಗ'ದ

ನೈತಿಕತೆಯ ಪ್ರಶ್ನೆಯನ್ನು ಅವರು ಮುಖ್ಯವಾಗಿ ತಿಳಿದಿದ್ದಾರೆ. ಕಾದಂಬರಿಯ ನಾಯಕ ಬಡವನಾಗಿ ಅನುಭವಿಸಿದ ಕಷ್ಟಗಳು ಅವನ ಸ್ವಭಾವದ ವೈಭವೀಕರಣಕ್ಕೆ ನೆಪವಾಗುವುದಿಲ್ಲ. ಬಡವನಾದಾಗ ಹಾಗೂ ಅನಂತರ ಅವನು ಸೌಜನ್ಯ - ಕೃತಜ್ಞತೆಗಳಂತಹ ಕೆಲವು ಮೌಲ್ಯಗಳಿಗೆ ಮಾತ್ರ ಕಟ್ಟು ಬೀಳುತ್ತಾನೆ. ಉಳಿದಂತೆ ಅವನು ಉಪ್ಪುಹುಳಿ ತಿನ್ನುವ ಮನುಷ್ಯ. ಬದಲಾಗಿ ಅವನನ್ನು 'ಶೋಷಣೆ' ಮಾಡುತ್ತಿದ್ದ ಮನೆಯ ಹೆಣ್ಣುಮಕ್ಕಳಲ್ಲಿ ಮಾನವತೆಯ ಸೆಲೆಯನ್ನು ಜೀವಂತವಿಡಲಾಗಿದೆ. ಆದರೆ ನಾಯಕನ ಪತ್ನಿ ಮತ್ತು ತಾಯಿಯರಲ್ಲಿಯೇ ಮೂಡಿಬರುವ ದರ್ಪವು ನಿಷ್ಠುರವಾಗಿ ಚಿತ್ರಿತವಾಗಿದೆ. ಹೀಗೆ ಪಾತ್ರಗಳ ವರ್ಗ -ವರ್ಣ ಹಿನ್ನೆಲೆಯನ್ನು ಆಧರಿಸಿದ ಕಪ್ಪು - ಬಿಳುಪು ವರ್ಗೀಕರಣದಲ್ಲಿ ತೊಡಗದೆ, ಮನುಷ್ಯ ಸ್ವಭಾವದ ಸಂಕೀರ್ಣ ಗ್ರಹಿಕೆಯನ್ನು ಪಡೆದಿರುವುದು ಸಾರಾ ಅವರ ಈ ಕಾದಂಬರಿಯ ಹಾಗೂ ಇತರ ಮುಖ್ಯ ಕೃತಿಗಳ ಹೆಚ್ಚುಗಾರಿಕೆ. ಇದನ್ನು ಸಾಧಿಸುವಾಗ ಅವರು ಎಲ್ಲಿಯೂ ಬಂಡಾಯ ಮೌಲ್ಯಗಳನ್ನು ತ್ಯಜಿಸುವ ರಿಯಾಯತಿಯನ್ನು ತೋರಿಸುವುದಿಲ್ಲ. ಕಾದಂಬರಿಗಳ ಸರಣಿಯೊಂದರ ಮೊದಲಭಾಗವಾದ ಈ ಕೃತಿಯು ಸ್ವಯಂಪೂರ್ಣವಾಗಿದೆ.

ಕಾದಂಬರಿಯ ವಿವರಗಳಲ್ಲಿ ತೋರಿಸುವ ಪ್ರಮಾಣದ ಪ್ರಾದೇಶಿಕತೆಯನ್ನು ಅದರ ಭಾಷಿಕ ನೆಲೆಗಳಲ್ಲಿ ಸಾರಾ ಅವರು ತೋರಿಸುವುದಿಲ್ಲ. 'ಚಂದ್ರಗಿರಿಯ ತೀರದಲ್ಲಿ', 'ಸಹನಾ' ಮುಂತಾದ ಕಾದಂಬರಿಗಳ ನಾಯಕಿಯರ ಹಾಗೆ ಲೇಖಕಿಯ ಸಂಪೂರ್ಣ ಭಾವಕೋಶವನ್ನು ಸೂರೆಗೊಂಡಿರುವ ಪಾತ್ರಗಳು ಇಲ್ಲಿ ಇಲ್ಲ. ಆದರೆ ಇವೆಲ್ಲವೂ ಸಾರಾರವರು ಅನಿವಾರ್ಯವಾಗಿಯೇ ನಡೆಯಬೇಕಾದ ಹಾದಿಯ ಹೆಜ್ಜೆಗಳು. ಸ್ತ್ರೀಲೋಕ, ಸ್ವಂತ ಅನುಭವ ಲೋಕ, ತನಗೆ ಪರಿಚಿತವಲ್ಲದ ಪುರುಷ ಲೋಕದ ಹೀಗೆಯೇ ಎಲ್ಲ ಜಗತ್ತುಗಳ ಹೃದಯವನ್ನು ಒಳಹೋಗುವ ಕಲ್ಪಕತೆಯನ್ನು ಬಳಸಿಕೊಳ್ಳುವುದು ಸೃಜನಶೀಲತೆಯ ಅನಿವಾರ್ಯ ಲಕ್ಷಣ. 'ಸುಳಿಯಲ್ಲಿ ಸಿಕ್ಕವರು' ಅಂಥ ಶಕ್ತಿಯನ್ನು ಸಾರಾರವರು ಸಾಧಿಸಿಕೊಳ್ಳ ತೊಡಗಿರುವುದಕ್ಕೆ ಸಾಕ್ಷಿ. ಚಂದ್ರಗಿರಿಯ ತೀರದಲ್ಲಿ 'ಕಾದಂಬರಿಯ ಅಪಾರ ಯಶಸ್ಸಿನ ನಂತರ ಬಂದ ವಜ್ರಗಳು, 'ತಳ ಒಡೆದ ದೋಣಿಯಲ್ಲಿ', 'ಸಹನಾ' ಮುಂತಾದ ಕೃತಿಗಳು ಒಂದಲ್ಲ ಒಂದು ರೀತಿಯಲ್ಲಿ ಹೊಸದನ್ನು ಮೈಗೂಡಿಸಿಕೊಂಡ ಪ್ರಯತ್ನಗಳು. ಮೊದಲ ಕಾದಂಬರಿಗೆ ದೊರಕಿದ ಕಲಾತ್ಮಕ ಯಶಸ್ಸು ನಂತರದವುಗಳಿಗೆ ಸಿಕ್ಕದಿರಬಹುದು. ಹಾಗೆಂದು ಅಂಥ ಪ್ರಯತ್ನಗಳ ಮೌಲಿಕತೆಯನ್ನು ಅಲ್ಲಗಳೆಯುವುದು ಸೂಕ್ತವೆನಿಸುವುದಿಲ್ಲ. ವರ್ತಮಾನದ ಚೌಕಟ್ಟಿನಲ್ಲಿ ಇತಿಹಾಸವನ್ನು ಧ್ವನಿಸುವ ಅವರ ಕೃತಿಗಳು, ಸಮುದಾಯದ ಇತಿಹಾಸವನ್ನೇ ಪ್ರಧಾನಭಿತ್ತಿಯಾಗಿಸಿಕೊಂಡು ಬರೆಯಹೊರಟಾಗ ಎದುರಾಗುವ ಸವಾಲುಗಳು ಅವರ ಸೃಜನಶೀಲತೆಯನ್ನು ಹೊಸ ಎತ್ತರಗಳಿಗೆ ಕರೆದೊಯ್ಯಬಹುದು. ಈ ಹಿನ್ನೆಲೆಯಲ್ಲಿ 'ಸುಳಿಯಲ್ಲಿ ಸಿಕ್ಕವರು' ಕಾದಂಬರಿಯ ಬರಲಿರುವ ಭಾಗಗಳನ್ನು ಕುತೂಹಲದಿಂದ ಎದುರುನೋಡಬಹುದು.

'ಕಜ್ಜಾಯ' ಎಂಬ ಪ್ರಬಂಧ ಸಂಕಲನ ಹಾಗೂ 'ನಾಸೂ' ಕಾದಂಬರಿಗಳ ನಂತರ ಸುನಂದಾ ಬೆಳಿಗಾಂವಕರ ಅವರು 'ಝುವಾದಿ' ಯನ್ನು ಬರೆದಿದ್ದಾರೆ 'ಝುವಾದಿ' ಎಂದರೆ ಸ್ವಹೀಲಿ ಭಾಷೆಯಲ್ಲಿ ಕಾಣಿಕೆ ಎಂದು ಅರ್ಥ.

ಕೌಟುಂಬಿಕ ನೆಲೆಯಲ್ಲಿನ ಮನುಷ್ಯ ಸಂಬಂಧಗಳಲ್ಲಿ ಸಾಕ್ಷಾತ್ಕಾರವಾಗುವ ಸತ್ಯಗಳ ಹುಡುಕಾಟ ಕನ್ನಡ ಕಾದಂಬರಿಗಳಲ್ಲಿ ಹೊಸದೇನೂ ಅಲ್ಲದಿದ್ದರೂ ಅದು ಗಂಭೀರವಾದ ಆಯಾಮಗಳನ್ನು ಪಡೆದುದು ಅಪರೂಪ. ಎಂದರೆ ನಾನು ಪ್ರಸ್ತಾಪಿಸುತ್ತಿರುವುದು ಕುಟುಂಬದ ಕಥೆಯಾಚೆಗಿನ ಜಗತ್ತಿನ ಬಗ್ಗೆ ಯಾವುದೇ ಆಸಕ್ತಿಯನ್ನು ತಳೆಯದ ಕಥಾನಕಗಳನ್ನು. ಶಂಕರ ಮೊಕಾಶಿಯವರ 'ಗಂಗವ್ವ ಮತ್ತು ಗಂಗಾಮಾಯಿ' ಯಂತಹ ಕೃತಿಗಳಿಂದ ವೇದ್ಯವಾಗುವಂತೆ ಇಂಥ ಕಾದಂಬರಿಗಳು ಅಮೋಘ ಸಾಧನೆ ಮಾಡಬಲ್ಲವು. ಕುಟುಂಬ -ಸಮಾಜಗಳ ನಡುವಿನ ಪರಸ್ಪರ ಕೊಳುಕೊಡೆಗಳನ್ನು ಹುಡುಕಬಯಸುವ ಕಾದಂಬರಿಗಳು ಇವಕ್ಕಿಂತ ಭಿನ್ನವಾದವು. ಇಂಥ ಕಾದಂಬರಿಗಳು ಯಶಸ್ವಿಯಾಗುವುದು ತಾವು ಚಿತ್ರಿಸುವ ಕುಟುಂಬ ಜೀವನದ ಪ್ರಾತಿನಿಧಿಕತೆ ಮತ್ತು ಅಧಿಕೃತತೆಗಳಲ್ಲಿ.

ಈ ಹಿನ್ನೆಲೆಯಲ್ಲಿ ನೋಡಿದಾಗ 'ಝುವಾದಿ' ಕುತೂಹಲಕಾರಿಯಾಗಿದೆ. ಶಂಕರ ಗಿಳಿಯಾರನ ಕುಟುಂಬದ ಭೂತ -ಭವಿಷ್ಯ -ವರ್ತಮಾನಗಳ ಈ ಕಥಾನಕವು ನೂರಾರು ವ್ಯಕ್ತಿಗಳಲ್ಲಿ, ಹತ್ತಾರು ಕುಟುಂಬಗಳಲ್ಲಿ ಹರಡಿಕೊಂಡಿದೆ. ಆದರೆ ಅದು ನಿಜವೆನಿಸುವುದು ಮನುಷ್ಯನ ಭಾವನೆಗಳ ಲೋಕವನ್ನು ಅದರ ಎಲ್ಲ ವಿಕ್ಷಿಪ್ತತೆ - ಸಂಕೀರ್ಣಗಳೊಂದಿಗೆ ಹಿಡಿದಿಡುವುದರಲ್ಲಿ ಲೇಖಕಿ ಪಡೆದಿರುವ ಯಶಸ್ಸಿನಿಂದ. ಅಧಿಕೃತವೆನಿಸುವ ಭಾವಲೋಕ ಮತ್ತು ಅನಗತ್ಯವೂ ಅತಿದೀರ್ಘವೂ ಆದ 'ವಿವರಗಳ ಲೋಕ' ಈ ಕೃತಿಯ ವಿಶಿಷ್ಟತೆಗಳು.

ಆಫ್ರಿಕಾದ ಸಿಂಹ - ಸಿಂಹಿಣಿಯರ ಕುಟುಂಬದ ಆಕರ್ಷಣೆ - ವಿಕರ್ಷಣೆಗಳ ಈರ್ಷೆ-ದ್ವೇಷಗಳ ಲೋಕವು ಕಾದಂಬರಿಯ ನಾಯಕನ ಜೀವನಲೋಕಕ್ಕೆ ಒಡ್ಡಿದ ರೂಪಕವಾಗಿರುವಂತೆಯೇ ಅವನಿಗೆ ಜೀವನಪಾಠಗಳನ್ನು ಕಲಿಸುವ ಶಾಲೆಯೂ ಆಗಬೇಕೆಂಬುದು ಕಾದಂಬರಿಗಾರರ ಉದ್ದೇಶ. ಆದರೆ ಅದು 'ವಾಚಾಳಿತನ' ಹಾಗೂ ಅತಿವಿವರಗಳಲ್ಲಿ ಮರೆಯಾಗಿದೆ ಅಥವಾ ತುಂಬಾ ಆಬ್ವಿಯಸ್ ಎನ್ನಿಸಿಬಿಡುತ್ತದೆ. ಶಂಕರರಾಯನಲ್ಲಿ ಪರಿವರ್ತನೆಯಾಗುವುದೇ ತಡ, ಉಳಿದವರೆಲ್ಲರೂ ಎಲ್ಲವನ್ನು ಮರೆತು, ಸುಖಸಂಕಥಾವಿನೋದದಲ್ಲಿ ಮಗ್ನರಾಗುವುದು ಕೊಂಚ ಕೃತಕವೆನ್ನಿಸುತ್ತದೆ. ಆದ್ದರಿಂದಲೇ ಈ ಕಾದಂಬರಿಯ ಮಿತಿ ಇರುವುದು ತಾನೂ ರೂಪಿಸಿಕೊಂಡಿರುವ ತಾತ್ವಿಕತೆ ಹಾಗೂ ಪಾತ್ರಗಳ ಬಗೆಗಿನ ಅತಿ ವ್ಯಾಮೋಹದಲ್ಲಿ.

ಇಷ್ಟು ಮಿತಿಗಳನ್ನು ಗುರುತಿಸಿದರೂ ಕಾದಂಬರಿಕಾರ್ತಿಯು ತಮ್ಮ ಅನುಭವ ದ್ರವ್ಯವನ್ನು ಇನ್ನಷ್ಟು ಕಲಾತ್ಮಕವಾಗಿ ಬಳಸಿಕೊಂಡರೆ, ಅವರಿಂದ ಅತ್ಯುತ್ತಮವೂ ಕನ್ನಡದ ಸಂದರ್ಭದಲ್ಲಿ ಅನನ್ಯವೂ ಆದ ಕಾದಂಬರಿಗಳು ಬರಬಹುದೆಂಬುದನ್ನು

ಹೇಳಬೇಕು. ಏಕೆಂದರೆ 'ಕಜ್ಜಾಯ' ಮೂಡಿಸಿದ ಭರವಸೆಯು ಹುಸಿಹೋಗುವುದು ಸಾಧ್ಯವಿಲ್ಲ.

ಪ್ರಸ್ತುತ ಸಮೀಕ್ಷಕನಿಗೆ ದೊರೆಯದಿರುವ, 'ದೊರೆ'ತರೂ ಸಮಗ್ರ ಪರಿಶೀಲನೆಯು ಅನಗತ್ಯವೆಂದು ಭಾವಿಸಿದ ಕಾದಂಬರಿಗಳು ಹಲವು ಇವೆ. ಇಂಥ ಸಮೀಕ್ಷೆಯು ಹಾಗೆ ಅತಿವಿವರವಾದ ಸರ್ವೆಯಲ್ಲಿ ತೊಡಗಿದಾಗ ಮುನ್ನೆಲೆಗೆ ಬರಲೇಬೇಕಾದ ಕೃತಿಗಳು ಮರವೆಗೆ ಸಂದು ಬಿಡುತ್ತವೆ. ಕೊನೆಗೂ ವಿಮರ್ಶಕನು ಸತೃಣಾಭ್ಯವ್ಯವಹಾರಿಯಾಗದೆ, ಆಯ್ಕೆ ಮಾಡಬೇಕಾಗುವುದು ಅನಿವಾರ್ಯ, ಸಹಜ.

## ಸಣ್ಣಕತೆ

*ಮೋಹನ ಕುಂಟಾರ್*

ಈ ವರ್ಷ ಇಪ್ಪತ್ತಕ್ಕೂ ಮಿಕ್ಕಿದ ಕಥಾಸಂಕಲನಗಳು ಪ್ರಕಟವಾಗಿವೆ. ಅವುಗಳಲ್ಲಿ ಹಿರಿಯ ಲೇಖಕರಾದ ಚದುರಂಗರ ಸಂಕಲನವಿದೆ. ವಿಮರ್ಶಕರಾದ ರಾಜೇಂದ್ರ ಚೆನ್ನಿಯವರೂ ಸಂಕಲನವೊಂದರ ಮೂಲಕ ಕಥಾಲೋಕವನ್ನು ಪ್ರವೇಶಿಸಿದ್ದಾರೆ. ಮಲ್ಲಯ್ಯ ಬರಗೂರಂತಹ ಹೊಸಬರು ಕಥಾಪ್ರಯತ್ನಗಳ ಮೂಲಕ ಮೆಲ್ಲಡಿಯಿಡುತ್ತಿದ್ದಾರೆ. ಬಹುತೇಕ ಕತೆಗಳು ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಬಳಿಕ ಸಂಕಲನಗಳಲ್ಲಿ ಒಂದೆಡೆ ಕಲೆಹಾಕಲಾಗಿದೆ. ಇವುಗಳಲ್ಲಿ ಗಂಭೀರ ರಚನೆಗಳೂ ಇವೆ. ಮನರಂಜನೆಯ ಉದ್ದೇಶದಿಂದ ರಚನೆಗೊಂಡ ಕತೆಗಳ ಸಂಖ್ಯೆಯೇ ದೊಡ್ಡದು. ಪತ್ರಿಕೆಗಳು ಹುಟ್ಟುಹಾಕಿದ ಇಂತಹ ಕತೆಗಳಿಗೆ ಅವುಗಳದೇ ಆದ ಓದುಗವರ್ಗವಿದೆ. ಸಂಶೋಧನೆ, ವಿಮರ್ಶೆಗಳನ್ನು ಅಪೇಕ್ಷಿಸದೆ ನಿಸ್ಪೃಹವಾಗಿ ಒಂದು ಹೊತ್ತಿನ ಸಂತೋಷಕ್ಕಾಗಿಯೇ ಓದುವ ಓದುಗರಿವರು. ಕಾವ್ಯ, ಕಾದಂಬರಿಗಳಿಗಿಂತಲೂ ಹೆಚ್ಚಿನ ಓದುಗ ವರ್ಗವುಳ್ಳ ಸಣ್ಣಕತೆ, ಸಾಹಿತ್ಯದ ಅತ್ಯಂತ ಜನಪ್ರಿಯ ಪ್ರಕಾರವೂ ಹೌದು. ಈ ಹಿನ್ನೆಲೆಯಲ್ಲಿ ಪ್ರಕಟಗೊಂಡ ಎಲ್ಲಾ ಸಣ್ಣಕತೆಗಳೂ ಗಮನಾರ್ಹವಾಗುತ್ತವೆ. ನಿರ್ದಿಷ್ಟ ಓದುಗರನ್ನು ತಲುಪುವ ಈ ಸಣ್ಣಕತೆಗಳು ಸಾಹಿತ್ಯದ ಗಂಭೀರ ಓದುಗರಿಗೆ ರುಚಿಸದೇ ಹೋಗಬಹುದು. ಆದರೆ ಸಾಹಿತ್ಯದ ಬೆಳವಣಿಗೆಯ ಇತಿಹಾಸದಲ್ಲಿ ಇವು ಪ್ರತ್ಯಕ್ಷವಲ್ಲದೇ ಹೋದರೂ ಪರೋಕ್ಷವಾಗಿ ಮುಖ್ಯ ಪಾತ್ರವಹಿಸುತ್ತವೆ. ಅವುಗಳಲ್ಲಿ ಎರಡು ಪ್ರಮುಖ ಪ್ರಕ್ರಿಯೆಗಳನ್ನು ಗುರುತಿಸಬಹುದು. ಒಂದು, ಸಾಹಿತ್ಯಾಸಕ್ತ ಓದುಗರ ಸೃಷ್ಟಿ. ಇನ್ನೊಂದು ಸಾಹಿತ್ಯವಲಯದ ಪ್ರಮುಖ ಸಣ್ಣಕತೆಗಳ ಹುಟ್ಟಿಗಾಗಿ ನಡೆಯುವ ಪ್ರಾಯೋಗಿಕ ರಚನೆಗಳು ಎಂಬ ನೆಲೆಯಿಂದಲೂ ಪ್ರಕಟಗೊಂಡ ಸಣ್ಣಕತೆಗಳು ಮುಖ್ಯವಾಗುತ್ತವೆ. ಈ ನೆಲೆಯಲ್ಲಿ ಈ ವರ್ಷ ಪ್ರಕಟವಾದ ಲಭ್ಯ ಸಂಕಲನಗಳ ಕೆಲವು ಸಣ್ಣಕತೆಗಳನ್ನು, ಅವುಗಳ ಒಲವು- ನಿಲುವುಗಳನ್ನು ಸಮೀಕ್ಷಿಸುವುದರ ಮೂಲಕ, ಈ ವರ್ಷದ ಕತೆಗಳ ಪ್ರಮುಖ ಕಾಳಜಿಗಳನ್ನು, ಇತಿಮಿತಿಗಳನ್ನು ಗುರುತಿಸಬಹುದು.

ಈಗಾಗಲೇ ನಾಲ್ಕು ಕಥಾಸಂಕಲನಗಳನ್ನು ಪ್ರಕಟಿಸಿರುವ ವೀರಭದ್ರ ಕನ್ನಡದ ಪ್ರಮುಖ ಕತೆಗಾರರಲ್ಲೊಬ್ಬರು. 'ಕನ್ನಡಿ ನೋಡಿದ ನಾಯಿ' ಇವರ ಐದನೆಯ ಕಥಾಸಂಕಲನ. ೧೯೮೧ ರಲ್ಲಿ ಪ್ರಜಾವಾಣಿ ದೀಪಾವಳಿ ವಿಶೇಷಾಂಕದಲ್ಲಿ ಪ್ರಥಮ ಬಹುಮಾನ ಪಡೆದ ಕತೆ 'ವ್ಯವಸ್ಥೆ'ಯೂ ಸೇರಿಕೊಂಡಂತೆ ಸಂಕಲನದಲ್ಲಿ ಹತ್ತು

ಕತೆಗಳಿವೆ. ಪ್ರಗತಿಪರ ಧೋರಣೆಗಳನ್ನು ನೂತನ ತಂತ್ರದಲ್ಲಿ ಅಳವಡಿಸಿಕೊಂಡಿರುವ ಇವರ ಕತೆಗಳು ಒಂದಕ್ಕಿಂತ ಇನ್ನೊಂದು ಹೊಸದು. ಬಂಡವಾಳಶಾಹಿ ಪ್ರವೃತ್ತಿಗಳನ್ನು, ವ್ಯವಸ್ಥೆಯಲ್ಲಿನ ಬೂಟಾಟಿಕೆಗಳನ್ನು ಇಲ್ಲಿನ ಅನೇಕ ಕತೆಗಳ ಮೂಲಕ ಅನಾವರಣಗೊಳಿಸಿದ್ದಾರೆ. ಚಿಕ್ಕ ಪುಟ್ಟ ವಾಕ್ಯಗಳಲ್ಲಿಯೇ ಕತೆಯ ಸನ್ನಿವೇಶವನ್ನು ಇವರು ಸೃಷ್ಟಿಸಬಲ್ಲರು. ವ್ಯಾಪಕವಾದ ಅನುಭವಗಳನ್ನು ಹಿಡಿದಿಡುವಲ್ಲಿ ಇಲ್ಲಿನ ಕತೆಗಳು ಯಶಸ್ವಿಯಾಗಿವೆ. 'ವ್ಯವಸ್ಥೆ', 'ಅವರಲ್ಲಿಲ್ಲದ್ದು' ಮೊದಲಾದ ಕತೆಗಳಿಗೆ ಈ ದೃಷ್ಟಿಯಿಂದಲೂ ಪ್ರಾಮುಖ್ಯತೆ ಇದೆ. ವಾಸ್ತವ ಚಿತ್ರಣಗಳ ಮೂಲಕ ವೈಚಾರಿಕವಾಗಿಯೂ ಗಟ್ಟಿಗೊಳಿಸುವ, ದರ್ಶನವೊಂದನ್ನು ನೀಡುವ ಚಾಣಾಕ್ಷತೆ ಇವರಿಗೆ ಸಿದ್ಧಿಸಿದೆ. 'ಕಾಣೆಯಾಗಿದ್ದಾರೆ', 'ಹಾವು ತಿಂದವರು ' ತನ್ನ ಕಥನ ತಂತ್ರಗಳಿಂದಾಗಿಯೇ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುತ್ತವೆ. ಬರವಣಿಗೆಯಲ್ಲಿನ ಸಂಕೀರ್ಣತೆಯಿಂದಾಗಿ ಇಲ್ಲಿನ ಎಲ್ಲಾ ಕತೆಗಳು ಓದುಗರಿಂದ ಸಂಯಮವನ್ನು ಅಪೇಕ್ಷಿಸುತ್ತವೆ.

'ವ್ಯವಸ್ಥೆ' ಕತೆಯ ಬಗ್ಗೆ ನಿರಂಜನರು ಹೇಳಿದ ಮಾತುಗಳನ್ನಿಲ್ಲಿ ಉಲ್ಲೇಖಿಸಬಹುದು. ''ವ್ಯವಸ್ಥೆ ಯಲ್ಲಿ ರಮ್ಯ ಕಥನವಿದೆ. ಸಮಾಜದ ಧನಾಢ್ಯರು ಐದನೆಯವನನ್ನು (ಜೋಕೆ, ಆರನೆಯ ಮೆಟ್ಟಲಿಲ್ಲ!) ಹರಿದು ತಿನ್ನುವ ಕ್ರೂರ ಚಿತ್ರಣವಿದೆ. (ಪ್ರಗತಿಶೀಲ ಪರಂಪರೆ) ನವ್ಯದ ಸಂಕೀರ್ಣ ಶೈಲಿ ಹದವಾಗಿ ಬೆರೆತು ಮೆರುಗು ನೀಡಿದೆ. ಮಹಾಭಾರತದ ದ್ಯೂತದ ಪ್ರಸ್ತಾಪ ಕತೆಯನ್ನು ದಟ್ಟಗೊಳಿಸಿದೆ. ಬಹುರೂಪೀ ವ್ಯವಸ್ಥೆಯ ಒಂದು ಕರಾಳಮುಖ ಕಂಡು ಓದುಗರು ಬೆಚ್ಚುವಂತೆ ಮಾಡುವ 'ಬಂಡಾಯ ಪ್ರವೃತ್ತಿ' ಸ್ಫುಟವಾಗಿದೆ.'' ಈ ಬಂಡಾಯ ಪ್ರವೃತ್ತಿ ಇಲ್ಲಿನ ಎಲ್ಲಾ ಕತೆಗಳಲ್ಲೂ ಓದುಗರನ್ನು ಬೆರಗುಗೊಳಿಸುವ ರೀತಿಯಲ್ಲಿ ವ್ಯಕ್ತವಾಗಿದೆ.

'ಮೃಗಯಾ' ಚದುರಂಗರ ಏಳುಕತೆಗಳ ಸಂಕಲನ. ಕನ್ನಡದ ಈ ಹಿರಿಯ ಕತೆಗಾರರು ಆಧುನಿಕ ಸಮಾಜದಲ್ಲಿ ಮಾನವೀಯತೆಗೆ ಒದಗಿದ ದುಸ್ಥಿತಿಯನ್ನು ಕುರಿತ ತಲ್ಲಣಗಳನ್ನು ಹಿಡಿದಿಟ್ಟಿದ್ದಾರೆ. ಇಲ್ಲಿನ ಕತೆಗಳು ಸಾಮಾಜಿಕ ಚೌಕಟ್ಟಿನಲ್ಲಿ ವಸ್ತುಸ್ಥಿತಿಗೆ ಸ್ಪಂದಿಸುತ್ತಿವೆ. ಸಮಸ್ಯೆಗಳು ಪರಿಹಾರದಲ್ಲಿ ಮುಕ್ತಾಯವಾಗದೆ ತಲ್ಲಣವಾಗಿಯೇ ಉಳಿಸಿಕೊಂಡ ಇಲ್ಲಿನ ಕತೆಗಳು ಓದುಗನನ್ನು ಚಿಂತನೆಗೆ ಗುರಿ ಮಾಡುತ್ತವೆ.

'ಮೃಗಯಾ' ಮತ್ತು 'ಕಲ್ಲಿನ ಕೊಳಲು' ಸಂಕಲನದ ಮುಖ್ಯ ಕತೆ. ಸೋಮ ಮತ್ತು ಜಿಂಕೆಯ ಆತ್ಮೀಯ ಬೆಸುಗೆ ಸಮಾಜದ ಮಾನವೀಯತೆಗೆ ದೊಡ್ಡ ಸವಾಲು. ಜಿಂಕೆಯನ್ನು ಗೌಡ ಕೊಂದು ತಿನ್ನುವುದು, ಸೇಡಿನ ನೆವದಲ್ಲಿ ಸೋಮ ಗೌಡನನ್ನು ಕೊಂದು ಗಲ್ಲಿಗೇರುವ ದುರಂತ ಕತೆ ಇಡೀ ನಮ್ಮ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಜಿಂಕೆ ಮಾನವೀಯತೆಗೆ ಸಂಕೇತವಾಗುತ್ತಾ ಅದನ್ನು ಬಲಿಗೊಟ್ಟು ಬೆಳೆಯುವ ದುಷ್ಟ ವ್ಯವಸ್ಥೆಯಲ್ಲಿ ಅಮಾಯಕರ ಬದುಕು ದುರ್ಭರವಾಗುವುದನ್ನು ಕತೆ ದಟ್ಟ ಅನುಭವವಾಗಿ ಮುಂದಿಡುತ್ತದೆ. ಸಮಾಜವನ್ನು ನಿಯಂತ್ರಿಸುವ ಮಂದಿ ಸಾಮಾನ್ಯ

ಜನರ ಮಾನವೀಯ ಗುಣಗಳನ್ನು ಮೆಟ್ಟಿ ಮೆರೆಯುವ ಹಂತಕ್ಕಿಳಿದಾಗ, ಮಾನವನ ಬದುಕು ಪಡೆಯಬಹುದಾದ ದುರಂತವನ್ನು ಈ ಕತೆ ಹಿಡಿದಿಟ್ಟಿದೆ. ಸಾಲದ ನೆವದಲ್ಲಿ ಸೋಮನ ಹೆಂಡತಿ ಪುಟ್ಟೇರಿಯ ದೇಹವನ್ನು ಬಯಸುವ, ಪ್ರೀತಿ ಪಾತ್ರವಾದ ಜಿಂಕೆಯನ್ನು ಕದ್ದೊಯ್ದು ತಿನ್ನುವ ಗೌಡ ವ್ಯವಸ್ಥೆಯ ದುಷ್ಟಶಕ್ತಿಯ ಪ್ರತಿನಿಧಿಯಾಗುತ್ತಾನೆ. ತನ್ನ ಆಪತ್ತಿಗೆ ಸಾಲ ನೀಡಿದ ಸೋಮನ ಹಣವನ್ನು ಜೈಲಿನಲ್ಲಿದ್ದಾಗಲೇ ತಂದು ತೀರಿಸಿ ಋಣಮುಕ್ತನಾಗುವ ಗಿರಿಯ ತನ್ನತನವನ್ನು ಉಳಿಸಿಕೊಳ್ಳಲಾರದ ಅಮಾಯಕರ ಪ್ರತಿನಿಧಿಯಾಗುತ್ತಾನೆ. ಜಿಂಕೆಯನ್ನು ಪ್ರೀತಿಸುವ ಮುಗ್ಧನೂ ಸಂದರ್ಭ ಒದಗಿದರೆ ಮಾನವೀಯತೆಯನ್ನು ಮೀರಿನಿಂತು ಹೇಗೆ ಸೇಡು ತೀರಿಸಿಕೊಳ್ಳುತ್ತಾನೆಂಬುದನ್ನು ಸೋಮನ ಪಾತ್ರದ ಮೂಲಕ ಚಿತ್ರಿಸಲಾಗಿದೆ.

'ಕಲ್ಲಿನ ಕೊಳಲು' ಕತೆಯ ಕಲ್ಲು ಸಮಾಜದ ಸಾಂಸ್ಕೃತಿಕ ಬದುಕಿನ ನಿಯಂತ್ರಣ ಶಕ್ತಿಯನ್ನು ಸಂಕೇತಿಸುತ್ತದೆ. ಅದನ್ನೇ ನಂಬಿ ಬದುಕುವ ಸಮಾಜ, ಆದರ ಮೇಲೆ ವ್ಯವಸ್ಥೆ ತನ್ನ ಕ್ರೂರಹಸ್ತವನ್ನು ಚಾಚಿದಾಗ ಆಗುವ ದುರಂತವನ್ನು ಕತೆ ಮುಂದಿಡುತ್ತದೆ. ಮೊಮ್ಮಗ ಮಲ್ಲುವಿನ ಕೊಳಲಗಾನವೇ ಕಲ್ಲಿನಿಂದ ಕೇಳಿಬರುತ್ತಿದೆ ಎಂದು ನಂಬಿ, ಅದನ್ನಾಲಿಸಿ ನೆಮ್ಮದಿ ಕಾಣುವ ಅಜ್ಜಯ್ಯ ಎರಡು ತಲೆಮಾರುಗಳನ್ನು ಕಂಡ ಹಿರಿಯ ಜೀವ. ನಾಗರಿಕ ಬದುಕಿನ ಸ್ಥಿತ್ಯಂತರದ ವಿಕೃತ ರೂಪವನ್ನು ಸೂಕ್ಷ್ಮವಾಗಿ ಅವಲೋಕಿಸುವ ಪರಂಪರೆಯ ಪ್ರತಿನಿಧಿ ಕೂಡ. ಸಮಾಜದ ನಂಬಿಕೆಯೊಂದರ ಮೇಲೆ ಆಧುನಿಕತೆಯ ಅತಿಕ್ರಮಣಕ್ಕೆ ಕತೆಗಾರರ ಪ್ರತಿಭಟನೆಯು ಸುಪ್ತವಾಗಿ ಪ್ರಕಟವಾಗಿದೆ.

'ಚಾಕೊಲೇಟ್ ಮಾಮ' ಪುಟ್ಟದಾದರೂ ಪರಿಣಾಮಕಾರಿಯಾದ ಚೊಕ್ಕ ಕತೆ. 'ಸ್ವಪ್ನ' ಕತೆಯ ಸಮಸ್ಯೆ ಗಂಭೀರವಾದುದಾದರೂ ಅದು ಜನಪ್ರಿಯತೆಯ ಹಾದಿ ತುಳಿದಿದೆ. ಚದುರಂಗರಿಗೆ ಕರಗತವಾದ ಕಥನ ಕಲೆಯಿಂದಾಗಿ ಎಲ್ಲಾ ಕತೆಗಳು ಓದುಗನ ಮೇಲೆ ಕನಿಷ್ಠ ಪ್ರಭಾವವನ್ನು ಉಂಟು ಮಾಡುತ್ತವೆ. ಗ್ರಾಮೀಣ ಬದುಕಿನ ಸುಖ-ಸಂತೋಷಗಳು, ನಾಗರಿಕ ಬದುಕಿನ ತಲ್ಲಣಗಳು, ಲೈಂಗಿಕ ಶೋಷಣೆಗಳೇ ಕತೆಗಳ ಕೇಂದ್ರ ಪ್ರಜ್ಞೆಯಾಗಿವೆ. ತಮ್ಮ ಹಿಂದಿನ ಕತೆಗಳಿಗಿಂತ ಭಿನ್ನವಾದುದನ್ನು, ಇವುಗಳಲ್ಲಿ ನಿರೀಕ್ಷಿಸುವಂತಿಲ್ಲ.

'ಶೂದ್ರದೀಕ್ಷೆ' ಸಂಕಲನದಲ್ಲಿ ಪರಂಜ್ಯೋತಿಯವರು ಬರೆದ ಹತ್ತು ಕತೆಗಳನ್ನು ಕ್ರೋಢೀಕರಿಸಲಾಗಿದೆ. ೧೯೭೬ ರಿಂದ ೧೯೯೦ ರ ಅವಧಿಯಲ್ಲಿ ಬರೆದು ವಿವಿಧ ಪತ್ರಿಕೆಗಳಲ್ಲಿ ಬೆಳಕು ಕಂಡ ಕತೆಗಳಿವು. ತ.ರಾ.ಸು. ಸುಧಾಕರ ಮೊದಲಾದವರ ಕತೆಗಳನ್ನು ನೆನಪಿಗೆ ತರುವ ಇಲ್ಲಿನ ಕತೆಗಳ ಒಲವು, ನಿಲುವುಗಳು, ಸಹ ಸಮಕಾಲೀನ ಬರಹಗಾರರಲ್ಲಿ ಪ್ರಕಟಗೊಂಡವುಗಳೇ ಆಗಿವೆ. ಆವರಣ, ಕಥಾಪಾತ್ರಗಳ ಹೆಸರುಗಳೇ ಸೂಚಿಸುವಂತೆ ತಮಿಳು ಜನರನ್ನು ಹಿನ್ನೆಲೆಯಾಗುಳ್ಳ ಕತೆಗಳಿವು. ಮಡಿವಂತ ಬ್ರಾಹ್ಮಣರ ಮತ್ತು ಆಧುನಿಕತೆಯ ಸಂಘರ್ಷ, ರಿಕ್ಷಾವಾಲಾರ ಬದುಕಿನ ಆಳಸಿರಾಳಗಳು ಬಹುತೇಕ ಕತೆಗಳಲ್ಲಿ ದಾಖಲಾಗಿವೆ. ಇಲ್ಲಿನ ಪ್ರತಿಯೊಂದು ಕತೆಯ ಹಿಂದಿರುವ ಕತೆಗಾರರ ಸಾಮಾಜಿಕ ಎಚ್ಚರ ಮತ್ತು ಸಹಾನುಭೂತಿ ಓದುಗನ ಗಮನ

ಸೆಳೆಯುತ್ತವೆ. ಹಾಗೆಯೇ ಅಭಿವ್ಯಕ್ತಿಯ ಭಾಷೆಯಲ್ಲಿನ ನಿರರ್ಗಳತೆಯೂ ಮುಖ್ಯವಾಗಿ ಮನ ಸೆಳೆಯುತ್ತದೆ.

ಇಲ್ಲಿನ ಎಲ್ಲಾ ಕತೆಗಳನ್ನು ಗಮನಿಸಿದರೆ ಕತೆಗಾರರ ಪ್ರಗತಿಪರ ಚಿಂತನೆಗಳು ಮುಖ್ಯ ಕಾಳಜಿಯಾಗಿ ಬಂದಿದೆಯೆಂಬುದು ವೇದ್ಯವಾಗುತ್ತದೆ. ಪರಂಪರಾಗತ ನಡವಳಿಕೆಗಳ ಅರ್ಥಶೂನ್ಯತೆಯನ್ನು, ಜಾತಿಪ್ರಜ್ಞೆಯನ್ನು ಮೀರಿನಿಂತ ಮಾನವೀಯತೆಯೊಂದೇ ಬದುಕಿನ ಮೂಲ ತಳಹದಿ ಎಂಬುದನ್ನು ಇಲ್ಲಿನ ಕತೆಗಳಲ್ಲಿ ಪ್ರತಿಪಾದಿಸಲಾಗಿದೆ. ಇವರ ಕತೆಗಳ ಧ್ಯೇಯ, ಧೋರಣೆಗಳು, ಅಭಿವ್ಯಕ್ತಿ ವಿಧಾನಗಳು ಕನ್ನಡ ಕಥಾಸಾಹಿತ್ಯದ ಮುಖ್ಯ ಧಾರೆಯಲ್ಲೊಂದಾಗಿಯೇ ಪ್ರಕಟವಾಗಿವೆ.

'ಮುಖಗಳು' ಜಯಪ್ರಕಾಶ ಮಾವಿನಕುಳಿಯವರ ಎರಡನೆಯ ಕಥಾಸಂಕಲನ. ಇದರಲ್ಲಿ ಹದಿನಾಲ್ಕು ಕತೆಗಳಿವೆ. ಮಧ್ಯಮ ವರ್ಗದ ಕುಟುಂಬಗಳ ಸ್ಥಿತಿಗತಿಗಳನ್ನು, ಸಾಮಾಜಿಕ ವ್ಯವಸ್ಥೆಯ ಲೋಪದೋಷಗಳು ಅವುಗಳನ್ನು ನಿಯಂತ್ರಿಸುವುದನ್ನು ಇಲ್ಲಿನ ಕತೆಗಳಲ್ಲಿ ಜೀವಂತ ಪ್ರತೀಕಗಳ ಮೂಲಕ ಹಿಡಿದಿಟ್ಟಿದ್ದಾರೆ. ಕೋಮು ಗಲಭೆಗಳ ದುರಂತವನ್ನು ಅಂತರ್ಜಾತೀಯ ವಿವಾಹಗಳಿಂದಾಗಿ ಪರಂಪರೆಯೊಂದಿಗೆ ನಡೆಸಬೇಕಾದ ವೈಯಕ್ತಿಕ ಸಂಘರ್ಷಗಳನ್ನು ಅನೇಕ ಕತೆಗಳಲ್ಲಿ ಕಾಣಬಹುದು. ಪ್ರಗತಿಪರ ಚಿಂತನೆಗಳ ಮೂಲಕ ಬದುಕಿನ ಸಂಕ್ರಮಣ ಸ್ಥಿತಿಯನ್ನು ಹಿಡಿದಿಡುವ ಕತೆಗಾರರಿವರು. ಮಧ್ಯಮವರ್ಗದ ಭಾರತೀಯ ಮನಸ್ಸು ಆಧುನಿಕತೆಯತ್ತ ತನ್ನನ್ನು ತೆರೆದುಕೊಳ್ಳುವ ಮತ್ತು ಅದನ್ನು ಸ್ವೀಕರಿಸುವ ಧೈರ್ಯ ಮಾಡಿರುವುದನ್ನು ಇಲ್ಲಿನ ಕತೆಗಳಲ್ಲಿ ಕಾಣಬಹುದು. ಕತೆಗಳು ಸ್ತ್ರೀಪರ ಸಂವೇದನೆಯನ್ನು ಮುಖ್ಯವಾಗಿ ಪರಿಗಣಿಸಿವೆ. ವರ್ತಮಾನದ ವೈಚಾರಿಕ ಚಿಂತನೆಯ ಪ್ರಮುಖ ಭಾಗವಾಗಿದ್ದೂ ಇಲ್ಲಿನ ಕತೆಗಳಲ್ಲೂ ಅವು ಜೀವಂತವಾಗಿ ಮೈದಳೆದಿವೆ.

'ಅನುಗಾಲವು ಚಿಂತೆ ಜೀವಕೆ' ಇಲ್ಲಿ ದುಡಿಮೆಯ ಮೂಲಕ ಮಗನಿಗಾಗಿ ಕೂಡಿಟ್ಟ ಆಸ್ತಿಯನ್ನು ಮಗನೇ ಊರ ಪೋಕರಿಗಳ ಮಾತು ಕೇಳಿ ತಂದೆಗೆ ತಿರುಗಿ ಬೀಳುವ ಕತೆಯಿದೆ. ದುಡಿಯುವ ಹಿರಿಯ ತಲೆಮಾರು ಹಾಗೂ ಅವರಿವರ ಮಾತು ಕೇಳಿ ತನ್ನವರನ್ನು ಧಿಕ್ಕರಿಸುವ ಸೋಮಾರಿ ಕಿರಿಯ ತಲೆಮಾರುಗಳ ಸಂಘರ್ಷ ಇದರಲ್ಲಿದೆ. ಈ ಕತೆಯಲ್ಲಿ ಕತೆಗಾರರು ಮನುಷ್ಯ ಸಂಬಂಧದ ನಿಗೂಢತೆಯ ಅನ್ವೇಷಣೆಯಲ್ಲಿ ತೊಡಗಿದ್ದಾರೆ. ಕೌಟುಂಬಿಕ ವಿಘಟನೆಗಳಿಂದ ದುರಂತ ಅನುಭವಿಸುತ್ತಿರುವುದು ಶಿಕ್ಷಿತ ಜನಾಂಗವೇ ಎಂಬುದನ್ನು ಗುರುತಿಸುವುದರ ಮೂಲಕ, ಶಿಕ್ಷಣ ವ್ಯವಸ್ಥೆಯ ಅರ್ಥಹೀನತೆಯನ್ನು ಬೊಟ್ಟು ಮಾಡುತ್ತಾರೆ. ಸಂತೆಯೊಳಗೊಂದು ಮನೆಯ ಮಾಡಿ ಕತೆಯ ನಾಯಕ ಹಾಗೂ ಅವನ ಕ್ರಿಶ್ಚಿಯನ್ ಹೆಂಡತಿಯ ಬದುಕು ಆಧುನಿಕತೆಯ ಒಲವಿನಿಂದ ಹೊಸ ಜಗತ್ತನ್ನು ಸೃಷ್ಟಿಸುತ್ತದೆ. ಇಲ್ಲಿ ಪರಂಪರೆ ಮತ್ತು ಆಧುನಿಕತೆಯ ಸಂಘರ್ಷದ ಚಿತ್ರಣ ತೀವ್ರವಾಗಿದೆ. ಈ ಕತೆಯಲ್ಲದೆ 'ಸೋರುತಿಹುದು ಮನೆಯ ಮಾಳಿಗೆ' ಮೊದಲಾದ ಕತೆಗಳು 'ಸ್ತ್ರೀ ಸಂವೇದನೆಯ' ನೈತಿಕ ಪ್ರಜ್ಞೆಯಲ್ಲಿ ಬೆಳೆಯುತ್ತವೆ. 'ಗಾಂಧಾರಿ ಕನ್ನಡಿ ನೋಡಿದಳು' ಮಾವಿನಕುಳಿಯವರ ಸೃಜನಶೀಲತೆಯ

ಪ್ರಖರತೆಗೆ ಒಡ್ಡಿಕೊಂಡ ಕತೆ. ಉಳಿದ ಕತೆಗಳಿಗೆ ಸಾಧ್ಯವಾಗದ ಯಶಸ್ಸು ಇದಕ್ಕೆ ಸಾಧ್ಯವಾಗಿದೆ. ಇದಕ್ಕೆ ಕಾರಣಗಳನ್ನು ಈ ಕತೆಯಲ್ಲಿಯೇ ಹುಡುಕಬಹುದು. ಇದು ಪುರಾಣದ ಕತೆಯಾದರೂ ಗಾಂಧಾರಿಯ ಬದುಕು ಮತ್ತು ಕತೆಗಾರರ ವೈಚಾರಿಕ ದೃಷ್ಟಿ ಸಮನ್ವಯಗೊಂಡ ಸಮಕಾಲೀನ ಪ್ರತಿಸ್ಪಂದನವನ್ನು ಕಾಣಬಹುದು. ಸ್ತ್ರೀ ಸಂವೇದನೆಯ ಕಾಳಜಿಯನ್ನು ಗಾಂಧಾರಿಯ ಬದುಕಿನ ಹಿನ್ನೆಲೆಯಲ್ಲಿ ಖಚಿತವಾಗಿ ಪ್ರಶ್ನಿಸಿಕೊಳ್ಳುತ್ತಾ ಕತೆ ಹೆಣೆದ ರೀತಿ ಅಲ್ಪ ಭಾವುಕವೆನಿಸಿದರೂ ಕುತೂಹಲಕರವಾಗಿದೆ.

ಮಾವಿನಕುಳಿಯವರ ಧೋರಣೆಗಳು ನವ್ಯೋತ್ತರದ ಸಂದರ್ಭದಲ್ಲಿ ರೂಪು ಪಡೆದವುಗಳು. ಆದರೆ ಕಥನತಂತ್ರದಲ್ಲಿ ಇನ್ನೂ ನವ್ಯಕತೆಗಳ ಜಾಡಿನಿಂದ ಬಿಡಿಸಿಕೊಂಡಿಲ್ಲ. ಇಲ್ಲಿನ ಎಲ್ಲಾ ಕತೆಗಳ ಗುಣ ಸರಳ ಕುತೂಹಲಕರ ನಡಿಗೆ. ಆದರೆ ವೈಚಾರಿಕತೆಯನ್ನು ಹೊರಲಾರದ ಕತೆಯ ಹಂದರ, ಆಯ್ದ ವಸ್ತು ಕತೆಯಾಗಿ ರೂಪುಗೊಳ್ಳುವಲ್ಲಿ ಅಳವಡಿಸಿಕೊಂಡ ನಿರೂಪಣಾವಿಧಾನ ಇವುಗಳಿಂದಾಗಿ ಇಲ್ಲಿನ ಕತೆಗಳು ಶಿಥಿಲವಾಗುತ್ತವೆ. ಸಾಂಸ್ಕೃತಿಕವಾಗಿ ಗಟ್ಟಿಗೊಳ್ಳದಿರುವುದು ಇವರ ಕತೆಗಳ ಇನ್ನೊಂದು ಮಿತಿ ಎನ್ನಬೇಕು. ಆ ಕಾರಣಕ್ಕಾಗಿಯೇ 'ಗಾಂಧಾರಿ ಕನ್ನಡಿ ನೋಡಿದಳು' ಕತೆ ಈ ಮಿತಿಗಳನ್ನು ಮೀರಿ ನಿಂತು ಪೌರಾಣಿಕ ವಸ್ತುವಿನ ಹಂದರದಲ್ಲಿ ವೈಚಾರಿಕತೆಯನ್ನು ಸಮರ್ಥವಾಗಿ ದುಡಿಸಿಕೊಂಡು ಉತ್ತಮ ಕತೆಯಾಗಿ ಮೈದಳೆದಿದೆ. ಸಾಂಸ್ಕೃತಿಕ ಆವರಣವೊಂದರಲ್ಲಿ ಗಾಂಧಾರಿಯ ಗೊಂದಲಗಳು ಅರ್ಥಪೂರ್ಣವಾಗುತ್ತವೆ.

'ದೊಡ್ಡಮರ' ರಾಜೇಂದ್ರ ಚೆನ್ನಿಯವರ ಮೊದಲ ಕಥಾಸಂಕಲನ. ಇಲ್ಲಿ ಹನ್ನೆರಡು ಕತೆಗಳಿವೆ. ಕತೆಗಾರರೇ ಮುನ್ನುಡಿಯಲ್ಲಿ ಹೇಳಿಕೊಂಡಂತೆ ಇವುಗಳ ಉದ್ದೇಶ ''ಮಧ್ಯಮ ವರ್ಗದ ಶಿಕ್ಷಿತ ಓದುಗರಿಗೆ ಆರೋಗ್ಯಕರವಾದ ಮನರಂಜನೆ ಕೊಡುವಂತೆ ಬರೆಯಬೇಕು. ಆಯ್ಕೆ ಮಾಡಿಕೊಂಡ ಚೌಕಟ್ಟಿನೊಳಗೆ ಸಾಧ್ಯವಾದುದನ್ನೆಲ್ಲಾ ಹೇಳಬೇಕು. ಮನುಷ್ಯ ಪ್ರಪಂಚದ ಬಗ್ಗೆ ನನಗೆ ಗೊತ್ತಿರುವ ಸತ್ಯಗಳನ್ನು ಆದಷ್ಟು ಮೊಟಕುಗೊಳಿಸದಂತೆ ಹೇಳಬೇಕು.'' ಈ ಹಿನ್ನೆಲೆಯಲ್ಲಿ ಯಶಸ್ವಿ ಕತೆಗಳಿವು. ಬಹುಶಃ ಲೇಖಕರು ಸ್ವತಃ ಸಾಹಿತ್ಯ ವಿಮರ್ಶಕರೂ ಆದ್ದರಿಂದ ಇರಬೇಕು, ಇಲ್ಲಿನ ಬರವಣಿಗೆಯಲ್ಲಿ ಅಚ್ಚುಕಟ್ಟುತನವಿದೆ. ಆಯ್ಕೆ ಮಾಡಿಕೊಂಡ ಚೌಕಟ್ಟಿನೊಳಗೆ ಪ್ರಜ್ಞಾಪೂರ್ವಕವಾಗಿಯೇ ಕೆಲವು ಬದ್ಧತೆಗಳಿಗೆ ನಿಷ್ಠರಾಗಿದ್ದಾರೆ. ಇವುಗಳನ್ನು ಮನರಂಜನೆಯ ನೆಲೆಯಲ್ಲಿಯೇ ಸಾಧಿಸಬೇಕೆಂದು ಸಮಕಾಲೀನ ವಿಚಾರಗಳನ್ನು ಅಳವಡಿಸಿಕೊಂಡಿದ್ದರಿಂದ ವಿಚಾರಾರ್ಹವೂ ಅನ್ನಿಸಿವೆ. ಈ ಹಿನ್ನೆಲೆಯಿಂದ ಇಲ್ಲಿನ 'ಒಂದು ಚುನಾವಣಾ ಪ್ರಸಂಗ' 'ಗರ್ಭ'ದಂತಹ ಕತೆಗಳಿಗೆ ಸಾಮಾಜಿಕ ಮಹತ್ವವೂ ಪ್ರಾಪ್ತವಾಗುತ್ತದೆ.

ದೊಡ್ಡಮರ, ಎಡಿಹುಣ್ಣು, ಒಂದು ಹುಡುಗಿಯ ಕತೆ, ಸಂಭವ, ಮೋ ಈ ಕತೆಗಳು ಕುತೂಹಲಕರವಾದ ಬೆಳವಣಿಗೆಯಿಂದ ಓದುಗನನ್ನು ಸೆರೆ ಹಿಡಿಯುತ್ತವೆ. ಸರಳ ನಡಿಗೆಯ ಈ ಕತೆಗಳು ಕತೆಗಳಾಗಿಯೂ ಮುಖ್ಯವಾದಂತೆ, ಮಧ್ಯಮವರ್ಗದ

ಮಾನವೀಯ ಸಂಬಂಧಗಳ ಅನೇಕ ನೆಲೆಗಳನ್ನು ಶೋಧಿಸುತ್ತವೆ. ಪ್ರಾದೇಶಿಕವಾದ ವಿವರಣೆಗಳಿಗೆ ಹೊರತಾಗಿ ಮಾನವೀಯ ಸಂಬಂಧಗಳ ವಿಸ್ಮಯಲೋಕವನ್ನು ತೆರೆದಿಡುತ್ತವೆ. ಪಾತ್ರಗಳ ಮೂಲಕವೇ ಇವು ಬಿಚ್ಚಿಕೊಳ್ಳುವ ಬದುಕಿನ ವ್ಯಾಪಕತೆ, ಕತೆಗಳಿಗೆ ಹಿರಿಮೆಯನ್ನು ತಂದುಕೊಟ್ಟಿವೆ. ಇವುಗಳಲ್ಲಿ 'ಏಡಿಯ ಹುಣ್ಣು' ಕತೆಯ ಯಶಸ್ಸು ಉಳಿದವುಗಳಿಗೆ ಲಭ್ಯವಾಗಿಲ್ಲ. ಇಲ್ಲಿ ಏಡಿಯ ಹುಣ್ಣಿನಿಂದ ಬಳಸಿ ಸಾವಿನ ಅಂಚಲ್ಲಿರುವವಳೊಬ್ಬಳು ತನ್ನ ಅನುಭವದಲ್ಲಿ ಬಂದುಹೋದ ಮಾನವೀಯ ಸಂಬಂಧಗಳ ನಿಗೂಢತೆಯನ್ನು ಕುರಿತ ವಿಸ್ಮಯ ಪ್ರಕಟವಾಗಿದೆ. ಏಡಿಯ ಹುಣ್ಣು ಶರೀರದ ಒಂದೊಂದೇ ಅಂಶಗಳನ್ನು ಕೊಲ್ಲುತ್ತಾ ವ್ಯಕ್ತಿಗೆ ಸಾವನ್ನು ತರುವ ಜೊತೆಗೆ ಬದುಕಿನಲ್ಲಿ ನಡೆದ ಅನೇಕ ಘಟನೆಗಳೂ ವ್ಯಕ್ತಿಯ ಬದುಕನ್ನು ನಿರ್ಜೀವಗೊಳಿಸಿದ ಪರಿಸ್ಥಿತಿಯೊಂದನ್ನು ಜೊತೆ ಜೊತೆಗೆ ಇಲ್ಲಿ ಹೆಣೆಯಲಾಗಿದೆ. ಇಲ್ಲಿನ ವಸ್ತು ಮತ್ತು ಅಭಿವ್ಯಕ್ತಿಯಲ್ಲಿನ ಅಚ್ಚುಕಟ್ಟುತನ ಕತೆಯ ಗುಣಾತ್ಮಕ ಅಂಶಗಳಾಗಿವೆ. ಈ ಕತೆ ಸೋಲಿನ ಮೂಲಕ ಅನುಭವದಾಳವನ್ನು ಬೆದಕುತ್ತಾ ಸಾಗಿದೆ. ಮೂರ್ತ ಬದುಕಿನಲ್ಲಿ ನಿಗೂಢವಾದ ಅನೇಕ ಸಂಬಂಧಗಳ ಗಹನತೆಯನ್ನು ಕುರಿತ ಚಿಂತನೆಯೂ ನಡೆದಿದೆ. ಈ ಕತೆಯಲ್ಲಿನ ವಸ್ತು ಮತ್ತು ಅಭಿವ್ಯಕ್ತಿಯಲ್ಲಿನ ಹೊಸತನದಿಂದಾಗಿ ಚೆನ್ನಿ ಗಮನಾರ್ಹರಾಗುತ್ತಾರೆ.

'ಯಕ್ಷಸೃಷ್ಟಿ' ಮಹಾಬಲಮೂರ್ತಿ ಕೊಡ್ಲೆಕೆರೆಯವರ ಎರಡನೆಯ ಕಥಾಸಂಕಲನ. ಮಾನವೀಯ ಸಂಬಂಧಗಳಲ್ಲಿನ ಹಲವು ನೆಲೆಗಳು ಇಲ್ಲಿನ ಒಂಬತ್ತೂ ಕತೆಗಳಲ್ಲಿ ಅನಾವರಣಗೊಂಡಿವೆ. ವೈಶಂಪಾಯನ ತೀರ, ವಿರಾಟ ನಗರ, ಸೆಳೆ ಮೊದಲಾದ ಕತೆಗಳಲ್ಲಿ ಪುರಾಣದ ಪ್ರತಿಮೆಗಳು ಮೂರ್ತಗೊಳ್ಳುತ್ತವೆ. ಆ ಮೂಲಕ ಹೆಚ್ಚಿನ ಅರ್ಥವ್ಯಾಪ್ತಿಯನ್ನು ದಕ್ಕಿಸಿಕೊಳ್ಳುತ್ತವೆ. ಕರಾವಳಿ ಕರ್ನಾಟಕದ ಸಾಂಸ್ಕೃತಿಕ ಆವರಣವನ್ನು ಕತೆಗಳಲ್ಲಿ ಸ್ಥಾಪಿಸುತ್ತಾ ಕನ್ನಡ ಉಪಭಾಷೆಯೊಂದನ್ನು ಸಂಭಾಷಣೆಗಳಲ್ಲಿ ಬಳಸಿಕೊಂಡು ಪ್ರಾದೇಶಿಕವಾಗಿಯೂ ಇಲ್ಲಿನ ಕತೆಗಳು ಗಟ್ಟಿಗೊಳ್ಳುತ್ತವೆ. ಕೊಡ್ಲೆಕೆರೆಯವರ ಬರವಣಿಗೆ, ಚಿಂತನೆಗಳಲ್ಲಿನ ಹೊಸತನ ಸಮಕಾಲೀನ ಕನ್ನಡ ಕಥಾಸಾಹಿತ್ಯ ಸಂದರ್ಭದಲ್ಲಿ ವಿಶಿಷ್ಟವಾಗಿದೆ. ಬದುಕಿನ ಸೂಕ್ಷ್ಮತೆಗಳನ್ನು ದುರ್ಬೀನು ಹಿಡಿದು ನೋಡುವ ಕತೆಗಾರರ ಅನ್ವೇಷಣೆ ಇಲ್ಲಿನ ಕತೆಗಳಲ್ಲಿ ವಾಸ್ತವವಾಗಿದೆ.

'ಬಿಡುಗಡೆ' ವೀಣಾಶಾಂತೇಶ್ವರರ ಹತ್ತು ಕತೆಗಳ ಸಂಕಲನ. ನಾಲ್ಕು ಸಂಕಲನಗಳನ್ನ ಪ್ರಕಟಿಸಿರುವ ಇವರ ಐದನೆಯ ಈ ಸಂಕಲನದ ಕತೆಗಳಲ್ಲಿ ವೈಶಿಷ್ಟ್ಯವೇನಿಲ್ಲ. ಸ್ತ್ರೀವಾದಿ ನೆಲೆಯಿಂದ ಹೊರಡುವ ಇವರ ಕತೆಗಳಲ್ಲಿ ಸಮಾಜದಲ್ಲಿ ಹೆಣ್ಣು ಶೋಷಣೆಗಳಿಗೆ ಹೇಗೆ ಬಲಿಯಾಗುತ್ತಾಳೆ ಮತ್ತು ಕಾರಣಳಾಗುತ್ತಾಳೆ ಎಂಬುದನ್ನು ದಾಖಲಿಸುತ್ತಾರೆ. ಮದುವೆಯ ಮೊದಲ ದಿನಗಳ ಅನುರಾಗ, ಕನಸುಗಳು ಕ್ರಮೇಣ ಭಗ್ನವಾಗಲು ಗಂಡನೇ ಕಾರಣವಾಗಿ ಆತನ ಸಾವಿನಿಂದಾಗಿ ಬಿಡುಗಡೆಯ ಭಾವನೆ ಪಡೆಯುವ ಹೆಣ್ಣಿನ ಕತೆ 'ಬಿಡುಗಡೆ'ಯಲ್ಲಿದೆ. ತೆರೆಯ ಮರೆಯಲ್ಲಿ ಹೆಣ್ಣಿನ

ಸಂಬಂಧವನ್ನು ಬಯಸುವ ಗಂಡುಸೊಬ್ಬನ ಸಾಮಾಜಿಕ ಪುಕ್ಕಲುತನವನ್ನು ಪ್ರಕಟಿಸುವ ದಿಟ್ಟೆಯ ಕತೆ 'ಹೀಗೊಂದು ಕತೆ'. ನಮ್ಮ ವ್ಯವಸ್ಥೆಯ ಟೊಳ್ಳುತನವನ್ನು ಪ್ರಕಟಿಸುವ ದ.ಬ್ರಾ. ಕೃಷ್ಣಪ್ಪ, ಜಾತಿನೀತಿಗಳ ಹಂಗಿಲ್ಲದೆ ಮಾನವೀಯತೆಯನ್ನೇ ಮುಖ್ಯವಾಗಿರಿಸಿ ಬಾಳಿದ ಹೆಣ್ಣಿನ ಕತೆ 'ರಾಧವ್ವ'. 'ಅನಾಥೆ', 'ತಾರಾ ಮ್ಯಾಡಮ್ ಮತ್ತು ತತ್ವಗಳು' ಕತೆಗಳು ಹೆಣ್ಣು ಹೆಣ್ಣನ್ನು ಅಮಾನವೀಯವಾಗಿ ನಡೆಸಿಕೊಳ್ಳುವುದನ್ನು ತಿಳಿಸುತ್ತದೆ. ಯುದ್ಧದಲ್ಲಿ ಹೋರಾಡಿ ಜಯಿಸಿದ ಧೀರ ಯೋಧನೊಬ್ಬ ಸಾಂಸಾರಿಕ ಬದುಕಿನಲ್ಲಿ ಸೋತು ಆತ್ಮಹತ್ಯೆಗೈದ ಕತೆ 'ಧೈರ್ಯದ ಮನುಷ್ಯ' ನಲ್ಲಿದೆ.

ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಹೆಸರುವಾಸಿಯಾದ ಹಿರಿಯ ಲೇಖಕರಾದ ಎನ್. ಪಿ. ಶಂಕರನಾರಾಯಣ ರಾವ್ ('ಭವಿಷ್ಯ ವಾಣಿ ಮತ್ತು ಇತರ ಕತೆಗಳು') ಸೂರ್ಯನಾಥ ಕಾಮತ್ ('ಖಿಚಡಿ') ಇವರ ಒಂದೊಂದು ಕಥಾಸಂಕಲನಗಳು ಈ ವರ್ಷ ಪ್ರಕಟವಾಗಿವೆ. ಕಳೆದ ಎರಡು, ಮೂರು ದಶಕಗಳಲ್ಲಿ ಆಗಾಗ ಬರೆದ ಕತೆಗಳನ್ನು ಇವುಗಳಲ್ಲಿ ಒಂದೆಡೆ ತರಲಾಗಿದೆ. ಕಥಾಸಾಹಿತ್ಯದ ಇತಿಹಾಸದ ಬೆಳವಣಿಗೆಯನ್ನು ಕೂಡಾ ಇವರ ಕತೆಗಳಲ್ಲಿ ಗುರುತಿಸಬಹುದು. ತಾವು ನಂಬಿರುವ ಒಂದು ಮೌಲ್ಯ ಅದು ಛಿದ್ರವಾಗುತ್ತಿರುವಾಗ ಹತಾಶರಾಗಿ ನೋಡುವ ಹಿರಿಯ ಮನಸ್ಸಿನ ಕಾಳಜಿಯೊಂದು ಇವರ ಕತೆಗಳ ಹಿಂದಿದೆ. ಕನ್ನಡದ ಹಿರಿಯ ಕತೆಗಾರರ ಕಾಳಜಿ, ಶ್ರದ್ಧೆ, ಶೈಲಿಗಳ ಹಿನ್ನೆಲೆಯಲ್ಲಿ ತಮ್ಮ ವಿಚಾರಗಳಿಗೆ ಇವರು ಕಥಾರೂಪವನ್ನು ನೀಡಿದ್ದಾರೆ. ಇದಕ್ಕೆ ಭಿನ್ನರಾಗಿ ಮಲ್ಲಯ್ಯ ಬರಗೂರರಂತಹ ಕಿರಿಯ ಬರಹಗಾರರು ಕಥಾಸಂಕಲನ ( 'ಹಣತೆ') ಪ್ರಕಟಿಸುವ ಸಾಹಸ ಮಾಡಿದ್ದಾರೆ. ಇಂತಹ ಸಾಹಸದ ಜೊತೆಗೆ ಕತೆ ಹೇಳುವ ಕಲೆ, ಮಾಧ್ಯಮದ ಶಿಸ್ತಿನ ಕಡೆಗೆ ಹೆಚ್ಚಿನ ಗಮನಕೊಡಬೇಕಾಗಿದೆ.

ಮೇಲೆ ಪ್ರಸ್ತಾಪಿಸಿದ ಕತೆಗಳನ್ನೂ ಒಳಗೊಂಡಂತೆ ಈ ವರ್ಷದ ಕತೆಗಳ ಬಗ್ಗೆ ಕೆಲವು ಮಾತುಗಳನ್ನು ಹೇಳಬಹುದೆನಿಸುತ್ತದೆ. ಸಾಮಾನ್ಯವಾಗಿ ಬಹುತೇಕ ಕತೆಗಾರರು ಶೋಷಣೆ, ಕೋಮುಗಲಭೆ, ಸಮಾಜ ವ್ಯವಸ್ಥೆಯ ಅಸಮಾನತೆಯ ಕುರಿತ ಆಶಯಗಳನ್ನೇ ಕತೆಯಾಗಿಸಿದ್ದಾರೆ. ಆದರೆ ಆಶಯಗಳನ್ನು ತಾತ್ವಿಕವಾಗಿ ಗಟ್ಟಿಗೊಳಿಸುವ ಗಾಂಭೀರ್ಯ ಬಹುತೇಕ ಕತೆಗಳಲ್ಲಿ ಇಲ್ಲವಾಗಿದೆ. ಇವು ಆಶಯ ಪ್ರಧಾನವಾದ ಒತ್ತಾಯದ ರಚನೆಗಳಾಗಿವೆಯೇ ಹೊರತು ಸಹಜವಾಗಿ ಅರಳಿನಿಂತ ಹೂವುಗಳಾಗಲಿಲ್ಲ. ಕಥಾಪಾತ್ರಗಳು ತಾವಾಗಿ ಬಂದು ಸಾಂಸ್ಕೃತಿಕ ಆವರಣದಲ್ಲಿ ಬೆಳೆದುನಿಂತು ಮಾತನಾಡದೆ ಕತೆಗಾರರೇ ನೇರವಾಗಿ ಮಾತನಾಡುವಂತೆ ತೋರುತ್ತದೆ. ಪತ್ರಿಕೆಗಳ ಅಗತ್ಯಗಳಿಗನುಗುಣವಾಗಿ ಕತೆಗಳನ್ನು ರಚಿಸಿದ್ದರಿಂದ ಅವುಗಳ ವಸ್ತು ನಿರೂಪಣೆಗಳ ಖಚಿತತೆಯ ಕಡೆಗೆ ಕತೆಗಾರರ ಗಮನವಿದ್ದಂತಿಲ್ಲ. ವೀಣಾ ಶಾಂತೇಶ್ವರರಂತಹ ಕತೆಗಾರರಿಗೂ ಹೊಸತೇನನ್ನು ಹೇಳಲು ಸಾಧ್ಯವಾಗದಿರುವುದು ಈ ಕಾರಣಕ್ಕಾಗಿ. ಯಾವುದೋ ಒಂದು ಆದರ್ಶವನ್ನು ಖಚಿತವಾಗಿಟ್ಟುಕೊಂಡು ಅವುಗಳ ಸುತ್ತ ಕಪ್ಪು ಬಿಳುಪು ಪಾತ್ರಗಳನ್ನು ವ್ಯವಹರಿಸುವಂತೆ ಕತೆಕಟ್ಟುವ ರೀತಿಯವು

ಅನುಭವಗಳಿಲ್ಲದೆ ಕೇವಲ ಕಾಲ್ಪನಿಕತೆಗೆ ಪ್ರಾಶಸ್ತ್ಯ. ಓದಿನ ಬಳಿಕ ಅವುಗಳ ಕತೆಗಳಾಗಿ ದಕ್ಕದೇ ಹೋಗುವ ಅಪಾಯಕ್ಕೆ ಇಂತಹ ಬರವಣಿಗೆಗಳು ಸಂದುಬಿಡುತ್ತವೆ. ಉದಾಹರಣೆಗೆ ವಸಂತೀಚಂದ್ರರ 'ಮೃಗತೃಷ್ಣೆ'ಯ ಕತೆಗಳನ್ನು ಹೆಸರಿಸಬಹುದು. ಕ್ಲೈಮಾಕ್ಸ್‌ನ್ನೇ ಕತೆಗಳ ಜೀವಾಳವಾಗಿ ಬರೆಯುವ ಅನೇಕ ಕತೆಗಾರರಿದ್ದಾರೆ. ಬಿ. ಆರ್. ಲಕ್ಷ್ಮಣರಾವ್ ಅವರ 'ಕಬ್ಬೆಕ್ಕು' ಸಂಕಲನದ ಕತೆಗಳನ್ನು ನಿದರ್ಶನವಾಗಿ ಹೇಳಬಹುದು. ಇಲ್ಲಿ ಜೀವನ ವಿವರಗಳಾಗಲಿ, ವಾಸ್ತವ ಚಿತ್ರಣಗಳಾಗಲಿ ಮುಖ್ಯವಾಗುವುದಿಲ್ಲ. ಕುತೂಹಲಕರವಾದ ಘಟನಾವಳಿಗಳ ಜೋಡಣೆಯಿದ್ದರೆ ಕತೆ ಮುಗಿದಂತೆ. ಹೀಗೆ ಕತೆಗಾರರ ಉದ್ದೇಶ, ದೃಷ್ಟಿಕೋನ, ಒತ್ತಡಗಳು ವಿಭಿನ್ನವಾಗಿವೆ. ರಚನೆಗಳು ವಿಭಿನ್ನ ಮಾದರಿಯವುಗಳಾಗಿವೆ. ಕತೆಗಳ ಸಂಖ್ಯೆ ಮತ್ತು ವಸ್ತು ವೈವಿಧ್ಯತೆಗಳಿಂದ ಈ ವರ್ಷದ ಸಣ್ಣಕತೆಗಳು ಬೆರಗು ಹುಟ್ಟಿಸುತ್ತವಾದರೂ ಶ್ರದ್ಧೇಯವಾದ ಕತೆಗಳ ಸಂಖ್ಯೆ ಕೇವಲ ಬೆರಳೆಣಿಕೆಯವು.

# ಕಾವ್ಯ

*ಓ. ಎಲ್. ನಾಗಭೂಷಣಸ್ವಾಮಿ*

೧

೧೯೯೪ ರಲ್ಲಿ ಸುಮಾರು ಒಂದು ನೂರ ಮೂವತ್ತು ಕವನ ಸಂಕಲನಗಳು ಪ್ರಕಟವಾದ ಮಾಹಿತಿ ದೊರೆತಿದೆ. ಅದರಲ್ಲಿ ಈ ಸಮೀಕ್ಷೆಗೆಂದು ಓದಲು ದೊರೆತವು ಕೇವಲ ನಲವತ್ತೈದು ಮಾತ್ರ. ಹೀಗಾಗಿ ಈ ಸಮೀಕ್ಷೆ ಅಪೂರ್ಣ. ಆದರೆ ಓದಲು ಸಾಧ್ಯವಾದ ಕವನ ಸಂಕಲನಗಳು ೯೪ ರಲ್ಲಿನ ಕನ್ನಡ ಕಾವ್ಯದ ಧೋರಣೆಗಳನ್ನು ಅರಿಯಲು ತಕ್ಕಮಟ್ಟಿಗೆ ಸಹಾಯ ಮಾಡುತ್ತವೆ.

ಕಾವ್ಯಕ್ಕೆ ವಿಚಿತ್ರ ಆಕರ್ಷಣೆ ಇದೆ. ಪ್ರತಿ ವರ್ಷವೂ ಪ್ರಕಟವಾಗುವ ಪುಸ್ತಕಗಳಲ್ಲಿ ಕವನ ಸಂಕಲನಗಳದೇ ದೊಡ್ಡ ಪಾಲು. ಕಾವ್ಯ ದೀಪದ ಜ್ವಾಲೆಗೆ ಬಲಿಯಾಗುವ ಪತಂಗಗಳೇ ಹೆಚ್ಚು, ಮನಸ್ಸನ್ನು ಬೆಳಗುವ ಕವನ ಕುಡಿಗಳು ಕಡಿಮೆ. ಬೆಳಗುವುದು ಹೇಗೆ? ಬಳಸಿ ಸವೆದ ಮಾತನ್ನು ಉಜ್ಜಿ ಹೊಳಪು ಕೊಡುವುದಕ್ಕೆ ಕೇವಲ ಕಾಣುವುದರ ಆಚೆಗೆ ಇರಬಹುದಾದ್ದನ್ನು ದರ್ಶಿಸುವ, ದೃಶ್ಯದ ತೆರೆ ತೆರೆಯುವ ನೋಟ ಬೇಕು. ಕಾವ್ಯ ಕೇವಲ ಭಾಷೆಯ ವ್ಯಾಪಾರ ಅಲ್ಲ. ಅದು ಮಾತನ್ನು ಬಳಸಿಯೂ ಮಾತಿಗೆ ಬರದೆ ನೇಪಥ್ಯದಲ್ಲೆ ಉಳಿಯುವ ಅನುಭವ. ಕವನವೆಂದರೆ ವಿವರಿಸುವ ಅರ್ಥ ಮಾತ್ರ ಎಂದು ಭ್ರಮಿಸುವ ಓದುಗ ಕವನದಿಂದ ದೊರೆಯಬಹುದಾದ ಅನುಭವ ಶ್ರೀಮಂತಿಕೆಯಿಂದ ವಂಚಿತನಾದರೆ, ಅರ್ಥದ ದಂಡೆಯಲ್ಲೆ ವಿರಮಿಸುವ ಕವಿಗೆ ಕಾವ್ಯ ಜಲದ ಯಾವ ಬಗೆಯ ಸ್ಪರ್ಶವೂ ದೊರೆಯುವುದಿಲ್ಲ. ''ಅರ್ಥದಲ್ಲಿ ರಮಿಸಿ, ವಿರಮಿಸದೆ '' ಎಂಬ ಮಾತು ಓದುಗನಿಗೆ ಹೇಗೋ ಕವಿಗೂ ಹಾಗೇ ಅನ್ವಯ ವಾಗುತ್ತದೆ. ಹಾಗೆ ಅರ್ಥದಲ್ಲಿ ವಿರಮಿಸದ ಕಾವ್ಯ ಎಂದೂ ಅಪರೂಪವೇ. ೧೯೯೪ ಈ ಮಾತಿಗೆ ವಿನಾಯತಿಯ ವರ್ಷ ಅಲ್ಲ.

೨

ಕಾವ್ಯಸಂಸ್ಕೃತಿಯ ಬೆಳವಣಿಗೆಗೆ ಸಾಂಸ್ಥಿಕ ಪ್ರಯತ್ನಗಳು ಈ ವರ್ಷವೂ ನಡೆದಿವೆ. ಮುಖ್ಯವಾಗಿ ಗಮನಿಸಬೇಕಾದವು -ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಪ್ರಕಟಣೆ, ಮೈಸೂರಿನ ರೀಜನಲ್ ಕಾಲೇಜು ನಡೆಸಿದ ಕಾವ್ಯ ಕಮ್ಮಟ, ಸಾಹಿತ್ಯ ಅಕಾಡೆಮಿಯು ನಡೆಸಿದ ವಿವಿಧ ಕಮ್ಮಟಗಳು, ಹೆಗ್ಗೋಡಿನ ನೀನಾಸಂ ನಾಡಿನ ವಿವಿಧ ಎಡೆಗಳಲ್ಲಿ ನಡೆಸುವ ಕಾವ್ಯ ರಸಗ್ರಹಣ ಶಿಬಿರಗಳು ಮತ್ತು ಕನ್ನಡ ವಿಶ್ವವಿದ್ಯಾಲಯದಲ್ಲಿ ಕಾವ್ಯಕೇಂದ್ರದ ಉದ್ಘಾಟನೆ.

ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘವು ಟಿ. ಶ್ರೀನಿವಾಸರಾಜು ಅವರ ನೇತೃತ್ವದಲ್ಲಿ ಕಳೆದ ಎರಡು ದಶಕಗಳಿಗೂ ಮಿಕ್ಕಿ ನಿಯತವಾಗಿ ಪ್ರತಿವರ್ಷವೂ ಕವನ ಸ್ಪರ್ಧೆಯನ್ನು ಏರ್ಪಡಿಸುತ್ತ ಬಂದಿದೆ. ಪ್ರತಿವರ್ಷವೂ ಆಯ್ಕೆಯಾದ ಉತ್ತಮ ಕವನಗಳನ್ನು ಸಂಕಲನ ರೂಪದಲ್ಲಿ ಪ್ರಕಟಿಸುತ್ತ ಬಂದಿದೆ. ಕನ್ನಡ ಸಂಘದ ಈ ಕಾರ್ಯಕ್ರಮದಿಂದ ಅನೇಕ ಯುವ ಕವಿಗಳಿಗೆ ಆತ್ಮವಿಶ್ವಾಸ ಮೂಡಿದೆ. ಈ ಮಾತಿಗೆ ಕನ್ನಡ ಸಂಘದ ಸ್ಪರ್ಧೆಗಳಲ್ಲಿ ಮೊದಲ ಬಾರಿ ಕಾಣಿಸಿಕೊಂಡ ಅನೇಕ ಬರಹಗಾರರು ತಮ್ಮ ಸಾಧನೆಯನ್ನು ಮುಂದುವರೆಸಿ ಈಗ ಗಮನಿಸಬೇಕಾದ ಲೇಖಕರಾಗಿ, ಇನ್ನು ಕೆಲವರು ಮುಖ್ಯ ಕವಿಗಳಾಗಿ ರೂಪುಗೊಳ್ಳುತ್ತಿರುವುದೇ ಸಾಕ್ಷಿ. ಈ ಬಾರಿಯೂ 'ಮೊದಲಿನ ಮಿಸುಕಾಟ'ದಲ್ಲಿ ವಿಕ್ರಮ ವಿಸಾಜಿ, ಟಿ. ಯಲ್ಲಪ್ಪ, ಮಹದೇವ ಶೆಟ್ಟಿಯವರಂಥ ನಿರೀಕ್ಷೆ ಮೂಡಿಸುವ ಕವಿಗಳ ರಚನೆಗಳಿವೆ. ಒಂದು ಸಂಘಟನೆ ಹೇಗೆ ಭಾಷೆಯೊಂದರ ಕಾವ್ಯ ಪರಿಸರ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಬಹುದು ಎಂಬುದಕ್ಕೆ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಒಂದು ನಿದರ್ಶನವಾಗಿದೆ.

'ಹದಿಹೆಜ್ಜೆ' ಒಂದು ವಿಶಿಷ್ಟ ಪ್ರಯೋಗದ ದಾಖಲೆ. ನಿರ್ದಿಷ್ಟ ವಯೋಮಾನದ, ಕಾವ್ಯ ರಚನೆಯಲ್ಲಿ ಆಸಕ್ತಿಯನ್ನುಳ್ಳ, ಕವಿಗಳನ್ನು ಒಟ್ಟುಗೂಡಿಸಿ ಕಾವ್ಯರಚನೆಯ ಬಗ್ಗೆ 'ಶಿಬಿರ'ವನ್ನು ನಡೆಸುವುದು ಜನಪ್ರಿಯ ಕಾರ್ಯಕ್ರಮವಾಗಿದೆ. ಆದರೆ ಅಂಥ ಶಿಬಿರದ ಫಲಿತಾಂಶಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುವುದು ಅಪರೂಪ. ಮೈಸೂರಿನ ರೀಜನಲ್ ಕಾಲೇಜಿನಲ್ಲಿ ಪೊಯಟ್ರಿ ಸೊಸೈಟಿ ಆಫ್ ಇಂಡಿಯಾದ ಸಹಯೋಗದಲ್ಲಿ ೧೫ ರಿಂದ ೧೯ ವರ್ಷದೊಳಗಿನ ೪೦ ತರುಣ ಕವಿಗಳಿಗಾಗಿ ನಡೆಸಿದ ೫ ದಿನಗಳ ಶಿಬಿರದ ಫಲಿತಾಂಶ ಇಲ್ಲಿದೆ. ಸಂಪಾದಕರಾದ ಎಸ್. ಎಸ್. ರಘುನಾಥ್ ಅವರು ಬರೆದಿರುವ ದೀರ್ಘ ಪ್ರಸ್ತಾವನೆಯು ಶಿಬಿರವನ್ನು ಯೋಜಿಸುವಲ್ಲಿ ಅವರು ತೋರಿರುವ ಮುತುವರ್ಜಿಯನ್ನು, ಸೃಜನಶೀಲ ಬರವಣಿಗೆಗೆ ಸಂಬಂಧಿಸಿದಂತೆ ಯಾವ ಬಗೆಯ ತರಬೇತಿಯನ್ನು ನೀಡಲು ಸಾಧ್ಯ ಎಂಬ ಬಗ್ಗೆ ಶಿಬಿರ ಯೋಜಕರಲ್ಲಿದ್ದ ವಾಸ್ತವ ದೃಷ್ಟಿಕೋನವನ್ನೂ ಪರಿಚಯ ಮಾಡಿಕೊಡುತ್ತದೆ. ಕನ್ನಡದ ತರುಣ ಮನಸ್ಸುಗಳಿಗೆ ಇಂಥ ಅನೌಪಚಾರಿಕ ಕಾವ್ಯ ಶಿಕ್ಷಣ ಅಗತ್ಯವೆನ್ನುವುದನ್ನು ಈ ಸಂಕಲನ ಮನದಟ್ಟು ಮಾಡಿಕೊಡುತ್ತದೆ. ಶಿಬಿರದಲ್ಲಿ ಕೆಲವು ನಿರ್ದಿಷ್ಟ ಕಾವ್ಯ ವಸ್ತುಗಳನ್ನು ಸೂಚಿಸಿ ಕವಿಗಳು ಅವುಗಳನ್ನು ಕುರಿತು ಕವನರಚಿಸಿರುವುದರಿಂದ ಒಂದೇ ವಸ್ತುವನ್ನು ಕುರಿತು ಹಲವು ಮನಸ್ಸುಗಳು 'ನಿಯಂತ್ರಿತ' ಪರಿಸರದಲ್ಲಿ ಹೇಗೆ ಪ್ರತಿಕ್ರಿಯೆ ಮತ್ತು ಅಭಿವ್ಯಕ್ತಿಯನ್ನು ಸಾಧಿಸಿವೆ ಎಂದು ತಿಳಿಯುವುದು ಸಾಧ್ಯವಾಗಿದೆ. ಇಂಥ ಶಿಬಿರಗಳು, ಕವಿಗಳನ್ನುಸೃಷ್ಟಿಸಲಾಗದಿದ್ದರೂ ಕಾವ್ಯದಲ್ಲಿ ಆಸಕ್ತಿಯನ್ನು ಮೂಡಿಸಿ, ಕಲೆಗಾರಿಕೆಯ ಅಗತ್ಯ ಮತ್ತು ಕಾವ್ಯಾಧ್ಯಯನದ ಅನಿವಾರ್ಯತೆಗಳನ್ನು ತರುಣರಿಗೆ ಮನವರಿಕೆ ಮಾಡಿಕೊಡುವುದರಿಂದ ಇನ್ನೂ ಹೆಚ್ಚು ಪ್ರಮಾಣದಲ್ಲಿ ನಡೆಯುವುದು ಅಪೇಕ್ಷಣೀಯ. ಇಲ್ಲಿನ ಕವಿಗಳಲ್ಲಿ ಹಲವರಾದರೂ ತಮ್ಮ ಕಾವ್ಯಾಸಕ್ತಿಯನ್ನು ರೂಢಿಸಿಕೊಳ್ಳುತ್ತಾರೆಂದು ಹಾರೈಸಬಹುದಾಗಿದೆ.

ಸಾಹಿತ್ಯ ಅಕಾಡೆಮಿಯು ಕಾವ್ಯ, ಕಥೆ, ವಿಮರ್ಶೆಗಳನ್ನು ಕುರಿತಂತೆ ಪ್ರತಿವರ್ಷವೂ ಮೂರು ದಿನಗಳ ಕಮ್ಮಟವನ್ನು ನಡೆಸುತ್ತದೆ. ನಾಡಿನ ಪ್ರಸಿದ್ಧ ಸಾಹಿತಿಗಳು, ವಿಮರ್ಶಕರು ಈ ಕಮ್ಮಟಗಳಲ್ಲಿ ತರುಣರಿಗೆ ಕಾವ್ಯ, ಕಥೆ, ವಿಮರ್ಶೆಗಳನ್ನು ಕುರಿತ ಮಾರ್ಗದರ್ಶನ ನೀಡುತ್ತಾರೆ. ಆದರೆ ಈ ಕಾರ್ಯಕ್ರಮದ ಅವಧಿ ತೀರ ಕಡಿಮೆಯಾಗಿರುವುದು ಮತ್ತು ಕಾರ್ಯಕ್ರಮದ ರೂಪಿಕೆಯಲ್ಲಿ ಏಕಸೂತ್ರತೆ ಮತ್ತು ಸಾತತ್ಯ ಇಲ್ಲದಿರುವುದು ಮುಖ್ಯ ಕೊರತೆಗಳು.

ಹೆಗ್ಗೋಡಿನ ನೀನಾಸಂ ನಾಡಿನ ವಿವಿಧ ಎಡೆಗಳಲ್ಲಿ ಸ್ಥಳೀಯ ಸಂಸ್ಥೆಗಳ ಸಹಕಾರವನ್ನು ಪಡೆದು ಒಂದರಿಂದ ಮೂರು ದಿನಗಳವರೆಗಿನ ಕಾವ್ಯರಸಗ್ರಹಣ ಶಿಬಿರಗಳನ್ನು ನಡೆಸುತ್ತದೆ. ಟಿ. ಪಿ. ಅಶೋಕ ಈ ಶಿಬಿರಗಳ ನಿರ್ದೇಶಕರಾಗಿದ್ದಾರೆ. ಈ ಕಾರ್ಯಕ್ರಮಗಳಿಗೆ ತರುಣರಲ್ಲಿ ಕಾವ್ಯಾಭಿರುಚಿಯನ್ನು ಹುಟ್ಟಿಸುವ ನಿರ್ದಿಷ್ಟ ಉದ್ದೇಶವಿದೆ. ಉದಾಹರಣೆಗೆ ಸಾಗರದ ಕಾಲೇಜಿನಲ್ಲಿ ನಡೆದ ಗೋಪಾಲಕೃಷ್ಣ ಅಡಿಗರ ಕಾವ್ಯವನ್ನು ಕುರಿತ ಶಿಬಿರದಲ್ಲಿ ರಾಜ್ಯದ ವಿವಿಧ ಭಾಗಗಳಿಂದ ಬಂದಿದ್ದ ವಿದ್ಯಾರ್ಥಿಗಳು ಮತ್ತು ಕಾವ್ಯಾಸಕ್ತರು ಅಡಿಗರ ಕವನಗಳನ್ನು ಕುರಿತು ನಡೆಸಿದ ಅಧ್ಯಯನ ಮತ್ತು ಸಂವಾದ ತೀರ ಉಪಯುಕ್ತವಾಗಿತ್ತು. ಇಂಥ ನಿರ್ದಿಷ್ಟ ಉದ್ದೇಶ ಮತ್ತು ರೂಪದ ಕಾರ್ಯಕ್ರಮಗಳಿಗೆ ಉತ್ಸಾಹದ ಸ್ವಾಗತ ದೊರೆತಿದೆ.

ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ವಿಭಾಗವು 'ಕಾವ್ಯಕೇಂದ್ರ'ವನ್ನು ೧೯೯೪ ರಲ್ಲಿ ಆರಂಭಿಸಿದೆ. ಕನ್ನಡದ ಮತ್ತು ಜಗತ್ತಿನ ಉತ್ತಮ ಕಾವ್ಯದ ಸಂಗ್ರಹ, ಕಾವ್ಯದ ಅನುವಾದ ಶಿಬಿರಗಳು, ಕವಿ-ಕಾವ್ಯ ಮಾಹಿತಿ, ಧ್ವನಿಮುದ್ರಣ, ರಸಗ್ರಹಣ ಮತ್ತು ಕಾವ್ಯಬೋಧನೆಯ ಕಮ್ಮಟಗಳು ಇವೆಲ್ಲ ಕಾರ್ಯಕ್ರಮಗಳನ್ನು ನಡೆಸುವುದು ಈ ಕೇಂದ್ರದ ಉದ್ದೇಶವಾಗಿದೆ.

೩

ಹೆಮ್ಮರಗಳು, ಸಾಧಕರು, ಗುಂಪಿಗರು ಮತ್ತು ಅಳಿಲುಗಳು - ೧೯೯೪ರ ಅತ್ಯುತ್ತಮ ಕವನ ಸಂಕಲನಗಳು ಮತ್ತೆ ನಮ್ಮ ಹಿರಿಯ ಕವಿಗಳಿಂದಲೇ ಬಂದಿವೆ. ಇವು ಹೆಮ್ಮರಗಳು ಬಿಟ್ಟ ಹೊಸ ಹಣ್ಣುಗಳು. ಕಳೆದ ವರ್ಷಗಳಲ್ಲಿ 'ಮತ್ತೆ ಇವರು ಬರೆದರೆ ಓದಬಹುದು' ಎಂಬ ಆಸೆ ಹುಟ್ಟಿಸಿದ್ದ ಕೆಲವು ಕವಿಗಳ ಹೊಸ ಸಂಕಲನಗಳು ಬಂದಿವೆ. ಇವರು ಕಾವ್ಯ ಸಾಧನೆಯನ್ನು ಕೈ ಬಿಡದೆ ಮುಂದುವರೆಸಿದವರು. ಸಾಮೂಹಿಕ ಪ್ರಯತ್ನವಾಗಿ ಜಿಲ್ಲೆ, ತಾಲ್ಲೂಕು ಮಟ್ಟದ ಕವಿಗಳ ಗುಂಪನ್ನು ನಿರ್ಮಿಸುವ ಸಂಕಲನಗಳು ಇನ್ನು ಕೆಲವು. ತಮ್ಮಮಟ್ಟಿಗೆ ಪ್ರಾಮಾಣಿಕವೂ ತೀವ್ರವೂ ಆದ ಅನಿಸಿಕೆಗಳನ್ನು ಹಾಗೇ ಮುಗ್ಧವಾಗಿ ಕವನವೆಂಬಂತೆ ಕಾಣುವ ಸಾಲುಗಳಲ್ಲಿ ಅಚ್ಚು ಮಾಡಿಸಿ ಸಾಹಿತ್ಯ ಸೇವೆಗೆ ನಾಲ್ಕು ಕಣ ಮರಳು ಹೊತ್ತು ತಂದಿರುವ ಅಳಿಲು ಕವಿಗಳು ಇನ್ನು ಕೆಲವರು. ಈ ಚಿತ್ರವೂ ಅಷ್ಟೆ. ಕಳೆದ ವರ್ಷದ ಚಿತ್ರದ ಹೊಸ ಆವೃತ್ತಿ. ಇದು ನಿರಾಸೆಯ ಮಾತಲ್ಲ. ಕಾವ್ಯಲೋಕ ಯಾವಾಗಲೂ ಇರುವುದೇ ಹೀಗೆ.

ಚನ್ನವೀರ ಕಣವಿಯುವರ 'ಶಿಶಿರದಲ್ಲಿ ಬಂದ ಸ್ನೇಹಿತ', ಚಂದ್ರಶೇಖರ ಕಂಬಾರರ 'ಅಕ್ಕಕ್ಕು ಹಾಡುಗಳೇ ' ಮತ್ತು ಅವರ ಸಮಗ್ರ ಕವನಗಳ ಸಂಕಲನ 'ಈ ವರೆಗಿನ ಹೇಳತೇನ ಕೇಳ', ಚಂದ್ರಶೇಖರ ಪಾಟೀಲರ 'ಗುಂಡಮ್ಮನ ಹಾಡು' ಮತ್ತು 'ಶಾಲ್ಮಲಾ', ಸಿದ್ಧಲಿಂಗ ಪಟ್ಟಣಶೆಟ್ಟಿಯವರ 'ಇಂದು ರಾತ್ರಿಯ ಹಾಗೆ 'ಮತ್ತು ಅವರ ಆಯ್ದ ಕವನಗಳ ಸಂಕಲನ 'ಅಂತರಂಗದ ಕವನಗಳು', ಜಿ. ಎಸ್. ಸಿದ್ಧಲಿಂಗಯ್ಯನವರ 'ಹೇಮಕೂಟ ಮತ್ತು', ನಿಸಾರ್ ಅಹಮದ್ ಅವರ 'ಭಾವೋಲ್ಲಾಸ', ಸುಮತೀಂದ್ರ ನಾಡಿಗರ'ನಟರಾಜ ಕಂಡ ಕಾಮನಬಿಲ್ಲು' ಇವು ೧೯೯೪ ರಲ್ಲಿ ಪ್ರಕಟವಾಗಿರುವ ಹಿರಿಯ ಕವಿಗಳ ಕೆಲವು ಸಂಕಲನಗಳು, ಕನ್ನಡದ ಹಿರಿಯ ವಿದ್ವಾಂಸರಾದ ಎಲ್. ಬಸವರಾಜು ಅವರು ಕಾವ್ಯಾಸಕ್ತರೆಲ್ಲ ಬೆರಗಾಗುವಂತೆ ತಮ್ಮ ಮೊದಲ ಕವನ ಸಂಕಲನ 'ಠಾಣಾಂತರ'ವನ್ನು ಹೊರತಂದಿದ್ದಾರೆ.

ಹಿರಿಯ ಕವಿ ಚೆನ್ನವೀರ ಕಣವಿಯವರ ಹೊಸ ಕವಿತೆಗಳ ಸಂಕಲನ 'ಶಿಶಿರದಲ್ಲಿ ಬಂದ ಸ್ನೇಹಿತ'.ಹದಿನೇಳು ಅನುವಾದಗಳೂ ಇದರಲ್ಲಿವೆ. ಕಣವಿಯವರ ವೈಶಿಷ್ಟ್ಯವಾದ ವ್ಯಕ್ತಿ ಚಿತ್ರಣದ ಸಾನೆಟ್‌ಗಳೂ, ಯಾವುದೊ ಸಂಗತಿ, ಪುಸ್ತಕ ಚಿತ್ರ ಪ್ರೇರಿಸಿದ ಕವನಗಳೂ ಇವೆ. ಮೆಲುದನಿಯ ಸಜ್ಜನ ಕವಿಯೊಬ್ಬನ ರಚನೆಗಳು ಇವು. 'ಶಿಶಿರದಲ್ಲಿ ಬಂದ ಸ್ನೇಹಿತ', 'ಅರುವತ್ತರಾಚೆ', 'ಗುಲ್ ಮೊಹರ್' ಇಂಥ ಕೆಲವು ಕವನಗಳು ಮರು ಓದನ್ನು ಬಯಸುತ್ತವೆ. ಕಾವ್ಯಕ್ಕೆ ಇರುವ ಮೌನದ ಆಯಾಮ ಇಲ್ಲಿನ ಹಲವು ಕವನಗಳ ವಸ್ತುವಾಗಿದೆ. 'ಕವಿತೆ' ಕವನದ ಕೊನೆಯ ಸಾಲುಗಳು, 'ಅರುವತ್ತರಾಚೆ' ಸಾನೆಟ್ಟಿನ ಕೊನೆಯ ಭಾಗ, 'ಶಬ್ದ ನಿಶ್ಶಬ್ದ' ಇಂಥ ಕವನಗಳಲ್ಲಿ ಈ ಅಂಶ ಸ್ಪಷ್ಟವಾಗುತ್ತದೆ.

ಪ್ರಕೃತಿ ಸ್ವಚ್ಛಂದ
ಲಯ ತಪ್ಪಿದರೆ ಹಿಂಸೆ, ಆಘಾತ,
ಸಮತೋಲಕ್ಕೆ ಬೇಕು, ತಾಳ್ಮೆ, ನಿಗ್ರಹ ಬದುಕಿನಾದ್ಯಂತ

ಎಂಬ ಮಾತು ಇಲ್ಲಿನ ಕವನಗಳ ಮತ್ತು ಕಣವಿಯವರ ಕಾವ್ಯದ ಪ್ರಧಾನ ಆಶಯವಾಗಿದೆ.

'ಅಕ್ಕಕ್ಕು ಹಾಡುಗಳೇ' ಸಂಕಲನದಲ್ಲಿ ಕಂಬಾರರ ಮೂವತ್ತು ಹೊಸ ಕವನಗಳಿವೆ. ಇವುಗಳಲ್ಲಿ ಕೆಲವು ಅವರ ನಾಟಕಗಳ ಹಾಡುಗಳು. ಅವು ನಾಟಕದ ಭಾಗವಾಗಿ ಮಾತ್ರವಲ್ಲದೆ ತಮ್ಮಷ್ಟಕ್ಕೇ ಕೂಡ ಚೆನ್ನಾಗಿವೆ. 'ತುಕ್ರನ ಕನಸು' ನಾಟಕದ ಹಾಡುಗಳು ತೀರ ಸಾಮಾನ್ಯನೊಬ್ಬ ಚರಿತ್ರೆಯ ಭಾಗವಾಗಲು ಹವಣಿಸಿದ ಸಂದರ್ಭಗಳನ್ನು ಸಹಾನುಭೂತಿಯುಕ್ತ ವಿಡಂಬನೆಯೊಂದಿಗೆ ಮಂಡಿಸುತ್ತವೆ. ನಮ್ಮೆಲ್ಲರ ಅಂತರಂಗದ ಬದುಕಿನ ಮೇಲೂ ದುರಂತದ ನೆರಳನ್ನು ಹರಡುತ್ತಿರುವ ಪಶ್ಚಿಮಲೋಕದ ಜೀವನದೃಷ್ಟಿಗೆ ರೂಪಕವಾಗಿರುವ 'ಜನಪದ ಕತೆಗಳ ರಾಕ್ಷಸ', ಬೇರೆ ಬೇರೆ ಹೋಲಿಕೆಗಳನ್ನು ನೀಡುತ್ತಾ ಆ ಹೋಲಿಕೆಗಳೇ ಬದುಕಿನ ತೀರ ಬೇರೆ ಬೇರೆ ಅನುಭವಗಳನ್ನು ಮಂಡಿಸುವಂತಿರುವ 'ಹಂಪಿಯ ಬಂಡೆಗಳು', ಮತ್ತು

ತಂದೆ-ತಾಯಿ-ಮಗಳು ಹಾಗೂ ಕುಟುಂಬದ ಆತ್ಮೀಯ ಚಿತ್ರವು ಮನುಷ್ಯನ ಸಾರ್ವಕಾಲಿಕ ಆಸೆ ಅಪೇಕ್ಷೆ ಮತ್ತು ಹಿತವೂ ಅನಿವಾರ್ಯವೂ ಆದ ವೇದನೆಗಳನ್ನು ಧ್ವನಿಸುವ 'ಹೊಸಬಾಳಿಗೆ ಹೊರಟ ಮಗಳಿಗೆ' ಇವು ಈ ಸಂಕಲನದ ಮುಖ್ಯ ಕವನಗಳು. 'ಅತಿಥಿ' ಮತ್ತು 'ಆ ಮುದುಕ' ಇತ್ತೀಚೆಗೆ ಕಂಬಾರರ ಕವನಗಳಲ್ಲಿ ಮುಖ್ಯವಾಗುತ್ತಿರುವ, ಆಧ್ಯಾತ್ಮ ಎಂದು ಕರೆಯಬಹುದಾದ, ಒಂದು ಹಂಬಲವನ್ನು ವ್ಯಕ್ತಪಡಿಸುತ್ತವೆ. 'ಬೆಳ್ಳಿ ಮೀನು' ಸಂಕಲನದಿಂದ ಈಚೆಗೆ ಕಂಬಾರರ ಕವನಗಳಲ್ಲಿ ಮರ ಮತ್ತು ಹಸಿರು ಪ್ರಮುಖ ಕಲ್ಪನೆಗಳಾಗಿ ಬೆಳೆದಿರುವುದನ್ನು ಇಲ್ಲಿ ಕಾಣಬಹುದು. ಹಾಗೆಯೇ ನಾಟಕ ಮತ್ತು ರಂಗಭೂಮಿಯ ರೂಪಕವನ್ನು ಮತ್ತಷ್ಟು ಅನ್ವೇಷಿಸುವ ಕವನಗಳೂ ಇಲ್ಲಿವೆ. ಶುಭದ ಅಪೇಕ್ಷೆ ಮತ್ತು ಬದುಕಿಗೆ ಹಿತ ತರುವ ಕನಸಿನ ಹಂಬಲ ಈ ಸಂಕಲನದ ಕವನಗಳ ಹಿಂದಿರುವ ಮುಖ್ಯ ಪ್ರೇರಣೆಗಳಾಗಿವೆ.

'ಕ್ಷಿತಿಜದ ಕಣ್ಣಲ್ಲಿ ಬೆಳಕು ಹೊಳೆಯೋ ಹಾಂಗ
ಹಾಡಬೇಕೋ ತಮ್ಮ ಹಾಡಬೇಕು
ಕಲ್ಲಿನ ಎದೆಯಲ್ಲಿ ಜೀವ ಜಲ ಜಲ್ಲೆಂದು
ಚಿಮ್ಮುವಂಥಾ ಹಾಡ ಹಾಡಬೇಕು'

ಈ ಸಾಲುಗಳು ಸಂಕಲನದ ಹಾಡುಗಳ ಹಿಂದಿನ ಪ್ರೇರಣೆಯನ್ನು ತಿಳಿಸುತ್ತವೆ.

'ಅಕ್ಕಕ್ಕು ಹಾಡುಗಳೇ' ಮಾತ್ರವಲ್ಲದೆ ಕಂಬಾರರ 'ಇದುವರೆಗಿನ ಹೇಳತೇನ ಕೇಳ' ಎಂಬ ಹೆಸರಿನ ಸಮಗ್ರ ಕಾವ್ಯವೂ ಈ ವರ್ಷ ಪ್ರಕಟವಾಗಿದೆ. ಇದರಿಂದ ಕಾವ್ಯಾಭ್ಯಾಸಿಗಳಿಗೆ ಕಂಬಾರರ ಮುಖ್ಯಕವನಗಳೆಲ್ಲ ಒಂದೆಡೆ ದೊರೆಯುವಂತಾಗಿದೆ.

'ಶಾಲ್ಮಲಾ ನನ್ನ ಶಾಲ್ಮಲಾ' ಚಂದ್ರಶೇಖರ ಪಾಟೀಲರ ಹೊಸ ಕವನಗಳ ಸಂಕಲನ. ೧೯೭೦ ರಿಂದ ಅವರು ರಚಿಸಿರುವ ಎಪ್ಪತ್ತು ಕವನಗಳು ಇಲ್ಲಿವೆ. ಸಮಕಾಲೀನ ಸಂಗತಿಗಳಿಗೆ ಮತ್ತು ವ್ಯಕ್ತಿತ್ವಗಳಿಗೆ ಚಂಪಾ ಅವರು ತೋರುವ ತೀಕ್ಷ್ಣ ಪ್ರತಿಕ್ರಿಯೆಗಳು ಕೆಲವು ಕವನಗಳಲ್ಲಿವೆ.

'ಕನಸು ಕಾಣದೆ ಕವನ ಬರೆಯುವುದು ಹ್ಯಾಗೆ?
ನಿದ್ದೆ ಬಾರದೆ ಕನಸು ಕಾಣುವುದು ಹ್ಯಾಗೆ?
ಕೊಳೆತ ಹಲ್ಲಿಗೆ ಕೊಳೆತ ಹಲ್ಲೆಂದು ಕರೆಯದೆ
ನಿದ್ದೆ ಬರುವುದು ಹ್ಯಾಗೆ'

ಎಂಬ ಸಾಲುಗಳು ತಾವು ಕಂಡ ಸತ್ಯವನ್ನು ಹೇಳಲೇಬೇಕೆಂಬ ಹಟವನ್ನೂ ಕನಸಿನ ಹಂಬಲವನ್ನೂ ಒಟ್ಟಿಗೇ ಹೇಳುತ್ತವೆ. ಈ ಹಟ ಮತ್ತು ಹಂಬಲ ಚಂಪಾರ ಕಾವ್ಯದ ಮುಖ್ಯ ಸೆಳೆತ ಎನ್ನಿಸುತ್ತದೆ. ಹಟ ಮುಖ್ಯವಾದಾಗ ವಿಡಂಬನೆಯ ಆರ್ಭಟ, ಕಟಕಿ ಇಂಥವೇ ಗುಟುರು ಹಾಕುತ್ತವೆ. ಕನಸಿನ ಬೆನ್ನು ಹತ್ತಿದಾಗ ಅಂತರಂಗದ ವೀಕ್ಷಣೆಯತ್ತ ತಿರುಗಿ ನೆನಪಿನಲ್ಲಿ ಉಳಿದು ನಮ್ಮನ್ನು ಮತ್ತೆ ಮತ್ತೆ ಕಾಡುವ 'ಶಾಲ್ಮಲಾ ನನ್ನ ಶಾಲ್ಮಲಾ', 'ಉಳಿದ ನದಿಗಳ ಹಾಗೆ', 'ನನಗೆ ಅನ್ನಿಸಿರಲಿಲ್ಲ', 'ಭೂಮಿಯ ನಂಟು,'

'ಅಂತ್ಯ' ದಂಥ ಕವನಗಳು ಮೂಡುತ್ತವೆ. 'ದ್ರೌಪದಿಯ ಸಾಪ್ತಾಹಿಕ' ಎಂಬ, ಕವಿಗೋಷ್ಠಿಗಳಲ್ಲಿ ಬಹಳ ಜನಪ್ರಿಯತೆಯನ್ನು ಗಳಿಸಿರುವ, ಕವನವೂ ಈ ಸಂಕಲನದಲ್ಲಿದೆ. ಈ ಕವನದ ರಚನಾ ಕೌಶಲ ಸಾವಧಾನದ ಓದಿನಲ್ಲಿ ಗಮನ ಸೆಳೆಯುತ್ತದೆ. ಲಘು ಧಾಟಿಯಲ್ಲಿ ಸಾಗುವ ಕವನದಲ್ಲಿ ನಮ್ಮ ಸಂಸ್ಕೃತಿಯ ವ್ಯಾಖ್ಯಾನವೂ ಅತೃಪ್ತಳಾಗಿ ಕಾಯುವ ಹೆಣ್ಣಿನ ಸ್ಥಿತಿಯ ಬಗೆಗಿನ ವಿಷಾದದ ತೆಳು ಗರೆಯೂ ಕಾಣುತ್ತವೆ. ದ್ರೌಪದಿಯ ಕಾಯುವಿಕೆಯನ್ನು ಪಣತಿಯ ವಿವಿಧ ಸ್ಥಿತಿಗಳೊಂದಿಗೆ ಹೋಲಿಸಿ ಪ್ರತಿಮೆಯೊಂದನ್ನು ಚಂಪಾ ನಿರ್ಮಿಸುತ್ತಾರೆ. ರಾಮಾಯಣ ಮಹಾಭಾರತಗಳೆರಡೂ ಕ್ರಿಕೆಟ್ಟಿನೊಡನೆ ಕಲೆಸಿಕೊಂಡು ಟಿವಿಯ ವಾರದ ಕಂತುಗಳ ತುತ್ತಾಗಿ, ಗಂಡು-ಹೆಣ್ಣುಗಳ ಸಂಬಂಧದಲ್ಲಿ ಪುರಾಣ ಕಾಲದಿಂದ ಇಂದಿನವರೆಗೂ ಹೆಣ್ಣಿನ ಪಾಲಿಗೆ ಉಳಿದೇ ಬಂದಿರುವ ಅರಕೆಯನ್ನು ಹಾಸ್ಯದ ಧಾಟಿಯಲ್ಲಿ ನಿರ್ವಹಿಸಿರುವ ಕೌಶಲ್ಯ ಈ ಕವನದ ಹಿರಿಮೆ.

ಚಂದ್ರಶೇಖರ ಪಾಟೀಲರ ''ಅನೇಕ ಸಂಕಲನಗಳಲ್ಲಿ ಅಡಕವಾಗಿರುವ ಗೇಯ ಕವನಗಳನ್ನು'' ಆಯ್ದು ರೂಪಿಸಿರುವ ಪುಸ್ತಕ 'ಗುಂಡಮ್ಮನ ಹಾಡು'. ೧೯೬೦ರಲ್ಲಿ ಪ್ರಕಟವಾದ 'ಬಾನಲಿ'ಯಿಂದ ಹಿಡಿದು ೧೯೯೫ರ 'ಶಾಲ್ಮನಾ ನನ್ನ ಶಾಲ್ಮಲಾ' ದವರೆಗಿನ ಎಂಟು ಸಂಕಲನಗಳಿಂದ ಆಯ್ದ ಐವತ್ತು ಹಾಡುಗಳು ಇದರಲ್ಲಿವೆ.

ಸಿದ್ಧಲಿಂಗ ಪಟ್ಟಣ ಶೆಟ್ಟಿಯವರ 'ಇಂದು ರಾತ್ರಿಯ ಹಾಗೆ'ಯಲ್ಲಿ ೫೫ ಕವನಗಳಿವೆ. ಅವುಗಳಲ್ಲಿ ಎಂಟು ಅನುವಾದಗಳು. ಪಟ್ಟಣಶೆಟ್ಟಿಯವರು ಅತ್ಯಾಕರ್ಷಕವಾದ ನುಡಿಚಿತ್ರಗಳನ್ನು ರೂಪಿಸಬಲ್ಲರು. ಈ ಚಿತ್ರಕ ಶಕ್ತಿ ಕವಿಯನ್ನೆ ಮರುಳು ಮಾಡಿದೆಯೇನೋ ಎಂಬ ಅನುಮಾನವೂ ಕೆಲವೆಡೆಗಳಲ್ಲಿ ಮೂಡುತ್ತದೆ.

ಕೊಲೆಯ ಮಾಡಿದಿ ನೀನು ಕಲೆಯ ರಚಿಸಿದೆ ನಾನು
ನಾನೆ ಸಿಂಗರಿಸಿರುವೆ ನನ್ನ ಸುಡಲಿಹ ಚಿತೆಯ

ಎಂಬ ಸಾಲುಗಳು ಪಟ್ಟಣಶೆಟ್ಟಿಯವರ ಕವನಗಳ ವೈಶಿಷ್ಟ್ಯವನ್ನೆ ಹೇಳುತ್ತವೆ. 'ಕೊಲೆ'ಯನ್ನೂ 'ಕಲೆ' ಮಾಡುವ, ತನ್ನದೇ 'ಚಿತೆ'ಯನ್ನೂ 'ಸಿಂಗರಿಸುವ' ಹಂಬಲ ಎದ್ದು ಕಾಣುತ್ತದೆ. ತಪ್ಪು ಮಾಷ್ಟಕ್ಕೇ ಸುಂದರವಾಗಿರುವ ಅಸಂಖ್ಯಾತ ಚಿತ್ರಗಳು ಪಟ್ಟಣಶೆಟ್ಟಿಯವರ ಕಾವ್ಯದಲ್ಲಿ ದೊರೆಯುತ್ತವೆ. ಇವರ ಎಲ್ಲ ಕವನಗಳಲ್ಲೂ ಪ್ರಣಯದ ಅಂಶ ಸುಪ್ತವಾಗಿ ಇದ್ದೇ ಇರುತ್ತದೆ. ವಿಷಾದ, ನೋವು, ಇಂಥ ಭಾವನೆಗಳೂ ಸುಂದರಗೊಳಿಸಲ್ಪಟ್ಟ ಭಾಷೆಯಾಗಿ ಮಾತ್ರ ಕಾಣತೊಡಗುತ್ತವೆ. ಪಟ್ಟಣಶೆಟ್ಟಿಯವರ ಕವನಗಳನ್ನು ಬಿಡಿ ಬಿಡಿಯಾಗಿ ಓದಿದಾಗ ಆಕರ್ಷಿಸುತ್ತವೆ, ಮನಸ್ಸಿನಲ್ಲಿ ಮೆಲುಕು ಹಾಕಿ ಚಪ್ಪರಿಸುವಂತಿರುತ್ತವೆ. ಆದರೆ ಒಟ್ಟಾಗಿ ಅವರ ಕಾವ್ಯ ಸುಂದರ ಚಿತ್ರಗಳ ಸಂಕಲನ ಮಾತ್ರವೆ ಅನ್ನುವ ಅನುಮಾನವೂ ಮೂಡುತ್ತದೆ.

'ಅಂತರಂಗದ ಹಾಡು' ಪಟ್ಟಣಶೆಟ್ಟಿಯವರ ನಲವತ್ತು ಕವನಗಳ ಸಂಕಲನ. ಇದರಲ್ಲಿ 'ಚಿತ್ರಕಾರ', 'ನೆನಪ ಗಂಧರ್ವರು'ದಂಥ ಅವರ ಪ್ರಸಿದ್ಧ ಸುಂದರ ಕವನಗಳು ಸೇರಿವೆ. ಸಂಕಲನದ ಹೆಸರು 'ಕವಿಯ ಧೋರಣೆಯನ್ನೂ ಸೂಚಿಸುವಂತಿದೆ. ಯಾವುದೇ

ಸಂಗತಿಯಾಗಲೀ ಭಾವವಾಗಲೀ ಕವಿ 'ತಾನೇ' ಕೇಂದ್ರವಾಗಿರುತ್ತಾನೆ. ಕವಿಯನ್ನು ಬಿಟ್ಟು ಕವಿತೆಗೆ ಸ್ವಾತಂತ್ರ್ಯ ಲಭಿಸುವುದೇ ಇಲ್ಲ.

'ಹೇಮಕೂಟ ಮತ್ತು' ಸಂಕಲನದಲ್ಲಿ ಜಿ.ಎಸ್. ಸಿದ್ಧಲಿಂಗಯ್ಯನವರ ಹೊಸ ಕವಿತೆಗಳು ಮತ್ತು ಅನುವಾದಗಳು ಇವೆ. ಕನ್ನಡ ಸಾಹಿತ್ಯದ ಪ್ರಮುಖ ಕವಿ-ರಚನೆಗಳೊಡನೆ ಶ್ರೀಯುತರಿಗೆ ಇರುವ ಸುದೀರ್ಘ ಒಡನಾಟ ಇಲ್ಲಿನ ರಚನೆಗಳಿಂದ ತಿಳಿಯುತ್ತದೆ. ಕನ್ನಡದ ವಿವಿಧಲಯಗಳೊಡನೆ ನಡೆಸಿರುವ ಪ್ರಯೋಗಗಳೂ ಇಲ್ಲಿವೆ. ಮೂರ್ತ-ಅಮೂರ್ತ, ದೇಹ-ಆತ್ಮ. ಇಂಥ ವಿರುದ್ಧ ಸೆಳೆತಗಳು ಇವರ ಅನೇಕ ಕವನಗಳನ್ನು ರೂಪಿಸುತ್ತವೆ. ಪೌರಾಣಿಕ ಘಟನೆ, ವ್ಯಕ್ತಿಗಳು ಮತ್ತು ಆಶಯಗಳನ್ನು ಸಿದ್ಧಲಿಂಗಯ್ಯನವರು ಅನೇಕ ಕವನಗಳ ಮೂಲ ಸಾಮಗ್ರಿಯನ್ನಾಗಿ ಬಳಸಿಕೊಳ್ಳುತ್ತಾರೆ. ಮಾತಿನ ಬಳಕೆ ಸ್ವಲ್ಪ ಧಾರಾಳವೇ ಆಯಿತೇನೋ ಎನ್ನಿಸುತ್ತದೆ.

'ಠಾಣಾಂತರ'ದಲ್ಲಿ ಎಲ್. ಬಸವರಾಜು ಅವರ ಸುಮಾರು ನಾಲ್ಕು ನೂರು ಕವನಗಳು ಸಂಕಲಿತವಾಗಿವೆ. ವಿದ್ವಾಂಸನಲ್ಲಿ ಅಡಗಿದ್ದ ಕವಿ ಇಲ್ಲಿ ಪ್ರಕಟಗೊಂಡಿದ್ದಾನೆ. ಬಹುಪಾಲು ರಚನೆಗಳೆಲ್ಲ ಪ್ರತಿಕ್ರಿಯಾತ್ಮಕವಾಗಿವೆ. ಲೈಟು ಬಿಲ್ಲು ಕಟ್ಟಲು ಕ್ಯೂ ನಿಂತ ಜನ, ಯಾವುದೋ ಸಮಾರಂಭದಲ್ಲಿ ಯಾರೋ ಹೇಳಿದ ಮಾತು ಇಂಥ ಯಾವುದೋ ಸಂಗತಿಗಳು ಕವಿಯಲ್ಲಿ ಮೂಡಿಸಿದ ಪ್ರತಿಕ್ರಿಯೆಗಳು ಇಲ್ಲಿನ ರಚನೆಗಳಾಗಿವೆ. ಕೆಲವು ಬಾರಿ ವೃದ್ಧಾಪ್ಯದಂಥ ಯಾವುದಾದರೊಂದು ಭಾವ ಮನಸ್ಸಿನಲ್ಲಿ ಮೂಡಿ ಅದನ್ನು ಪರಿಶೀಲಿಸಲು ತೊಡಗುವುದೂ ಉಂಟು. ಕೆಲವೆಡೆಗಳಲ್ಲಿ ಪದದ ಅನೇಕಾರ್ಥಗಳೊಡನೆ ಚಿನ್ನಾಟವಾಡುವ ರಚನೆಗಳೂ ಇವೆ. ಎಲ್ಲ ರಚನೆಗಳಲ್ಲೂ ಕವಿ ತನ್ನ ಸುತ್ತಲ ಲೋಕವನ್ನು ಕುರಿತು ಖಚಿತ ನಿಲವನ್ನು ತಾಳಿ ಅದನ್ನು ಭಾಷಿಕ ರೂಪಕ್ಕೆ ಅಳವಡಿಸಿರುವುದು ಕಾಣುತ್ತದೆ. ಹಾಗಾಗಿ ಇಲ್ಲಿ ಕವನಗಳು ಅನ್ವೇಷಣೆಯ ಬಗೆಯವಾಗದೆ ಮಾತಿನ ರೀತಿಯಲ್ಲಿ ಅರ್ಥವನ್ನು ಹೊಮ್ಮಿಸುವಂಥ ವಾಗುತ್ತವೆ. ಫ್ರೆಷ್ ಆಗಿರುವ, ಪ್ರಾಮಾಣಿಕವಾಗಿರುವ, ಆಗಾಗ ಓದಿ ಮೆಲುಕು ಹಾಕಬಹುದಾದ ಅನೇಕ ಕವನಗಳು ಇಲ್ಲಿವೆ.

೪

ಕಾವ್ಯ ಸಾಧನೆಯಲ್ಲಿ ಮುಂದುವರೆಯುತ್ತ ತಾವು ಹಿಂದೆ ಮೂಡಿಸಿದ ಭರವಸೆ ಹುಸಿಯಲ್ಲವೆಂದು ಪ್ರಮಾಣಿಸುತ್ತಿರುವ ಕಾವ್ಯ ಸಾಧಕರ ಗಮನಾರ್ಹ ಕವನ ಸಂಕಲನಗಳೆಂದರೆ ಚಂದ್ರಶೇಖರ ತಾಳ್ಯರ 'ಸುಡುವ ಭೂಮಿ'. ರಾಮಚಂದ್ರದೇವ ಅವರ 'ಇಂದ್ರಪ್ರಸ್ಥ', ಚಿಂತಾಮಣಿ ಕೊಡ್ಲೆಕೆರೆ ಅವರ 'ಗೋಪಿನ ಹೆಜ್ಜೆ'. ಶ್ರೀಧರ ಆರಾಧ್ಯ ಅವರ 'ಖೊಮೇನಿ ಮುಖೇನ'. ಜಿ.ಕೆ. ರವೀಂದ್ರ ಕುಮಾರ್ ತಮ್ಮ ಮೊದಲ ಸಂಕಲನ 'ಸಿಕಾಡ'ದಲ್ಲಿ ಮತ್ತು ಶ್ರೀನಿವಾಸ ಜೋಕಟ್ಟೆ 'ಕ್ಷಮಿಸಿ ಈ ಚಿತ್ರಕ್ಕೆ ಹೆಸರಿಲ್ಲ' ದಲ್ಲಿ ಅಪಾರ ಭರವಸೆ ಮೂಡಿಸಿದ್ದಾರೆ.

'ಸುಡುವ ಭೂಮಿ' ೧೯೯೫ರ ಗಮನಾರ್ಹ ಸಂಕಲನ. ಚಂದ್ರಶೇಖರ ತಾಳ್ಯರು ಕಾವ್ಯರಚನೆಯನ್ನು ಗಂಭೀರವಾಗಿ ಪರಿಗಣಿಸಿರುವವರು. ಇವರ ರಚನೆಗಳು ಕನ್ನಡದ ಮುಖ್ಯ ಕವಿಗಳ ರಚನೆಗಳೊಂದಿಗೆ ಸಂವಾದವನ್ನು ನಡೆಸುವಂತೆ ಕಾಣುತ್ತವೆ. ಈ ಸಂವಾದವು ಹಳೆಯ ರೂಪಕಗಳ ಹೊಸ ಬಗೆಯ ಬಳಕೆಯಲ್ಲಿ, ಬೇರೆ ಬೇರೆ ರೀತಿಯ ಲಯಗಳನ್ನು ಅಳವಡಿಸಿಕೊಳ್ಳುವುದರಲ್ಲಿ, ಭಿನ್ನ ಮನೋಧರ್ಮದ ಕವಿಗಳ ಧೋರಣೆಗಳನ್ನು ತನ್ನದೇ ದೃಷ್ಟಿಯಿಂದ ಪರಿಶೀಲಿಸುವುದರಲ್ಲಿ ಕಾಣುತ್ತದೆ. ಅಂದರೆ ತಾಳ್ಯರು ಕೇವಲ ಸ್ವ-ಕೇಂದ್ರಿತ ಕವಿಯಾಗದೆ ಕನ್ನಡ ಕಾವ್ಯ ಪರಂಪರೆಯೊಂದಿಗೆ ಸಂಬಂಧವನ್ನು ಸ್ಪಷ್ಟಪಡಿಸಿಕೊಳ್ಳಲು ಬಯಸಿರುವುದು ಸ್ಪಷ್ಟವಾಗುತ್ತದೆ. ಇದರಿಂದ ಅವರ ಕಾವ್ಯ ರಚನೆಗೆ ಮಹತ್ವಾಕಾಂಕ್ಷೆ ಪ್ರಾಪ್ತವಾಗಿವೆ. ನಿಸರ್ಗ, ಚರಿತ್ರೆ, ಇಂದಿನ ಬದುಕಿನ ವಾಸ್ತವ ಇವು ತಾಳ್ಯ ಅವರ ರಚನೆಗಳ ಹಿಂದಿರುವ ಮುಖ್ಯ ಆಸಕ್ತಿಗಳಾಗಿವೆ. ಭಾಷಿಕ ಲಯದ ಮೇಲೆ ತಾಳ್ಯರಿಗೆ ಒಳ್ಳೆಯ ಹಿಡಿತವಿದೆ. ಇವರ ಕವನಗಳ ಲಯವು ನಮ್ಮ ತಲೆಮಾರಿನ ಮುಖ್ಯ ಕವಿಯಾದ ಶಿವಪ್ರಕಾಶರ ರಚನೆಗಳಲ್ಲಿ ಕಾಣುವ ಲಯಕ್ಕೆ ಹತ್ತಿರವಾದದ್ದು. ಹಲವು ಸಾಲುಗಳಲ್ಲಿ ಮುಂದುವರೆಯುವ ಭಾವ, ಪ್ರಶ್ನಾರ್ಥಕ ಪದಗಳ ಪುನರುಕ್ತಿ, ಕವನ ಖಂಡದ ಶಿಖರ ಸ್ಥಾನದಲ್ಲಿ ತಟ್ಟನೆ ಎದುರಾಗುವ ಅನಿರೀಕ್ಷಿತ ತಿರುವು ಇವು ಇವರ ಸಾರ್ಥಕ ಕವನಗಳಲ್ಲಿ ಕಾಣುತ್ತವೆ. ತಾಳ್ಯರು ಚಿಂತನಶೀಲರಾದರೂ, ಈ ಸಂಕಲನದಲ್ಲಿ, ಅವರು ಯಾವುದೇ ಒಂದು ಘೋಷಿತ ಪಂಥದ ಚಿಂತನೆಗಳ ಕಟ್ಟನ್ನು ಮೀರುವ ಆಕಾಂಕ್ಷೆಯನ್ನೂ ವ್ಯಕ್ತಪಡಿಸುತ್ತಾರೆ.

'ಇಂದ್ರಪ್ರಸ್ಥ'ದಲ್ಲಿ ರಾಮಚಂದ್ರದೇವ ಅವರು ಕಾವ್ಯಸಾಧನೆಯ ಮತ್ತೊಂದು ಮಜಲನ್ನು ಮುಟ್ಟಿರುವುದು ಸ್ಪಷ್ಟವಾಗುತ್ತದೆ. ಇಂದ್ರಪ್ರಸ್ಥವನ್ನೇ ಕುರಿತ ಕವನವಾಗಲೀ, ಹೆಣ್ಣಿನ ವಿವಿಧ ಮುಖಗಳನ್ನು ಅನಾವರಣ ಮಾಡುವ ಕವನವೇ ಆಗಲಿ, ಪುರಾಣ ಮತ್ತು ಸಮಕಾಲೀನತೆಯನ್ನು ಹೊಸ ಹದದಲ್ಲಿ ಲಯದಲ್ಲಿ ಬೆಸೆಯಲು ಯತ್ನಿಸುವ ಅವರ ಪ್ರಯತ್ನ ಕುತೂಹಲ ಹುಟ್ಟಿಸುತ್ತದೆ. ನವ್ಯಪಂಥದ ಕಲಾತ್ಮಕತೆಯನ್ನು ಬಿಟ್ಟುಕೊಡದೆ, ಆದರೆ ಆ ಪಂಥದ ಮಿತಿಗಳನ್ನು ಮೀರಿದ, ಸಾಮಾಜಿಕ ಆಶಯಗಳಿದ್ದೂ ಬಂಡಾಯ ಅಥವ ಅಂಥ ಇನ್ನೊಂದು ಪಂಥಕ್ಕೆ ಸೇರಿಸಲು ಆಗದಂಥ ಫ್ರೆಷ್ ಎನಿಸುವ ರಚನೆಗಳು ಇಲ್ಲಿವೆ.

'ಗೋವಿನ ಹೆಜ್ಜೆ' ಚಿಂತಾಮಣಿ ಕೂಡ್ಲೆಕೆರೆಯವರ ಮೂರನೆಯ ಸಂಕಲನ. ದೈನಿಕ ಬದುಕಿನ ಸಾಮಾನ್ಯ ಘಟನೆಗಳಗನ್ನು 'ಕಥೆ'ಯಾಗಿಸುತ್ತ, ಗದ್ಯಕ್ಕೆ ತೀರ ಸಮೀಪ ಎನ್ನಿಸುವ ಭಾಷೆಯಲ್ಲಿ, 'ಕಥೆ'ಯೋ ಎಂಬಂತೆ, ನವಿರಾದ ಆದರೆ ಓದುಗರ ಗಮನ ಸೆಳೆಯುವ ವ್ಯಂಗ್ಯದೊಡನೆ ಕೂಡ್ಲೆಕೆರೆಯವರು ಕವನಗಳನ್ನು ಕಟ್ಟುತ್ತಾರೆ. ಎ. ಕೆ. ರಾಮಾನುಜನ್ ಮತ್ತು ತಿರುಮಲೇಶ್ ಅವರ ರಚನೆಗಳ ಹತ್ತಿರದ ಸಂಬಂಧಿಗಳೆಂಬಂತೆ ಇಲ್ಲಿನ ಕವನಗಳು ಕಾಣುತ್ತವೆ. ಹೆಚ್ಚು ಕಡಿಮೆ ಪ್ರತಿ ಕವನವೂ ಸಂಗತಿಯೊಂದನ್ನು

ಅಥವ ಘಟನೆಯೊಂದನ್ನು ನಾಟ್ಯೀಕರಿಸಿ ಅದರ ಅರ್ಥ ಮಹತ್ವವನ್ನು ಸೂಚಿಸುವಂತೆ ಮುಕ್ತಾಯವನ್ನು ಕಾಣುತ್ತದೆ. ಜೊತೆಗೇ ಸಾನೆಟ್ಟಿನಂಥ ರೂಪವನ್ನು ಒಗ್ಗಿಸಿಕೊಳ್ಳುವ ಪ್ರಯತ್ನವೂ ಇದೆ. ಪರಿಮಿತ ಲಯದ ನಿಶ್ಚಿತ ಸೀಮೆಯೊಳಗೆ ಪ್ರಾಮಾಣಿಕವಾಗಿ, ಗಂಭೀರವಾಗಿ ರಚಿಸಿದ ಕಾವ್ಯ ಈ ಸಂಕಲನದಲ್ಲಿದೆ.

ಶ್ರೀಧರ ಆರಾಧ್ಯರ 'ಖೊಮೇನಿ ಮುಖೇನ'ದಲ್ಲಿ ಕವಿ ತಮ್ಮ ಕವಿವ್ಯಕ್ತಿತ್ವವನ್ನು ಅನ್ವೇಷಿಸುತ್ತಿರುವುದರ ಸುಳಿವುಗಳಿವೆ. ತಾನು ಒಪ್ಪಿದ ಆದರ್ಶದ ಪರವಾಗಿ ಕವಿ ವಾದಗಳನ್ನು ಮಂಡಿಸುತ್ತಾರೆ. ತಾತ್ವಿಕ ಪ್ರಶ್ನೆಗಳನ್ನೂ ಕೇಳಿಕೊಳ್ಳುತ್ತಾರೆ. ವಿಷಯಗಳ ವೈವಿಧ್ಯವಿದೆ. ತಮ್ಮ ಮೊದಲ ಸಂಕಲನಕ್ಕಿಂತ ತಕ್ಕ ಮಟ್ಟಿಗೆ ದೃಢವಾದ ರಚನೆಗಳನ್ನು ನೀಡಿದ್ದಾರೆ.

ಜಿ. ಕೆ. ರವೀಂದ್ರಕುಮಾರ್ ಕಾವ್ಯ ರಚನೆಯನ್ನು ಗಂಭೀರವಾಗಿ ಪರಿಗಣಿಸಿರುವುದರ ಸಾಕ್ಷಿ 'ಸಿಕಾಡ'ದಲ್ಲಿ ಇದೆ. ಮಾತಿನ ಬಳಕೆ, ಲಯದ ಮೇಲೆ ಇರುವ ಹಿಡಿತ ಇವುಗಳಿಂದಾಗಿ ಈ ಕವಿಯ ಬೆಳವಣಿಗೆಯನ್ನು ಕುತೂಹಲದಿಂದ ಗಮನಿಸಬೇಕೆನಿಸುತ್ತದೆ. ಇಲ್ಲಿನ ಕವನಗಳಲ್ಲಿ 'ಪ್ರೌಢ, ಆಧುನಿಕ ಹಾಗೂ ಸೂಕ್ಷ್ಮ ಸಂವೇದನೆಯೊಂದಿಗೆ ವ್ಯವಹರಿಸಿದ ಅನುಭವ ದೊರೆಯುತ್ತದೆ' ಎಂಬ ಜಿ. ಎಸ್. ಆಮೂರರ ಮಾತು ನಿಜವಾಗಿದೆ. ಮಾತಿನ ಸ್ವರೂಪ, ಸಂವಾದದ ಸಾಧ್ಯತೆ, ನಾಡಿನ ಚರಿತ್ರೆಯಲ್ಲಿ ದಲಿತರ ಬದುಕಿನ ರೀತಿ, ಇವು ಇಲ್ಲಿನ ಕವನಗಳ ಮುಖ್ಯ ಆಶಯಗಳಾಗಿವೆ. ತಮಗೆ ಕಂಡದ್ದನ್ನು ನಿವೇದಿಸುವುದಕ್ಕೆ ತಮ್ಮದೇ ಆದ ಮಾತನ್ನು ಹುಡುಕಿಕೊಳ್ಳುತ್ತ ತಾವು ಹೇಳುತ್ತಿರುವುದರ ಸ್ವರೂಪ ಮತ್ತು ಪರಿಣಾಮಗಳನ್ನೂ ರವೀಂದ್ರಕುಮಾರ್ ಜಿಜ್ಞಾಸೆಗೆ ಒಳಪಡಿಸುತ್ತಾರೆ. 'ಕರೆವ ಕಾಲ ಬರದಿರಲಿ' ಎಂಬ ಸುದೀರ್ಘ ಕವನವು ಕವಿಯ ಧಾರಣ ಸಾಮರ್ಥ್ಯವನ್ನು ತೋರುತ್ತವೆ. ೧೩ ಭಾಗಗಳ ಈ ಕವನ ಕೃಷ್ಣನ ಕಥೆಯನ್ನು ಬಳಸಿಕೊಂಡು ಪ್ರೀತಿ, ಧರ್ಮಗಳ ಜಿಜ್ಞಾಸೆಯನ್ನು ನಡೆಸುತ್ತದೆ. ಮತ್ತೆ ಮತ್ತೆ ಸಾವಧಾನವಾಗಿ ಓದಬೇಕಾದ ಅನೇಕ ಕವನಗಳಿವೆ.

ಶ್ರೀನಿವಾಸ ಜೋಕಟ್ಟೆಯವರ 'ಕ್ಷಮಿಸಿ, ಈ ಚಿತ್ರಕ್ಕೆ ಹೆಸರಿಲ್ಲ' ಬಂಡಾಯ ಸಾಹಿತ್ಯದ ತತ್ವಗಳಿಂದ ಪ್ರೇರಣೆ ಪಡೆದ ಕವನಗಳನ್ನು ಒಳಗೊಂಡಿದೆ. ಆಧುನಿಕ ನಗರದ ಬದುಕಿನ ಸಂಗತಿಗಳನ್ನು ಕಥನಾತ್ಮಕವಾಗಿ ಮಂಡಿಸುತ್ತ ತಾನು ಒಪ್ಪಿದ ತಾತ್ವಿಕತೆಯನ್ನು ಮಂಡಿಸುವ, ವಿಷಾದ, ನೋವು, ಸಂಕಟಗಳನ್ನು ವ್ಯಕ್ತಪಡಿಸುವ ಮಾದರಿ ಇಲ್ಲಿನ ಬಹುತೇಕ ಕವನಗಳಲ್ಲಿ ಕಾಣುತ್ತದೆ. 'ಈ ದೇಶದತುಂಬ', 'ನಗು', 'ಖಾಲಿ' ಇಂಥವು ಇವರ ಪ್ರಾತಿನಿಧಿಕ ಕವನಗಳೆನ್ನಬಹುದು. ಜೋಕಟ್ಟೆ ಗಮನಿಸಬೇಕಾದ ಕವಿಯಾಗಿದ್ದಾರೆ.

೫

ವಾರ್ಷಿಕ ಸಮೀಕ್ಷೆಯಲ್ಲಿ ಇನ್ನು ಕೆಲವು ಕವನ ಸಂಕಲನಗಳ ಬಗ್ಗೆ ಪ್ರಸ್ತಾಪಿಸಬಹುದು.

'ಝೇಂಕಾರ ಹಕ್ಕಿ' ಕೆ.ಟಿ. ಗಟ್ಟಿಯವರ ಮೊದಲ ಕವನ ಸಂಕಲನ. ೧೯೫೭ ರ ಸುಮಾರಿನಲ್ಲಿ 'ಶೋಭಾ' ಎಂಬ ತಮ್ಮ ಕವನ ಸಂಕಲನವನ್ನು ಸಿದ್ಧಪಡಿಸಿ ಅದಕ್ಕೆ ಬೇಂದ್ರೆಯವರ ಮುನ್ನುಡಿಯನ್ನು ಸಂಪಾದಿಸಿಕೊಂಡಿದ್ದರೂ ಈಗ ಮುನ್ನುಡಿ ಮಾತ್ರ ಉಳಿದು ಕವನಗಳು ಕಳೆದುಹೋಗಿವೆ ಎಂದು ಗಟ್ಟಿಯವರು ಹೇಳಿದ್ದಾರೆ. ಸುಮಾರು ಮೂವತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಹತ್ತಾರು ಕಥಾಸಂಕಲನಗಳನ್ನೂ ಐದು ನಾಟಕಗಳನ್ನೂ ಪ್ರಕಟಿಸಿ ತಮ್ಮದೇ ಆದ ಓದುಗರ ಬಳಗವನ್ನು ನಿರ್ಮಿಸಿಕೊಂಡಿರುವ ಕೆ.ಟಿ. ಗಟ್ಟಿಯವರು ೧೯೯೪ ರಲ್ಲಿ 'ಝೇಂಕಾರದ ಹಕ್ಕಿ' ಎಂಬ ತಮ್ಮ ಮೊದಲ ಕವನಸಂಕಲನ ಪ್ರಕಟಿಸಿದ್ದಾರೆ. ಕನ್ನಡ ಗದ್ಯದ ಮೇಲೆ ಅವರಿಗೆ ಇರುವ ಪ್ರಭುತ್ವ, ತಮ್ಮ ವಿಚಾರ ಅನಿಸಿಕೆಗಳನ್ನು ನಿರ್ಭೀತಿಯಿಂದ, ನಿರ್ಭಿಡೆಯಿಂದ ವ್ಯಕ್ತಪಡಿಸುವ ಕೆಚ್ಚು ಇಲ್ಲಿನ ಕವನಗಳಲ್ಲೂ ವ್ಯಕ್ತವಾಗಿವೆ. ತಾವು ಹೇಳಬೇಕಿರುವುದೇನು ಎಂಬುದು ಸ್ಪಷ್ಟವಾಗಿ ಗಟ್ಟಿಯವರಿಗೆ ತಿಳಿದಿರುವುದರಿಂದ ಅವರ ಎಲ್ಲ ಕವನಗಳೂ ಸ್ಪಷ್ಟವೂ ಅಸಂದಿಗ್ಧವೂ ಆಗಿವೆ. ಕಥಾನಾತ್ಮಕತೆ ಮತ್ತು ಗದ್ಯಕ್ಕೆ ಸಮೀಪದ್ದೆನಿಸುವ ಭಾಷೆ ಕವನಗಳ ಈ ಗುಣಕ್ಕೆ ಕಾರಣವಾಗಿವೆ.

'ಕಾವ್ಯ ಸಾಗರ' ಟಿ. ಮಹಾಬಲೇಶ್ವರ ಭಟ್ಟರ ಪ್ರಧಾನ ಸಂಪಾದಕತ್ವದಲ್ಲಿ ಸಿದ್ಧಗೊಂಡಿದೆ. ಸಾಗರ ಪ್ರಾಂತ್ಯದ ನಲವತ್ತೈದು ಕವಿಗಳ ರಚನೆಗಳು ಇಲ್ಲಿವೆ. ಕೆ. ವಿ. ಸುಬ್ಬಣ್ಣ, ಕೆ. ಎಚ್. ಶ್ರೀನಿವಾಸ, ಪ್ರಸನ್ನ, ಕೆ. ವಿ. ಅಕ್ಷರ, ಮುಂತಾದ ಪ್ರಖ್ಯಾತರಿಂದ ಹಿಡಿದು ಬಂದಗದ್ದೆ ರಾಧಾಕೃಷ್ಣರಂಥ ಭರವಸೆ ಮೂಡಿಸುವ ಹೊಸ ಕವಿಗಳವರೆಗೆ ಮಲೆನಾಡಿನ ಕವಿಗಳ ರಚನೆಗಳು ಇಲ್ಲಿವೆ. ಮುನ್ನುಡಿಯಲ್ಲಿ ಜಿ. ಎಸ್. ಶಿವರುದ್ರಪ್ಪನವರು ಹೇಳುವಂತೆ ಪ್ರಸ್ತುತ ಕನ್ನಡ ಕಾವ್ಯದ ಮುಖ್ಯ ಆಸಕ್ತಿಗಳೆಲ್ಲ ಇಲ್ಲಿ ಧ್ವನಿತವಾಗಿವೆ. ಆದರೆ ಕೇವಲ ಭೌಗೋಳಿಕವಾಗಿ ಇವರೆಲ್ಲ ಸಾಗರ ತಾಲೂಕಿನವರೆಂಬುದನ್ನು ಬಿಟ್ಟರೆ ಭಾಷೆ ಧೋರಣೆ ಇತ್ಯಾದಿ ಅಂಶಗಳಲ್ಲಿ ಸಾಗರದ್ದೇ ಅನ್ನುವ ಛಾಪು ಇಲ್ಲ. ಪ್ರಾದೇಶಿಕ ಕಾದಂಬರಿಯ ಹಾಗೆ ಪ್ರಾದೇಶಿಕ ಕಾವ್ಯ ಆಧುನಿಕ ಕನ್ನಡದಲ್ಲಿ ಕಾಣುವುದಿಲ್ಲವಷ್ಟೆ.

'ಆ ಈ ಕ್ಷಣಗಳು' ಟಿ. ಜಿ. ಭಟ್ಟ ಹಾಸಣಗಿಯವರ ಮೂರನೆಯ ಕವನ ಸಂಕಲನ. ಪ್ರಧಾನವಾಗಿ ಹಾಡುವುದಕ್ಕೆಂದೇ ರಚಿತವಾಗಿರುವ ನಲವತ್ತೊಂದು ರಚನೆಗಳಿವೆ. ಹಾಸಣಗಿಯವರು ತಮ್ಮ ಸಾಧನೆಯ ದಾರಿಯಲ್ಲಿ ಮುಂದುವರೆಯುತ್ತಿರುವ ಸೂಚನೆಗಳು ಇಲ್ಲಿವೆ. ಸುದೀರ್ಘ ಮುನ್ನುಡಿ ಬರೆದಿರುವ ಸು. ರಂ. ಎಕ್ಕುಂಡಿಯವರು ಈ ಸಂಕಲನದ ಉತ್ತಮ ಅಂಶಗಳನ್ನು ಗುರುತಿಸಿದ್ದಾರೆ. ಹಾಡಿನ ಆಸರೆ ಪಡೆದಾಗ ತಲೆದೂಗುವಂತೆ ಮಾಡಬಹುದಾದ ರಚನೆಗಳು ಇಲ್ಲಿವೆ. ಆದರೆ

ವಿರಾಮದ ಓದು ಅನುಪ್ರಾಸ ಮತ್ತು ಪ್ರಾಸಗಳ ಸ್ವಲ್ಪ ಹೆಚ್ಚೇ ಎನ್ನಬಹುದಾದ ಬಳಕೆಯತ್ತ ಗಮನ ಸೆಳೆದುಬಿಡುತ್ತದೆ. ಈ ಕವನಗಳು ಭಾವ ಪ್ರಮುಖವಾದ, ರೋಮಾಂಚಕ ಕ್ಷಣಗಳನ್ನು ಹಿಡಿದಿಟ್ಟು ಮುದಕೊಡಲು ಬಯಸುತ್ತವೆ.

'ನಗುವ ಮಲ್ಲಿಗೆ' ಡಾ. ದ್ವಾರಕಾನಾಥ ಕಬಾಡಿಯವರ ನಾಲ್ಕನೆಯ ಕವನ ಸಂಕಲನವಾಗಿ ಒಟ್ಟನಲ್ಲಿ ಹನ್ನೆರಡನೆಯ ಪ್ರಕಟಣೆಯಾಗಿ, ಪ್ರಕಟವಾಗಿದೆ. ಇಂಗ್ಲಿಷಿನಲ್ಲೂ ಕಬಾಡಿ ಏಳು ಸಂಕಲನಗಳನ್ನು ಪ್ರಕಟಿಸಿದ್ದಾರೆ. 'ನಗುವಮಲ್ಲಿಗೆ'ಯನ್ನು ''ಗ್ರಾಮೀಣ ಪರಿಸರದ ಹಾಸ್ಯ ಮತ್ತು ಪ್ರಣಯ ಚಿತ್ರಗಳು'' ಎಂದು ವಿವರಿಸಲಾಗಿದೆ. ಸು.ರಂ. ಎಕ್ಕುಂಡಿಯವರ ಉದಾರ ದೃಷ್ಟಿಯ ಸುಮಾರು ಇಪ್ಪತ್ತು ಪುಟಗಳನ್ನು ಮೀರಿದ ಮುನ್ನುಡಿ ಮತ್ತು ಕೊನೆಯ ಪುಟಗಳಲ್ಲಿ ಕನ್ನಡದ ಗಣ್ಯರು ಕಬಾಡಿಯವರ ಇತರ ಪುಸ್ತಕಗಳ ಬಗ್ಗೆ ಮಾಡಿರುವ ಶಿಫಾರಸುಗಳು ಮೂಡಿಸುವ ನಿರೀಕ್ಷೆಯ ಅತ್ಯಲ್ಪ ಭಾಗವನ್ನೂ ಇಲ್ಲಿನ ಕವನಗಳು ತೃಪ್ತಿಗೊಳಿಸುವುದಿಲ್ಲ. ಇಲ್ಲಿ ಚಿತ್ರಿತವಾಗಿರುವ ಪರಿಸರವೇ ನಮ್ಮ ಗ್ರಾಮೀಣ ಪರಿಸರ, ಇಲ್ಲಿರುವ ಹಾಸ್ಯವೇ ಹಾಸ್ಯ, ಮತ್ತು ಇಲ್ಲಿ ಚಿತ್ರಿತವಾಗಿರುವ ಪ್ರಣಯವೇ ಪ್ರಣಯ ಎಂದಾದರೆ ಕನ್ನಡ ಕಾವ್ಯದ ಗಂಭೀರ ಓದುಗ ವಿಷಾದಭರಿತನಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕು ಅಥವ ಬಿದ್ದು ಬಿದ್ದು ನಕ್ಕು ಮರೆತುಬಿಡಬೇಕು.

'ಕತ್ತಲು ಬೆಳಕುಗಳಾಚೆ' ಮಾರ್ಕಾಂಡಪುರಂ ಶ್ರೀನಿವಾಸ ಅವರ ಮೂರನೆಯ ಕವನ ಸಂಕಲನ ಇದು. ತೆಲುಗಿನ ಪ್ರಮುಖ ಕವಿಗಳನ್ನು ಕನ್ನಡಕ್ಕೆ ಭಾಷಾಂತರ ಮಾಡುವಲ್ಲಿಯೂ ಶ್ರೀಯುತರು ಗಮನಾರ್ಹ ಸಾಧನೆಯನ್ನು ಮಾಡಿದ್ದಾರೆ. ಈ ಸಂಕಲನದಲ್ಲಿ ನೂರ ಇಪ್ಪತ್ತಮೂರು ಕಿರು ರಚನೆಗಳಿವೆ. ಕೆ. ಎಸ್. ನಿಸಾರ್ ಅಹಮದ್ ಅವರು ಗುರುತಿಸಿರುವಂತೆ ''ಶ್ರೀನಿವಾಸ ಅವರು ಸ್ವಭಾವತಃ ಭಾವುಕರು, ಸಣ್ಣದನ್ನು ಬ್ರಹ್ಮಾಂಡವಾಗಿ ಕಲ್ಪಿಸಿಕೊಳ್ಳುವುದರಲ್ಲಿ ಅವರ ವಿಭಾವನೆಗೆ ಹೆಚ್ಚಿನ ಒಲವು.'' ನಿರಾಲಂಕೃತ ಭಾಷೆ, ನೇರ ನುಡಿ, ಸಾರ್ವತ್ರಿಕ ವಿದ್ಯಮಾನಗಳ ಬಗ್ಗೆ ಅನುಮಾನಕ್ಕೆಡೆಯಿಲ್ಲದ ಆಲೋಚನೆ ಇವು ಇವರ ರಚನೆಗಳಲ್ಲಿ ಎದ್ದು ಕಾಣುವ ಗುಣಗಳಾಗಿವೆ. ಒಂದೊಂದು ರಚನೆಯೂ ಆಯ್ದ ವಸ್ತುವಿನ ಲಕ್ಷಣ ನಿರೂಪಣೆ ಮಾಡುವುದರಲ್ಲಿ ಅಥವ ಶಬ್ದ ಚಿತ್ರವನ್ನು ಮೂಡಿಸುವಲ್ಲಿ ಕವಿಗೆ ಇರುವ ಆಸಕ್ತಿಯನ್ನು ತೋರುತ್ತದೆ.

'ಯುಗಧರ್ಮನ ತ್ರಿಪದಿಗಳು' ''ಬರವಣಿಗೆ ಓದು ಗೊತ್ತಿಲ್ಲದ ಆಶುಕವಿ'' ರಾಮಣ್ಣ ಅವರು ಆಗಾಗ ಕಟ್ಟಿದ ಹಾಡುಗಳನ್ನು ರಾಜಶೇಖರ ಹನುಮಲಿಯವರು ಸಂಪಾದಿಸಿದ್ದಾರೆ. ಪ್ರತಿಷ್ಠಿತ ಕಾವ್ಯ ರಚನಾವಲಯಕ್ಕೆ ಸೇರದ, ಆದರೆ ಜಾನಪದ ಪರಂಪರೆಯೊಂದಿಗೆ ನಿಕಟ ಸಂಬಂಧವನ್ನಿಟ್ಟುಕೊಂಡು ಆಯಾ ಸಂದರ್ಭ ಪ್ರೇರೇಪಿಸಿದ ಭಾವಗಳನ್ನು ಹಾಡಾಗಿಸುವ ಅಜ್ಞಾತ ಕವಿವರ್ಗವೊಂದು ಇಂದೂ ಕನ್ನಡದಲ್ಲಿದೆ. ಅಂಥ ಕವಿಗಳ ಪ್ರತಿನಿಧಿಯಾಗಿ ಯುಗಧರ್ಮ ರಾಮಣ್ಣ ಕಾಣುತ್ತಾರೆ. ತತ್ವಪದ, ಲಾವಣಿ, ತ್ರಿಪದಿ ಮುಂತಾದ ಪ್ರಕಾರಗಳು ಇಂದು ಪಡೆಯುತ್ತಿರುವ ರೂಪವನ್ನು ಇಲ್ಲಿ

ಬರಹದಲ್ಲಿ ಸಂಕಲಿಸಿ ಸಂಪಾದಕರು ಜಾನಪದ-ಶಿಷ್ಟ ಸಾಹಿತ್ಯಗಳ ಸಂಬಂಧವನ್ನು ಅಧ್ಯಯನ ಮಾಡುವವರಿಗೆ ಒಂದು ಆಕರವನ್ನು ಒದಗಿಸಿಕೊಟ್ಟಿದ್ದಾರೆ.

ಮಹಾಬಲೇಶ್ವರ ಕಾಟ್ರಹಳ್ಳಿಯವರ 'ಜೀವಸ್ಪಂದಿ' ಸಂಕಲನದಲ್ಲಿ ಎದ್ದುಕಾಣುವ ಗುಣವೆಂದರೆ ಅವರ ಚಿಂತನ ಧಾರೆ ಮತ್ತು ಬದುಕನ್ನು ಕುರಿತ ಖಚಿತ ನಿಲವು. ಆಕ್ರೋಶ ಕೇವಲ ಆಕ್ರೋಶವಾಗಿ ಉಳಿಯದೆ ವ್ಯಂಗ್ಯದೊಡನೆ ಸೇರಿ ಇಲ್ಲಿನ ಬಹುತೇಕ ಕವನಗಳು ರೂಪುಗೊಂಡಿವೆ. 'ಹಂಪಿತೇರನೆಳೆಯುತಾರೆ', 'ಇಂಡಿಯಾ ಇದು ಇಂಡಿಯಾ' ಇವೆರಡನ್ನು ವಿಶೇಷವಾಗಿ ಈ ಸಂಕಲನದ ಪ್ರಾತಿನಿಧಿಕ ಕವನಗಳೆಂದು ಉಲ್ಲೇಖಿಸಬಹುದು. ಕಾಟ್ರಹಳ್ಳಿಯವರ ಕವನಗಳು ಕೇವಲ ಕವನಗಳಾಗಿ ಉಳಿಯದೆ ತಾತ್ವಿಕ ನಿಲುವಿನ ಪ್ರತಿಪಾದನೆಗಳೂ ಆಗುತ್ತವೆ.

ಪ್ರೇಮಾ ತಾಶೀಲ್ದಾರ್ ಅವರ ಎರಡನೆಯ ಸಂಕಲನ 'ನಿನ್ನ ಹಿಂದಿನ ನಾನು' ಸೀಮಿತ ಅನುಭವವಲಯದಲ್ಲೇ ವರ್ತಿಸುವುದಾದರೂ ಭಾವದ ತೀವ್ರತೆ ಇದೆ. ಕವಿತೆಗಳು ಪ್ರಾಮಾಣಿಕ ಅನ್ನಿಸುತ್ತವೆ. ಶೀರ್ಷಿಕೆಯನ್ನು ಕೊಟ್ಟಿರುವ ಕವನ ಅಕ್ಕಮಹಾದೇವಿಯ ವಚನವನ್ನೂ ನಿಲವನ್ನೂ ಸೂಕ್ಷ್ಮವಾಗಿ ಪರಿವರ್ತನೆಗೊಳಿಸಿದೆ. 'ಅವತಾರ' ಈ ಸಂಕಲನದ ಇನ್ನೊಂದು ಒಳ್ಳೆಯ ಕವನ.

೬

ಕವಿಯಾಗಬೇಕೆಂಬ ಹಂಬಲವೇ ಬಂಡವಾಳವಾಗಿರುವ, ತಮ್ಮ ರಚನೆಗಳಿಂದ ಕನ್ನಡ ಕಾವ್ಯದ ಸಂಖ್ಯಾ ಸಮೃದ್ಧಿಗೆ ಕಾರಣವಾಗಿರುವ ಕವಿಗಳು ಅನೇಕರಿದ್ದಾರೆ. ಇವರ ಕವನಗಳು ವಿವಿಧ ಸಂಪಾದಕರಿಂದ ಸಂಪಾದಿತವಾಗಿ ಅಥವ ತಮ್ಮ ಹುಮ್ಮಸ್ಸಿನ ಸಾಹಸದ ಫಲವಾಗಿ ತಾವೇ ಪ್ರಕಟಗೊಳಿಸಿದ ಪುಸ್ತಕಗಳು ಬಂದಿವೆ. ಇವುಗಳಲ್ಲಿ ಉತ್ತಮವೆನಿಸುವ ರಚನೆಗಳೋ, ಸಾಲುಗಳೋ, ಮಾತುಗಳೋ ಅಲ್ಲಲ್ಲಿ ಕಾಣುತ್ತವೆ. ಆದರೆ ನೆನಪಿನಲ್ಲಿ ಉಳಿದು ಬೆಳೆಯುವ ಕವನಗಳು ಇಲ್ಲ. ಕವಿಗಳಾಗಬಯಸುವ ಎಲ್ಲರಿಗೂ ಶುಭವಾಗಲಿ, ಒಳ್ಳೆಯ ಕಾವ್ಯ ಬರೆಯುವಂತಾಗಲಿ.

## ನಾಟಕ

*ಪ್ರಕಾಶ್‌ಗರುಡ*

ಇತರ ಸಾಹಿತ್ಯ ಪ್ರಕಾರಗಳಿಗೆ ಹೋಲಿಸಿದರೆ ಈ ವರುಷದ ಕನ್ನಡ ನಾಟಕ ಸಾಹಿತ್ಯದಬೆಳೆ, ಸಂಖ್ಯೆ ಹಾಗೂ ಗುಣಮಟ್ಟದ ದೃಷ್ಟಿಯಿಂದ ಅಷ್ಟು ತೃಪ್ತಿಕರವಾಗಿಲ್ಲ. ನಮ್ಮ ನೆರೆಹೊರೆಯ ಪ್ರದೇಶಗಳಿಗೆ ಹೋಲಿಸಿದರೆ ಇಲ್ಲಿಯ ರಂಗಚಟುವಟಿಕೆ ಚುರುಕು ಗೊಂಡಿದ್ದರೂ, ಪೂರಕವಾಗಿ ನಾಟಕ ಸಾಹಿತ್ಯ ಬೆಳೆಯದೇ ಇರುವುದು ಗಂಭೀರವಾದ ವಿಷಯವಾಗಿದೆ. ವರುಷದ ಒಟ್ಟಾರೆ ರಂಗಪ್ರಯೋಗಗಳನ್ನು ಗಮನಿಸಲಾಗಿ ಕಂಡುಬರುವ ಅಂಶವೆಂದರೆ, ಹೆಚ್ಚಾಗಿ ಪ್ರದರ್ಶನಗೊಂಡ ನಾಟಕಗಳು ರೂಪಾಂತರ ಅನುವಾದಗಳಾಗಿವೆ ಅಥವಾ ಈ ಹಿಂದೆ ರಚಿತವಾದ ನಾಟಕಗಳೇ ಮರುಪ್ರದರ್ಶನ ಗೊಂಡಿವೆ. ಇತ್ತೀಚಿನ ದಿನಗಳಲ್ಲಿ ಕಂಡುಬರುತ್ತಿರುವ ಇನ್ನೊಂದು ಮುಖ್ಯ ಅಂಶವೆಂದರೆ, ಈಗಾಗಲೆ ಪ್ರಸಿದ್ಧಿ ಪಡೆದ ನಾಟಕೇತರ ಸಾಹಿತ್ಯ ಕೃತಿಗಳನ್ನು ರಂಗ ಪ್ರದರ್ಶನಗಳಿಗೆ ಅಳವಡಿಸಿಕೊಳ್ಳುತ್ತಿರುವುದು. ಇದಕ್ಕೆ ಪರ ವಿರೋಧವೇನೆ 'ಇರಲಿ' ಪ್ರಸ್ತುತ ಪ್ರಕ್ರಿಯೆ ನಾಟಕ ಸಾಹಿತ್ಯದ ಕೊರತೆಯನ್ನಂತೂ ಸೂಚಿಸುತ್ತದೆಯೆ? ಎಂಬುದನ್ನು ಅವಲೋಕಿಸಬೇಕಾಗಿದೆ.

ಬಹುಶಃ ಈ ವರುಷದಲ್ಲಿ ಬಂದ ನಾಟಕಗಳ ಪಟ್ಟಿಯಲ್ಲಿ ಗಿರೀಶ ಕಾರ್ನಾಡರ 'ಅಗ್ನಿ ಮತ್ತು ಮಳೆ' ನಾಟಕ ಮಾತ್ರ, ರಂಗಪ್ರಯೋಗದ ದೃಷ್ಟಿಯಿಂದ ಹಾಗೂ ಸಾಹಿತ್ಯದ ದೃಷ್ಟಿಯಿಂದ ಮುಖ್ಯವಾಗಿದ್ದು ಗಮನ ಸೆಳೆಯುತ್ತದೆ. ಈ ನಾಟಕಕೂಡಾ ವರುಷದ ಕೊನೆಯ ತಿಂಗಳಲ್ಲಿ ಪ್ರಕಟವಾದುದರಿಂದ ಇನ್ನೂ ಪ್ರಯೋಗಗೊಂಡು ಚರ್ಚಿತವಾಗಬೇಕಾಗಿದೆ. ಈ ನಾಟಕದ ಗುಣಾವಗುಣಗಳೇನೆ ಇರಲಿ, ಸದ್ಯ ನಮಗೆ ಕಾಣುವುದೆಂದರೆ ಪ್ರಸ್ತುತ ನಾಟಕಕ್ಕೆ ಕಾರ್ನಾಡರು ಈ ಹಿಂದೆ ಬರೆದ 'ತಲೆದಂಡ' ನಾಕಟದಷ್ಟು ಉತ್ಸಾಹದಿಂದ ಚರ್ಚೆಯೂ ಆಗಿಲ್ಲ ಹಾಗೂ ಆ ನಾಟಕದಂತೆ ತ್ವರಿತಗತಿಯಲ್ಲಿ ಪ್ರಯೋಗಕ್ಕೂ ಅಣಿಗೊಳ್ಳುತ್ತಿಲ್ಲ ಎಂಬುದು.

ಈ ವರುಷ ನಾಟಕ ಸಾಹಿತ್ಯ ರಚನಾಕಾರರಿಂದ ಹಿಡಿದು ಇತರ ಸಾಹಿತ್ಯ ಪ್ರಕಾರಗಳ ರಚನಾಕಾರರಿಗೆ ' ಮಹಾಚೈತ್ರ' ನಾಟಕ ಸೃಷ್ಟಿಸಿದ ವಿವಾದದಿಂದ (ಅದು ರದ್ದಾದುರಿಂದ) ಅಸಮಾಧಾನವಾಗಿದ್ದಂತೂ ನಿಜ. ಎಲ್ಲರಿಗೂ ಈಗಾಗಲೇ ತಿಳಿದಿರುವಂತೆ ಎಚ್. ಎಸ್. ಶಿವಪ್ರಕಾಶ ರಿಂದ ರಚಿತವಾದ 'ಮಹಾಚೈತ್ರ' ( ೧೯೮೭ ) ನಾಟಕ ಪುಸ್ತಕವಾಗಿ ನಿಗದಿಯಾಗಿತ್ತು. ಪ್ರಸ್ತುತ ಕೃತಿ ಒಂದು ಕೋಮಿನವರ ಮಸಲತ್ತಿಗೆ ಒಳಗಾಗಿ ರದ್ದಾಗುವ ಹಂತವನ್ನು ತಲುಪಿದ್ದೂ ಈ ನಾಡಿನ ಪ್ರಜ್ಞಾವಂತರನ್ನು ವಿವಂಚನೆ

ಗೀಡುಮಾಡಿದೆ. ಈ ರೀತಿ ಒಂದು ಸೃಜನಶೀಲ ಕೃತಿ ಬಲಿಯಾಗುತ್ತಿರುವುದು ಸಾಹಿತ್ಯ ಕ್ಷೇತ್ರದ ದುರಂತವೇ ಸರಿ. ಹೀಗೆಯೇ ಮತೀಯ ಮನೋಧರ್ಮ ಮುಂದುವರೆದು ಅದಕ್ಕೆ ನಮ್ಮ ರಾಜಕಾರಣ ಬಲಿಬೀಳುತ್ತ ಹೋದರೆ, ಈ ನಾಡಿನ ಸಾಹಿತ್ಯ ಸಂಸ್ಕೃತಿಗಳ ಮುಕ್ತ ಬೆಳವಣಿಗೆಗೆ ಆತಂಕ ಒದಗುವುದಂತೂ ಖಂಡಿತ. ತಕ್ಷಣ ಇಂತಹ ಪ್ರಗತಿ ವಿರೋಧಿ ರೋಗಕ್ಕೆ ಚಿಕಿತ್ಸೆ ಆಗಬೇಕು. ಒಂದು ಸೃಜನಶೀಲ ಕೃತಿಯನ್ನು ಸಂಯಮ, ಸಹೃದಯತೆಯಿಂದ ನಮ್ಮ ನಾಡಿನ ಜನತೆ ಸ್ವೀಕರಿಸಿದಾಗ ಮಾತ್ರ ಇಲ್ಲಿಯ ಸಾಹಿತ್ಯ ಸಮೃದ್ಧವಾಗುವುದು.

೨

ಈ ವರುಷ ರಚನೆಯಾದ ನಾಟಕಗಳೆಂದರೆ 'ಪಂಚಾನನ' (ಕೆ. ಮುದ್ದಣ್ಣ) 'ನಿರಾಶೆ' (ಎಲ್. ಕೆ. ಪತ್ತಾರ) 'ಮೃಚ್ಛಕಟಿಕ' (ಅನುವಾದ ಜಿ. ಜಿ. ಹರಿಜಿತ), 'ಕೇವಲ ಸಿಹಿ ಮತ್ತಿತರ ನಾಟಕಗಳು' (ಆರ್. ವಿ. ಭಂಡಾರಿ), 'ದೇವಣ್ಣ ಮೇಷ್ಟ್ರು' (ವೆಂಕಟೇಶ ಪ್ರಭು ಟಿ. ಕೆ) 'ಶಬರಿ' 'ಇಂದ್ರಗರ್ವ ಭಂಗ' (ಶಪಥ ಪೋಲಿಸ್) 'ಬಲಿದಾನ' (ಕೆ. ಶ್ರೀ. ನಂಜಪ್ಪ) 'ಶಿವಭಕ್ತ ಮಲುಹಣ' ಹಾಗೂ 'ಜಡೆಯ ಶಂಕರ ದಾಸಿಮಯ್ಯ' (ಮೋಹಿನಿದೇವಿ ಯಳಮಲಿ), 'ಅಚಲ' (ಹಾಲ್ ವರ್ದಿಹಾಲ್ ನ 'ದಿ ವೇಲಿಯಂಟ್' ನಾಟಕದ ರೂಪಾಂತರ. ಉ. ಜ. ಆವಲಮೂರ್ತಿ) 'ಅಗ್ನಿ ಮತ್ತು ಮಳೆ' (ಗಿರೀಶ ಕಾರ್ನಾಡ) 'ಜರ್ಮನ್ ಬಂಗ್ಲೆ' ( ದಿ. ಜಿ. ಬಿ. ಜೋಷಿ), 'ಸಂಕಾನಟ್ಟಿಯ ಚಂದ್ರಿ' (ರೂಪಾಂತರ ರಂ. ಶಾ. ಲೋಕಾಪುರ), 'ನೀಲಿ ಮತ್ತಿತರ ನಾಟಕಗಳು' (ಸಂಧ್ಯಾಎಸ್.) 'ವೆನಿಸ್ಸಿನ ವರ್ತಕ' (ಅನುವಾದ ಡಿ. ಆರ್. ಶಶಿಧರ) ' ಅಥೆನ್ಸಿನ ಅರ್ಥವಂತ' ( ಅನುವಾದ ಕೆ. ವಿ. ಸುಬ್ಬಣ್ಣ), ' ಶ್ರೀ ಕೃಷ್ಣ ಮಾನಸ' (ಸಮೇತನ ಹಳ್ಳಿ ರಾಮರಾಯ) ಇತ್ಯಾದಿ.

ಈ ವರುಷದಲ್ಲಿ ರಚನೆಯಾದ ಒಟ್ಟು ನಾಟಕಗಳಲ್ಲಿ ರೂಪಾಂತರ ಅನುವಾದಿತ ನಾಟಕಗಳನ್ನು ಬಿಟ್ಟು ಮಾತನಾಡುವದಾದರೆ, ಹೆಚ್ಚಿನ ನಾಟಕಗಳು ರಂಗಪ್ರಯೋಗಗಳನ್ನು ಕಂಡೆ ಇಲ್ಲ. ಈ ವರುಷದ ಹಲವಾರು ನಾಟಕಗಳನ್ನು ಗಮನಿಸಿದರೆ, ಈ ನಾಟಕಗಳಿಗೆ ಈ ವರೆಗಿನ ಕನ್ನಡ ರಂಗಭೂಮಿ ನಾಟಕ ಸಾಹಿತ್ಯದ ಪರಂಪರೆಯ ಯಾವ ಸೋಂಕೂ ಇಲ್ಲದೆ, ಸಮಕಾಲೀನವಾದ ಯಾವ ಕಾಳಜಿಗಳೂ ಇಲ್ಲದೆ, ಹೋಗಲಿ ಕೊನೆಯ ಪಕ್ಷ ಪ್ರದರ್ಶನಗೊಳ್ಳಬಹುದಾದ ಕಲಾತ್ಮಕ ಗುಣವೂ ಇಲ್ಲದೆ ರಚನೆಗೊಂಡಿವೆ. ಇಂಥ ಒಂದು ನಿರಾಶೆಯ ಸ್ಥಿತಿಯಲ್ಲಿ ಕಾರ್ನಾಡರ 'ಅಗ್ನಿ ಮತ್ತು ಮಳೆ' ಯಂತಹ ಚರ್ಚಿಸಲು ಸಾಧ್ಯವಾಗುವ ನಾಟಕ ರಚನೆಯಾಗಿದ್ದು, ಕನ್ನಡ ರಂಗಭೂಮಿಯ ಸುದೈವವೆಂದೇ ಹೇಳಬೇಕು. ಹಾಗೆಯೇ ಈ ವರುಷ ಇತರ ಭಾಷೆಯಿಂದ ಹಲವಾರು ಉತ್ತಮ ಕೃತಿಗಳೂ ರೂಪಾಂತರ, ಇಲ್ಲವೆ ಅನುವಾದಗೊಂಡು ಕನ್ನಡ ನಾಟಕ ಸಾಹಿತ್ಯದ ಮೌಲ್ಯವನ್ನು ಹೆಚ್ಚಿಸಿದೆ. ಈ ರೀತಿ ರೂಪಾಂತರಗೊಂಡ ಕೃತಿಯಲ್ಲಿ ರಂ. ಶಾ. ಲೋಕಾಪುರರ 'ಸಂಕಾನಟ್ಟಿಯ ಚಂದ್ರಿ' (ಬ್ರೆಕ್ಟನ 'ಗುಡ್ ಪರ್ಸನ್ ಆಫ್ ಸೆಝುವಾನ್') ಗಮನ ಸೆಳೆಯಬಲ್ಲ ನಾಟಕವಾಗಿದೆ.

೩

ಕನ್ನಡ ಸಾಹಿತ್ಯಕ್ಕೆ ಈವರೆಗೆ ಉತ್ತಮ ಕೃತಿಗಳನ್ನು ನೀಡುತ್ತಾ ಬಂದಿರುವ ಧಾರವಾಡದ ಮನೋಹರ ಗ್ರಂಥಮಾಲೆ, ಈ ವರುಷದ ಕೊನೆಯ ತಿಂಗಳು ಮೂರು ನಾಟಕಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಕಾರ್ನಾಡರ 'ಅಗ್ನಿ ಮತ್ತು ಮಳೆ', ರಂಶಾರವರ ರೂಪಾಂತರಕೃತಿ 'ಸಂಕಾನಟ್ಟಿಯ ಚಂದ್ರಿ'. ದಿ. ಜಿ. ಬಿ. ಜೋಷಿ ಯವರು ಈ ಹಿಂದೆಯೇ ಬರೆದಿಟ್ಟ 'ಜರ್ಮನ್ ಬಂಗ್ಲೆ', ನಾಟಕಗಳು ಸೇರಿವೆ. ಕಾರ್ನಾಡರು ಈ ವರುಷ ತಮ್ಮ ನಾಟಕವನ್ನು ಅಮೇರಿಕಾದ ಮಿನಿಯಾ ಪೋಲಿಸ್ ನಗರದ 'ಗಥ್ರೀ ಥಿಏಟರ್ ನಾಟ್ಯಸಂಸ್ಥೆ'ಯವರು ನೀಡಿದ ಆರ್ಥಿಕ ಬೆಂಬಲ ಪಡೆದು ರಚಿಸಿದ್ದಾರೆ. ಕನ್ನಡ ರಂಗಭೂಮಿಗೆ ಹಾಗೂ ನಾಟಕ ರಚನಾಕಾರರಿಗೆ ಈ ರೀತಿ ವಿದೇಶದ ಆರ್ಥಿಕ ಬೆಂಬಲ ದೊರಕುತ್ತಿರುವುದು ಹಳೆಯ ವಿಷಯ. ಅದರಿಂದ ನಮ್ಮ ರಂಗಭೂಮಿ ಪ್ರಗತಿಗೆ ತಕ್ಕಮಟ್ಟಿಗೆ ಅನುಕೂಲವೂ ಆಗಿರಬಹುದು. ಆದರೆ ಪ್ರಸ್ತುತ ರಾಜಕೀಯ ಪರಿಸ್ಥಿತಿಯಲ್ಲಿ ಈ ರೀತಿ ಹರಿದುಬರುತ್ತಿರುವ ವಿದೇಶೀ ಅನುದಾನಗಳನ್ನು ಸಕಾರಣವಾಗಿ ಅನುಮಾನದಿಂದ ನೋಡಬೇಕಾಗಿ ಬಂದಿದೆ. ಕಾರ್ನಾಡರಿಗೆ ಈ ಎಚ್ಚರಿಕೆ ಇರುವುದರಿಂದಲೆ, ಅವರು ಪ್ರಸ್ತುತ 'ಅಗ್ನಿ ಮತ್ತು ಮಳೆ' ನಾಟಕವನ್ನು ಮೊದಲು ಕನ್ನಡ ಪ್ರೇಕ್ಷಕರನ್ನು ಗಮನದಲ್ಲಿಟ್ಟುಕೊಂಡು ಕನ್ನಡದಲ್ಲೇ ರಚಿಸಿದ್ದಾರೆ.

'ಗಥ್ರೀ ಥಿಏಟರ್' ವಿಶಾಲವಾದ ಸಾಕಷ್ಟು ತಾಂತ್ರಿಕ ಅನುಕೂಲತೆಯಿಂರುವ ಮೂರು ಬದಿಯಲ್ಲೂ ಪ್ರೇಕ್ಷಕರು ಕುಳಿತುಕೊಳ್ಳಲು ಅನುಕೂಲವಿರುವ ಒಂದು ವಿಶಿಷ್ಟ ರಂಗಮಂದಿರ. ಕಾರ್ನಾಡರು ತಮ್ಮ ನಾಟಕವನ್ನು ಈ ರಂಗಮಂದಿರದ ಸಾಧ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ರಚಿಸಿದ್ದರೂ, ನಮ್ಮ ಪರಂಪರೆಯ ಸಾಂಕೇತಿಕ ರಂಗಸಜ್ಜಿಕೆಯನ್ನು ಸಮರ್ಥವಾಗಿ ದುಡಿಸಿಕೊಳ್ಳಬಲ್ಲಂತಹ ವಿಶಿಷ್ಟ ವಿನ್ಯಾಸವನ್ನು ಪ್ರಸ್ತುತ ನಾಟಕ ಪಡೆದಿದೆ. ಈ ವಿಚಾರಕುರಿತು ಅವರು ನಾಟಕದ ಮುನ್ನುಡಿಯಲ್ಲೇ ತಿಳಿಸಿದ್ದಾರೆ. ಅದು ನಿಜ ಕೂಡಾ, ಏಕೆಂದರೆ ತೀರಾ ಸಂಕೀರ್ಣ ಅನ್ನಿಸುವ ವಿನ್ಯಾಸವುಳ್ಳ ಈ ನಾಟಕದ 'ಉತ್ತರರಂಗ'ದ ಭಾಗದಲ್ಲಿ ಹಲವಾರು ರಂಗಕ್ರಿಯೆಗಳು ಏಕಕಾಲದಲ್ಲಿ ನಡೆಯುವುದರಿಂದ, ನಮ್ಮ ಪರಂಪರೆಯ ಸಾಂಕೇತಿಕ ರಂಗ ಪರಿಕಲ್ಪನೆಗಳನ್ನು ಸಮರ್ಥವಾಗಿ ಅಳವಡಿಸಿಕೊಳ್ಳಬಹುದು. ನಾಟಕದಲ್ಲಿ ಬರುವ ಯಜ್ಞಮಂಟಪ, ಆಶ್ರಮ, ಬೇಡರ ಗುಡಿಸಲು, ನಾಟಕದೊಳಗಿನ 'ನಾಟಕದ ಕ್ರಿಯೆ'ಗಳನ್ನೂ ಇಲ್ಲಿಯ ರಂಗರೀತಿಗೆ ಒಗ್ಗಿಸಿಕೊಳ್ಳಬಹುದು. ಇಷ್ಟೆಲ್ಲದರ ಮಧ್ಯೆಯೂ ಸಂಕೀರ್ಣವಾದ ವಸ್ತು ವಿನ್ಯಾಸವುಳ್ಳ ಈ ನಾಟಕವನ್ನು, ಒಟ್ಟಾರೆ ಒಂದು ಕೇಂದ್ರ ಆಶಯಕ್ಕೆ ತರಲು ಕಾರ್ನಾಡರು ಸ್ವಲ್ಪ ಕಸರತ್ತು ಮಾಡಿದ್ದಾರೆ ಎಂದು ಹೇಳದೆ ಗತ್ಯಂತರವಿಲ್ಲ.

ಕಾರ್ನಾಡರು ಪ್ರಸ್ತುತ ನಾಟಕಕ್ಕೆ ವಸ್ತುವನ್ನು, ಮಹಾಭಾರತದಲ್ಲಿ ಬರುವ ವನಪರ್ವದ ೧೩೫ - ೧೩೮ನೇ ಅಧ್ಯಾಯಗಳಲ್ಲಿ ಯುಧಿಷ್ಠರನಿಗೆ ಲೋಮುಶ ಮಹರ್ಷಿಯಿಂದ ನಿರೂಪಿಸಲ್ಪಟ್ಟ 'ಯವಕ್ರೀತ'ನ ಆಖ್ಯಾನವನ್ನು ಆಧರಿಸಿದ್ದಾರೆ. ಆದರೆ ಹಲವಾರು ಬದಲಾವಣೆಗಳನ್ನು ಮಾಡಿಕೊಳ್ಳುವುದರ ಮೂಲಕ ಇಡೀ ನಾಟಕಕ್ಕೆ

ವಿಶಾಲವಾದ ಸಾಂಸ್ಕೃತಿಕ ಆಯಾಮವನ್ನು ಕೊಡಲು ಪ್ರಯತ್ನಿಸಿದ್ದಾರೆ. ಇದರಲ್ಲಿ ನಾಟಕವಾಗಿ ಬರುವ ಇಂದ್ರ- ವೃತ್ರಾಸುರರ ಕಾಳಗ, ಬೇಡರ ಜನಾಂಗ, ಜಾತಿಗಾರರು, ಹೀಗೆ ಹಲವಾರು ಹೊಸ ಆಖ್ಯಾನಗಳನ್ನು ಮೂಲ ಯವಕ್ರೀತನ ಆಖ್ಯಾನದೊಂದಿಗೆ ಸೇರಿಸಿ ಒಂದು ಸುಸಂಬದ್ಧ ಚೌಕಟ್ಟಿನಲ್ಲಿ ಸಮಕಾಲೀನ ಆಶಯಗಳನ್ನು ಶೋಧಿಸಲು ಪ್ರಯತ್ನಿಸಿದ್ದಾರೆ. ಈ ನೆಲ, ಬಹಳ ವರ್ಷಗಳಿಂದ ಬರಗಾಲಕ್ಕೆ ತುತ್ತಾಗಿದೆ. ಅದಕ್ಕಾಗಿ ಮಳೆಬಂದು ಈ ನೆಲ ತಂಪಾಗಿ ಮತ್ತೆ ಸೃಷ್ಟಿಕ್ರಿಯೆ ಪ್ರಾರಂಭವಾಗಬೇಕು. ಈ ಸುಭಿಕ್ಷೆಗಾಗಿ ಒಂದು ಬೃಹತ್ ಯಜ್ಞ ನಡೆಯಬೇಕು. ಈ ಯಜ್ಞ ನಡೆಸುವವರು ಸಾಂಸ್ಕೃತಿಕವಾಗಿ ಮುಂದಿರುವ ಹಾಗೂ ತಲೆತಲಾಂತರದಿಂದ ಈ ನಾಡಿನ ಆಗು ಹೋಗುಗಳನ್ನು ತಮ್ಮ ಕಪಿಮುಷ್ಟಿಯಲ್ಲಿ ಹಿಡಿದ ಬ್ರಾಹ್ಮಣ ವಿದ್ವದ್ಜನರು ಹಾಗೂ ರಾಜರು, ಇವರು ಯಜ್ಞ ನಡೆಸುತ್ತಾರೆ. ಆದರೆ ನಾಟಕದಲ್ಲಿ ನಡೆಯುವ ' ಯಜ್ಞ' ಭ್ರಷ್ಟಗೊಂಡ ಒಂದು ಸಾಂಸ್ಕೃತಿಕ ಕ್ರಿಯೆಯಾಗಿ ಬರುತ್ತದೆ. ಇಡೀ ನಾಟಕದಲ್ಲಿ 'ಯಜ್ಞ' ಮತ್ತೂ ಅದರ ಸುತ್ತ ಮುತ್ತ ನಡೆಯುವ ಕರ್ಮಕಾಂಡವನ್ನು ಚಿತ್ರಿಸಲಾಗಿದೆ. ಈ ನೆಲಕ್ಕೆ 'ಮಳೆ' ಆಗುವಿಕೆಯಿಂದ ಸುಭಿಕ್ಷೆ ನೆಲಸಬೇಕು. ಆದರೆ ಈ ಕ್ರಿಯೆಯ ಮುಂಚೂಣಿಯಲ್ಲಿರುವವರೇ ಚರಿತ್ರಹೀನರಾಗಿದ್ದಾರೆ. ರಕ್ತ ಪಿಪಾಸುಗಳಾಗಿದ್ದಾರೆ. ಇಲ್ಲಿ ಮಳೆಯ ದೇವತೆಯಾದ ಇಂದ್ರ ಕೂಡಾ ಭ್ರಷ್ಟನಂತೆ ನಮಗೆ ಕಾಣಿಸುತ್ತಾನೆ. ಭ್ರಷ್ಟಗೊಂಡ 'ಯಜ್ಞ' ಕ್ರಿಯೆ ನಾಟಕದಲ್ಲಿ ಭಗ್ನಗೊಂಡು 'ಮಳೆ' ಏನೋ ಆಗುತ್ತದೆ. ಆದರೆ ಆ ಮುನ್ನ ಅಮಾಯಕ ಮುಗ್ಧಜೀವಿಗಳು ಬಲಿಯಾಗಬೇಕಾದುದು ಇಲ್ಲಿಯ ದುರಂತವಾಗಿದೆ. ಪ್ರಸ್ತುತ ವಸ್ತುವನ್ನು ಕಾರ್ನಾಡರು ಪ್ರಧಾನ ಸಂಸ್ಕೃತಿ ಉಪಸಂಸ್ಕೃತಿಗಳನ್ನು ಮುಖಾಮುಖಿಯಾಗಿಸುವುದರ ಮೂಲಕ ಇಡೀ ನಾಟಕವನ್ನು ಕಟ್ಟಿದ್ದಾರೆ. ಈಗತಾನೆ ಹೊರಬಂದ ಈ ನಾಟಕ ಇನ್ನೂ ಹಲವಾರು ಪ್ರಯೋಗ ಹಾಗೂ ಚರ್ಚೆಗಳಮೂಲಕ ಬೆಳೆಯಬಲ್ಲದೆಂದು ಮಾತ್ರ ಸದ್ಯ ನಿರೀಕ್ಷಿಸಬಹುದು.

ಇಲ್ಲಿಯೇ ಈ ವರ್ಷದ ಎರಡು ಮುಖ್ಯಪ್ರಕಟಣೆಗಳ ಬಗ್ಗೆ ಪ್ರಾಸಂಗಿಕವಾಗಿ ಹೇಳಬೇಕು. ಕನ್ನಡ ವಿಶ್ವವಿದ್ಯಾಲಯವು ಶ್ರೀರಂಗರ ನಾಟಕಗಳನ್ನು ಮೊದಲ ಸಂಪುಟದಲ್ಲಿ ಪ್ರಕಟಿಸಿದೆ (ಸಂ. ಟಿ. ಪಿ. ಅಶೋಕ) ಪ್ರಸ್ತುತ ಸಂಪುಟವು 'ಹರಿಜನ್ವಾರ' 'ಕೇಳುಜನಮೇಜಯ' 'ಶೋಕಚಕ್ರ' ಮುಂತಾದ ಹತ್ತು ಮುಖ್ಯ ನಾಟಕಗಳನ್ನೊಳ ಗೊಂಡಿದೆ. ಶ್ರೀರಂಗರ ರಂಗಸಾಧನೆ ಹಾಗೂ ನಾಟಕ ಸಾಹಿತ್ಯದ ಬಗ್ಗೆ ಈಗಾಗಲೇ ಸಾಕಷ್ಟು ವಿಮರ್ಶಾತ್ಮಕ ಲೇಖನಗಳು ಬಂದಿವೆ. ಈ ಹಿನ್ನೆಲೆಯಲ್ಲಿ ಶ್ರೀರಂಗರಿಂದ ಸಾಕಷ್ಟು ಮುಂದೆ ಹೋದ ಸಮಕಾಲೀನ ರಂಗಭೂಮಿ ಮತ್ತು ನಾಟಕ ಸಾಹಿತ್ಯದ ಜೊತೆಗೆ ಪ್ರಸ್ತುತ ಕೃತಿಯ ಪುನರ್ ಅವಲೋಕನವು ಅರ್ಥಪೂರ್ಣವಾಗಬಲ್ಲದು.

ಕನ್ನಡ ನಾಟಕ ಸಾಹಿತ್ಯ ಬೆಳೆದು ಬಂದ ಬಗೆ ಹಾಗೂ ರಂಗಭೂಮಿ ಪರಂಪರೆಯ ಪರಿಚಯವನ್ನು ಅಕ್ಷರ ಅವರ 'ರಂಗಪ್ರಪಂಚ' ಸ್ಥೂಲವಾಗಿ ಮಾಡಿಕೊಡುತ್ತದೆ. ಕನ್ನಡದಲ್ಲಿ ರಂಗಭೂಮಿಯನ್ನು ಕುರಿತು ಈವರೆಗೆ ಬಂದ ಕೃತಿಗಳಿಗಿಂತ ಭಿನ್ನವಾಗಿ ಸಮಾಜೊ ಚಾರಿತ್ರಿಕ ಮಾರ್ಗದಲ್ಲಿ, ಪ್ರಪಂಚದ ರಂಗಭೂಮಿಯ ಪರಿಚಯವನ್ನು ಈ

ಪುಸ್ತಕ ಮಾಡಿಕೊಡುತ್ತದೆ. ನಮ್ಮ ಕನ್ನಡದ ಎಷ್ಟೋ ನಾಟಕ ರಚನಾಕಾರರಿಗೆ ಪ್ರಸ್ತುತ ಪುಸ್ತಕದ ಅವಲೋಕನವು ನಾಟಕ ರಚನೆಗೆ ಹೊಸ ಹೊಳಪುಗಳನ್ನು ನೀಡಬಲ್ಲದು.

೪

ಕನ್ನಡ ಆಧುನಿಕ ರಂಗಭೂಮಿಯ ಮೇಲೆ ಶೇಕ್ಸ್‌ಪಿಯರ್ ಅಥವಾ ಶಾನ ನಾಟಕಗಳಂತೆ, ಈ ಶತಮಾನದ ೬೦ ದಶಕದಿಂದೀಚೆಗೆ ಬ್ರೆಕ್ಟನ ನಾಟಕ ಹಾಗೂ ಆತನ ಎಪಿಕ್ ರಂಗಭೂಮಿ ಪರಿಕಲ್ಪನೆಯ ಪ್ರಭಾವ ಗಮನಾರ್ಹವಾಗಿ ಆಗಿದೆ. ಈಗಾಗಲೇ ಆತನ ಹಲವಾರು ಪ್ರಮುಖ ನಾಟಕಗಳು ಅನುವಾದ, ರೂಪಾಂತರಗಳನ್ನೂ ಕಂಡಿವೆ. ಬ್ರೆಕ್ಟ್ ತನ್ನ ಎಪಿಕ್ ರಂಗಪರಿಕಲ್ಪನೆಗೆ ಹೆಚ್ಚಾಗಿ ಏಷ್ಯನ್ ರಂಗಪ್ರಸ್ತುತಿಯ ತಂತ್ರಗಳನ್ನು ಅಳವಡಿಸಿಕೊಂಡದ್ದನ್ನು ಈಗಾಗಲೇ ವಿಮರ್ಶಕರು ಗುರುತಿಸಿದ್ದಾರೆ. ಮಾರ್ಕ್ಸ್‌ವಾದಿಯಾದ ಬ್ರೆಕ್ಟನಿಗೆ ಎಪಿಕ್ ರಂಗ ಪರಿಕಲ್ಪನೆ ತಾತ್ವಿಕವಾಗಿ ಅವಶ್ಯವಾಗಿ ಬೇಕಾಗಿತ್ತು. ಇತಿಹಾಸದುದ್ದಕ್ಕೂ 'ಒಳ್ಳೆತನ' ಅಂಬುವುದು ನಿರಂತರವಾಗಿ ಶೋಷಣೆಗೆ ಒಳಗಾಗುತ್ತ ಬಂದಿದ್ದು,ಆ ಪರಿಸ್ಥಿತಿ ಬದಲಾಗಬೇಕು ಎಂಬುದೇ ಆತನ ಅನಿಸಿಕೆ. ವ್ಯಕ್ತಿ ಹಾಗೂ ಸಮಾಜದ ಮಧ್ಯದಲ್ಲಿರುವ 'ಬಿರುಕನ್ನು' ಆತ ತನ್ನ ನಾಟಕಗಳಲ್ಲಿ ಶೋಧಿಸಲು ಪ್ರಯತ್ನಿಸಿದ್ದಾನೆ. ಆದರೆ ಆತನ ನಾಟಕಗಳು ಎಷ್ಟೆಲ್ಲಾ ಪ್ರಗತಿಪರ ಘೋಷಣೆಗಳ ಮಧ್ಯೆಯೂ 'ನಾಟಕ' ಅಂಬುವುದು ಕಲಾತ್ಮಕವಾದ ಒಂದು ಪ್ರಕಾರ ಎಂಬುವುದನ್ನು ಮರೆಯುವುದಿಲ್ಲ. ತಾತ್ವಿಕತೆ ಹಾಗೂ ಕಲಾತ್ಮಕತೆಯನ್ನು ಒಟ್ಟಿಗೇ ತನ್ನ ನಾಟಕದಲ್ಲಿ ಸೃಷ್ಟಿಸುವುದರಿಂದ ಬ್ರೆಕ್ಟ್, ಶೇಕ್ಸ್‌ಪಿಯರನ ನಂತರ ಬಂದ ಬಹಳ ಮಹತ್ವದ ನಾಟಕಕಾರನಾಗಿ ನಮಗೆ ಹತ್ತಿರದವನಾಗುತ್ತಾನೆ.

ಸ್ವಾತಂತ್ರ್ಯದ ನಂತರ ಭಾರತ ಎದುರಿಸುತ್ತಿರುವ ಹಲವಾರು ಸಂದಿಗ್ಧ ಸಮಸ್ಯೆಗಳಿಗೆ ಬ್ರೆಕ್ಟ್‌ನ ನಾಟಕಗಳು ನಮ್ಮ ರಂಗಭೂಮಿ ಹೆಚ್ಚು ಅರ್ಥಪೂರ್ಣವಾಗಬಲ್ಲವು. ಈ ಹಿನ್ನೆಲೆಯಲ್ಲಿ ಈ ವರುಷ ಮತ್ತೆ ಬ್ರೆಕ್ಟನ 'ಗುಡ್ ವುಮನ್ ಆಫ್ ಸೆಜುವಾನ್' ನಾಟಕವು ರಂ.ಶಾ. ಲೋಕಾಪೂರರಿಂದ 'ಸಂಕಾನಟ್ಟಿಯ ಚಂದ್ರಿ'ಯಾಗಿ ರೂಪಾಂತರಗೊಂಡಿದೆ. ಈ ಹಿಂದೆ ಈ ನಾಟಕ ಅನುವಾದ-ರೂಪಾಂತರಗಳನ್ನು ಕಂಡಿದೆ. ದೂರೀಕರಣ (ಎಲೀನೇಷನ್) ತತ್ವಕ್ಕೆ ತಾತ್ವಿಕವಾಗಿ ಅಂಟಿಕೊಂಡಿರುವ ಬ್ರೆಕ್ಟ್‌ನ ನಾಟಕಗಳನ್ನು ರೂಪಾಂತರಿಸುವುದನ್ನು ಕೆ. ವಿ. ಸುಬ್ಬಣ್ಣ ಅಷ್ಟಾಗಿ ಸಮರ್ಥಿಸುವುದಿಲ್ಲ. ಆತನ ನಾಟಕಗಳು ಅನುವಾದ ಗೊಂಡಾಗ ಮಾತ್ರ ಆತನ ಆಶಯಗಳನ್ನು ಸಮರ್ಥವಾಗಿ ಬಿಂಬಿಸಬಹುದು ಎಂಬುದು ಅವರ ಅನುಭವ. ಆದರೆ 'ಸಂಕಾನಟ್ಟಿಯ ಚಂದ್ರಿ'ಯಾಗಿ ರೂಪಾಂತರಗೊಂಡ ಬ್ರೆಕ್ಟನ ಈ ನಾಟಕ ಸಾಕಷ್ಟು ಕುತೂಹಲಕಾರಿಯಾಗಿ ನಮಗೆ ಆತ್ಮೀಯವಾಗುತ್ತದೆ. ರಂಶಾರವರು ತಮ್ಮ ಈ ರೂಪಾಂತರಕ್ಕೆ 'ಕೃಷ್ಣ ಪಾರಿಜಾತ' ದ ತಂತ್ರವನ್ನು ಬಳಸಿದ್ದಾರೆ. ಇಡೀ ನಾಟಕದ ಪರಿಸರವನ್ನು ಸಮಕಾಲೀನ ಅಥಣಿ ಪ್ರದೇಶದ ಸುತ್ತ ಇಡುವುದರಿಂದ ಕೃತಿಗೆ ಒಂದು ಹೊಸ ಜೀವಂತಿಕೆ, ಅರ್ಥವಂತಿಕೆ ಬಂದಿದೆ. ಆ ದೃಷ್ಟಿಯಲ್ಲಿ ಈ ರೂಪಾಂತರ ಕೃತಿಯನ್ನು ಗಮನಿಸಬಹುದಾಗಿದೆ.

೫

ಈ ವರುಷ ಪ್ರಕಟಗೊಂಡ ಇನ್ನೊಂದು ನಾಟಕ 'ಜರ್ಮನ್ ಬಂಗ್ಲೆ' . ದಿ ಜಿ. ಬಿ. ಜೋಶಿಯವರು ತಮ್ಮ ಜೀವಿತಾವಧಿಯಲ್ಲಿ ಬರೆದಿಟ್ಟಿದ್ದ ಈ ಕೃತಿ ಈ ವರುಷ ಪ್ರಕಟಗೊಂಡಿದೆ. ಇದೊಂದು ಕಿರುನಾಟಕ. ಬ್ರಿಟೀಷರಿಗೆ ಜರ್ಮನ್ ಮಹಾಯುದ್ಧದ ಕಾಲದಲ್ಲಿ ಸೆರೆಸಿಕ್ಕ ಜರ್ಮನ್ ಕೈದಿಗಳನ್ನು ಸೊಂಡೂರಿನ ಹತ್ತಿರವಿರುವ ಕಣವಿಗ್ರಾಮದ ಒಂದು ಗುಡ್ಡದಲ್ಲಿಡಲಾಗಿತ್ತು. ಈ ನಜರಬಂದಿ ಕೈದಿಗಳು ತಮ್ಮ ಕಾಲಹರಣಕ್ಕಾಗಿ ಒಂದು ವಿಶಾಲವಾದ ಬಂಗ್ಲೆಯನ್ನು ಕಟ್ಟಿದರು. ಈಗಲೂ ಅದು ಇದೆಯಂತೆ. ತಮ್ಮ ಜೀವಿತಾವಧಿಯಲ್ಲಿ ಅವರು ಈ ಬಂಗ್ಲೆಯಲ್ಲಿ ನಡೆಸಿದ ಲೀಲೆಗಳು ಅಪಾರ. ಎಂದೊ ನಡೆದ ಈ ಘಟನೆಗಳನ್ನು ನಾಟಕಕಾರರು ನಮಗೆ ವರ್ತಮಾನದಲ್ಲಿ, ಆ ಬಂಗ್ಲೆಗೆ ಅಕಸ್ಮಾತ್ ಭೇಟಿಕೊಟ್ಟ ದಂಪತಿಗಳ ಮೂಲಕ, ಅನುಭವಕ್ಕೆ ತಂದು ಕೊಡುತ್ತಾರೆ. ಫ್ಯಾಂಟಸಿಯಾಗಿ ನಿರೂಪಿಸಲ್ಪಟ್ಟ ಇಲ್ಲಿಯ ಘಟನೆಗಳಾವವೂ ನಮ್ಮ ಕಣ್ಣಿಗೆ ಕಾಣುವುದಿಲ್ಲ. ಆದರೆ ವಿವಿಧ ಧ್ವನಿ ಸಂಯೋಜನೆಗಳ ಮೂಲಕ ಅನುಭವಕ್ಕೆ ಬರುತ್ತವೆ. ಒಟ್ಟಾರೆ ಹೇಳಬೇಕೆಂದರೆ 'ಜರ್ಮನ್ ಬಂಗ್ಲೆ' ಒಂದು ವಿಸ್ಮಯಕಾರಿ ಕಟ್ಟಡ. ಈ ವಿಸ್ಮಯತೆ ಕೇವಲ ಮಾತಿನ ಮೂಲಕ ಕಟ್ಟಿಕೊಳ್ಳುವುದರಿಂದ ಮೂರ್ತ, ನಾಟಕೀಯ ಸನ್ನಿವೇಶ ಹಾಗೂ ಸಂಘರ್ಷಗಳ ಕೊರತೆಯಿಂದಾಗಿ, ರಂಗಪ್ರಯೋಗದಲ್ಲಿ ಪ್ರೇಕ್ಷಕರನ್ನು ತನ್ನತ್ತ ನಾಟಕ ಸೆಳೆಯಲಾರದು. 'ಸತ್ತವರ ನೆರಳು', 'ಕದಡಿದ ನೀರು,' 'ಮೂಕಬಲಿ'ಯಂತಹ ಪೂರ್ಣ ಪ್ರಮಾಣದ ನಾಟಕಗಳನ್ನು ರಚಿಸಿದ್ದ ದಿ. ಜಿ. ಜೋಶಿಯವರ ಮೇಲಿನ ಪ್ರೇಮಾದರಗಳಿಂದ ಚೋದಿತರಾಗಿ, ಈ ನಾಟಕವನ್ನು ಕನ್ನಡ ಪ್ರೇಕ್ಷಕ ಸ್ವಾಗತಿಸಬಹುದು.

೬

ಇನ್ನುಳಿದಂತೆ ಈ ವರುಷ ಅಂತಹ ಮಹತ್ವದ ನಾಟಕಗಳು ರಚನೆಯಾಗಿಲ್ಲ. ರಚನೆಯಾದ ಕೆಲ ನಾಟಕಗಳು ಎಂತಹ ರಂಗಭೂಮಿಗೋಸ್ಕರ ಪ್ರೇಕ್ಷಕ ವರ್ಗ ಎಂತಹದು ಎಂಬುದನ್ನೇ ಸ್ಪಷ್ಟಪಡಿಸಿಕೊಂಡಂತಿಲ್ಲ. ಈ ನಾಟಕಗಳಲ್ಲಿ ನಾಟಕೀಯ ಸಂಘರ್ಷ ಇಲ್ಲವೇ ಇಲ್ಲ. ಅದೂ ಹೋಗಲಿ, ನೇರ ಕಥೆ ಕಟ್ಟುವಲ್ಲಿ ಸರಿಯಾದ ಪಾತ್ರ ಹಾಗೂ ಘಟನೆಗಳ ನಿರೂಪಣೆ ಕೂಡ ಇಲ್ಲ. ಅಪವಾದ ಅನ್ನುವಂತೆ ಈ ವರುಷ ಒಂದೆರಡು ಉತ್ತಮ ನಾಟಕಗಳು ಬಂದಿವೆಯಾದರೂ ಒಟ್ಟಾರೆ ನಾಟಕ ಸಾಹಿತ್ಯದ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಇಂತಹ ಪರಿಸ್ಥಿತಿಗೆ ಹಲವಾರು ಕಾರಣಗಳಿವೆ. ಕೇವಲ ಬೌದ್ಧಿಕ ನಾಟಕಗಳಿಂದ ನಾಟಕ ಸಾಹಿತ್ಯ ತುಂಬಿಕೊಳ್ಳಬೇಕಂದು ಇಲ್ಲಿನ ಸೀಮಿತ ಅಭಿಪ್ರಾಯವಲ್ಲ. ಪ್ರಯೋಗಗೊಳ್ಳಬಲ್ಲಂತಹ ಗುಣವುಳ್ಳ ನಾಟಕಗಳನ್ನೂ ಕನ್ನಡ ನಾಟಕ ಸಾಹಿತ್ಯ ಸ್ವಾಗತಿಸುತ್ತದೆ. ಇಲ್ಲಿ ನಾಟಕ ಸಾಹಿತ್ಯದ ಬಗ್ಗೆ ಮಾತನಾಡ ಬೇಕಾದಾಗ ಕನ್ನಡದ ಸಮಗ್ರ ರಂಗಭೂಮಿಯನ್ನು (ಆಧುನಿಕ) ಗಮನದಲ್ಲಿಟ್ಟುಕೊಳ್ಳುವುದು ಅವಶ್ಯ ಎಂದು ಅನಿಸಿ ಈ ಮಾತನ್ನು ಹೇಳಬೇಕಾಗಿದೆ. ಆಡುವವರು ಇಲ್ಲ ಎಂದು ಬರೆಯುವವರು ಬರೆಯುವವರು; ಇಲ್ಲ ಎಂದು

ಆಡುವವರು. ಈ ಚರ್ಚೆ ಬಹಳ ದಿನಗಳಿಂದ ನಡೆಯುತ್ತಲೇ ಇದೆ. ಇನ್ನೂವರೆಗೆ ನಮ್ಮ ನಾಟಕ ಸಾಹಿತ್ಯ ಮಧ್ಯಮವರ್ಗದವರನ್ನು ದಾಟಿಯೇ ಇಲ್ಲ. ನೂರಕ್ಕೆ ಎಪ್ಪತ್ತರಷ್ಟು ಹಳ್ಳಿಯ ಜನರನ್ನು ಯಾವ ನಾಟಕಸಾಹಿತ್ಯವು ತನ್ನ ತೆಕ್ಕೆಗೆ ತೆಗೆದುಕೊಂಡಿದೆ ಎಂಬುದು ಮೂಲ ಪ್ರಶ್ನೆ. ಇದು ಆಧುನಿಕ ರಂಗಭೂಮಿಯ ಸಮಸ್ಯೆಯಂತೆ ನಾಟಕ ಸಾಹಿತ್ಯದ ಸಮಸ್ಯೆ ಆಗಲಾರದೆ? ಅಪವಾದಗಳಿರಬಹನ್ನೂ, ಆದರೆ ಇಲ್ಲಿ ಅದು ಒಂದು ಚಳುವಳಿರೂಪದಲ್ಲಾಗಬೇಕು. ಅಂದರೆ ಕನ್ನಡ ನಾಟಕ ಸಾಹಿತ್ಯವು ಸಮಗ್ರವಾಗಿ ಬೆಳೆಯುತ್ತದೆ.

ಮುಖ್ಯವಾಗಿ ಬರೆದ ನಾಟಕ ಪ್ರಯೋಗಗೊಳ್ಳಲೇಬೇಕು ಎಂಬ ಹಟ ನಾಟಕಕಾರರಿಗೆ ಬೇಕು. ಇಲ್ಲಿ ವ್ಯಕ್ತಿವಿಶಿಷ್ಟತೆಯ ಪ್ರಶ್ನೆ ಇದ್ದರೂ ಮಾಧ್ಯಮದ ಗುಣಧರ್ಮದ ಬಗ್ಗೆ ಎಚ್ಚರಿಕೆ ಬೇಕಾಗುತ್ತದೆ. ರಂಗಕರ್ಮಿಗಳು ಹೆಚ್ಚಾಗಿ ನಾಟಕ ರೂಪದಲ್ಲಿದ್ದ ಕೃತಿಗಳನ್ನು ಆಧರಿಸಿದ ತಮ್ಮ ಪ್ರದರ್ಶನಗಳಿಗೆ ಆದ್ಯತೆ ಕೊಡುವುದು ನಾಟಕ ಸಾಹಿತ್ಯದ ಬೆಳವಣಿಗೆಗೆ ಅನುಕೂಲಕರ. ಹಾಗೆಯೇ ನಾಟಕ ರಚನಾಕಾರರು ವೃತ್ತಿಪರತೆಯನ್ನು ರೂಢಿಸಿಕೊಳ್ಳಬೇಕು. ಈಗಿರುವ ರಂಗಪರಂಪರೆಗೆ ಈ ಧೋರಣೆ ಸ್ವಲ್ಪ ಐಡಿಯಲ್ ಅನ್ನಿಸಿದರೂ ಕೊನೇ ಪಕ್ಷ ಆ್ಯಟಿಟ್ಯೂಡ್ ಆದರೂ ಇರಬೇಕು. ನಮ್ಮ ಕನ್ನಡದ ಪ್ರಮುಖ ನಾಟಕಕಾರರು ಮೂರು ನಾಲ್ಕು ವರುಷಕ್ಕೊಮ್ಮೆ ಉತ್ತಮ ನಾಟಕಗಳನ್ನು ಬರೆಯುತ್ತಿದ್ದಾರೆ. ಆದರೆ ಕೇವಲ ಆ ನಾಟಕಗಳನ್ನೆ ಮಾನದಂಡವಾಗಿ ಇಡೀ ಕನ್ನಡ ನಾಟಕ ಸಾಹಿತ್ಯದ ಅವಲೋಕನ ಮಾಡುವಂಥಹ ಸಂದಿಗ್ಧ ಪರಿಸ್ಥಿತಿ ಬರಬಾರದು. ಒಂದು ದೃಷ್ಟಿಯಲ್ಲಿ ಇನ್ನೊಂದು ಹೊಸ ಪೀಳಿಗೆ ತಯ್ಯಾರಾಗಲು ಅವರಿಂದ ಯಾವ ಪ್ರಚೋದನೆಯೂ ದೊರೆಯುತ್ತಿಲ್ಲ. ಇದಕ್ಕೆ ಕಾರಣ ನಮ್ಮ ಎದುರಿಗೆ ಇರುವ ಜೀವಂತ ರಂಗಭೂಮಿಯೂ ಇರಬಹುದು. ಇದರ ನಿರಂತರತೆಯ ಕೊರತೆಯಿಂದಾಗಿ ನಾಟಕಗಳ ಹುಟ್ಟಿಗೂ ಧಕ್ಕೆ ಒದಗಿರಬಹುದು. ಏನೇ ಇರಲಿ ಸದ್ಯದ ಪರಿಸ್ಥಿತಿಯನ್ನು ಒಪ್ಪಿಕೊಳ್ಳುತ್ತಾ ಇನ್ನು ಮುಂದಾದರೂ ಸಮಗ್ರ ರಂಗಭೂಮಿಯ ಜೊತೆ ಕನ್ನಡ ನಾಟಕ ಸಾಹಿತ್ಯವು ಬೆಳೆಯಲಿ ಎಂದು ನಿರೀಕ್ಷಿಸೋಣ.

# ಪ್ರಬಂಧ - ನಗೆಬರಹ

*ಸುಜ್ಞಾನಮೂರ್ತಿ*

ಈ ವರುಷ ಪ್ರಕಟವಾದ ನಗೆಬರಹಗಳು ಸಾಕಷ್ಟು ಸಮೃದ್ಧವೆಂದು ಹೇಳಲಿಕ್ಕಾಗದಿದ್ದರೂ ತಕ್ಕಮಟ್ಟಿಗೆ ವೈವಿಧ್ಯತೆಯಿಂದ ಕೂಡಿವೆ. ಆದರೂ ಈ ಸಾಹಿತ್ಯ ಪ್ರಕಾರದ ಬಗ್ಗೆ ನಮ್ಮ ಬರಹಗಾರರು ಗಂಭೀರವಾಗಿ ಯೋಚಿಸಿದ್ದು ಕಡಿಮೆ. ಇಲ್ಲಿನ ಬರಹಗಳ ವಸ್ತು ವಿಷಯ ವೈವಿಧ್ಯಮಯವಾಗಿದ್ದರೂ ಅವುಗಳನ್ನು ನಿರೂಪಿಸುವ ವಿಧಾನದಲ್ಲಿ ಏಕತಾನತೆಯಿರುವುದನ್ನು ಗುರುತಿಸಬಹುದು. ಬಹುಪಾಲು ಬರಹಗಳು ಪತ್ರಿಕೆಗಳ ನಗೆ ಅಂಕಣಗಳಿಗಾಗಿ ಬರೆದವು. ಬಹಳಷ್ಟು ಲೇಖನಗಳಲ್ಲಿ ಹಾಸ್ಯದೃಷ್ಟಿ ಹಾಗೂ ವಿನೋದ ಪ್ರಜ್ಞೆ ಇಲ್ಲವೆನಿಸುತ್ತದೆ. ಈ ಬರಹದ ಯಶಸ್ಸು ಬಗೆ ಬಗೆಯ ಹಾಸ್ಯ ಸನ್ನಿವೇಶಗಳನ್ನು ನಿರ್ಮಿಸುವ ಮತ್ತು ಅದನ್ನು ಚುರುಕಾದ ಮಾತಿನಲ್ಲಿ ಕಟ್ಟಿಕೊಡುವ ಜಾಣ್ಮೆಯನ್ನು ಅವಲಂಬಿಸಿದೆ. ಅದಕ್ಕೆ ಸಮಾಜವನ್ನು ವಕ್ರದೃಷ್ಟಿಯಿಂದ ನೋಡುವುದಕ್ಕಿಂತಲೂ ವಿಶಿಷ್ಟ ಮನಸ್ಸಿನಿಂದ ನೋಡಬೇಕಾಗುತ್ತದೆ. ಈ ದೃಷ್ಟಿಯಿಂದ ಪರಿಶೀಲಿಸಿದರೆ ಈ ವರುಷ ಅಂತಹ ಬರಹಗಳು ಕೆಲವು ಇವೆಯೆಂಬುದು ಸಮಾಧಾನಕರ ಸಂಗತಿ. ಮುಖ್ಯವಾದ ಸಂಗತಿಯೆಂದರೆ ಈ ವರುಷ ಒಂದೂ ಲಲಿತ ಪ್ರಬಂಧ ಸಂಕಲನ ಪ್ರಕಟವಾಗಿಲ್ಲ. ಪತ್ರಿಕೆಗಳಲ್ಲಿ ಕೆಲವು ಪ್ರಬಂಧಗಳು ಪ್ರಕಟವಾಗಿವೆ.

'ತಲೆಗೊಂದು ತರತರ' ಶ್ರೀನಿವಾಸ ವೈದ್ಯರ ಅತ್ಯುತ್ತಮ ನಗೆಬರಹಗಳ ಸಂಕಲನ. ಕಳೆದ ಹತ್ತು ವರುಷಗಳಿಂದ 'ಅಪರಂಜಿ' ಮಾಸಪತ್ರಿಕೆಯಲ್ಲಿ ಪ್ರಕಟಗೊಂಡ ೩೧ ನಗೆ ಬರಹಗಳನ್ನು ಈ ಸಂಕಲನದಲ್ಲಿ ಒಟ್ಟುಗೂಡಿಸಿದ್ದಾರೆ.

'ನಾಮಾಂಕಣ' ಎಂಬ ಮೊದಲ ಬರಹದಲ್ಲಿ ಉತ್ತರ ಕರ್ನಾಟಕದ ಅಡ್ಡ ಹೆಸರುಗಳು ಮತ್ತು ದಕ್ಷಿಣ ಕರ್ನಾಟಕದ ಬಗೆಬಗೆಯ ವ್ಯಕ್ತಿನಾಮಗಳನ್ನು ಉದ್ಧರಿಸುತ್ತಾ, ಆ ಹೆಸರುಗಳನ್ನು ಪಡೆದಿರುವ ಅವರ ವ್ಯಕ್ತಿತ್ವ ವಿಶೇಷಗಳನ್ನು, ಅವರ ಕಾರ್ಯವೈಖರಿಯನ್ನೂ ರಸವತ್ತಾಗಿ ವರ್ಣಿಸಿದ್ದಾರೆ. ಹೆಸರುಗಳೆಷ್ಟೇ ಸೊಗಸಾಗಿದ್ದರೂ ಉಚ್ಚಾರಣೆಯಲ್ಲಿ ಸಂಕ್ಷಿಪ್ತಗೊಳಿಸಿ ವ್ಯವಸ್ಥಿತವಾಗಿ ಅವುಗಳನ್ನು ಕೆಡಿಸುವ ಬಗ್ಗೆ ಬಣ್ಣಿಸಿದ್ದಾರೆ. ಧಾರವಾಡದ ಕಡೆಯ ಕೆಲವು ಹೆಸರುಗಳನ್ನು ಹಲವು ಮಂದಿ ಇಟ್ಟುಕೊಂಡು ಉಂಟಾಗುವ ಧಾಂದಲೆಯಲ್ಲಿ ನಿರಂತರ ಗೊಂದಲವಿರುವುದನ್ನು ಗುರುತಿಸಿದ್ದಾರೆ. ಇಂತಹ ಹೆಸರು ಹೊತ್ತ ಈ ಭಾಗದವರಿಗೆ ಉಪಯೋಗವಾಗಲೆಂದು ಧಾರವಾಡದಲ್ಲಿ ಸುಸಜ್ಜಿತವಾದ ಹುಚ್ಚಾಸ್ಪತ್ರೆಯನ್ನು ಕಟ್ಟಿರುವ ವಿಷಯವನ್ನು ಸೂಚಿಸುತ್ತಾರೆ.

ಮೂವತ್ತೈದು ವರ್ಷಗಳ ನಿರಂತರ ಸೇವೆಯ ನಂತರ ಸೇವಾ ನಿವೃತ್ತಿಯ ದಿನ ಶೀನೂ ಅವರನ್ನು ಬೀಳ್ಕೊಡುವ ಸಮಾರಂಭದಲ್ಲಿ ಅವರ ಸಹೋದ್ಯೋಗಿಗಳು ಆಡುವ ಕೃತಕ ಮಾತುಗಳನ್ನು, ಅನಗತ್ಯ ಹೊಗಳಿಕೆಯ ಪ್ರಸಂಗವನ್ನು 'ಕಡೀ ಸೆಂಗಾ' ಲೇಖನದಲ್ಲಿ ಚಿತ್ರವತ್ತಾಗಿ ನಿರೂಪಿಸಿದ್ದಾರೆ.

ಚುನಾವಣಾ ಕೆಲಸಕ್ಕೆಂದು ಹಳ್ಳಿಗಾಡಾದ ಬಿದ್ರೂರಿಗೆ ಶೀನೂ ಹೋಗಿ ನಂತರ ಸಂಜೆ ಬಸ್ ಸಿಕ್ಕದೆ ಗೆಳೆಯನ ಕೊಠಡಿಯಲ್ಲಿದ್ದು ಬೆಳಿಗ್ಗೆ ಆರುಗಂಟೆಯ ಬಸ್ಸು ಹಿಡಿಯಬೇಕಾಗುತ್ತದೆ. ಶೀನೂ ಕೈಗಡಿಯಾರ ಕೆಟ್ಟಿರುತ್ತದೆ. ಗಡಿಯಾರವೇ ಇಲ್ಲದ ಆ ಊರಿನಲ್ಲಿ ರಾತ್ರಿಯೆಲ್ಲಾ ಸೊಳ್ಳೆಗಳಿಂದ ಕಡಿಸಿಕೊಂಡು ಸರಿಯಾಗಿ ಆರುಗಂಟೆಗೆ ಏಳುವ ಪಾಡನ್ನೂ ವಿವರಿಸುತ್ತದೆ 'ಬಿದ್ರೂರಿನ ಬಿಗ್ ಬೆನ್'. ಗಡಿಯಾರವಿಲ್ಲದೆ ಪ್ರತಿಕ್ಷಣ ಸಮಯಕ್ಕಾಗಿ ಪರಿತಪಿಸುವ ಪಲವು ಪ್ರಸಂಗಗಳನ್ನೂ ಸ್ವಾರಸ್ಯಕರವಾಗಿ ವರ್ಣಿಸಲಾಗಿದೆ.

ಶ್ರೀನಿವಾಸ ವೈದ್ಯ ಅವರು 'ತಲೆಗೊಂದು ತರತರ'ದಲ್ಲಿ ಬಳಸಿರುವ ಭಾಷೆಯಲ್ಲಿ, ಪ್ರಸಂಗಗಳನ್ನು ನಿರೂಪಿಸುವಲ್ಲಿ, ಉಪಮೆಗಳನ್ನು ಔಚಿತ್ಯಪೂರ್ಣವಾಗಿ ನೀಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಕಥನಸತ್ವವನ್ನು, ನಾಟಕೀಯತೆಯನ್ನೂ, ಚುರುಕಾದ ಮಾತಿನ ಜಾಣ್ಮೆಯನ್ನೂ ಸಮಾನ ನೆಲೆಗಳಲ್ಲಿ ಬಿಗಿ ಬಂಧದಿಂದ ಕಟ್ಟಿಕೊಟ್ಟಿರುವ ಈ ವಿನೋದ ಬರಹಗಳು ಈ ವರ್ಷದ ಅತ್ಯುತ್ತಮ ಬರವಣಿಗೆಯಾಗಿದೆ. ಧಾರವಾಡ ಕನ್ನಡದ ಆಡುಮಾತಿನ ಹಲವು ವರಸೆಗಳನ್ನು ಬಹುಪಾಲು ಬರಹಗಳಲ್ಲಿ ಸೊಗಸಾಗಿ ಪ್ರಯೋಗಿಸಿದ್ದಾರೆ. ಗುಜ್ಜಾರ್ ಅವರ ಕಚಗುಳಿ ಇಡುವಂಥ ರೇಖಾ ಚಿತ್ರಗಳು ಈ ಸಂಕಲನದಲ್ಲಿವೆ.

೧೯೯೧ ರಲ್ಲಿ 'ದೇವರು ದೊಡ್ಡವನು' ಎಂಬ ಹಾಸ್ಯ ಬರಹಗಳ ಸಂಕಲನವನ್ನು ನೀಡಿದ ಕೃಷ್ಣ ಸುಬ್ಬರಾವ್ ಅವರು ಈ ವರ್ಷ 'ಹಾಸ್ಯ ಬೇಕರಿ' ಎಂಬ ಕಿರು ಹಾಸ್ಯ ಬರಹಗಳ ಸಂಗ್ರಹವನ್ನು ಹೊರತಂದಿದ್ದಾರೆ. ಈ ಸಂಕಲನದ ಬಹುಪಾಲು ಬರಹಗಳು ದಿನನಿತ್ಯದ ಸಾಮಾನ್ಯ ಸಮಸ್ಯೆಗಳನ್ನು ವಸ್ತುವಾಗಿ ಪಡೆದಿವೆ. ಇವುಗಳನ್ನು ವಿಶಿಷ್ಟ ದೃಷ್ಟಿಯಿಂದ ನೋಡಿ ಅವುಗಳಿಗೆ ಹಾಸ್ಯವನ್ನೂ ಲೇಪಿಸಿದ್ದಾರೆ. ಇಲ್ಲಿನ ಬರಹಗಳು ನಮ್ಮ ಜನರ ವಿಚಿತ್ರ ನಡವಳಿಕೆಗಳಿಗೆ ಉದಾಹರಣೆಗಳಂತಿವೆ.

'ಹಾಸ್ಯ ಬೇಕರಿ'ಯಲ್ಲಿ ತಮ್ಮ ಬರಹ ಪ್ರಕಟವಾದ ಪತ್ರಿಕೆಯಲ್ಲೇ ಬ್ರೆಡ್‌ಕಟ್ಟಿಕೊಡಲು ಬೇಕರಿಯವನು ಮುಂದಾದಾಗ ತಮ್ಮ ವಿದ್ಯೆಗೆ ಚಾಕು ಹಾಕುವುದನ್ನು ಕಂಡು ಲೇಖಕನಿಗೆ ನೋವಾಗುತ್ತದೆ. ತಮ್ಮ ಲೇಖನ ಎಂದು ಹೇಳಲು ಸಂಕೋಚ, ಗೆಳೆಯನ ಲೇಖನ ಎಂದು ಬೇಕರಿಯವನಿಗೆ ಸುಳ್ಳು ಹೇಳಿದಾಗ ಅವನು 'ಅಷ್ಟೇನಾ ಸಾರ್, ಈ ಪೇಪರ್ನಲ್ಲಿ ಏನೋ ಕೊಳೆಯಿದೆ ಅಂತ ನೀವು ಹೇಳುತ್ತೀರಿ ಅಂತಿದ್ದೆ' ಎಂದು ಉತ್ತರಿಸಿ ಲೇಖನವನ್ನು ಕೊಳೆಯುಸಾಲಿಗೆ ಸೇರಿಸುತ್ತಾನೆ. ಪೇಪರ್

ಕಟಿಂಗ್ ಪಡೆದುದಕ್ಕೆ ಹಣ ಕೊಡಲು ಹೋದರೆ 'ಏನೋ, ಹೆಸರುವಾಸಿ ಲೇಖಕರದ್ದಾದರೆ ಹಣ ತೆಗೆದುಕೊಳ್ಳಬಹುದಿತ್ತು' ಎಂದು ಮತ್ತೆ ಅಣಕಿಸುತ್ತಾನೆ.

ಮನೆ ಬಾಗಿಲಿಗೇ ಬಂದು ಸನ್ಮಾನ ಮಾಡುವವರ ಕಾರ್ಯವಿಧಾನವನ್ನು 'ಮನೆಯಲ್ಲೇ ಸನ್ಮಾನ' ಬರಹದಲ್ಲಿ ತೋರಿಸಿದ್ದಾರೆ. 'ನೀವು ಕನ್ನಡಕ್ಕೆ ಯಾವಾಗಲಾದರೂ ಏನಾದರೂ ಮಾಡಿದ್ದೀರಾ' ಎಂದು ಕೇಳುವವರಿಗೆ ಶ್ರೀಯುತರು ಕನ್ನಡ ಲೇಖಕರು ಎಂದು ತಿಳಿದಾಗ 'ಸರಿಕಣ್ರೋ ಇಲ್ಲೇ ಮುಗಿಸಿ ಬಿಡೋಣ' ಎಂದು ಹೇಳಿ, ಚಿಕ್ಕ ಸನ್ಮಾನ ಮುಗಿಸಿ ಇಡೀ ಗ್ಯಾಂಗೇ ಲೇಖಕರ ಮನೆಯಲ್ಲಿ ಊಟಕ್ಕೆ ಎದ್ದರೆ ಬೇಯಿಸಿ ಹಾಕುವ ಮಡದಿಗೆ ಎಷ್ಟು ಸಿಟ್ಟಾಗಬೇಡ? ಸನ್ಮಾನ ಪಡೆಯುವ ಆಸೆಯಲ್ಲಿ ಉಂಟಾಗುವ ಸಂಕಟವನ್ನು ಈ ಲೇಖನದಲ್ಲಿ ಸ್ವಾರಸ್ಯಕರವಾಗಿ ವಿವರಿಸಿದ್ದಾರೆ.

ಜನಪ್ರಿಯ ಟಿ. ವಿ. ಸೀರಿಯಲ್ ರಾಮಾಯಣ ನೋಡುತ್ತಿದ್ದ ಸಂದರ್ಭದಲ್ಲಿ ಬಾಕಿ ವಸೂಲಿ ಮಾಡುವವರಿಂದ ಉಂಟಾಗುತ್ತಿದ್ದ ಕಿರಿಕಿರಿಯನ್ನು, ಅದರಿಂದ ತಪ್ಪಿಸಿ ಕೊಂಡು ಸ್ನೇಹಿತನಮನೆಯಲ್ಲಿ ಟಿ. ವಿ. ನೋಡುತ್ತಿದ್ದಾಗ, ಅವರ ಮನೆಯಲ್ಲೂ ಇದೇ ಸ್ಥಿತಿಯನ್ನು ಕಂಡು ಅದಕ್ಕೆ ಹಲವು ಪರಿಹಾರಗಳನ್ನು ಹುಡುಕುವದರಲ್ಲಿ ಯಶಸ್ವಿಯಾದ ಬಗೆಯನ್ನು 'ರಾಮಾಯಣದ ಫಲಾನುಭವಿಗಳು' ಲೇಖನದಲ್ಲಿ ನಿರೂಪಿಸಿದ್ದಾರೆ.

ಈ ಸಂಕಲನದ 'ಮನೆ ಕೆಲಸದವಳ ಮನೆ', 'ಕ್ಷೀರಸಾಗರ', 'ಹಕ್ಕೊತ್ತಾಯ' 'ದಂತಕತೆ' ಮೊದಲಾದ ಬರಹಗಳು ನವಿರಾದ ಹಾಸ್ಯದಿಂದ ತುಂಬಿದೆ. ರಸವತ್ತಾದ ನಿರೂಪಣೆಯಿಂದ ಸಣ್ಣ ಮಟ್ಟ ಪ್ರಸಂಗಗಳಿಗೆ ಹಾಸ್ಯವನ್ನು ಲೇಪಿಸುವ ಲೇಖಕರ ಜಾಣ್ಮೆ ಎಲ್ಲ ಬರಹಗಳಲ್ಲೂ ಕಾಣುತ್ತದೆ. ಈ ಲೇಖನಗಳಲ್ಲಿ ಮಡದಿ ವಿಜಯ, ಗೆಳೆಯ ರಾಮಣ್ಣ ಅಲ್ಲಲ್ಲಿ ಕಾಣಿಸಿಕೊಂಡು ಹಾಸ್ಯ ಸನ್ನಿವೇಶವನ್ನು ಹೆಚ್ಚಿಸುತ್ತಾರೆ. ಈ ಸಂಕಲನದ ಮುನ್ನುಡಿಯಲ್ಲಿ ಪ್ರಸಿದ್ಧ ಹಾಸ್ಯ ಲೇಖಕರಾದ ಎಂ. ಎಸ್. ನರಸಿಂಹ ಮೂರ್ತಿಯವರು 'ಅತ್ಯಂತ ಸರಳವಾದ, ಬದುಕಿಗೆ ಸಹಜವಾದ ಘಟನೆಯನ್ನೇ ವಸ್ತುವನ್ನಾಗಿಸಿಕೊಂಡು, ತಿಳಿಹಾಸ್ಯ ನಿರೂಪಣೆಯಲ್ಲಿ, ಚುರುಕು ಸಂಭಾಷಣೆಯಲ್ಲಿ ಬರಹಗಳಿಗೆ ನಗೆಯ ಚೌಕಟ್ಟು ತೊಡಿಸುವ ಜಾಣ್ಮೆ ಈ ಲೇಖಕರಿಗಿದೆ ಎಂದು ಮುನ್ನುಡಿಯಲ್ಲಿ ಹೇಳಿರುವ ಮಾತುಗಳು ಸಮಂಜಸವಾಗಿವೆ.

'ಮುಂಬೈ ಮೋಹ' ಪ್ರೊ. ಜಿ. ಡಿ. ಜೋಶಿಯವರ ಏಳನೆಯ ಹಾಸ್ಯ ಲೇಖನಗಳ ಸಂಕಲನ. ಇದರಲ್ಲಿ ಹದಿನೈದು ಹಾಸ್ಯ ಬರಹಗಳಿವೆ. ಇಲ್ಲಿನ ಕೆಲವು ಹರಟೆಗಳು ಮುಂಬೈ ಮಹಾನಗರದ ಬದುಕಿನ ಕೆಲವು ಪ್ರಸಂಗಗಳನ್ನು ಒಳಗೊಂಡಿವೆ. ಮದುವೆಯ ಮುನ್ನ ಅಳಿಯನಾಗುವವನು ಮಾವನ ಮನೆಯಲ್ಲಿ ಪಡೆಯುವ, ಗೌರವ, ಉಪಚಾರವನ್ನು 'ಅಡ್ವಾನ್ಸ್ ಅಳಿಯತನ' ಹರಟೆಯಲ್ಲಿ ವಿವರಿಸಿದ್ದಾರೆ. ನಮಸ್ಕಾರ ಹಾಕುವುದರಿಂದ ಆಗುವ ಹಲವು ಉಪಯೋಗಗಳನ್ನೂ, ಅದರ ಹಿಂದಿರುವ ರಾಜಕೀಯವನ್ನು 'ನಮಸ್ಕಾರ ಮಾಡಿರಿ, ಹಾಯಾಗಿ ಬಾಳಿರಿ'ಹರಟೆಯಲ್ಲಿ ವಿವರಿಸುತ್ತದೆ. ಮುಂಬೈ ಮಹಾನಗರದಲ್ಲಿ ಬದುಕಲು ಹಂಬಲಿಸುವ ಹಲವರ ಪಾಡನ್ನು

'ಮುಂಬೈ ಮೋಹ' ಹರಟೆಯು ತಿಳಿಸುತ್ತದೆ. ನಗರಗಳಲ್ಲಿ ನಡೆಯುವ ಮದುವೆಯ ಬಗೆಗಳನ್ನು, ಕಲ್ಯಾಣಮಂಟಪಗಳಲ್ಲಿ ಆಗುವ ಗಡಿಬಿಡಿ ಮದುವೆಗಳನ್ನು ಒಂದು ಹರಟೆಯಲ್ಲಿ ವಿಶ್ಲೇಷಿಸಿದೆ. ಕೆಲವು ಹರಟೆಗಳಲ್ಲಿ ವಿಷಯಾಂತರ ದೋಷವಿದೆ. ಸಹಜಸನ್ನಿವೇಶದಲ್ಲಿ ವ್ಯಕ್ತಗೊಳ್ಳುವ ಹಾಸ್ಯ ಪ್ರಸಂಗಗಳನ್ನು ಕೆಲವು ಬರಹಗಳಲ್ಲಿ ವೈಭವೀಕರಿಸಲಾಗಿದೆ.

'ಕಂಡಲ್ಲಿ ಗುಂಡು' ಅನಂತ ಕಲ್ಲೋಳರ ಆರನೆಯ ನಗೆಬರಹಗಳ ಸಂಕಲನ. ಇದರಲ್ಲಿ ೨೨ ಬರಹಗಳಿವೆ. ಇಲ್ಲಿನ ಬಹುಪಾಲು ಬರಹಗಳು ಸಾಮಾನ್ಯ ಸನ್ನಿವೇಶಗಳನ್ನು ವರ್ಣಿಸುತ್ತ ಸಾಗುತ್ತವೆ. ಎಷ್ಟೋ ಸನ್ನಿವೇಶಗಳಲ್ಲಿ ಹಾಸ್ಯವನ್ನು ಹೊಮ್ಮಿಸುವ ಶಕ್ತಿ ಈ ಬರಹಗಳಲ್ಲಿಲ್ಲ. ಈ ಸಂಕಲನದ ಮೊದಲ ಲೇಖನ 'ಕಂಡಲ್ಲಿ ಗುಂಡು' ಎಂಬ ಲೇಖನವನ್ನೂ ಉದಾಹರಣೆಗೆ ಗಮನಿಸಬಹುದು. ಪತ್ರಿಕೆಯಲ್ಲಿ ಪ್ರಕಟವಾದ 'ಕಂಡಲ್ಲಿ ಗುಂಡು' ಶೀರ್ಷಿಕೆಯನ್ನು ನೋಡಿ ಗುಂಡ ಮೆದುಳು ರೋಗ ಹರಡುವ ಹಂದಿಗಳನ್ನು ಕಂಡಲ್ಲಿ ಗುಂಡಿಟ್ಟು ಕೊಲ್ಲುವ ವಿಷಯ ತಿಳಿದು ಹಂದಿಯ ಬಗ್ಗೆ ಪೂಜ್ಯ ಭಾವನೆ ತಾಳಿ ಅದರ ಬಗ್ಗೆ ಹಿರಿಯರು ಹೇಳಿರುವ ಒಳ್ಳೆಯ ಅಭಿಪ್ರಾಯಗಳನ್ನೂ ತನ್ನ ಗೆಳೆಯ ರಾಮಣ್ಣನಿಗೆ ಹೇಳುವ ವಿವರಗಳು ಈ ಬರಹದಲ್ಲಿವೆ.

ಗುಂಡಣ್ಣ ಹೊಸದಾಗಿ ಕಟ್ಟಿಸಿದ ತನ್ನ ಮನೆಯನ್ನೂ ಗೆಳೆಯ ರಾಮಣ್ಣನಿಗೆ ತೋರಿಸಿ ಬಗೆ ಬಗೆಯಾಗಿ ವರ್ಣಿಸಿ ಗೆಳೆಯನಿಂದ ಪ್ರತಿಕ್ರಿಯೆಯನ್ನು ಬಯಸುವ 'ಕಟ್ಟಿದ ಮನೆ ನೋಡು' ಎಂಬ ಬರವಣಿಗೆ ಸಾಮಾನ್ಯ ಮಟ್ಟದ್ದಾಗಿದೆ. 'ನಮ್ಮ ಕಡೆಯ ನಿಶ್ಚಿತಾರ್ಥಗಳ' ಗಂಡು, ಹೆಣ್ಣಿನ ಕಡೆಯವರು ಪರಸ್ಪರ ಕೊಡುಕೊಳ್ಳುವಿಕೆಯ ಹಲವು ವಿಧಗಳನ್ನೂ ವಿವರವಾಗಿ ನಿರೂಪಿಸಿದ್ದಾರೆ. 'ಸರಬತ್ ಬಾಲ್ಯಾ ಪರಸಂಗ', 'ಹೇಳಿದಷ್ಟು ಕೇಳು', 'ಹಳೇದು ಕೊಡಿರಿ ಹೊಸದು ಪಡೆಯಿರಿ!' ಲೇಖನಗಳಲ್ಲಿ ಕೆಲವು ಹಾಸ್ಯ ಸನ್ನಿವೇಶಗಳಿವೆ. ಇವು ಆರಂಭದಲ್ಲಿ ಕುತೂಹಲ ಹುಟ್ಟಿಸಿ, ಕೆಲವೊಮ್ಮೆ ನಗೆಬರೆಸಿ ಹಾಗೆಯೇ ಮರೆತುಹೋಗುತ್ತವೆ.

'ಸಾಹೇಬರ ಸಿಪಾಯಿ' ಎಂ. ಡಿ. ಗೋಗೇರಿಯವರ ಇಪ್ಪತ್ತು ವಿನೋದ ಲೇಖನಗಳ ಸಂಕಲನ. ಇದರ ಮೊದಲ ಬರಹ 'ಸಾಹೇಬರ ಸಿಪಾಯಿ'ಯಲ್ಲಿ ಸಾಹೇಬರಿಗಿಂತಲೂ ಅವರ ಜವಾನ ಕೆಲಸ ಮಾಡುವ ಸಂದರ್ಭದಲ್ಲಿ ಎಂತೆಂಥಾ ಅನುಕೂಲಗಳು, ಅಧಿಕಾರ ಇರುತ್ತದೆ ಎಂಬುದನ್ನು ಸೊಗಸಾಗಿ ನಿರೂಪಿಸಿದ್ದಾರೆ. ನೌಕರ ಶಾಹಿಯ ಸ್ಥಿತಿಗತಿಗಳು ಈ ಬರಹದಲ್ಲಿದೆ. 'ಕನ್ನಡ ಮೇಷ್ಟ್ರು ಕಸಬರಿಗೆಗಿಂತಲೂ ಕಡೆ' ಎಂಬ ಸಂಗತಿಯನ್ನು ಹಲವು ಪ್ರಸಂಗಗಳ ವಿವರಗಳಿಂದ ಕಟ್ಟಿಕೊಟ್ಟಿದ್ದಾರೆ. ಸ್ವತಃ ಲೇಖಕರು ಶಿಕ್ಷಕರಾದ್ದರಿಂದ, ಶಿಕ್ಷಣ ಕ್ಷೇತ್ರದ ಕೆಲವು ಅನುಭವಗಳನ್ನೂ 'ಗುರಪ್ಪ ಮಾಸ್ತರರ ವರ್ಗಾವಣೆ' 'ಗುರಪ್ಪ ಮಾಸ್ತರು ಶಾಲೆಗೆ ಹಾಜರಾದರು' 'ಹೆಡ್ ಮಾಸ್ತರಗೆ ಮಾಡಲಿಕ್ಕೆ ಬಂದಿಯಾ?' ಎಂದು ಲೇಖನಗಳಲ್ಲಿ ವಿವರಿಸಿದ್ದಾರೆ. ಶಿಕ್ಷಕರ ಸಂಕಟಗಳು, ವರ್ಗಾವಣೆಯಿಂದ ಉಂಟಾಗುವ ಅನಾನುಕೂಲಗಳು, ಬಡ್ತಿಯ ವಿಷಯದಲ್ಲಿರುವ ಕಿರುಕುಳವನ್ನು ಸವಿರಾಗಿ ವಿಡಂಬಿಸಿದ್ದಾರೆ.

'ಕಷ್ಟ' ಬರಹದಲ್ಲಿ ಬರಹಗಾರರು ಚಿಕ್ಕಂದಿನಲ್ಲಿ ಮಾಡಿಸಿಕೊಂಡ ಚಿತ್ರವನ್ನು, ಅದರಿಂದ ಆದ ಚಿತ್ರಹಿಂಸೆಯನ್ನು ವಿವರಿಸಿದ್ದಾರೆ. 'ಕವಿಸಮ್ಮೇಳನದಲ್ಲಿ ಒಂದುದಿನ'ದಲ್ಲಿ ಗೋಪಣ್ಣ ಬಗೆಬಗೆಯ ಕವಿ, ಸಾಹಿತಿಗಳನ್ನು, ಕಾಣುವ, ಮಾತಾಡಿಸುವ, ಅವರ ವಿಚಿತ್ರ ನಡವಳಿಕೆಯನ್ನು, ಅಲ್ಲಿ ನಡೆಯುವ ಉಪನ್ಯಾಸ, ಊಟದ ವ್ಯವಸ್ಥೆಯನ್ನು ತಾನೊಬ್ಬ ಕಿರು ಕವಿಯಾಗಿ ಅನೇಕ ಆಸೆಗಳನ್ನು ಹೊಂದಿದ್ದು ಅಲ್ಲಿನ ಸ್ಥಿತಿಯನ್ನು ಕಂಡು ಪಡುವ ನಿರಾಸೆಯನ್ನು ಚಿತ್ರವತ್ತಾಗಿ ಬಣ್ಣಿಸಿದೆ. 'ಕುಡುಕರ ಮಾತುಗಳು' ಬರಹದಲ್ಲಿ ಕುಡುಕರ ನಡೆ, ನುಡಿಯನ್ನು ಸೌಂದರ್ಯ ಪ್ರಜ್ಞೆಯಿಂದ ಗ್ರಹಿಸಿ ಸಂತೋಷಪಡಬೇಕೆನ್ನುವುದು ಲೇಖಕರ ವಿಚಾರವಾಗಿದೆ. ಕುಡುಕರಲ್ಲಿ ತಿಂಗಳ ಕುಡುಕ, ವಾರದ ಕುಡುಕ, ಡೇಲಿ ಕುಡುಕ, ಸ್ಮಶಾನೋನ್ಮುಖ ಕುಡುಕ ಎಂಬ ಪ್ರಕಾರಗಳನ್ನು, ಅವರ ಕುಡಿತದ ವಿಶಿಷ್ಟತೆಗಳನ್ನು ಗುರುತಿಸಿದ್ದಾರೆ. ಈ ಸಂಕಲನದ ಉತ್ತಮ ಬರಹ 'ಚಮಚಾ'. ಈ ವಸ್ತುವನ್ನು ವ್ಯಕ್ತಿಗೆ ಆರೋಪಿಸಿ ಸಮಾಜದಲ್ಲಿರುವ ಚಮಚಾಗಿರಿಯನ್ನು ಎತ್ತಿತೋರಿಸಿದ್ದಾರೆ. ಚಮಚಾಗಳಲ್ಲಿರುವ ಪ್ರಭೇದಗಳನ್ನು ಗುರುತಿಸಿದ್ದಾರೆ. ಮನೆಯ ಚಮಚಾ, ಮಠದ ಚಮಚಾ, ಆಫೀಸರ್ ಚಮಚ, ಲೀಡರ್ ಚಮಚಾಗಳಲ್ಲಿ ಆಯಾ ವಲಯದಲ್ಲಿ ಆಗುವ ಚಮಚಾಗಿರಿಯನ್ನು ವಿವರಿಸಿದ್ದಾರೆ. ಈ ಸಂಕಲನದ ಕೊನೆಯ ಬರಹ ' ಅಂತ್ಯಯಾತ್ರೆಯ ಅನಿಸಿಕೆಗಳು' ಒಂದು ಅತಿರೇಕದ ಪ್ರಯತ್ನವಾಗಿದೆ. ಸತ್ತ ಸಿದ್ದಣ್ಣನನ್ನು ಮಣ್ಣುಮಾಡಿದ ನಂತರ ಅವನ ಗೆಳೆಯರೆಲ್ಲಾ ಸೇರಿ ಅಲ್ಲಿಯೇ ಶ್ರದ್ಧಾಂಜಲಿ ಸಭೆ ಸೇರಿ ಅವನನ್ನು ವಿಚಿತ್ರ ರೀತಿಯಲ್ಲಿ ನೆನೆಯುವುದು ಅತ್ಯಂತ ವಿಸಂಗತ ಪ್ರಸಂಗವಾಗಿ ಮೂಡಿದೆ. ಎಲ್ಲ ಬರಹಗಳಲ್ಲೂ ಧಾರವಾಡ ಕನ್ನಡದ ಸೊಗಡು ತುಂಬಿದೆ. ಗ್ರಾಮೀಣ ಬದುಕಿನ ಹಿನ್ನೆಲೆಯಿಂದ ಕೂಡಿದ ಇಲ್ಲಿನ ಬರಹಗಳು ಸ್ವಾರಸ್ಯಕರವಾದ ನಿರೂಪಣೆಯನ್ನು ಪಡೆದಿದೆ.

'ನಾನ್‌ಸೆನ್ಸ್' ಗುರುರಾಜ ಕುಲಕರ್ಣಿಯವರ ಇಪ್ಪತ್ತು ನಗೆಬರಹಗಳ ಸಂಕಲನ. ಮಾಮೂಲು ಧಾಟಿಯಲ್ಲಿರುವ ಈ ಬರಹಗಳು ನಗೆಯ ಬರಹಕ್ಕೆ ಬೇಕಾದ ಮನೋಭಾವವನ್ನು ಸರಿಯಾಗಿ ಪಡೆದಿಲ್ಲ. ನಗೆಯ ಬರಹಕ್ಕೆ ಅಗತ್ಯವಾದ ಸೂಕ್ಷ್ಮತೆಯನ್ನು ಇಲ್ಲಿನ ಯಾವ ಬರಹದಲ್ಲೂ ಕಾಣಲಾಗುವುದಿಲ್ಲ. ಪ್ರತಿಯೊಂದು ಬರಹವೂ ಲೋಕಾಭಿರಾಮದ ಹರಟೆಯ ಮಟ್ಟವನ್ನೂ ಮುಟ್ಟಿದೆ. ಆರಂಭದ ಬರಹ 'ಹಬ್ಬವನ್ನು ಆಚರಿಸುತ್ತೇನೆ' ಎಂಬುದನ್ನು ಉದಾಹರಣೆಗಾಗಿ ನೋಡಬಹುದು. ಪ್ರತಿಯೊಂದು ವಸ್ತುವಿನ ಬೆಲೆಯು ಪ್ರತಿವರ್ಷ ಏರುತ್ತಿರುವಾಗ ಹಬ್ಬವನ್ನು ಆಚರಿಸುವುದು ಕಷ್ಟ. ಆದ್ದರಿಂದ ಸಾಲ ಮಾಡಿಯಾದರೂ ಹಬ್ಬ ಆಚರಿಸುವ ಮನಸ್ಥಿತಿಯನ್ನು ಮುಂದಿಡುತ್ತದೆ. ಗಣಪತಿ ಹಬ್ಬದಲ್ಲಾಗುವ ಖರ್ಚನ್ನು ಸಾಮಾನ್ಯ ರೀತಿಯಲ್ಲಿ ವಿವರಿಸಿದ್ದಾರೆ. ತಮ್ಮ ಬಳಿ ಇರುವ ಪುಸ್ತಕ ಕ್ಯಾಸೆಟ್ ಮುಂತಾದವನ್ನು ಇತರರು ಕೇಳಿದಾಗ ಕೊಟ್ಟು, ಅವರಿಂದ ಆ ವಸ್ತುಗಳು ವಾಪಸು ಬರದಿರುವ ಹಲವು ಪ್ರಸಂಗಗಳನ್ನು 'ಕೊಟ್ಟವ ಕೋಡಂಗಿ ಈಸಕೊಂಡವ ಈರಭದ್ರ' ಲೇಖನ ವಿವರಿಸುತ್ತದೆ. ಜನರ ರೂಪ, ಆಕಾರಗಳನ್ನು ಗಮನಿಸಿ ಅವರಿಗೆ ಅನ್ವರ್ಥ ನಾಮವನ್ನು ನೀಡಿ ಆ ಹೆಸರಿನಿಂದ ಅವರು ಗುರುತಿಸಲ್ಪಡುವುದನ್ನು 'ನನಗೊಂದು ಹೆಸರುಕೊಡಿ'

ಬರಹವು ನಿರೂಪಿಸುತ್ತದೆ. ಈ ಸಂಕಲನದ ಕೊನೆಯ ಬರಹ 'ನಾನ್‌ಸೆನ್ಸ್'. ಈ ಪದವನ್ನು ಲೇಖಕರು ಹಲವಾರು ಸಂದರ್ಭಗಳಲ್ಲಿ ಹಲವಾರು ಕಾರಣಗಳಿಗಾಗಿ ಇಷ್ಟ ಪಡುತ್ತಾರೆ. ಅವುಗಳ ವಿವರಗಳು ಆ ಲೇಖನದಲ್ಲಿದೆ. ಇದರಲ್ಲಿ ಅಂಥ ಯಾವ ಸ್ವಾರಸ್ಯವೂ ಇಲ್ಲ. ಇಲ್ಲಿನ ಅನೇಕ ಬರಹಗಳು ಸಾಮಾನ್ಯ ಬರಹಗಳಾಗಿವೆ.

'ನಗೆಯಾಯಣ' ತುಂಕೂರು ಸುನಂದ ಅವರ ಒಂಬತ್ತು ವಿಡಂಬನಾತ್ಮಕ ನಗೆಲೇಖನಗಳ ಸಂಕಲನ. ಈ ಪುಸ್ತಕಕ್ಕೆ ನಗುವ ಮುನ್ನಿನ ನುಡಿ ಎಂಬ ಮುನ್ನುಡಿಯಲ್ಲಿ ಗೌಡನಕಟ್ಟೆ ತಿಮ್ಮಯ್ಯನವರು ನಗಿಸುವ ಕಾರ್ಯ ಎಷ್ಟು ವೇದನಾಪೂರ್ವಕವಾದದ್ದು ಎಂಬ ಕಟುಸತ್ಯ 'ಸಿಂಗಳೀಕನ ಸಾಹಸ'ದಲ್ಲಿ ಮೂಡಿಬಂದಿದೆ ಎಂದಿದ್ದಾರೆ. ಸಿಂಗಳೀಕ ಏಪ್ರಿಲ್ ಫೂಲ್ಸ್ ಡೇ ಗಾಗಿ ಕತ್ತೆಯನ್ನು ಮುಖ್ಯ ಅತಿಥಿಯನ್ನು ಮಾಡಲು ಸಿಟಿಯಲ್ಲೆಲ್ಲಾ ಹುಡುಕಿ ಸಿಗದೆ ಹಳ್ಳಿಯಿಂದ ತಂದು ನಾನಾ ಅವಸ್ಥೆಯನ್ನು ಪಡುವ ವಿವರಗಳಿಂದ ಕೂಡಿದೆ. ಇದನ್ನು ಓದಿದರೆ ವಿನೋದವಿರಲಿ ವಿಷಾದವುಂಟಾಗುತ್ತದೆ. ಈ ಸಂಕಲನದ ಇನ್ನೊಂದು ಬರಹ ಬಯ್ಯಾಲಜಿ. ಕೆಟ್ಟ ಚಲನಚಿತ್ರಗಳಿಗೆ ಪ್ರಶಸ್ತಿ ಕೊಡುವ ವಿಷಯ ತಿಳಿದು ಬೈಗುಳ ಸ್ಪರ್ಧೆಯಲ್ಲಿ ಭಾಗವಹಿಸಲು ಬೈಗುಳಗಳನ್ನು ಅಭ್ಯಾಸಮಾಡುವ ಗಂಡನ ವಿವರಗಳನ್ನು ಹೊಂದಿದೆ. ಈ ಸಂಕಲನದ ತುಂಬ ದುರ್ಬಲ ಅಪಹಾಸ್ಯ ಸನ್ನಿವೇಶಗಳು ಇವೆ.

# ಜೀವನ ಚರಿತ್ರೆ- ಆತ್ಮಚರಿತ್ರೆ

*ಬಿ. ಎಂ. ಪುಟ್ಟಯ್ಯ*

ಈ ಲೇಖನದಲ್ಲಿ, ೧೯೯೪ರಲ್ಲಿ ಪ್ರಕಟವಾದ ಜೀವನ ಚರಿತ್ರೆ ಮತ್ತು ಆತ್ಮ ಚರಿತ್ರೆಗಳ ಬಗ್ಗೆ ಬರೆಯಲಾಗಿದೆ. ೩೫ ಜೀವನ ಚರಿತ್ರೆಗಳು ೫ ಆತ್ಮಚರಿತ್ರೆಗಳು ಬಂದಿವೆ ಎಂಬುದು ಒಂದು ಅಂದಾಜು. ಕೆಲವು ಕೃತಿಗಳು ನಮಗೆ ಸಿಗದೆ ಹೋಗಿರಬಹುದು. ಹಾಗಾಗಿ ಇಲ್ಲಿ ಲಭ್ಯ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಲೇಖನದ ಮೊದಲ ಭಾಗವು ಜೀವನ ಚರಿತ್ರೆಗೂ ಎರಡನೇ ಭಾಗವು ಆತ್ಮ ಚರಿತ್ರೆಗೂ ಸಂಬಂಧಿಸಿದೆ.

ಜೀವನ ಚರಿತ್ರೆಗಳು ವಿಭಿನ್ನ ಕ್ಷೇತ್ರಗಳಿಗೆ ಸಂಬಂಧಿಸಿದವರನ್ನು ಕುರಿತು ಬಂದಿವೆ. ಭಾಷಾ ವಿಜ್ಞಾನ, ಸಾಹಿತ್ಯ, ಸಂಗೀತ, ಸಮಾಜ ಸೇವೆ, ರಾಜಕಾರಣ ಹೀಗೆ. ಸ್ಥೂಲವಾದ ಈ ವಿಭಾಗಗಳಲ್ಲೇ ವಿಶಿಷ್ಟವಾಗಿ ಗುರುತಿಸಲ್ಪಡುವ ಕೆಲವು ಕೃತಿಗಳಿವೆ. ಸಾಮಾನ್ಯರನ್ನು ಕುರಿತು ಬರೆದಿರುವ 'ನಾ ಕಂಡ ಶ್ರೀ ಸಾಮಾನ್ಯರು' ಪುಸ್ತಕ ಪ್ರಕಟವಾಗಿದೆ. ಅಂಬೇಡ್ಕರರನ್ನು ಕುರಿತು ಎರಡು ಪುಸ್ತಕಗಳು ಬಂದಿದೆ. ಗಾಂಧಿಯವರನ್ನು ಕುರಿತು ಒಂದು ಪುಸ್ತಕ ಬಂದಿದೆ. ಕಾಮ್ರೇಡ್ ಮಾವೋತ್ಸೆ ತುಂಗ್ ಅವರನ್ನು ಕುರಿತು ಮೂರು ಪುಸ್ತಕಗಳು ಬಂದಿವೆ.

ಆಯಾ ಕ್ಷೇತ್ರಗಳ ಕೃತಿಗಳನ್ನು ಕುರಿತು ಕೆಲವು ಮಾತುಗಳನ್ನು ಮುಖ್ಯವಾಗಿ ಹೇಳಬಹುದು. ಭಾಷಾ ವಿಜ್ಞಾನ, ಸಾಹಿತ್ಯ ಮತ್ತು ಸಂಗೀತ ಈ ಕುರಿತ ಕೃತಿಗಳನ್ನು ಸ್ಥೂಲವಾಗಿ ಒಂದು ಮಾದರಿಯಲ್ಲಿ ಗ್ರಹಿಸಬಹುದು. ಇವುಗಳಲ್ಲಿ ಆಯಾ ವ್ಯಕ್ತಿಗಳ ಜೀವನದ ಚರಿತ್ರೆಗೆ ಸಂಬಂಧಿಸಿದ ಮಾಹಿತಿಗಳನ್ನು ಕೊಡುವುದು ಮಾತ್ರ ಮುಖ್ಯವಾಗಿದ್ದಂತಿಲ್ಲ. ಬದಲಾಗಿ ಆಯಾಯಾ ಜ್ಞಾನಶಿಸ್ತುಗಳ ವಿವರಣೆ, ವಿಶ್ಲೇಷಣೆ, ವ್ಯಾಖ್ಯಾನ ನಡೆಸಲಾಗಿದೆ. ಈ ಮೂಲಕ ಅಂಥ ಜ್ಞಾನಶಿಸ್ತುಗಳನ್ನು ವಿಸ್ತೃತ ಅಧ್ಯಯನಕ್ಕೊಳಪಡಿಸಲಾಗಿದೆ. ಕೆಲವು ಕೃತಿಗಳಲ್ಲಿ ಅಧ್ಯಯನ ವಿಧಾನಗಳನ್ನು ಸಮಕಾಲೀನಗೊಳಿಸಲು ಪ್ರಯತ್ನಿಸಲಾಗಿದೆ. ಸಾಹಿತಿಗಳನ್ನು ಕುರಿತ ಜೀವನ ಚರಿತ್ರೆಗಳಲ್ಲಿ ಆಯಾಯಾ ಸಾಹಿತಿಗಳ ಸಾಹಿತ್ಯವನ್ನು ಕುರಿತು ಸ್ಥೂಲವಾದ ಸಮೀಕ್ಷೆ ರೂಪದ ಮಾತುಗಳನ್ನು ಹೇಳಲಾಗಿದೆ. ಇಂಥ ಕಡೆ ಈ ಬಗೆಯ ಮಾತುಗಳನ್ನು ಇನ್ನಷ್ಟು ಅಚ್ಚುಕಟ್ಟಾದ ಚರ್ಚೆಗೆ ಒಳಪಡಿಸಬಹುದಿತ್ತು ಎನಿಸುತ್ತದೆ.

ಜೀವನ ಚರಿತ್ರೆ ಎಂದರೆ 'ದೊಡ್ಡವರ ದಿನಚರಿ' ಎಂಬ ಸಾಮಾನ್ಯ ಕಲ್ಪನೆಯನ್ನು ಸಂಪೂರ್ಣ ಉಪೇಕ್ಷಿಸಿ, ಸಾಮಾನ್ಯ ಜನರನ್ನು ಕುರಿತು ವ್ಯಕ್ತಿ ಚಿತ್ರಗಳಂತೆ ಚಿತ್ರಿಸಿರುವ ಸಂಕಲನವನ್ನು ಜೀವನ ಚರಿತ್ರೆ ಎಂದು ತೋವಿನಕೆರೆ ಸೀತಾರಾಮ ಜೋಯಿಸ ಅವರು ಪ್ರಕಟಿಸಿದ್ದಾರೆ. ಇದನ್ನು ಓದಿದರೆ, ಸಣ್ಣಕತೆಗಳನ್ನೊ, ಪ್ರಬಂಧಗಳನ್ನೊ ಓದಿದ ಅನುಭವವಾಗುತ್ತದೆ. ಹರಿಹರನ ರಗಳೆಗಳೂ ನೆನಪಾಗುತ್ತವೆ. ಈ ಕೃತಿ ಜೀವನ ಚರಿತ್ರೆಗೆ ಹೊಸ ಬಗೆಯ ಸೇರ್ಪಡೆ.

ಅಂಬೇಡ್ಕರ್ ಅವರನ್ನು ಕುರಿತು ಬಂದಿರುವ ಎರಡು ಕೃತಿಗಳಲ್ಲಿ ಉತ್ತರ ಕನ್ನಡದ 'ಚಿಂತನ'ದವರು ಪ್ರಕಟಿಸಿರುವ ''ಡಾ ಅಂಬೇಡ್ಕರ್ ಜೀವನ ಮತ್ತು ಹೋರಾಟ' ಎಂಬ ಕಿರು ಹೊತ್ತಿಗೆ ಮುಖ್ಯವಾದುದು. ಇದನ್ನು 'ಜೀವನ ಚರಿತ್ರೆ' ಎಂಬುದಾಗಿ ಪ್ರಕಟಿಸಿಲ್ಲ. ಆದರೆ ಈ ಬಗೆಯ ಲಕ್ಷಣಗಳ ನಡುವೆ ಚಿಂತನೆಗೆ ಗ್ರಾಸವೊದಗಿಸುತ್ತದೆ. ಅಂಬೇಡ್ಕರರನ್ನು ಸಾಮಾನ್ಯವಾಗಿ ಸ್ಥಾಪಿತ ದಲಿತ ದೃಷ್ಟಿಕೋನದಿಂದ ನೋಡಿ ವೈಭವೀಕರಿಸಿರುವುದೇ ಜಾಸ್ತಿ. ಆದರೆ ಪ್ರಸ್ತುತ ಕಿರುಪುಸ್ತಕ ಪಾರ್ಟಿ ಮಾರ್ಕ್ಸಿಸ್ಟ್ ದೃಷ್ಟಿಕೋನದಿಂದ ಅಂಬೇಡ್ಕರರ ಪ್ರಾಯೋಗಿಕ ಮತ್ತು ಸೈದ್ಧಾಂತಿಕ ಹೋರಾಟಗಳ ಸ್ವರೂಪವನ್ನು ಗಂಭೀರ ಚಿಂತನೆಗೆ ಹಚ್ಚಿದೆ. ಇದು ಅಂಬೇಡ್ಕರರನ್ನು ಕುರಿತ ಬರಹ ಎನ್ನುವುದರ ಜೊತೆಗೆ ಅಂಬೇಡ್ಕರ್ ಬದುಕಿದ್ದ ಕಾಲದ ಇಂಡಿಯಾದ ಚರಿತ್ರೆಯ ಒಂದು ಸೂಕ್ಷ್ಮ ತುಣುಕಿನಂತೆಯೂ ಗೋಚರಿಸುತ್ತದೆ.

೧೯೯೪ರಲ್ಲಿ ಬಂದ ಜೀವನ ಚರಿತ್ರೆಗಳಲ್ಲಿ ''ಗಾಂಧಿ - ಸಂಗ್ರಾಮದ ರಹಸ್ಯ ಪುಟಗಳು'' ಪುಸ್ತಕವನ್ನು ಒಂದು ಕಾರಣಕ್ಕಾಗಿ ಗಮನಿಸಬೇಕು. ಇದರ ಪ್ರಸ್ತಾವನೆಯ ಕೆಲವು ಮಾತುಗಳು ಹೀಗಿವೆ.

''ಗಾಂಧಿ ಹಿಂದೂ - ಮುಸ್ಲಿಂ ವಿರಸಕ್ಕೆ ವಿಷದ ಬೀಜ ಬಿತ್ತಿದರು. ಹಿಂದೂ ಹಿಂದುಗಳ ನಡುವೆ ಒಡಕನ್ನುಂಟುಮಾಡಿದರು. ಹಿಂದೂ ಹಾಗೂ ಹಿಂದೂ ಸಂಘಟನೆಗಳನ್ನು ಧೂಳೀಪಟ ಮಾಡಿ, ದೇಶ ದ್ರೋಹ ಚಟುವಟಿಕೆ ನಡೆಸುತ್ತಿದ್ದ ಜಿನ್ನಾ ಹಾಗೂ ವಿಧ್ವಂಸಕ ಮತ್ತು ವಿದ್ರೋಹ ಚಟುವಟಿಕೆಯ ಮುಸ್ಲಿಂ ಲೀಗಿಗೆ ಬೆಂಬಲಿಸಿ ದೇಶವನ್ನು ಹೀನಾಯವಾಗಿ ಛಿದ್ರಿಸಿ ಹಾಕಿದರು.'' ಇದಕ್ಕೆ ಪೂರಕವಾಗಿ ಪರಿವಿಡಿಯ ಕೆಲವು ಭಾಗಗಳು.

ಗಾಂಧಿ ಎಸಗಿದ ಹಿಂದೂದ್ರೋಹ ವಿಧ್ವಂಸಕರ ಹಾಗೂ ವಿದ್ರೋಹಿ ಚಟುವಟಿಕೆಯ ಮುಸ್ಲಿಂ ಲೀಗಿಗೆ ಗಾಂಧಿ ಬೆಂಬಲ. ಹಿಂದೂ ಸಂರಕ್ಷಕರಾದ ಹಿಂದೂ ಮಹಾಸಭಾ ಹಾಗೂ ಆರ್.ಎಸ್.ಎಸ್.ಗೆ ಗಾಂಧಿಯ ವಿರೋಧ. ಗಾಂಧಿಯನ್ನು ಭೌತಿಕವಾಗಿ ಕೊಂದ ಹಿಂದೂ ಮೂಲಭೂತವಾದಿ ಶಕ್ತಿ ಗಾಂಧಿಯ ತಾತ್ತ್ವಿಕತೆಯನ್ನು ಕೊಲ್ಲುವ ಶತಪ್ರಯತ್ನ ಮಾಡಿದೆ. ಈ ಕೃತಿಯಲ್ಲಿ ಈ ಎರಡರಲ್ಲಿ ಯಾವುದನ್ನೂ ಸಮರ್ಥಿಸುತ್ತಿಲ್ಲ. ಈ ಕೃತಿಯಂತೂ ತೀರಾ ಹತಾಶೆಯಿಂದ ಹುಟ್ಟಿದೆ. ಹಿಂದೂ ಮೂಲಭೂತವಾದಕ್ಕೆ ಬೇರೆ ಬೇರೆ ಮಗ್ಗುಲುಗಳಿಂದ ಉಳಿಯಲಾರದಂತಹ ಸ್ಥಿತಿ

ಬಂದಿದೆ. ಬದುಕುಳಿಯಲು ಎಂಥಾ ದಾರಿಯಾದರೂ ಸರಿಯೇ. ಹಾಗಾಗಿ ಗಾಂಧಿಯನ್ನು ಕುರಿತು ಬರೆಯುವ ನೆಪದಲ್ಲಿ ತನ್ನ ಪ್ರಣಾಲಿಕೆಯನ್ನು ಮಂಡಿಸುವ ಮುಗ್ಧ ಪ್ರಯತ್ನ ಈ ಕೃತಿ.

ಬೆಳ್ಳಿ ಚುಕ್ಕಿ ಬುಕ್ ಟ್ರಸ್ಟಿನವರು ಪ್ರಕಟಿಸಿರುವ ''ಕ್ರಾಂತಿಯ ಸಿರಿ ಮೊಳಕೆಯಲ್ಲಿ'' - ಮಾವೋರ ಬಾಲ್ಯ ಪರಿಚಯ. ''ಕೃತಿಯ, ಈ ಹಿಂದೆ ವಿಮುಕ್ತಿ ಪ್ರಕಾಶನದವರು ಪ್ರಕಟಿಸಿರುವ ''ಮಾವೊ ಜನತೆಯ ಸಂಗಾತಿ'' ಮತ್ತು ''ಕಾಮ್ರೇಡ್ ಮಾವೋರಿಂದ ಕಲಿಯೋಣ'' ಕೃತಿಗಳ ಸೈದ್ಧಾಂತಿಕ ವಿಸ್ತೃತ ಪುಷ್ಟಿಯ ಸೋದರ ಕೃತಿ. ಒಂದು ಕಾಲಕ್ಕೆ ಮಾವೋ ವಿಚಾರಗಳ ಪುಸ್ತಕಗಳನ್ನು ಭಾರತ ಸರ್ಕಾರ ನಿಷೇಧಿಸಿತ್ತು. ಅದೇ ಭಾರತದ ಪ್ರಭುತ್ವ ಇಂದು ಜಮೀನ್ದಾರಿ ವಿರೋಧಿ ಮತ್ತು ಸಾಮ್ರಾಜ್ಯ ಶಾಹಿ ವಿರೋಧಿ ಸಶಸ್ತ್ರ ಹೋರಾಟಗಳಿಂದ ಜರ್ಝರಿತವಾಗಿದೆ, ತೆಲಂಗಾಣ ನಕ್ಸಲ್ ಬರಿಗಳಲ್ಲಿ ಹುಟ್ಟಿದ ಸಶಸ್ತ್ರ ಹೋರಾಟಗಳು ದೇಶದ ಹಲವಾರು ಕಡೆ ಹಬ್ಬಿ ಭಾರತದ ಜನತೆಗೆ ಭರವಸೆ ತಂದಿದೆ. ಆಂಧ್ರ, ದಂಡಕಾರಣ್ಯ, ಬಿಹಾರ ಮತ್ತಿತರ ಕಡೆಗಳಲ್ಲಿ ನಡೆಯುತ್ತಿರುವ ಕ್ರಾಂತಿಕಾರಿ ಹೋರಾಟಗಳ ಸ್ಫೂರ್ತಿಯ ಸೆಲೆ ಮತ್ತು ಸೈದ್ಧಾಂತಿಕ ಭಿತ್ತಿ ಎಂದರೆ ಮಾರ್ಕ್ಸ್‌ವಾದ, ಲೆನಿನ್ ವಾದ ಮತ್ತು ಮಾವೋ ವಿಚಾರಧಾರೆ. ಈ ಹಿನ್ನೆಲೆಯಲ್ಲಿ ಬಂದಿರುವ ಈ ಕೃತಿಯು ವಿದ್ಯಾರ್ಥಿ ಯುವ ಜನರಿಗೆ ಮಾವೋರ ಬಾಲ್ಯ ಪರಿಚಯ ಮಾಡಿಸುತ್ತಲೇ ಅದರ ಕ್ರಾಂತಿಕಾರಿ ರಾಜಕೀಯ ಜೀವನದ ಚರಿತ್ರೆಯನ್ನು ಪರಿಚಯಿಸುತ್ತದೆ. ಕನ್ನಡ ಚಿಂತನೆಯ ಪ್ರಾಯೋಗಿಕ ಆಯಾಮಕ್ಕೆ ಮುಖ್ಯ ಕೊಡುಗೆ ಈ ಕೃತಿ.

ಕನ್ನಡ ಚಿಂತನೆಯ ವಿಭಿನ್ನ ವರ್ಗಗಳ ಸೈದ್ಧಾಂತಿಕ ಆಯಾಮಗಳು ಜೀವನ ಚರಿತ್ರೆಯ ಮೂಲಕ ನಮಗೆ ಕಾಣುತ್ತವೆ. ಮತೀಯ ಮೂಲಭೂತವಾದರಿಂದ ಮೊದಲುಗೊಂಡು ಕ್ರಾಂತಿಕಾರಿ ವಿಚಾರಧಾರೆಯವರೆಗೂ ಇದರ ವಿನ್ಯಾಸವಿದೆ.

೯೪ರ ಆತ್ಮ ಚರಿತ್ರೆಗಳು ತುಂಬಾ ಕಡಿಮೆ. ಇಲ್ಲಿ ಲಭ್ಯಕೃತಿಗಳು ನಾಲ್ಕು ಮಾತ್ರ. ಮಲ್ಲಾಡಿ ಹಳ್ಳಿಯ ಶ್ರೀ ರಾಘವೇಂದ್ರ ಸ್ವಾಮೀಜಿಯವರ ಆತ್ಮಚರಿತ್ರೆ ಜೋಳಿಗೆಯ ಪವಾಡ, ಹೆಸರೇ ಸೂಚಿಸುವಂತೆ ಜೋಳಿಗೆಯ ಪವಾಡವನ್ನು ನೂರು ವರುಷಗಳ ಅನುಭವಗಳನ್ನು ವಿವರ ವಿವರವಾಗಿ ಈ ಕೃತಿ ದಾಖಲಿಸಿದೆ. ಇದರಲ್ಲಿ ಹತ್ತಾರು ಸಂಘ ಸಂಸ್ಥೆಗಳು ಮಾಡಬಹುದಾದುದನ್ನು ಒಬ್ಬ ವ್ಯಕ್ತಿ ಮಾಡಿ ತೋರಿಸಿದ ಸಾಧನೆಯ ಪುರಾವೆ ಇದೆ. ಆಧ್ಯಾತ್ಮ ಮತ್ತು ವೈಚಾರಿಕತೆಗಳ ಸಂಘರ್ಷದ ನಡುವಿನ ಉದಾರವಾದಿ ನೈತಿಕತೆಯ ಮಂಡನೆ ಇದೆ. ಹೊಸ ನಾಡು ಕಟ್ಟುವ ಆಶಯದ ಪ್ರಾಥಮಿಕ ತುಡಿತವಿದೆ.

'ನಾನೊಬ್ಬ ಸಾರ್ವಜನಿಕ' ಕೆ. ಚನ್ನಬಸವನಗೌಡರ ಆತ್ಮಕತೆ. ಗೌಡರು ತಮ್ಮ ಬಾಲ್ಯ, ಶಿಕ್ಷಣ, ನೌಕರಿ, ರಾಜಕೀಯ ಜೀವನದ ಬಗ್ಗೆ ನಿರ್ಭಾವುಕವಾಗಿ ಬರೆದಿದ್ದಾರೆ. ಕೆಲವು ಕಡೆ ಆತ್ಮ ಪ್ರತ್ಯಯ ದೌರ್ಬಲ್ಯದಂತೆ ಕಂಡರೂ ಖಾಸಗೀ ಜೀವನದ ಎಂಥಾ ವಿಷಯವೇ ಇರಲಿ ಸೋಸುವ ಕ್ರಮವನ್ನಂತೂ ಅನುಸರಿಸಿದಂತಿಲ್ಲ. ಹಾಗಾಗಿ ಆತ್ಮ

ಚರಿತ್ರೆಗೆ ಒಂದು ರೀತಿಯ ಗಟ್ಟಿತನವಿರುವಂತಿದೆ. ನೌಕರಿಗೆ ರಾಜೀನಾಮೆ ಕೊಟ್ಟು ಸಾರ್ವಜನಿಕ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡ ನಂತರದ ದಿನಗಳು ಆಸಕ್ತಿದಾಯಕವಾಗಿವೆ. ಗೌಡರು ತಮ್ಮ ರಾಜಕೀಯ ಜೀವನದಲ್ಲಿ ಮಾಡಿದ ಹೋರಾಟದ ಸ್ವರೂಪ ಆ ನಿರ್ದಿಷ್ಟ ಭಾಗದ ಚರಿತ್ರೆಯ ಒಂದು ಪುಟ ವಿರಬೇಕೇನೋ ಎನಿಸುವಂತಿದೆ. ಪರ್ಲ ಕೃಷ್ಣ ಭಟ್ ಅವರ ಸ್ವಾನುಭವ ಕಥನ 'ಬದುಕಿ ಫಲವೇನು?' ಎಂಬುದು ಭಟ್ಟರು ತಾವು ನಂಬಿದ ಮೌಲ್ಯ ಸಿದ್ಧಾಂತಕ್ಕೆ ಅನುಗುಣವಾಗಿ ಇದನ್ನು ರಚಿಸಿದಂತಿದೆ. ತಮ್ಮ ಜೀವನದ ಯಾವುದೇ ಸಣ್ಣಪುಟ್ಟ ವಿಷಯಗಳಿರಲಿ ಅವನ್ನು ಹಾಗೆಯೇ ಯಥಾವತ್ ಮಂಡಿಸಿಲ್ಲ. ಬದಲಾಗಿ ಅಂಥವನ್ನು ಸಾರ್ವಜನಿಕ ಬದುಕಿನಲ್ಲಿಟ್ಟು ತಮ್ಮದೇ ಧಾಟಿಯಲ್ಲಿ ವಿಮರ್ಶೆ ವ್ಯಾಖ್ಯಾನಗಳಿಗೆ ಒಳಪಡಿಸಲಾಗಿದೆ. ಇಂಥ ವ್ಯಾಖ್ಯಾನಗಳು ಮಧ್ಯಮ ವರ್ಗದ ಉದಾರವಾದಿ ಮಾನವತಾವಾದ ಮತ್ತು ಗಾಂಧಿ ದೃಷ್ಟಿಕೋನಗಳಿಂದ ಪ್ರೇರಿತವಾದಂತಿವೆ.

ಮೇಲಿನ ಮೂರೂ ಕೃತಿಗಳು ಸಮಾಜದ ಕೆಳವರ್ಗದವರಲ್ಲಿದ್ದವರ ಅನುಭವಗಳು ಇವುಗಳಲ್ಲಿ ಅನುಭವಗಳನ್ನು ಅಕ್ಷರಗಳಲ್ಲಿ ದಾಖಲಿಸುವುದೇ ಒಂದು 'ಮೌಲ್ಯ' ಮತ್ತು ಒಂದು ರೀತಿಯ 'ಸಾಧನೆ' ಎಂಬ ಧೋರಣೆ ಅತ್ಯಂತ ಆಳದಲ್ಲಿ ನಿಚ್ಚಳವಾಗಿದೆ. ಇದಕ್ಕೆ ಅನುಗುಣವಾಗಿ ವಿಚಾರ ಮಂಡನೆಯಲ್ಲಿ ನಿರ್ಭಿಡೆ ಇದೆ; ಮುಕ್ತತೆ ಇದೆ, ಇದು ಅತ್ಯಂತ ಸೂಕ್ಷ್ಮದಲ್ಲಿ ಹಕ್ಕಿನಂತೆಯೂ ಕಾಣುತ್ತದೆ.

ಅರವಿಂದ ಮಾಲಗತ್ತಿಯವರ ಆತ್ಮಕಥನ 'ಗೌರ್ಮೆಂಟ್ ಬ್ರಾಹ್ಮಣ', ಮೇಲಿನ ಮಾದರಿಗಿಂತ ಇದು ಭಿನ್ನವಾದುದರಿಂದ ಬೇರೆ ಬಗೆಯಲ್ಲಿ ಇದನ್ನು ಚರ್ಚಿಸಬೇಕಾಗಿದೆ. ಈಗಾಗಲೇ ಮರಾಠಿಯಿಂದ 'ಉಚಲ್ಯಾ' 'ಅಕ್ರಮ ಸಂತಾನ' ಎಂದೆರಡು ದಲಿತ ಆತ್ಮಕಥನಗಳು ಬಂದಿವೆ. ತಮ್ಮ ಬದುಕಿನ ದಟ್ಟ ಅನುಭವಗಳನ್ನು ಅಭಿವ್ಯಕ್ತಿಸುವಲ್ಲಿ ಆ ಲೇಖಕರು ಅಸಾಮಾನ್ಯ ಎದೆಗಾರಿಕೆ ತೋರಿದ್ದಾರೆ. ಅಂತೆಯೇ ಕನ್ನಡದಲ್ಲಿಯೂ ಮಾಲಗತ್ತಿಯವರು ಗೌರ್ಮೆಂಟ್ ಬ್ರಾಹ್ಮಣದ ಮೂಲಕ ತಮ್ಮ ಆತ್ಮಕಥನವನ್ನು ಪ್ರಕಟಪಡಿಸಿದ್ದಾರೆ. ಇದರಲ್ಲಿ ೨೨ ಬಿಡಿ ಬರಹಗಳಿವೆ. ಇವು ಇವರು ಸರ್ಕಾರಿ ಕೆಲಸಕ್ಕೆ ಸೇರುವವರೆಗಿನ ವಿಚಾರಗಳಿಗೆ ಮಾತ್ರ ಸಂಬಂಧಿಸಿವೆ. ಲೇಖಕರ ಪ್ರಕಾರ ಇದು ಮೊದಲ ಕಂತಿನ ಕೃತಿ. ಯಾವುದೇ ವಿಷಯಕ್ಕೆ ಸಂಪೂರ್ಣ ಸಾಹಿತ್ಯಕ ಲೇಪನ ದೊರೆತಾಗ ಅದು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡು ಬದಲಾವಣೆಯಾಗುತ್ತದೆ. 'ದಲಿತತನ'ವನ್ನು ಸರಳವಾಗಿ ಹಿಡಿದಿಡಲು ಈ ದಾರಿ ಹಿಡಿದಿದ್ದೇನೆ. '' ಎಂಬಂತೆ ಮಾಲಗತ್ತಿಯವರೇ ಇದರಲ್ಲಿ ಹೇಳಿಕೊಂಡಿದ್ದಾರೆ.

ಇಲ್ಲಿನ ಅನೇಕ ಅನುಭವಗಳು, ವಿವರಗಳು, ಹೊರಗೆ ಬರಲೇ ಬೇಡವೆ? ಪ್ರಕಟವಾಗಲೇ ಬೇಡವೇ? ಎಂಬ ತುಯ್ದಾಟದಲ್ಲಿ ಯಾತನೆ ವೇದನೆಗಳನ್ನು ಅನುಭವಿಸಿವೆ. ಇಂಥ ಸಂಕೀರ್ಣತೆಯ ಸಂದಿಗ್ಧತೆ ವ್ಯಕ್ತಿ ಕೇಂದ್ರಿತ ನೆಲೆಯದೋ ಅಥವಾ ಸಮಾಜ ಕೇಂದ್ರಿತ ನೆಲೆಯದೋ? ಜೊತೆಗೆ ಇದರಲ್ಲಿ ಯಾವುದು ಪ್ರಧಾನ ಯಾವುದು ಆನುಷಂಗಿಕ? ಈ ದಿಕ್ಕಿನಲ್ಲಿ ಗಂಭೀರ ಚರ್ಚೆನು ಅವಶ್ಯಕತೆಯಿದೆ.

ಈ ವ್ಯವಸ್ಥೆಯಲ್ಲಿ ಕೆಲವರ ಖಾಸಾ ಅನುಭವ ಪ್ರಕಟಣೆಗೆ ಸಾಮಾಜಿಕ ಅಂಗೀಕಾರ ದೊರೆತು. ಅವನ್ನು ' ಮೌಲ್ಯ ' ಎನ್ನುಲಾಗುತ್ತದೆ. ಚಾರಿತ್ರಿಕ ಗತಿಯಲ್ಲಿ ಇವು ಉಳ್ಳವರ ಇಲ್ಲಿವೆ ಪ್ರಭುತ್ವದ ಮುಖವಾಣಿಗಳಾಗಿರುತ್ತವೆ. ಇನ್ನು ಕೆಲವರ ಖಾಸಾ ಅನುಭವಗಳು ಮೇಲಿನದಕ್ಕೆ ಮುಖಾಮುಖಿ, (ಈ ಎರಡರ ವಿನ್ಯಾಸದ ಸ್ವರೂಪ ಒಂದೇ ರೀತಿಯಾಗಿರುತ್ತದೆಂದಲ್ಲಿ) ಈ ದಿಕ್ಕಿನಲ್ಲಿ ಮೂಲಗತ್ತಿಯವರದು ಕನ್ನಡದ ದಲಿತರಲ್ಲಿ ಮೊದಲ ಪ್ರಯತ್ನ.

# ಪ್ರವಾಸ ಸಾಹಿತ್ಯ

*ಅಮರೇಶ ನುಗಡೋಣಿ*

ಸೃಜನಶೀಲ ಪ್ರಕಾರಗಳಲ್ಲಿ ಒಂದಾದ ಪ್ರವಾಸ ಕಥನಕ್ಕೆ ಇನ್ನೂಳಿದ ಕಥೆ, ಕಾವ್ಯ, ಕಾದಂಬರಿ ಪ್ರಕಾರಗಳಿಗೆ ಇರುವ ಕೆಲವು ಕಟ್ಟು ಪಾಡುಗಳಿಂದ ಮುಕ್ತವಾದ ಮತ್ತು ಬೇರೊಂದು ರೀತಿಯಲ್ಲಿ ಲೇಖಕರಿಗೆ ಹೆಚ್ಚು ಸ್ವಾತಂತ್ರ್ಯವನ್ನು ನೀಡುವ ಪ್ರಕಾರವಾಗಿದೆ. ಪ್ರವಾಸ ಕಥನದ ನಡಿಗೆಯಲ್ಲಿ ಕಥೆ ಕಟ್ಟಬಹುದು, ಹರಟಬಹುದು. ಉಪನ್ಯಾಸ ನೀಡಬಹುದು. ವೈಯಕ್ತಿಕ ಹಿತಾಸಕ್ತಿಗಳನ್ನು ಕಾಣಿಸಬಹುದು ಹಾಗೂ ಬೇರೆ ಬೇರೆ ಸ್ಥಳಗಳ ಜನರ ವಿಚಾರ ಧಾರೆಯನ್ನು ಸಾಂಸ್ಕೃತಿಕ ಬದುಕನ್ನು ಅಭಿವ್ಯಕ್ತಗೊಳಿಸಬಹುದಾದ ಈ ಪ್ರವಾಸ ಸಾಹಿತ್ಯಕ್ಕೆ ಕನ್ನಡದಲ್ಲಿ ವಿಶಿಷ್ಟ ಸ್ಥಾನವಿದೆ. ತತ್‌ಕಾಲದಲ್ಲೇ ದಕ್ಕಿದ ಅನುಭವಗಳಾದರೂ ಅದರಿಂದ ಮನುಷ್ಯನ ಚಿಂತನೆಯನ್ನು ಹಿಗ್ಗಿಸಬಲ್ಲ ಶಕ್ತಿಯಿರುತ್ತದೆ. ಪ್ರವಾಸದ ಅನುಭವಗಳು ಶಕ್ತ ಬರಹಗಾರನಲ್ಲಿ ಮರುಸೃಷ್ಟಿಯಾಗಿ ಮತ್ತೊಂದು ಪ್ರಪಂಚದ ಸಾಕಾರ ಅನುಭವವನ್ನೇ ಓದುಗನ ಕಣ್ಣೆದುರಿಗೆ ಕಟ್ಟಬಲ್ಲದು. ಇಂಥ ಅನುಭವವನ್ನು ನೀಡುವ ಪ್ರವಾಸ ಕಥನಗಳು ಕನ್ನಡದಲ್ಲಿ ಹಲವು ಇವೆ. ಪ್ರತಿವರ್ಷವೂ ನಾಡು, ಹೊರನಾಡುಗಳಿಗೆ ಭೇಟಿಯಿತ್ತ ಮಹನಿಯರು ಕಂಡುಂಡ ಅನುಭವಗಳನ್ನು ಬರಹ ರೂಪದಲ್ಲಿ ಪ್ರಕಟಿಸುತ್ತಲೇ ಇದ್ದಾರೆ. ಈ ವರ್ಷವೂ ಈ ಸಮೀಕ್ಷೆಗೆ ನಾಲ್ಕು ಕೃತಿಗಳು ಲಭ್ಯವಿದೆ.

**ಭೂಕಂಪದ ಅಂತರಂಗ: ಜಿ. ಪಿ. ಬಸವರಾಜು**

ಈ ದಶಕದಲ್ಲಿಯೇ ಲಾತೂರು, ಕಿಲಾರಿಗಳಲ್ಲಿ ಸಂಭವಿಸಿದ ಭೂಕಂಪದಿಂದ ಮನುಷ್ಯ ಕುಲದ ಸಾವು ನೋವಿನ ಚಿತ್ರಣವನ್ನೊಳಗೊಂಡ ಕಥನ ಇಲ್ಲಿದೆ. ಭೂಕಂಪವಾದ ಆ ಸುತ್ತಿನ ಊರುಗಳಲ್ಲೆಲ್ಲ ಸುತ್ತಾಡಿದ, ಕವಿಗಳೂ ಕಥೆಗಾಗರೂ ಆದ ಜಿ. ಪಿ. ಬಸವರಾಜರು, ಪ್ರವಾಸದ ನಿಮಿತ್ತವಾಗಿ ಆ ಮೂಲಕ ಸತ್ತವರ ದಾರುಣತೆಯನ್ನು ಬದುಕಿದವರ ಬವಣೆಗಳನ್ನು ಬಹುಸೂಕ್ಷ್ಮವಾಗಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಪ್ರಾರಂಭದಲ್ಲಿ ಕಾಣುವ ಪ್ರವಾಸ ಕಥನದ ದಾಟಿ ಬರುಬರುತ್ತ ಮಾಯವಾಗಿ, ನಿರೂಪಕರಾಗಿಯೂ ಹಲವು ಕಥೆಗಳನ್ನೇ ಹೇಳುತ್ತ ಸಾಗಿದ್ದಾರೆ. ಒಬ್ಬೊಬ್ಬರ ಕಥೆಗಳನ್ನು ಹೇಳುವಾಗ ಲೇಖಕರ ಸೂಕ್ಷ್ಮ ಅವಲೋಕನದಿಂದ ಕೇವಲ ಸತ್ತವರ ಕಥೆಗಳಾಗದೆ ಬದುಕಿದವರ ಕರುಣಾಜನಕವಾಗದೆ ಅಂಕಿ ಅಂಶಗಳನ್ನೂ ಮೀರಿದ ಮಾನವೀಯತೆ ಎದ್ದು ಕಾಣುತ್ತದೆ. ಸಂದರ್ಭಾನುಸಾರ ಆ ಪ್ರದೇಶದ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಂಶಗಳನ್ನು ವಿವೇಚಿಸುತ್ತ ಲೇಖಕರು

ವ್ಯವಸಾಯ, ಪರಿಸರ, ಭೌಗೋಳಿಕ ವೈಪರಿತ್ಯ, ಮನುಷ್ಯರ ನಡವಳಿಕೆಗಳನ್ನು, ಸಾಂಸ್ಕೃತಿಕ ಏಳುಬೀಳುಗಳೊಂದಿಗೆ ವಿವರಿಸುತ್ತಲೇ ತಮ್ಮ ಪ್ರವಾಸದಲ್ಲಿ ಅನೇಕ ಸ್ವಾರಸ್ಯಕರ ವಿಷಯಗಳನ್ನು ಕಥನದ ತೆಕ್ಕೆಗೆ ತಂದುಕೊಂಡು ಅನುಭವಗಳನ್ನು ಕಟ್ಟಿರುವುದರಿಂದ ಈ ಕೃತಿಗೆ ಅನನ್ಯತೆ ಸಹಜವಾಗಿ ಪ್ರಾಪ್ತವಾಗಿದೆ.

**ಪ್ರದಕ್ಷಣೆ: ಎಚ್. ಆರ್. ಚಂದ್ರವದನರಾವ್**

ಲೇಖಕರು ತಮ್ಮ ಪತ್ನಿಯೊಡನೆ ಅಮೆರಿಕಾ, ಇಂಗ್ಲೆಂಡ್, ಯೂರೋಪ್ ನಾಡುಗಳಿಗೆ ಪ್ರವಾಸ ಕೈಗೊಂಡ ಪರಿಣಾಮವಾಗಿ ಅಲ್ಲಿ ನೋಡಿದ ಸುಂದರವಾದ ಸ್ಥಳಗಳನ್ನು ಕುರಿತು, ಆಗಾಗ ಎದುರಾದ ಸಣ್ಣ ಪುಟ್ಟ ಸಮಸ್ಯಗಳನ್ನು ಕುರಿತು ಅಂಥ ಸಂದರ್ಭಗಳ ಸ್ವಾರಸ್ಯವನ್ನೂ ತಮ್ಮದೇ ಆದ ನಿಲುವಿನಿಂದ ನಿರೂಪಿಸಿದ್ದಾರೆ. ಈ ಪ್ರವಾಸದ ಹಿಂದಿರುವ ಉದ್ದೇಶ ಕೇವಲ ಹೊರನಾಡುಗಳನ್ನು ನೋಡಿ ಸಂತೋಷ ಪಡುವುದಾಗಿದೆ. ಇಂಥ ಉದ್ದೇಶಗಳಿರುವವರೆಲ್ಲ ಸಾಮಾನ್ಯವಾಗಿ ತಮ್ಮ ಮಕ್ಕಳು ಹೊರದೇಶಗಳಲ್ಲಿ ಉದ್ಯೋಗಿಗಳಾಗಿದ್ದರೆ ಅವರ ಸಹಾಯದಿಂದ ಪ್ರವಾಸ ಕೈಗೊಂಡಿರುತ್ತಾರೆ. ಇಂಥ ಸಂದರ್ಭಗಳಲ್ಲಿ ಸುಂದರವಾದ ಜಾಗಗಳಿಗೆ ಭೇಟಿ ನೀಡಿ ಆನಂದಿಸುವುದು ನಡೆಯುತ್ತದೆ. ಇಂಥ ಮಾದರಿಗೆ ಸೇರಿದ ಪ್ರವಾಸ ಕಥನವಿದು. ಇಲ್ಲಿ ಲೇಖಕರು ನವಿರಾದ ಭಾಷೆಯಲ್ಲಿ ಕಂಡದ್ದನ್ನೆಲ್ಲ ಯಥಾವತ್ತಾಗಿ ಚಿತ್ರಿಸಿದ್ದಾರೆ. ಮುಂದುವರಿದ ದೇಶಗಳಾಗಿದ್ದರಿಂದ ಅಲ್ಲಿಯ ಸೌಲಭ್ಯಗಳನ್ನು ಬೆರಗಿನಿಂದ ಅನುಭವಿಸಿದ್ದಾರೆ.

**ಅಮೇರಿಕಾ, ನಾನು ಕಂಡಂತೆ: ಶ್ರೀಮಿತ್ತೂರು**

ಮೇಲಿನ ಪ್ರವಾಸ ಕಥನದ ಮಾದರಿಯಲ್ಲಿ ಇದೂ ಇದೆಯಾದರೂ ಲೇಖಕರ ಭಿನ್ನವಾದ ಧೋರಣೆಯಿಂದ ಈ ಕೃತಿಗೆ ಬೇರೊಂದು ಆಯಾಮ ದಕ್ಕಿದೆ. ಅಮೇರಿಕಾ ಮತ್ತು ಭಾರತ. ಈ ಎರಡೂ ದೇಶಗಳ ನಡುವಿನ ಅಂತರವನ್ನು ಪ್ರವಾಸದ ಉದ್ದಕ್ಕೂ ಉದಾಹರಣೆಗಳ ಸಹಿತ ವಿವರಿಸುತ್ತ ಹೋಗಿದ್ದಾರೆ. ರಾಜಕೀಯ ಸಾಮಾಜಿಕ, ಆರ್ಥಿಕ ಶೈಕ್ಷಣಿಕ ಮುಂತಾದ ಯಾವುದೇ ರಂಗಗಳಲ್ಲಿ ಅಮೇರಿಕನ್ನರ ಶಿಸ್ತು, ಪ್ರಾಮಾಣಿಕತೆ, ಎತ್ತಿ ತೋರಿಸುತ್ತ ಅಂಥ ವಿಷಯದಲ್ಲಿ ಭಾರತದ ಅಶಿಸ್ತು, ಅಪ್ರಮಾಣಿಕತೆ ಸ್ವಾರ್ಥತೆಯನ್ನು ಖಂಡಿಸುತ್ತಾರೆ. ಅಮೇರಿಕಾದಲ್ಲಿ ಸುತ್ತಾಡುತ್ತಿರುವಾಗ ತಾವು ಕಂಡ, ಅನುಭವಿಸಿದ ಎಷ್ಟೋ ಘಟನೆಗಳ ಸಂದರ್ಭವನ್ನು ವಿವರಿಸುವಾಗ ಅಮೇರಿಕನ್ನರನ್ನು ಪ್ರಶಂಸಿಸುತ್ತಲೇ ಭಾರತವನ್ನು ವ್ಯಥೆಯಿಂದ ನೆನೆಯುತ್ತಾರೆ. ಒಟ್ಟಿನಲ್ಲಿ ಭಾರತದ ವ್ಯವಸ್ಥೆ ಬಗ್ಗೆ ಆಕ್ರೋಶವನ್ನು ವ್ಯಕ್ತಪಡಿಸುತ್ತ ಅಮೇರಿಕನ್ನರ ದುಡಿಮೆಯಲ್ಲಿನ ನಿಷ್ಠೆ ಬಗ್ಗೆ ಅಪಾರ ಮೆಚ್ಚಿಗೆಯನ್ನು ತೋರಿಸುತನರೆ. ಇದು ನಿಜವೇ ಆದರೂ ಈ ಕೃತಿಯಲ್ಲಿ ಲೇಖಕರು ಬಹಳಷ್ಟು ಪುಟಗಳನ್ನು ಅಮೇರಿಕನ್ನರನ್ನು ಪ್ರಶಂಸಿಸಲು ಮೀಸಲಿರಿಸಿದ್ದಾರೆ. ತಮ್ಮ 'ಮೊದಲ ಮಾತು'ಗಳಲ್ಲಿ ಭಾರತದ ಎಲ್ಲ ರಂಗಗಳಲ್ಲಿ ತುಂಬಿಕೊಂಡಿರುವ ಹೊಲಸು ವ್ಯವಸ್ಥೆಯ ಬಗ್ಗೆ ಉದಾಹರಣೆಗಳ ಸಹಿತ ದೀರ್ಘವಾಗಿ ವಿವೇಚಿಸಿದ್ದಾರೆ.

ಅಮೇರಿಕನ್ನರ ಮುಕ್ತ ಲೈಂಗಿಕತೆ ಬಗ್ಗೆ ಮಾತ್ರ ಅಸಮಧಾನವನ್ನು ವ್ಯಕ್ತಪಡಿಸಿರುವ ಲೇಖಕರು ಈ ವಿಷಯದಲ್ಲಿ ಭಾರತದ ಪರವಾಗಿರುವುದನ್ನು ಕಾಣಬಹುದು.

**ಕಲಾವಿದ ಕಂಡ ಫ್ರಾನ್ಸ್: ಪಿ. ಆರ್. ತಿಪ್ಪೇಸ್ವಾಮಿ**

ಇದು ಭಿನ್ನವಾದ ಆಶಯವನ್ನು ಹೊಂದಿದ ಪ್ರವಾಸ ಕಥನವಾಗಿದೆ. ಫ್ರಾನ್ಸ್‌ನ 'ಅವಗಾನ್' ಉತ್ಸವದಲ್ಲಿ ಮಂಡ್ಯ ಜಿಲ್ಲೆಯ ಬೆಳ್ಳೂರಿನ 'ಭುವನೇಶ್ವರಿ ಯಕ್ಷಗಾನ ಸೂತ್ರದ ಬೊಂಬೆಯಾಟವನ್ನು ಪ್ರದರ್ಶಿಸಲು ಕಲಾವಿದರಾದ ಪಿ. ಆರ್. ತಿಪ್ಪೇಸ್ವಾಮಿಯವರು ತಮ್ಮ ನೇತೃತ್ವದಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಕಡೆಯಿಂದ ಕೈಗೊಂಡ ಪ್ರವಾಸವಿದು. ಕಲಾವಿದ ಕಂಡ ಫ್ರಾನ್ಸ್ ಆಗಿರುವುದರಿಂದ ಇದರ ಉದ್ದೇಶ ಸ್ಪಷ್ಟವಾಗಿದೆ. ಫ್ರಾನ್ಸ್‌ನಲ್ಲಿ ೧೯೪೭ರಿಂದ ನಿರಂತರವಾಗಿ ನಡೆದುಕೊಂಡು ಬಂದ 'ಅವಗಾನ್ ಉತ್ಸವ' ತುಂಬ ವಿಶಿಷ್ಟವಾದುದ್ದು. ಪ್ರತಿವರ್ಷ ಈ ಉತ್ಸವದಲ್ಲಿ ಹಲವಾರು ದೇಶಗಳ ವೈವಿಧ್ಯಮಯ ಕಲೆಗಳ ಪ್ರದರ್ಶನ ನಡೆಯುತ್ತದೆ. ಈ ಕಲಾವಿದ ತಮ್ಮ ತಂಡದೊಂದಿಗೆ ರಾಮಾಯಣದ ಕೆಲವು ಭಾಗಗಳನ್ನು ಅಲ್ಲಿ ಪ್ರದರ್ಶಿಸಿ ಅಪಾರ ಮೆಚ್ಚುಗೆಯನ್ನು ಪಡೆದುಕೊಂಡೆವು ಎಂದು ಹೇಳುತ್ತಾರೆ. ಬೇರೆ ದೇಶದವರ ರಾಮಾಯಣದ ಪ್ರದರ್ಶನಗಳನ್ನು ಅಲ್ಲಿ ನೋಡುತ್ತಾರೆ. ಆದರೆ ಭಾರತದ ರಾಮಾಯಣವನ್ನು ಅವರು ಹೇಗೆ ಗ್ರಹಿಸಿದ್ದಾರೆ? ಕಥಾವಸ್ತು, ಪಾತ್ರಗಳು, ಸನ್ನಿವೇಶಗಳು, ಮಾತು, ಸಂಗೀತ ಮುಂತಾದ ಅಂಶಗಳನ್ನು ಅವರು ಹೇಗೆ ಅಳವಡಿಸಿಕೊಂಡಿದ್ದಾರೆ? ಎಂದು ತುಲನಾತ್ಮಕವಾಗಿ ವಿಚಾರ ಮಾಡಲು ಹೋಗುವುದಿಲ್ಲ. ಅಲ್ಲಿಯ ಕಲಾಭವನಗಳನ್ನು ಚಿತ್ರಕಲಾವಿದರ ಕೃತಿಗಳನ್ನು ನೋಡಿ ಮೆಚ್ಚಿಕೊಳ್ಳುತ್ತಾರೆಯೇ ಹೊರತು ಅದೇ ಸಂದರ್ಭದ ಭಾರತದ ಚಿತ್ರಕಲೆಯನ್ನು, ಕಲಾವಿದರನ್ನು ನೆನಪಿಸಿಕೊಂಡು ವಿವೇಚಿಸಲು ಹೋಗುವುದಿಲ್ಲ. ನೋಡಿದ್ದನ್ನು ಮೆಚ್ಚಿಕೊಳ್ಳುತ್ತ, ತಮಗಾದ ಅನುಭವವನ್ನು ಸರಳವಾಗಿ ನಿರೂಪಿಸಿರುವುದನ್ನು ಇಲ್ಲಿ ಕಾಣುತ್ತೇನೆ.

ಯಾವುದೇ ಪ್ರವಾಸ ಕಥನದ ಹಿಂದೆ ಒಂದು ಉದ್ದೇಶವಿರುತ್ತದೆಯಾದರೂ ಅದರ ನಿರೂಪಕನ ಮನೋಧರ್ಮವೇ ಆ ಕಥನದ ಒಂದು ಸ್ವರೂಪವನ್ನು ನಿರ್ಧರಿಸುತ್ತದೆ. ಒಂದು ನಾಡನ್ನು ಹತ್ತಾರು ಮಂದಿ ಸುತ್ತಾಡಿದರೂ ಅವರೆಲ್ಲ ಕಂಡು 'ಅನುಭವಗಳಿಗೆ ರೂಪ ಕೊಡುವಾಗ ಹಲವು ನಿಲುವುಗಳು ವ್ಯಕ್ತವಾಗುವುದು ಸಹಜವೇ. ಆದರೂ ಪ್ರವಾಸಕಥನಕ್ಕೆ ಅನನ್ಯತೆ ಬರುವುದು ಆಯಾ ನಿರೂಪಕನ ಮನೋಭಾವ ಮತ್ತು ಶಕ್ತ ಬರವಣಿಗೆಯಿಂದ ಮಾತ್ರ ಸಾಧ್ಯ. ಈ ಸಮೀಕ್ಷೆಯಲ್ಲಿ 'ಭೂಕಂಪದ ಅಂತರಂಗ' ಉತ್ತಮ ಪ್ರವಾಸ ಕಥನವಾಗಲು ನಿರೂಪಕರು ಹಲವು ನಿಟ್ಟನಲ್ಲಿ ಯೋಚಿಸುವ ಕ್ರಮದಿಂದಾಗಿ 'ಅಮೇರಿಕಾ ನಾನು ಕಂಡಂತೆ' ಕೃತಿಯ ನಿರೂಪಕರು ಅಮೆರಿಕನ್ನರನ್ನು ಹಲವು ದೃಷ್ಟಿಗಳಿಂದ ಪ್ರಶಂಸಿಸಿದರೂ ಮನುಷ್ಯ ಮನುಷ್ಯನೆ ಎಂಬ ಪ್ರಶ್ನೆ ಓದುಗನಲ್ಲಿ ಏಳುತ್ತದೆ.

# ಮಕ್ಕಳ ಸಾಹಿತ್ಯ

*ಧನ್ಯಕುಮಾರ ಮಿಣಜಗಿ*

ಅದ್ಭುತ, ರಮ್ಯ, ನೀತಿ- ಇವು ಮಕ್ಕಳ ಸಾಹಿತ್ಯದ ಪ್ರಮುಖ ಲಕ್ಷಣಗಳು. ಕನ್ನಡದಲ್ಲಿ ಮಕ್ಕಳಿಗಾಗಿ ಸೃಜಿಸುವ ಸಾಹಿತ್ಯವು ಎಲ್ಲ ಪ್ರಕಾರದ ಸಾಹಿತ್ಯವನ್ನು ಒಳಗೊಂಡು ಹೊರಬರುತ್ತಿರುವುದು ಸಂತಸದ ವಿಷಯ. ಮಕ್ಕಳ ಸಾಹಿತ್ಯಕ್ಕೆ ವಿಶೇಷ ಕಾಣಿಕೆ ನೀಡಿದವರು ಪಂಜೆ ಮಂಗೇಶರಾಯರು, ಗೋವಿಂದ ಪೈ, ವೆಂಕಟ ರಂಗೋ ಕಟ್ಟಿ, ಸುಬೋಧ ರಾಮರಾಯರು, ಶಿವರಾಮಕಾರಂತ ಅನುಪಮಾ ನಿರಂಜನ, ಸಿದ್ಧಯ್ಯ ಪುರಾಣಿಕ, ಸಿಸು ಸಂಗಮೇಶ, ಮುಂತಾದವರು. ಈ ಹಿರಿಯರ ದಾರಿಯಲ್ಲಿಯೇ ಸಾಗುತ್ತಿರುವವರು, ಟಿ. ಎಸ್. ನಾಗರಾಜಶೆಟ್ಟಿ, ಸಿ. ಎನ್. ಚೆನ್ನವೀರಯ್ಯ, ಸು. ರುದ್ರಮೂರ್ತಿ, ಕುರುವ ಬಸವರಾಜ, ಈಚನೂರು ಶಾಂತ, ಗಾಯತ್ರಿಮೂರ್ತಿ, ದುಂಡಿರಾಜ, ಜಳವಳ್ಳಿ ಸುಖಾನಂದ, ಈಶ್ವರ ಕಮ್ಮಾರ, ಚಿತ್ರಗಾರ ಪರಶುರಾಮ ಮುಂತಾದವರು. ಮಕ್ಕಳ ಮನರಂಜನೆ, ಜ್ಞಾನ ವಿಕಾಸವನ್ನು ಮುಖ್ಯಗುರಿಯಾಗಿಟ್ಟುಕೊಂಡ ಮಕ್ಕಳ ಸಾಹಿತ್ಯ ಬಹುತೇಕ ಕಥೆಗಳ ರೂಪದಲ್ಲಿರುತ್ತದೆ. ಇಂಥ ಕಥೆಗಳಲ್ಲಿ ಬರಿ ಮನುಷ್ಯರೇ ಇರಬೇಕೆಂದಿಲ್ಲ. ಪಕ್ಷಿ, ಪ್ರಾಣಿಗಳು ನಾಟಕದಲ್ಲಿಯ ಪಾತ್ರಗಳಂತೆ ಮಾತನಾಡುತ್ತವೆ. ಮಕ್ಕಳಿಗೆ ಕಥೆಗಳೆಂದರೆ ಪ್ರೀತಿ. ವಿಜ್ಞಾನವನ್ನು ಕೂಡ ಕಥೆಯ ಮುಖಾಂತರ ಹೇಳಿದರೆ, ಮಕ್ಕಳ ಮನಸ್ಸಿಗೆ ಹಿಡಿಸುತ್ತದೆ. ಅದೇ ಕಾರಣದಿಂದ ಕಥೆ ಇಲ್ಲಿ ಒಂದು ಮಾಧ್ಯಮವಾಗಿ ಮಕ್ಕಳನ್ನು ತಲುಪುತ್ತದೆ.

೯೮೦ ಳರಲ್ಲಿ ಪುಸ್ತಕರೂಪದಲ್ಲಿ ಪ್ರಕಟಗೊಂಡ ಮಕ್ಕಳಸಾಹಿತ್ಯ ಕಡಿಮೆ ಎಂದೇ ಹೇಳಬೇಕು. ಕೇವಲ ಪ್ರಮಾಣವನ್ನು ಗಮನಿಸಿದರೆ ಸಾಲದು. ಕೆಲವೇ ಕೆಲವು ಪುಸ್ತಕಗಳು ಪ್ರಕಟಕಗೊಂಡಿದ್ದರೂ ಅವೆಲ್ಲ ಗುಣಾತ್ಮಕವಾಗಿ ಎತ್ತರದಲ್ಲಿ ನಿಲ್ಲುವಂಥವು.

ಕಾವ್ಯ, ಕಥನ ಗೀತೆಗಳು, ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀರುತ್ತವೆ. 'ಬಣ್ಣ ಬಣ್ಣದ ಓಕುಳಿ', ಸಿದ್ಧಯ್ಯ ಪುರಾಣಿಕರ ಒಂದು ಅತ್ಯುತ್ತಮ ಸಂಕಲನ. ಇಲ್ಲಿಯ ೨೦ ಕವನಗಳು ಪ್ರಾಸಬದ್ಧವಾಗಿ ರಚಿತಗೊಂಡವು. 'ಮಕ್ಕಳ ಹಕ್ಕು' ಕವನ ಮಕ್ಕಳಿಗಿರುವ ಹಕ್ಕುಗಳ ಬಗ್ಗೆ ಹೇಳುತ್ತ ಹಿರಿಯರಿಗೆ ಬುದ್ಧಿವಾದ ಹೇಳುತ್ತದೆ. 'ಋತಗಾನ' ವರ್ಷದ ಎಲ್ಲ ಋತುಗಳ ವರ್ಣನೆ ನೀಡುತ್ತದೆ. ಸಾಮಾಜಿಕ ಕಳಕಳಿ ಹೊಂದಿದ ಮಗುವಿನ ಮೊರೆಯಿದು:

ಹೆಂಡದ ಅಂಗಡಿ ಹಾಳಾಗಿ ಹೋಗಿ
ಹಾಲಿನ ಅಂಗಡಿ ಬರಲಮ್ಮ

ಕಥಾರೂಪದ 'ಕೋತಿ ಹೋತದ ಕಥೆ' 'ಪ್ರಶ್ನೋತ್ತರ' 'ಚಾಚಾನೆಹರು' 'ಸರಪಳಿ' 'ಹೋಳಿಗೆ ತುಪ್ಪ' ' ಬಣ್ಣದ ಓಕುಳಿ' ಇತ್ಯಾದಿ ಕವನಗಳು ಪ್ರಾಸದ ಸಿರಿಯಿಂದ ತುಂಬಿ ಪುನಃ ಪುನಃ ಓದಿಸಿಕೊಳ್ಳುತ್ತವೆ. ಈ ಕವಿಯ 'ತುಪ್ಪಾ ರೊಟ್ಟಿಗೇಗೆ' ಯಂಥ ಇಲ್ಲಿಯ ಕವನಗಳು ಲಯಬದ್ಧವಾಗಿ ರಚಿತಗೊಂಡಿವೆ. ಪ್ರತಿ ಕವನಕ್ಕೂ ಒಂದೊಂದು ಮನಸೆಳೆವ ಚಿತ್ರವಿದ್ದು ಮಕ್ಕಳಿಗೆ ಮುದ ನೀಡುತ್ತವೆ.

ಕುರುವ ಬಸವರಾಜ ಅವರ 'ಹುಲ್ಲೆ ಹಾಡು' ೧೯೯೪ರ ಅತ್ಯುತ್ತಮ ಮಕ್ಕಳ ಕಾವ್ಯ. ಮೇಲುನೋಟಕ್ಕೆ 'ಗೋವಿನ ಹಾಡಿನ' ನೆನಪನ್ನು ತಂದರೂ, ಕುತೂಹಲ ಹುಟ್ಟಿಸುತ್ತ ಸಾಗುತ್ತದೆ. ಕ್ರೌರ್ಯದ ಸಂಕೇತವಾದ ಹುಲಿ, ಘಾಸಿಗೊಂಡು ಮರಣಶಯ್ಯೆಯಲ್ಲಿದೆ. ಅದು ದೈನ್ಯದಿಂದ ತನ್ನ ಜೀವ ಉಳಿಸಲು ಉಳಿದ ಪ್ರಾಣಿಗಳಲ್ಲಿ ಕೇಳುತ್ತದೆ. ಎಲ್ಲ ಪ್ರಾಣಿಗಳು ಸಹಾಯ ನಿರಾಕರಿಸಿದರೂ ಹುಲ್ಲೆ ಮಾತ್ರ ಸಹಾಯ ಮಾಡುತ್ತದೆ. ಹುಲ್ಲೆಯ ಸಹಾಯವನ್ನು

> ತಾಯಿಲ್ಲ ನಿಮಗಳಿಗೆ
> ತಾಯೆ ನಾನೆಂದು
> ಸಾಕಿ ಸಲುವುತಾವ್ನೆ ಹುಲಿಯಣ್ಣ

ಎಂದು ಮುಕ್ತಾಯವಾದ ಕವನ ಅಸಂಗತವಾಗೇನೂ ಕಾಣುವುದಿಲ್ಲ.

ಸುಮುಖಾನಂದ ಜಲವಳ್ಳಿ ಅವರ 'ಚೆಲುವಿನ ಕನ್ನಡ ಮಕ್ಕಳ ಹಾಡು' ವಿಶಿಷ್ಟವಾದ ಕೃತಿ. ಕನ್ನಡ ತಾಯಿಯನ್ನು ಕುರಿತು ಸುಮಾರು ೧೬ ಕವನಗಳಿವೆ. ಇವರ ಬರವಣಿಗೆ ನೋಡಿದರೆ ಎಲ್ಲೋ ಓದಿದ ನೆನಪು ಆಗುತ್ತದೆ. ' ನಮ್ಮ ಕನ್ನಡ'ದ ಈ ಸಾಲು ನೋಡಿ.'ಕನ್ನಡಮ್ಮ ಲಾಲೀ ಜೋ ಜೋ' 'ಎದ್ದೊಂದು ಗಳಿಗೆ ನೆನಿಬೇಕು,' 'ಕನ್ನಡ ಕೋಲು' ಮುಂತಾದವು ಜಾನಪದ ಸೊಗಡಿನಿಂದ ಕೂಡಿದೆ. ಸರಳರಚನೆ, ಪ್ರಾಸಬದ್ಧತೆಗಳನ್ನು ಲಕ್ಷಣವಾಗಿ ಹೊಂದಿರುವ 'ಚಲುವ ಚಂದಪ್ಪ' ಶ್ರೀ ವೆಂಕಟೇಶ ಹುಣಶೀಕಟ್ಟಿಯವರಿಂದ ಮೂಡಿಬಂದಿದೆ 'ನಾಡ ಹಬ್ಬದ ಸಂದೇಶ' ಸಹಬಾಳ್ವೆಗೆ ಪ್ರೇರೇಪಿಸುತ್ತದೆ. ಸಾಕುಪ್ರಾಣಿ 'ನಮ್ಮ ಬೆಕ್ಕು' ಮಕ್ಕಳ ಅನುಕರಣೆಗೆ 'ನಮ್ಮ ಪುಟ್ಟು' ತಾಯಿಯ ಮಮತೆಗೆ ಪ್ರತೀಕವಾಗಿ 'ನನ್ನ ಮುದ್ದಿನ ಅಮ್ಮ' 'ಅಜ್ಜಿ ಅಜ್ಜಿ'. ಮುಂತಾದ ಗೀತೆಗಳು ಮನಸ್ಸಿಗೆ ಮುದನೀಡುತ್ತವೆ. 'ಚಲುವ ಚಂದಪ್ಪ' ಚಂದ್ರನನ್ನು ಕುರಿತ ಕವಿತೆ. ಮುಗ್ಧಮಗುವಿನ ಕುತೂಹಲ ತುಂಬಿದ ಪ್ರಶ್ನೆಗಳು ನಮ್ಮನ್ನು ಚಕಿತರನ್ನಾಗಿ ಮಾಡುತ್ತವೆ.

> ಆಗಸದಲ್ಲೆ ಏಕಿಹನು?
> ಬೀಳುವ ಅಂಜಿಕೆ ಇಲ್ಲವೇನು?
> ಬಿದ್ದರೆ ಅವನ ಹಿಡಿಯವೆನು.
> ರಾತ್ರಿಯೇ ಏಕೆ ಕಾಣುವನು?
> ಹಗಲಲಿ ಎಲ್ಲಿ ಇರುವನು?
> ಸೂರ್ಯನಿಗವನು ಹೆದರುವನೇನು?

ಮಕ್ಕಳ ಸಾಹಿತ್ಯಕ್ಕೆ ವಿಶೇಷ ಮೆರಗನ್ನು ನೀಡುತ್ತಿರುವವರಲ್ಲಿ ಸಿಸು ಸಂಗಮೇಶ, ಅಗ್ರಗಣ್ಯರು. ' ದಾರಿ ಬುತ್ತಿ' ಕಥಾರೂಪದಲ್ಲಿ ಹೊರಬಂದಿರುವ ಕೃತಿ ಇಲ್ಲಿ ೧೮ ಪ್ರೇರಕ ಪ್ರಸಂಗಗಳಿವೆ. ಜಗತ್ತಿನ ಹಲವಾರು ಮಹನೀಯರ ಸಾಧನೆಗಳ ಬಗ್ಗೆ ಅವರು ಕಂಡುಕೊಂಡ ಜೀವನಾನುಭವದ ಬಗ್ಗೆ ಕಥಾರೂಪದಲ್ಲಿ ಪ್ರಸಂಗಗಳನ್ನು ವಿವರಿಸಿದ್ದಾರೆ. 'ದಾರಿ ಬುತ್ತಿ' ನೈಜ ಘಟನೆಗಳನ್ನು ಆಯ್ದು ಸಿದ್ಧಪಡಿಸಿದ ಆಹಾರ. ಇಲ್ಲಿ ರಸಪಾಕವಿದೆ, ಸಿಹಿಕಪಿ, ಒಗರು, ಹುಳಿ, ಕಾರ - ಉಪ್ಪು, ಪಿಷ್ಟ ಹೀಗೆ ಎಲ್ಲ ಶಕ್ತಿದಾಯದ ಅನ್ನದ ಸಂಗ್ರಹವಿದೆ- ಎಂದು ಲೇಖಕರು ಎಳೆಯ ಗೆಳೆಯರನ್ನು ಕುರಿತು ಹೇಳಿದ್ದಾರೆ. ಇಲ್ಲಿಯ ಪ್ರಸಂಗದ ನಾಯಕರು, ರೋಮ್ ಸಾಮ್ರಾಜ್ಯದ ಜ್ಯೂಲಿಯಸ್ ಸೀಜರ್, ಅಮೇರಿಕೆಯ ಅಧ್ಯಕ್ಷ ಗ್ರ್ಯಾಂಟ್, ಇಂಗ್ಲೆಂಡಿನ ರಾಣಿ ವಿಕ್ಟೋರಿಯಾ, ಇರಾಕಿನ ಕವಿ ಅಹಮದಿ, ವಿಜ್ಞಾನಿ ಬೆಂಜಮಿನ್, ಜರ್ಮನಿ ದೇಶದ ಕೈದಿ, ತನ್ನ ದೇಶಕ್ಕಾಗಿ ಓಡಿದ ಫಿಡಿಪಿಡಿಸ್, ಕುಸ್ತಿ ಪಟು ಮಹಮ್ಮದ ಆಲಿ, ಚೀನಾದ ಲೀತ್ಸೂ ಮುಂತಾದವರು ತಮ್ಮ ಸಹನ ಶೀಲತೆ, ಪ್ರಾಮಾಣಿಕತೆ, ದೇಶಪ್ರೇಮ ಮೆರೆದಿದ್ದಾರೆ. ಅವರು ನಡೆದು ತೋರಿಸಿದ ದಾರಿ, ಆ ದಾರಿ ಕ್ರಮಸಲು ಈ 'ದಾರಿ ಬುತ್ತಿ' ಮಕ್ಕಳ ಮನಸ್ಸಿಗೆ ತಟ್ಟನೆ ತಟ್ಟಿ, ಅವರನ್ನು ಈ ನಾಯಕರಂತೆ ಜೀವನದಲ್ಲಿ ನಡೆಯಲು ಕೈದೀವಿಗೆಯಾಗಿ ಸಹಕರಿಸುತ್ತದೆ. ಸರಳ ಶೈಲಿ ಈ ಕೃತಿಯ ವಿಶೇಷತೆ ಇದೇ ಸಾಲಿನಲ್ಲಿ ನಿಲ್ಲುವ, ಇನ್ನೊಂದು ಕೃತಿ ಸುರುದ್ರಮೂರ್ತಿ ಶಾಸ್ತ್ರಿಗಳ 'ಒಳ್ಳೆಯದು ಗೆಲ್ಲುತ್ತದೆ.' ಇದರಲ್ಲಿ ಹನ್ನೊಂದು ನೀತಿ ಕಥೆಗಳಿವೆ. ' ಒಳ್ಳೆಯದು ಗೆಲ್ಲುತ್ತದೆ' ಮಕ್ಕಳ ನೀಳ್ಗತೆಯಂತಿದೆ. 'ಮಂತ್ರದ ಕೋಲು', 'ಕಾಗೆ ನರಿ' 'ಪೂಜಾರಿಯ ಮೋಸ' ಇತ್ಯಾದಿ ಕತೆಗಳು ಕೂಡ ಸಹಜ ಶೈಲಿಯಲ್ಲಿ ಮಕ್ಕಳ ಮನರಂಜಿಸುತ್ತವೆ. ಮಕ್ಕಳ ಕಥಾ ಸಾಹಿತ್ಯದಲ್ಲಿ ಹುಲುಸಾಗಿ ಕೃಷಿಮಾಡುತ್ತಿರುವರಲ್ಲಿ ಶ್ರೀ ಸಿ ಎನ್ ಚನ್ನವೀರಯ್ಯನವರು ಒಬ್ಬರು. ಅವರು ಶಿಕ್ಷಕರಾಗಿದ್ದುದರಿಂದಲೋ ಏನೋ ಮಕ್ಕಳ ಮನಸ್ಸು ಚೆನ್ನಾಗಿ ಅರಿತು ಕಥೆ ಹೇಳುವ ರೀತಿ ಮೈಗೂಡಿಸಿಕೊಂಡಿದ್ದಾರೆ. ಅವರ ಲೇಖನಿಯಿಂದ ಹೊರಬಂದಿರುವ 'ಚೋರಗುರು' ಕ್ರೂರಿಯಾದ ವಾಮಾಚಾರದ ಗುರುವನ್ನು ಶಿಕ್ಷಿಸುವುದಾಗಿದೆ. ಈ ಕೃತಿಯನ್ನು ಮಕ್ಕಳ ಸಣ್ಣಕತೆ ಪ್ರಕಾರಕ್ಕೆ ಬದಲಾಗಿ ಮಕ್ಕಳ ಕಿರುಕಾದಂಬರಿ ಎಂದರೆ ಸರಿ ಹೋದೀತು. ಸರಳ ಶೈಲಿ ಮನ ಮೆಚ್ಚಿಸುತ್ತದೆ. ಕಥೆಯ ಮಧ್ಯದಲ್ಲಿ ಚಿತ್ರಗಳಿದ್ದರೆ ಇನ್ನೂ ಹೆಚ್ಚಿನ ಮೆರಗನ್ನು ನೀಡುತ್ತಿತ್ತು. ದ್ರೋಣವೀರ ಕೊಹಲಿ ಅವರ 'ಪಂಜರ' ಮತ್ತು 'ಹೆಬ್ಬಾವು ಮಾಡಿದ ಗೊಂದಲ' ಇವು ಅನುವಾದ ಕೃತಿಗಳು. ನೆಹರು ಬಾಲಮಂದಿರ ಹೊರತಂದಿರುವ 'ಹೆಬ್ಬಾವು ಮಾಡಿದ ಗೊಂದಲ' ರಸ್ಕಿನ ಬಾಂಡ್ ಅವರದು. ಲಲಿತ ಶ್ರೀನಿವಾಸ ಅವರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅಜ್ಜ ಮತ್ತು ಮೊಮ್ಮಗ, ಇವರ ಹಾವಿನ ಮೇಲಿನ ಪ್ರೀತಿ, ಅಜ್ಜಿಯ ಅಸಹನೆ ಇವು ಚೆನ್ನಾಗಿ ಮೂಡಿಬಂದಿವೆ. ಚಿತ್ರಗಳಿಂದ ಮೈತುಂಬಿದ ಈ ಕೃತಿ ಎಳೆಯರನ್ನು ರಂಜಿಸುತ್ತದೆ. ದ್ರೋಣವೀರ ಕೊಹಲಿ ಅವರ 'ಪಂಜರ' ಉಪೇಂದ್ರರಿಂದ ಅನುವಾದಿತವಾಗಿದೆ. ಪಕ್ಷಿಪ್ರೇಮ ಉತ್ಕಟವಾಗಿ, ಅದನ್ನೊಂದು ಪಂಜರದಲ್ಲಿ ಇಟ್ಟರೆ ಅದು ನೆಮ್ಮದಿಯಾಗಿದ್ದೀತೆ ? ಪಶು ಪಕ್ಷಿ ಮಾನವ ಇವರೆಲ್ಲರಿಗೂ ಸ್ವಾತಂತ್ರ್ಯ

ಜೀವನದ ಉಸಿರಾಗಿರಬೇಕಲ್ಲವೇ? ಗಿಣಿ ಪಂಜರದಲ್ಲಿ ಸುಖವಾಗಿ ಇರಲಾರದು. ಅದನ್ನು ಪಂಜರದಿಂದ ಬಿಡುಗಡೆಗೊಳಿಸಿದರೆ ಹರ್ಷ. ಅನುವಾದ ಚೆನ್ನಾಗಿ ಮೂಡಿ ಬಂದಿದೆ. ಚಿತ್ರಗಳು ಚೇತೋಹಾರಿಯಾಗಿವೆ.

* * *

ಎಚ್ ದುಂಡಿರಾಜ್ ಅವರ 'ಅಜ್ಜಿ ಕಥೆ' ಮತ್ತು ಜರ್ಮನ ಮಕ್ಕಳ ನಾಟಕ 'ಸ್ಯಾಕರ್‌ಲಾಕ್ ಎಂಡ್ ಮಿಕಿ ವಿಕಿ' ಯ ಅನುವಾದ 'ಭುಕ್ ಭುಕ್ ಭಯ್ಯಾ ತಾಲಮ್ ತಾಲ್'. 'ಅಜ್ಜಿ ಕಥೆ' ಯಲ್ಲಿ ರಾಜಕುಮಾರಿ ಸಹಜ ಹೆಣ್ಣಾಗಿದ್ದರೂ, ಅವಳ ಹೆಣ್ತನವೇ ತಂದೆಯ ಅಸಹನೆ, ನಿರಾಸಕ್ತಿಗಳಿಗೆ ಕಾರಣವಾಗಿದ್ದರೂ ಕೂಡ, ತನ್ನ ಅಣ್ಣಂದಿರು ಶತ್ರು ಸೈನ್ಯದ ಮುಂದೆ ಸೋತು ನಿರ್ವಿಣ್ಣರಾದಾಗ, ಹೋರಾಡಿ, ತಂದೆಯ ಮಮತೆಯನ್ನು ವಿಶ್ವಾಸವನ್ನು ಗಳಿಸುವ ಕಥೆ. ರಾಣಿಯರು, ಸೇನಾಧಿಪತಿ, ಗುರುಗಳು ಹಾಗೂ ರಾಜಕುಮಾರಿ ಸಹಜವಾಗಿ ಗಮನ ಸೆಳೆಯುತ್ತಾರೆ. ರಾಜಕುಮಾರಿಯ ಪಾತ್ರ ಸತ್ವಯುತವಾಗಿ ಮೂಡಿಬಂದಿದೆ. ದೃಶ್ಯ ಸಂಯೋಜನೆ ಕ್ರಮಬದ್ಧವಾಗಿದೆ.

'ಭುಕ್ ಭುಕ್ ಭಯ್ಯಾ ತಾಲಮ್ ತಾಲ್' ಸುಂದರವಾದ ಮಕ್ಕಳ ನಾಟಕ. ಇದೊಂದು 'ರೈಲು ಎಂಜಿನ' ದ ಸುತ್ತ ಹೆಣೆದ ನಾಟಕ. ನಾಟಕದಲ್ಲಿ ಬರುವ ಹಾಡುಗಳು ಮನಸೆಳೆಯುತ್ತವೆ. ಇಂಜಿನ್ನಿನ ಹಾಡು, ಮಾಸ್ತರನ ಹಾಡು, ಮಾರ್ಚಿಂಗ ಹಾಡು, ನೃತ್ಯ ಗೀತೆ, ರೈಲುಗಾಡಿ ಹಾಡು, ಊಟದ ಹಾಡು - ಇವೆಲ್ಲ ನಾಟಕದ ಬಂಧಕ್ಕೆ ಮೆರಗುನೀಡುತ್ತವೆ. ಅನುವಾದ ಮನಸೆಳೆಯುತ್ತದೆ.

* * *

ಈಚನೂರ ಶಾಂತ ಅವರ 'ಚಾಚಾನೆಹರು' ಅವರ ಬಾಳಿನ ಸಂಗತಿಗಳನ್ನು ತೆರೆದುಕೊಳ್ಳುತ್ತ ಸಾಗುತ್ತದೆ. ನೆಹರುರವರನ್ನು ಕುರಿತು ಮಕ್ಕಳಿಗೆ ಹೇಳುವಾಗ ಅವರನ್ನು 'ಚಾಚಾ' ಎಂದೇ ಹೆಸರಿಸಲಾಗುತ್ತದೆ. ನೆಹರು ಅವರನ್ನು ಮಕ್ಕಳಿಗೆ ಪರಿಚಯಿಸುವ ರೀತಿ ಮೋಡಿಹಾಕುತ್ತದೆ. ಟಿ ಎಸ್ ನಾಗರಾಜಶೆಟ್ಟಿ ಅವರ 'ಹೀಗಿದ್ದರು ಹಿರಿಯರು' ಕೃತಿಯಲ್ಲಿ ನೆಹರು, ಗಾಂಧಿ, ಟಿಳಕ ಮತ್ತು ರಾಮಕೃಷ್ಣಪರಮಹಂಸರ ಜೀವನದಲ್ಲಿಯ ಕೆಲವು ಘಟನೆಗಳ ಚಿತ್ರಗಳಿವೆ. ಸಿ. ಎನ್. ಚನ್ನವೀರಯ್ಯನವರ 'ಎಂಥವರು ತಾವು' ಭಾರತೀಯ ಸಾಹಿತ್ಯ ಸಂಸ್ಕೃತಿಯ ಕಿರುಪರಿಚಯ. ಮಹಾಭಾರತದಲ್ಲಿ ಬರುವ ಹಲವಾರು ಪಾತ್ರಗಳನ್ನು ಮಕ್ಕಳಿಗೆ ಮನರಂಜಿಸುವಂತೆ ಚಿತ್ರಿಸಿದ್ದಾರೆ.

* * *

ವಿಜ್ಞಾನವನ್ನು ಮಕ್ಕಳಿಗೆ ಸರಳವಾದ ರೀತಿಯಲ್ಲಿ ತಿಳಿಸಲೋಸುಗ, ಶ್ರೀಮತಿ ಗಾಯತ್ರಿಮೂರ್ತಿಯವರು, ಶಾಖ, ಗಾಳಿ, ನೀರು, ಬೆಳಕು, ಮತ್ತು ಶಬ್ದಪ್ರಪಂಚ ಎಂಬ ಐದು ಗ್ರಂಥಗಳನ್ನು ರಚಿಸಿದ್ದಾರೆ. ಇಲ್ಲಿಯ ಎಲ್ಲ ಬರಹಗಳು ಕಥೆಗಳ ಮೂಲಕ ಮತ್ತು ಸಂಭಾಷಣೆಯ ಮೂಲಕ ಬಿಚ್ಚಿಕೊಳ್ಳುತ್ತವೆ. 'ಶಾಖ'. ದಲ್ಲಿ ಸೂರ್ಯನಿಂದ ಶಾಖ, ಶಾಖದಿಂದ ವಸ್ತುಗಳ ಹಿಗ್ಗುವಿಕೆ, ಮಂಜುಗಡ್ಡೆ ಯಾಕೆ ತೇಲುತ್ತದೆ? ಹೀಗೆ

ಅನೇಕ ಶಾಖದ ಲಕ್ಷಣಗಳನ್ನು ವಿವರಿಸುತ್ತಾ ಹೋಗುತ್ತಾರೆ. ಅದೇ ರೀತಿ ಗಾಳಿ, ಬೆಳಕು, ನೀರು, ಶಬ್ದ ಪ್ರಪಂಚ, ಈ ಎಲ್ಲ ಮೂಲಭೂತ ವಿಷಯಗಳನ್ನು ರೋಚಕ ರೀತಿಯಲ್ಲಿ ಕಥಾನಕದ ಮೂಲಕ ಬಿಚ್ಚಿತೋರಿಸುತ್ತಾರೆ. ಪ್ರತಿಯೊಂದು ಪುಸ್ತಕವೂ 'ಪ್ರಯೋಗಾಲಯ' ದ ಅನುಭವ ನೀಡುತ್ತದೆ'. ಮಕ್ಕಳಿಗಾಗಿ ಇಷ್ಟೊಂದು ಸರಳ ಶೈಲಿಯಲ್ಲಿ ಹೇಳಿದ್ದಕ್ಕೆ ಶ್ರೀಮತಿ ಗಾಯಿತ್ರಿ ಅವರು ಮಕ್ಕಳ ಮೆಚ್ಚುಗೆಯನ್ನಷ್ಟೇ ಅಲ್ಲ, ಹಿರಿಯರ ಆದರಕ್ಕೂ ಪಾತ್ರರಾಗುತ್ತಾರೆ.

* * *

ಕಲಬುರ್ಗಿಯ ಸಂಧ್ಯಾಸಾಹಿತ್ಯ ಪ್ರಕಾಶನದವರು ಹೊರತಂದಿರುವ 'ಸಂಧ್ಯಾ' ಮೊದಲನೋಟಕ್ಕೆ ಮನಸೆಳೆಯುತ್ತದೆ. ಇದೊಂದು ವಿಶಿಷ್ಟ ರೀತಿಯ ಕೃತಿ. ಮಕ್ಕಳ ಸಾಹಿತ್ಯ ಕುರಿತು ಇದರಲ್ಲಿ ಲೇಖನಗಳಿವೆ. ಪ್ರಾಯಶಃ ಇದೊಂದು ನಿಯತಕಾಲಿಕೆಯಾಗಿರಬಹುದು. ಆದರೆ, ಪ್ರಕಟವಾಗುವ ಅವಧಿ ತೋರಿಸಲ್ಲ. 'ಮಕ್ಕಳ ಸಾಹಿತ್ಯ ಅಧ್ಯಯನ ಮಾಲೆ - ೨', ಎಂದು ಬೇರೆ ಮುಖಪುಟದಲ್ಲಿ ಅಚ್ಚಾಗಿದೆ. ಇದೊಂದು ಸ್ವಾಗತಾರ್ಹ ಪ್ರಯತ್ನ. ಮಕ್ಕಳ ಸಾಹಿತ್ಯ ಕುರಿತು, ಹಿರಿಯರಿಂದ ಚಿಂತನೆ, ಕಿರಿಯರಿಂದ ರಚನೆ ಅಥವಾ ಹಿರಿಯರ ಕಿರಿಯರ ಸಮಭಾಗಿತ್ವದಿಂದ ಇನ್ನೂ ಹೆಚ್ಚಿನ ಕೃತಿಗಳು ಬರಬೇಕು. ಈಗಿನ ಹೊಸಬೆಳೆ ಮುಂದಿನ ಋತುವಿನಲ್ಲಾದರೂ ಸಮೃದ್ಧ ಫಸಲು ನೀಡಿದರೆ, ಮಕ್ಕಳ ಬೌದ್ಧಿಕ ವಿಕಾಸ ಹೊಸ ದಿಗಂತದತ್ತ ಮುನ್ನಡೆದೀತು.

## ಸಾಹಿತ್ಯ ವಿಮರ್ಶೆ

*ಕರೀಗೌಡ ಬೀಚನಹಳ್ಳಿ*

ಬಹುಮಟ್ಟಿಗೆ ಯಾವುದೇ ಸಾಹಿತ್ಯ ವಿಮರ್ಶಾ ಸಂಕಲನವು ಕಾದಂಬರಿ ಅಥವಾ ನಾಟಕದಂತೆ ಆಯಾ ವರ್ಷವೇ ಹೊಸದಾಗಿ ಪ್ರಕಟವಾದ ಗ್ರಂಥವಾಗಿರುವುದಿಲ್ಲ. ಅದರಲ್ಲಿ ಈಗಾಗಲೇ ಎಂದೋ ಹಿಂದೆ ಯಾವುದೋ ಸಂದರ್ಭದಲ್ಲಿ ನಿರ್ದಿಷ್ಟ ಉದ್ದೇಶಕ್ಕಾಗಿ ಬರೆದು ಪ್ರಕಟವಾದ ಲೇಖನಗಳಿರುತ್ತವೆ. ಅವುಗಳನ್ನೆಲ್ಲಾ "ತಿದ್ದದೆ ಹಾಗೇ ಇದ್ದದ್ದು ಇದ್ದ ಹಾಗೆ" ಒಂದೆಡೆ ಸೇರಿಸಿ ಅದನ್ನು ಸ್ವತಂತ್ರ ಕೃತಿಯನ್ನಾಗಿ ಹೊರತರಲಾಗಿರುತ್ತದೆ. ಇನ್ನು ಕೆಲವು ಸಂದರ್ಭದಲ್ಲಿ ಕೃತಿಗಳು ತಮ್ಮ ಮಹತ್ವ ಹಾಗೂ ಬೇಡಿಕೆಗಳಿಗನುಗುಣವಾಗಿ ಮರುಮುದ್ರಣವಾಗಿ ಹೊರಬಂದಿರುತ್ತವೆ. ಇನ್ನು ಕೆಲವು ಕೃತಿ ಅಥವಾ ಲೇಖಕರನ್ನು ಕೇಂದ್ರವಾಗಿಟ್ಟುಕೊಂಡು ಬೇರೆ ಬೇರೆ ಸಮಯದಲ್ಲಿ ಬೇರೆ ಬೇರೆ ವಿಮರ್ಶಕರು ಬರೆದ ಲೇಖನಗಳನ್ನು ಆಯ್ದು, ನಿರ್ದಿಷ್ಟ ಸಂದರ್ಭವೊಂದಕ್ಕೆ ಪ್ರಕಟಿಸಿದ ಸಂಪಾದಿತ ವಿಮರ್ಶಾ ಸಂಕಲನಗಳಾಗಿರುತ್ತವೆ. ಇಂತಹ ಎಲ್ಲಾ ರೀತಿಯ ವಿಮರ್ಶಾ ಕೃತಿಗಳೂ ಈ ವರ್ಷವೂ ಅಚ್ಚಾಗಿ ಬಂದಿವೆ.

ನಮ್ಮ ಕಾಲದ ಮಹತ್ವದ ಕವಿಯಾದ ಶ್ರೀ ಚೆನ್ನವೀರ ಕಣವಿ ಅವರ ಕಾವ್ಯವನ್ನು ಕುರಿತು ವಿವಿಧ ಪ್ರಸಿದ್ಧ ವಿಮರ್ಶಕರು ಬರೆದ ಲೇಖನಗಳ ಸಂಕಲನ, 'ಕಣವಿ ಸಾಹಿತ್ಯ ಸಂಪದ'. ಇದೇ ವಿಷಯದ ಮೇಲೆ ನಡೆದ ವಿಚಾರ ಸಂಕಿರಣದಲ್ಲಿ ಮಂಡಿತವಾದ ಲೇಖನಗಳನ್ನು ಒಂದೆಡೆ ಅಚ್ಚುಕಟ್ಟಾಗಿ ಶ್ರೀ ಗುರುಪಾದ ಮರಿಗುದ್ದಿ ಅವರು ಸಂಪಾದಿಸಿಕೊಟ್ಟಿದ್ದಾರೆ. ಈ ಲೇಖನಗಳಲ್ಲಿ ಕನ್ನಡ ಕಾವ್ಯ ಪರಂಪರೆಯಲ್ಲಿ ಕಣವಿಯವರ ಕಾವ್ಯದ ಮಹತ್ವ, ಕಾವ್ಯಧೋರಣೆಗಳು, ಕಾವ್ಯ ಭಾಷೆಯ ವಿಶಿಷ್ಟತೆ, ಅವರ ಮಾಧ್ಯಮಶ್ರದ್ಧೆ ಮುಂತಾದ ವಿಷಯಗಳ ಬಗ್ಗೆ ವಿವೇಚಿಸಲಾಗಿದೆ. ವಿಮರ್ಶಕ ಪ್ರೊ. ಕಿ.ರಂ. ನಾಗರಾಜ ಅವರು ಹೇಳುವಂತೆ, "ಕಣವಿಯವರ ಕಾವ್ಯಧೋರಣೆಯಾದ ತಾಳಿಕೆಯಗುಣ ಅವರ ಕಾವ್ಯಕ್ಕೆ ಸೂಕ್ಷ್ಮತೆಯನ್ನು ತಂದುಕೊಟ್ಟಿದೆ. ಅವರ ಒಟ್ಟು ಕವಿತೆಗಳ ಅಧ್ಯಯನದಿಂದ ಸಂಸ್ಕೃತಿಯ ಮತ್ತು ಚರಿತ್ರೆಯ ಗತತರ್ಕದ ಕ್ರಿಯಾಶೀಲತೆಯನ್ನು ತಿಳಿಯಬಹುದು." ಕಣವಿಯವರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ಕಾಣಿಕೆಯನ್ನು ಈ ಕೃತಿಯ ಲೇಖನಗಳು ವಸ್ತುನಿಷ್ಠವಾಗಿ ಗುರುತಿಸಿವೆ. ಕಣವಿಯವರ ಸಾಹಿತ್ಯವನ್ನು ಕುರಿತು ಅಧ್ಯಯನಕ್ಕೆ ತೊಡಗುವವರಿಗೆ ಇದೊಂದು ಉತ್ತಮ ನೆರವಿನ ಗ್ರಂಥವಾಗಿದೆ.

ಕನ್ನಡದ ಬಹುಮುಖ್ಯ ಕವಿಯಾದ ಡಾ. ಚಂದ್ರಶೇಖರ ಕಂಬಾರ ಅವರ ಕಾವ್ಯದ ಬಗ್ಗೆ ಕಳೆದ ಮೂರು ದಶಕಗಳ ಅವಧಿಯಲ್ಲಿ ಪ್ರಖ್ಯಾತ ವಿಮರ್ಶಕರು ಬೇರೆ ಬೇರೆ ಕಡೆ ಬರೆದ ವಿಮರ್ಶಾ ಲೇಖನಗಳ ಸಂಕಲನ, 'ಕಂಬಾರರ ಕಾವ್ಯ.' ಇದನ್ನು ಖ್ಯಾತ ವಿಮರ್ಶಕ ಟಿ.ಪಿ. ಅಶೋಕ ಅವರು ಅಚ್ಚುಕಟ್ಟಾಗಿ ಸಂಪಾದಿಸಿಕೊಟ್ಟಿದ್ದಾರೆ. ಕಂಬಾರರ ಕಾವ್ಯವನ್ನು ವಿವಿಧ ನೆಲೆಗಳಿಂದ ಸಮರ್ಥವಾಗಿ ಅರ್ಥೈಸಿರುವುದಕ್ಕೆ ಇಲ್ಲಿಯ ಲೇಖನಗಳು ಸಾಕ್ಷಿಯಾಗಿವೆ. ಕಂಬಾರರ ಕಾವ್ಯವನ್ನು ಕುರಿತು ಅಡಿಗರು, ಕುರ್ತಕೋಟಿ, ಲಂಕೇಶ್, ಡಿ.ಆರ್. ನಾಗರಾಜ, ಗಿರಡ್ಡಿ ಗೋವಿಂದರಾಜ, ಜಿ.ಎಚ್. ನಾಯಕ, ಎಚ್.ಎಸ್.ರಾಘವೇಂದ್ರರಾವ್, ಎಚ್.ಎಸ್. ಶಿವಪ್ರಕಾಶ್, ಟಿ.ಪಿ. ಅಶೋಕ ಮುಂತಾದ ಮಹತ್ವದ ವಿಮರ್ಶಕರೆಲ್ಲಾ ಬರೆದ ಮೂವತ್ತುಮೂರು ವಿಮರ್ಶಾ ಲೇಖನಗಳಿವೆ. ಕನ್ನಡ ಕಾವ್ಯ ಪರಂಪರೆಯ ಸಂದರ್ಭದಲ್ಲಿ ಕಂಬಾರರ ಕಾವ್ಯದ ಸಮೃದ್ಧತೆ ಮತ್ತು ಸಾರ್ಥಕತೆಯ ವೈಶಿಷ್ಟ್ಯವನ್ನು ಈ ಲೇಖನಗಳು ಸಮರ್ಥವಾಗಿ ಕಟ್ಟಿಕೊಡುತ್ತವೆ. ಕಂಬಾರರ ಒಟ್ಟು ಕಾವ್ಯವನ್ನು ಬೆಲೆಕಟ್ಟುವ ಕೆಲಸದಿಂದ ಹಿಡಿದು ಬಿಡಿಬಿಡಿ ಕವಿತೆಗಳ ಪ್ರಾಯೋಗಿಕ ವಿಮರ್ಶೆಯವರೆಗೆ ಒಳಗುಪಡಿಸಿರುವ ಲೇಖನಗಳು ಇಲ್ಲಿವೆ. ಕಂಬಾರರ ಕಾವ್ಯದಲ್ಲಿ ಪೌರಾಣಿಕ ಆಯಾಮಗಳು, ಜನಪದ ಸತ್ವ, ಕಾಮ, ರಾಜಕೀಯ ಪ್ರಜ್ಞೆ, ವಸಾಹತುಶಾಹಿಯ ಅನುಭವ, ಸಂಪ್ರದಾಯ, ಪ್ರತಿಮೆಗಳು- ಹೀಗೆ ವಿಶ್ಲೇಷಣೆ ಮಾಡಲಾಗಿದೆ. ಇಲ್ಲಿ ಅಡಿಗರು ಕಂಬಾರರ ಕಾವ್ಯ ಕುರಿತು "ಈ ಕವಿ ಒಂದು ಜಾನಪದ ಕಥೆಯ ಮೂಲಕ ಆಧುನಿಕ ಜೀವನಕ್ಕೊಂದು ಪ್ರತಿಮೆಯನ್ನು ಹುಡುಕುತ್ತಿದ್ದಾರೆ" ಎಂದಿದ್ದಾರೆ. ಕಂಬಾರರ ಕಾವ್ಯದ ಹುಡುಕಾಟದ ವಿಶ್ಲೇಷಣೆ, ವಿಮರ್ಶಕರಿಗೆ ಇನ್ನೂ ಸವಾಲಾಗಿಯೇ ಇದೆ ಎಂಬುದನ್ನು ಇಲ್ಲಿನ ಕೆಲವು ಲೇಖನಗಳಿಂದ ಅರಿಯಬಹುದಾಗಿದೆ. ಕಂಬಾರರು ಬರೆದಿರುವ ಇಲ್ಲಿನ 'ನನ್ನ ಬರವಣಿಗೆ' ಎಂಬ ಲೇಖನದಲ್ಲಿ ತಮ್ಮ ಕಾವ್ಯಜಗತ್ತನ್ನು ಕುರಿತು ಹೀಗೆ ವಿವರಿಸಿದ್ದಾರೆ:

"ನಾನು ನನ್ನ ಸುತ್ತ ನೋಡುತ್ತೇನೆ, ನನ್ನ ಒಳಗೆ ನೋಡುತ್ತೇನೆ, ಎರಡೂ ಒಂದೇ ಪ್ರಕ್ರಿಯೆಯ ಎರಡು ಭಾಗಗಳು. ನಾನು ಯಾವುದನ್ನು ಕಾಣುವುದೂ ಸಮೃದ್ಧಿಯ, ಅತಿಶಯದ ರೂಪದಲ್ಲಿ-ಹುಚ್ಚೆಬ್ಬಿಸುವ ಹರ್ಷ, ಕರಾಳಕ್ರೌರ್ಯ, ಆಳ ನೋವು, ಗಾಢ ಬೆಳವಣಿಗೆ, ಕಟ್ಟುಕಿತ್ತಕಾಮ, ಏಕಾಂಗಿತನ, ಐತಿಹ್ಯಾತ್ಮಕ ರಚನೆಗಳು, ಐತಿಹ್ಯಾತ್ಮಕ ಪಾತ್ರಗಳ ಅದ್ಭುತ ಹೋರಾಟಗಳು- ಇವೆಲ್ಲವನ್ನು ನಾನು ಸಂಭ್ರಮದಿಂದ ಆಚರಿಸುತ್ತೇನೆ. ನನ್ನ ಮಟ್ಟಿಗೆ ಸಂಭ್ರಮಾಚರಣೆಯಲ್ಲಿ ಏಕಕಾಲಕ್ಕೆ ವೈಯಕ್ತಿಕವೂ ಸಾಮುದಾಯಕವೂ ಆದ ಸಂಗೀತ ಗುಣ ಇದೆ. ಅದರ ಲಯ ಏಕಕಾಲಕ್ಕೆ ಅದಮ್ಯವಾದದ್ದು. ಹಾಗೂ ಸಮಕಾಲೀನವಾದದ್ದು, ವ್ಯಷ್ಟಿ ಮತ್ತು ಸಮಷ್ಟಿಗಳ ಬೆಸುಗೆಯಾದದ್ದು" ಎನ್ನುವ ಮಾತುಗಳು ಕಂಬಾರರ ಕಾವ್ಯವನ್ನು ಅರ್ಥಮಾಡಿಕೊಳ್ಳುವುದಕ್ಕೆ ತುಂಬಾ ಅರ್ಥಗರ್ಭಿತವಾಗಿ ಅನುವಾಗುತ್ತವೆ. ಈ ಕೃತಿಯನ್ನು ಓದಿದರೆ ಕಂಬಾರರ ಕಾವ್ಯದ ಬಗ್ಗೆ ಒಂದು ಅಖಂಡ ನೋಟ ಸಿಗುತ್ತದೆ. ಈ ವರ್ಷ ಪ್ರಕಟವಾಗಿರುವ ಒಂದು ಉತ್ತಮ ಕೃತಿ ಇದು.

ಭಾರತೀಯ ಸಂಸ್ಕೃತಿ, ಇತಿಹಾಸ, ರಾಜಕಾರಣ, ಸಾಹಿತ್ಯ ಕುರಿತು ಇದುವರೆಗೆ ಪ್ರಸಿದ್ಧ ಸ್ತ್ರೀವಾದಿ ವಿಮರ್ಶಕರು ವಿವೇಚಿಸಿರುವ ಲೇಖನಗಳ ಸಂಪಾದಿತ ಕೃತಿ, 'ಸ್ತ್ರೀವಾದಿ ಸಾಹಿತ್ಯ.' ಈಗಾಗಲೇ ಇಂಗ್ಲೀಸಂನಲ್ಲಿ ಮತ್ತು ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯ ಕುರಿತು ಬರೆದು ಪ್ರಕಟವಾಗಿರುವ ಕೆಲವು ಮುಖ್ಯ ಲೇಖನಗಳನ್ನು ಇಲ್ಲಿ ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನ ಅವರು ಅಚ್ಚುಕಟ್ಟಾಗಿ ಸಂಪಾದಿಸಿದ್ದಾರೆ. ಇಂಗ್ಲೀಶಿನಲ್ಲಿರುವ ಪಾರ್ಥಾ ಚಟರ್ಜಿ, ಸೂಸಿಥಾರು, ಪೀರ್ ಭಾರತ್ ತಲ್‌ವಾರ್, ಶಾಂತಾ ಗೋಖಲೆ ಮುಂತಾದವರ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ. ಕನ್ನಡದಲ್ಲಿಯೇ ಬರೆದ ಬಿ.ಎಸ್. ಸುಮಿತ್ರಾಬಾಯಿ, ವಿಜಯಾದಬ್ಬೆ, ಬಿ.ಎಸ್. ವೆಂಕಟಲಕ್ಷ್ಮಿ ಅವರ ಮುಖ್ಯ ಲೇಖನಗಳಿವೆ. ಇಂಗ್ಲೀಶ್ ಲೇಖಕರ ಲೇಖನಗಳು ಕನ್ನಡೇತರ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆಗಳನ್ನು ಹುಡುಕಿ ವಿವರಿಸಿದ್ದರೆ, ಕನ್ನಡದ ಲೇಖಕಿಯರು ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆಗಳನ್ನು ಹುಡುಕುವಲ್ಲಿ ಪ್ರವೃತ್ತವಾಗಿವೆ. ಇದರ ಸಂಪಾದಕಿಯರು ಹೇಳುವಂತೆ, "ನಾವು ಸ್ತ್ರೀವಾದಿ ಎಂದು ಕರೆಯಬಹುದಾದ ದೃಷ್ಟಿಕೋನವೊಂದರಿಂದ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ರಾಜಕೀಯ ಮತ್ತಿತರ ವಿಷಯಗಳ ಬಗ್ಗೆ ಕೇಳಿಬರುತ್ತಿರುವ ಬೇರೆ ಬೇರೆ ಧ್ವನಿಗಳಿಗೆ ಜಾಗ ಮಾಡಿಕೊಡುವುದು, ಈ ಸಂಗ್ರಹವನ್ನು ಸಂಪಾದಿಸುವಲ್ಲಿ ನಮ್ಮ ಉದ್ದೇಶವಾಗಿದೆ. ಮಹಿಳೆಯರು ಮತ್ತು ಅವರ ಬದುಕಿನ ಬಗ್ಗೆ ಮಾತ್ರ ಮಾತನಾಡುವ ಬದಲು, ಸಾಮಾಜಿಕ ಸಂಬಂಧಗಳೇ ಹೇಗೆ ಲಿಂಗಭೇದದಿಂದ ರೂಪಿತಗೊಂಡಿವೆ ಎಂದು ತೋರಿಸಿಕೊಡುವುದು ಈ ಸಂಕಲನದ ಕೇಂದ್ರ ಕಾಳಜಿಯಾಗಿದೆ." ವಸಾಹತುಶಾಹಿ ಮತ್ತು ರಾಷ್ಟ್ರೀಯತೆ ಅನುಭವದ ಹಿನ್ನೆಲೆಯಲ್ಲಿ ಸ್ತ್ರೀವಾದಿ ನೆಲೆಗಳನ್ನು ಹುಡುಕುವುದನ್ನು ಇಲ್ಲಿನ ಲೇಖನಗಳಲ್ಲಿ ನಿಚ್ಚಳವಾಗಿ ಕಾಣಬಹುದು. ಈ ಅನುಭವವನ್ನು ಆಧರಿಸಿ ಸ್ತ್ರೀಯ ಬದುಕು, ಗ್ರಹಿಕೆ, ಸಂವೇದನೆಗಳನ್ನು ನಿರ್ದಿಷ್ಟ ಬಗೆಯಲ್ಲಿ ರೂಪಿಸುವಲ್ಲಿ ಭಾಗಿಯಾಗಿರುವ ಕನ್ನಡ ಹಾಗೂ ಕನ್ನಡೇತರ ಸಾಹಿತ್ಯ ಕೃತಿಗಳನ್ನೂ ಸಾಮಾಜಿಕ ಸಂದರ್ಭಗಳನ್ನೂ ಇಲ್ಲಿನ ಪ್ರತಿಯೊಂದು ಲೇಖನಗಳಲ್ಲಿಯೂ ಸಮರ್ಥವಾಗಿ ವ್ಯಾಖ್ಯಾನಿಸಲಾಗಿದೆ. ಸಂಪಾದಕರು ಈ ಕೃತಿಗೆ ಬರೆದಿರುವ ದೀರ್ಘವಾದ ಆಲೋಚನಾಪರವಾದ ಪ್ರಸ್ತಾವನೆ ಮತ್ತು ಆಕರ ಗ್ರಂಥಗಳ ದೀರ್ಘಪಟ್ಟಿ ತುಂಬಾ ಉಪಯುಕ್ತವಾಗಿದೆ. ಸ್ತ್ರೀವಾದಿ ಸಾಹಿತ್ಯ ಕುರಿತು ಅಧ್ಯಯನ ಮಾಡುವವರಿಗೆ ಇದೊಂದು ಮುಖ್ಯ ಆಧಾರ ಗ್ರಂಥವಾಗಿದೆ.

ಜಿ. ಎಸ್. ಆಮೂರ ಅವರ "ಕನ್ನಡ ಕಥನ ಸಾಹಿತ್ಯ ಕಾದಂಬರಿ" ಯು ಈ ವರ್ಷದ ಪ್ರಮುಖ ಪ್ರಕಟಣೆಯಾಗಿದೆ. ಜಿ. ಎಸ್. ಆಮೂರರು ಈಗಾಗಲೇ 'ಅರ್ಥಲೋಕ'. 'ಕೃತಿಪರೀಕ್ಷೆ', 'ಸಮಕಾಲಿನ ಕಥೆ- ಕಾದಂಬರಿ', 'ಕನ್ನಡ ಕಾದಂಬರಿಯ ಬೆಳವಣಿಗೆ', 'ವ್ಯವಸಾಯ'- ಈ ಬಗೆಯ ಕೃತಿಗಳಲ್ಲಿ ಕಥೆ- ಕಾದಂಬರಿಗಳ ಬಗೆಗೆ ವಿಶೇಷವಾಗಿ ಬರೆದಿದ್ದಾರೆ. ಪ್ರಸ್ತುತ ಬೃಹತ್ ಗ್ರಂಥವು ಅದನ್ನೇ ಮುಂದುವರೆಸುತ್ತದೆ. ಇದನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ಆ ಮೂರನೇ 'ಓದುಗರನ್ನು ಕುರಿತು' ಎಂಬಲ್ಲಿ ಹೇಳಿರುವ ಮಾತುಗಳು ಹೀಗಿವೆ: "ಕನ್ನಡ ಕಥನ ಸಾಹಿತ್ಯ: ಕಾದಂಬರಿ, ಎಂಬ

ಹೆಸರನ್ನು ಹೊತ್ತರೂ ನನ್ನ ಪುಸ್ತಕ ಕನ್ನಡ ಕಾದಂಬರಿಯ ಸಮಗ್ರ ಇತಿಹಾಸವಲ್ಲ. ನನ್ನ ಉದ್ದೇಶ ಕನ್ನಡ ಕಾದಂಬರಿಯ ಕೇಂದ್ರ ಪರಂಪರೆಯ ವಿವರಣೆಗೆ ಮಾತ್ರ ಸೀಮಿತವಾಗಿದೆ. ನನ್ನ ಅಭಿಪ್ರಾಯದಲ್ಲಿ ಈ ಪರಂಪರೆ ವಾಸ್ತವಮಾರ್ಗದ ಪರಂಪರೆ. ಗುಳವಾಡಿ ವೆಂಕಟರಾಯರಿಂದ ದೇವನೂರರವರೆಗೆ ಹಬ್ಬಿದ ಈ ಪರಂಪರೆಯ ಸ್ವರೂಪ, ಸಾಧನೆ, ಮಿತಿಗಳನ್ನು ಪ್ರಮುಖ ಕಾದಂಬರಿಕಾರರ ಕೃತಿಗಳ ಮೂಲಕ ಗುರುತಿಸುವ ಪ್ರಯತ್ನ ಇಲ್ಲಿದೆ.''

ಒಟ್ಟು ಗ್ರಂಥವು ಐದು ಭಾಗಗಳನ್ನು ಹೊತ್ತಿದೆ. ಮೊದಲನೆಯ ಭಾಗವು 'ಪ್ರಸ್ತಾವನೆ' ಎಂಬ ಶೀರ್ಷಿಕೆಯಲ್ಲಿ ಭಾರತೀಯ ಸಂದರ್ಭದಲ್ಲಿ ಕನ್ನಡ ಕಾದಂಬರಿ ಮತ್ತು ಕಾದಂಬರಿಯ ಸ್ವರೂಪ; ಒಂದು ಸಾರ್ವತ್ರಿಕ ಸಂವಾದಗಳೆಂಬ ಎರಡು ಬಿಡಿ ವಿಷಯಗಳಿವೆ. ಇವು ಗ್ರಂಥಕ್ಕೆ ಒಳ್ಳೆಯ ಪ್ರವೇಶವನ್ನು ಒದಗಿಸುತ್ತವೆ. ಭಾಗ ಎರಡನ್ನು 'ಮೊದಲಹೆಜ್ಜೆಗಳು' ಎಂಬ ಪ್ರಧಾನ ಶೀರ್ಷಿಕೆಯ ಅಡಿಯಲ್ಲಿ 'ಇಂದಿರಾಬಾಯಿ', 'ಇಂದಿರಾ' ಮತ್ತು 'ಮಾಡಿದುಣ್ಣೋ ಮಹರಾಯ' ಕಾದಂಬರಿಗಳ ಚರ್ಚೆ ಇದೆ. ಇವುಗಳನ್ನು ವಾಸ್ತವಮಾರ್ಗ, ವಾಸ್ತವದ ಆಭಾಸ ಮತ್ತು ಆದರ್ಶ- ವಾಸ್ತವಗಳು ಸಂಯೋಗ ಎಂಬ ತಿಳಿವಿನ ನೆಲೆಯಲ್ಲಿ ಚರ್ಚೆ ನಡೆಸಿದ್ದಾರೆ. ಭಾಗ ಮೂರು 'ನವೋದಯ, ಪ್ರಗತಿಶೀಲ' ಎಂಬ ಪ್ರಧಾನ ಶೀರ್ಷಿಕೆಯ ಅಡಿಯಲ್ಲಿ ಮಾಸ್ತಿ, ಕುವೆಂಪು, ಕಾರಂತ, ಅನಕೃ, .ಗೋಕಾಕ, ಶ್ರೀರಂಗ, ಚದುರಂಗ, ನಿರಂಜನ, ಕೆಲವು ಮಹಿಳೆಯರ ಕಾದಂಬರಿಗಳನ್ನು ಕುರಿತು ವಿಶ್ಲೇಷಣೆ ಮತ್ತು ತೌಲನಿಕ ಚರ್ಚೆಗೆ ಒಡ್ಡಿದ್ದಾರೆ. ಈ ಭಾಗದಲ್ಲಿರುವ ವಿಷಯ ಶೀರ್ಷಿಕೆಗಳು ಆಮೂರರು ಕಾದಂಬರಿ ನೆಲೆಗಳನ್ನು ನೋಡುವ ಪರಿಯನ್ನು ನಿರ್ಧರಿಸುತ್ತವೆ. ಭಾಗ ನಾಲ್ಕು 'ನವ್ಯ ನವೋತ್ತರ' ಎಂಬ ಪ್ರಧಾನ ಶೀರ್ಷಿಕೆಯಲ್ಲಿ ರಾವ ಬಹದ್ದೂರ್, ಮೊಕಾಶಿ, ಅನಂತಮೂರ್ತಿ, ತೇಜಸ್ವಿ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಭೈರಪ್ಪ, ದೇವನೂರು ಮಹಾದೇವ ಮತ್ತು ಕೆಲವು ಮಹಿಳೆಯರ ಕಾದಂಬರಿಗಳ ವಿಸ್ತಾರದ ಚರ್ಚೆ ಇದೆ. ಈ ಎಲ್ಲಾ ವಿಷಯಗಳಿಗೆ ಕೊಟ್ಟಿರುವ ಶೀರ್ಷಿಕೆಗಳು ಈಗಾಗಲೇ ಕನ್ನಡ ಕಾದಂಬರಿಯಲ್ಲಿ ಚರ್ಚಿತವಾಗಲು ಉಪಯೋಗಿಸಿರುವ ಪರಿಕಲ್ಪನೆಗಳೇ. ಅವುಗಳನ್ನು ಕುರಿತು ಇಲ್ಲಿ ಚರ್ಚೆಗೆ ಹೋಗುವುದಿಲ್ಲ. ಆದರೆ, ಅಮೂರರು ಇಲ್ಲಿಯ ಲೇಖನಗಳನ್ನು ಪುಸ್ತಕದ ಹೊರಗಡೆ ಬಿಡಿಯಾಗಿ ಇಟ್ಟು ನೋಡುವ ಅವಕಾಶವನ್ನು ಕೊಟ್ಟಿದ್ದಾರೆ. ಒಟ್ಟು ಚರ್ಚಿತ ನೆಲೆಗೆ ಇಲ್ಲಿಯ ಲೇಖನಗಳು ಪೂರಕವಾಗುವಂತೆ ತೋರಿದರೂ, ಸಂಪೂರ್ಣವಾಗಿ ಸಮ್ಮಿತ ನೆಲೆಗೆ ಬರುವುದಿಲ್ಲ. ಕಾರಂತರ ಬಗೆಗೂ ಕುವೆಂಪು ಬಗೆಗೂ ಬರೆದ ಇಲ್ಲಿನ ಲೇಖನಗಳನ್ನು ಪ್ರತ್ಯೇಕಗೊಳಿಸಿ ನೋಡಬಹುದು. ಇದು ಹೆಚ್ಚು ಇಲ್ಲಿ ಅನ್ವಯವಾಗುತ್ತದೆ ಹೊರತು ಪುಸ್ತಕದ ಸಮಗ್ರ ಪರಿಕಲ್ಪನೆಯ ಚೌಕಟ್ಟಿನಲ್ಲಿ ಮಣಿಯುವುದಿಲ್ಲ. ಈ ಬಗೆಯ ತೊಂದರೆ ಈ ಮಹತ್ತ್ವದ ಗ್ರಂಥಕ್ಕಿದೆ. ಇದನ್ನು ಮರೆತು ಪುಸ್ತಕವನ್ನು ನೋಡಲು, ಓದಲು, ಅಧ್ಯಯನಿಸಲು ಅವಕಾಶಗಳಿರುವುದನ್ನು ನಾವು ಮರೆಯುವಂತಿಲ್ಲ. ಪುಸ್ತಕದ ಐದನೆಯ ಭಾಗಕ್ಕೆ ಕೊಟ್ಟಿರುವ 'ಮುಕ್ತಾಯಕ್ಕೆ ಮೊದಲು' ಎಂಬ ಪ್ರಧಾನ ಶೀರ್ಷಿಕೆಯು ಉಚಿತವಾಗಿದೆ. ಪುಸ್ತಕದ ಪ್ರಾರಂಭದ ಪ್ರಸ್ತಾವನೆ ಮತ್ತು

ಮುಕ್ತಾಯರ ಭಾಗಗಳಲ್ಲಿ ಆಮೂರರು ಆಡಿರುವ ಮಾತುಗಳು, ಚಿಂತಿಸಿರುವ ನೆಲೆಗಳು ಕಾದಂಬರಿ ಸಾಹಿತ್ಯದ ಉಪಯುಕ್ತವಾಗಿದೆ. ಆಮೂರರು ಕಾದಂಬರಿ ಸಾಹಿತ್ಯದ ಬಗೆಗೆ ಚಿಂತಿಸಿರುವ ಮೂಲಕ ಮಾತುಗಳು ಮತ್ತು ನಡೆಸಿರುವ ವಾಗ್ವಾದಗಳು, ಮಹತ್ತ್ವದವು ಎಂಬ ಮಾತಿನಲ್ಲಿ ಎರಡು ಮಾತಿಲ್ಲ.

ಡಾ. ಜಿ. ಎಸ್. ಶಿವರುದ್ರಪ್ಪನವರ 'ಸಮಗ್ರ ಗದ್ಯ ಸಂಪುಟ ೨', ಈಗಾಗಲೇ ಪ್ರಕಟವಾಗಿರುವ ಮೊದಲ ಸಂಪುಟದ ಮುಂದುವರಿದ ಮತ್ತು ಬರಲಿರುವ ಮೂರನೇ ಸಂಪುಟದ ಯೋಜನೆಯ ಕೃತಿಯಾಗಿದೆ. ಡಾ. ಜಿ. ಎಸ್. ಶಿವರುದ್ರಪ್ಪನವರು ಕನ್ನಡ ಕಾವ್ಯ ಮಿಮಾಂಸೆ ಮತ್ತು ವಿಮರ್ಶಾ ಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿದವರು, ಈಗಾಗಲೇ ಹಿಂದೆ ಅವರ 'ಗತಿಬಿಂಬ', 'ನವೋದಯ', 'ಪ್ರತಿಕ್ರಿಯೆ ಬೆಡಗು'- ಈ ಕೃತಿಗಳಲ್ಲಿ ಸೇರಿದ್ದ ಲೇಖನಗಳನ್ನು ಈ ಸಂಪುಟದ ನಿರ್ದಿಷ್ಟ ವಸ್ತು ಮತ್ತು ಧೋರಣೆಗೆ ಅನುಗುಣವಾಗಿ ಆಯ್ದು ಸೇರಿಸಲಾಗಿದೆ. ಕಳೆದ ಮೂರುವರೆ ದಶಕಗಳ ಅವಧಿಯಲ್ಲಿ ಕಾವ್ಯ, ಸಾಹಿತ್ಯ, ಭಾಷೆ, ಸಂಸ್ಕೃತಿ, ಸಂಸ್ಕೃತಿ, ಸಮಾಜದ ಬಗ್ಗೆ ಚಿಂತಿಸಿದ ಹಾಗೂ ಹೊಸಗನ್ನಡ ಸಾಹಿತ್ಯ ಚಳುವಳಿಗಳನ್ನು, ಲೇಖಕರ ಕೊಡುಗೆಗಳನ್ನು ಪರಿಶೀಲಿನೆ ಮಾಡಿದ ಲೇಖನಗಳು ಇವು. ಬಹುತೇಕವಾಗಿ ನವೋದಯದಿಂದ ಹಿಡಿದು ದಲಿತ ಸಾಹಿತ್ಯದವರೆಗೆ ಬರೆದ ಲೇಖನಗಳು ಈ ಸಂಪುಟದಲ್ಲಿವೆ. ಈ ಲೇಖನಗಳು ಒಂದು ನಿರ್ದಿಷ್ಟವಾದ ಚಾರಿತ್ರಿಕ ಸಂದರ್ಭದಲ್ಲಿ ರಚನೆಯಾಗಿರುವುದರಿಂದ, ಬದಲಾದ ಸಾಹಿತ್ಯ ವಿಮರ್ಶೆಯ ಸಂದರ್ಭಗಳಲ್ಲಿ ಇವನ್ನು ಮರುಚಿಂತನೆಗೆ ಒಳಗು ಮಾಡಬಹುದಾಗಿದೆ. ಸಮಕಾಲೀನ ಸಾಹಿತ್ಯ ಮತ್ತು ಸಾಹಿತ್ಯ ತತ್ವವನ್ನು ಗತಿಬಿಂಬಿಸುವ ಈ ಸಂಪುಟ ಸಾಹಿತ್ಯಾಧ್ಯಯನಕಾರರರಿಗೆ ತುಂಬಾ ಉಪಯುಕ್ತವಾಗಿದೆ.

ಡಾ. ರಾಮಚಂದ್ರ ದೇವ ಅವರ 'ಮುಚ್ಚು ಮತ್ತು ಇತರ ಲೇಖನಗಳು' ಈ ವರ್ಷದ ಅಪರೂಪದ ಸಾಂಸ್ಕೃತಿಕ ಮಹತ್ವದ ಗ್ರಂಥವಾಗಿದೆ. ಭಾರತ, ದೇವರು, ಕ್ರಾಂತಿ, ಅಸ್ತಿತ್ವ ಮುಂತಾದ ವಿಷಯಗಳ ಕುರಿತು ತಾತ್ವಿಕ ಜಿಜ್ಞಾಸೆ ನಡೆಸಿರುವ ಲೇಖನಗಳು ಇಲ್ಲಿವೆ. ಇಲ್ಲಿಯ ಲೇಖನಗಳ ಒಂದು ಬಹುಮುಖ್ಯವಾದ ಗುಣವೆಂದರೆ, ಸಂಯಮ ಮತ್ತು ಸೂಕ್ಷ್ಮತೆ. ಪ್ರತಿಯೊಂದು ಸಮಸ್ಯೆಯನ್ನೂ ನಿರ್ಲಿಪ್ತವಾಗಿ ಬಿಚ್ಚಿಡುತ್ತಾ, ಸಹನೆಯಿಂದ ವಿವರಿಸುತ್ತಾ ಹೋಗುವ ಇವರ ಶೈಲಿ ಅಪ್ತವಾದುದು, ಈ ಸಂಕಲನದಲ್ಲಿರುವ ಬಹುತೇಕ ಲೇಖನಗಳು ಎಪ್ಪತ್ತರ ದಶಕದಲ್ಲಿ ಬರೆದವುಗಳಾಗಿವೆ, ಆದರೆ ಕಾರಂತ ಮತ್ತು ಅಡಿಗರ ಬಗೆಗಿನ ಲೇಖನಗಳು ಇವತ್ತಿಗೂ ಪ್ರಸ್ತುತವಾಗಿವೆ. ಪರಂಪರೆ ಮತ್ತು ವಸಾಹತುಶಾಹಿ ಪರಿಕಲ್ಪನೆಯ ಬಗ್ಗೆ ಲೇಖಕರು ಇಲ್ಲಿನ ಬಹುಪಾಲು ಲೇಖನಗಳಲ್ಲಿ ತಮ್ಮ ಸ್ವತಂತ್ರವಾದ ಚಿಂತನೆಯನ್ನು ಹರಿಸಿದ್ದಾರೆ. ಬುದ್ಧ, ಬಸವ, ಅಲ್ಲಮ, ಗಾಂಧಿ ಅವರಲ್ಲಿ ಹಾಗೂ ಕನ್ನಡದ ಹಳಗನ್ನಡ ಸಾಹಿತ್ಯದ ಪುರಾಣಗಳಲ್ಲಿ ಭಾರತೀಯ ಸಂಸ್ಕೃತಿಯ ಬೇರುಗಳನ್ನು ಹುಡುಕಲು ತೊಡಗುತ್ತಾರೆ. ಹಳೆಯ ಕಥೆಗಳಲ್ಲಿ ಹೊಸ ಪರಂಪರೆಯನ್ನು, ಸಂಸ್ಕೃತಿಯನ್ನು ವ್ಯಾಖ್ಯಾನಿಸಲು ಯತ್ನಿಸುತ್ತಾರೆ. ಪ್ರತಿಯೊಂದು ಲೇಖನದಲ್ಲಿಯೂ ರಾಮಚಂದ್ರ ದೇವರ ಬೌದ್ಧಿಕ ಚಿಂತನೆ ಎದ್ದು

ಕಾಣುತ್ತದೆ. ವೈಚಾರಿಕವಾಗಿ ಆಲೋಚಿಸುವ ಈ ಕೃತಿ ಪರ್ಯಾಯ ಸಂಸ್ಕೃತಿಗೆ ಹಿಡಿದ ಕನ್ನಡಿಯಂತಿದೆ.

ಈ ವರ್ಷ ಪ್ರಕಟವಾಗಿರುವ ಎಂ. ಜಿ. ಕೃಷ್ಣಮೂರ್ತಿ ಅವರ 'ಕೃತಿ ಸಂಸ್ಕೃತಿ' ಓಂಪೆ ೧೯೭೦ ರಲ್ಲಿ ಪ್ರಕಟವಾದ 'ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು' ಕೃತಿಯ ಮರು ಮುದ್ರಣವಾಗಿದೆ. ಆದರೆ ಎಂ. ಜಿ. ಕೆ. ಅವರು ೧೯೭೦ ರ ನಂತರದಲ್ಲಿ ಬರೆದ 'ದಾಟು', 'ಕನ್ನಡದಲ್ಲಿ ಸಾಹಿತ್ಯ ವಿಮರ್ಶೆಯ ಉಗಮ ಮತ್ತು ಬೆಳವಣಿಗೆ', 'ಕಲಾವಿದ ಮತ್ತು ಸಮಾಜಗಳ ನಡುವಿನ ಬದಲಾಗುತ್ತಿರುವ ಸಂಬಂಧ' ಎಂಬ ಮೂರು ಲೇಖನಗಳನ್ನು ಇಲ್ಲಿ ಸೇರಿಸಲಾಗಿದೆ. ದಿ. ಎಂ. ಜಿ. ಕೆ ಅವರ ವಿಮರ್ಶೆಗೆ ಒಂದು ವಿಶಿಷ್ಟವಾದ ಸಾಂಸ್ಕೃತಿಕವಾದ ಸ್ಥಾನ ಇರುವಂತೆಯೇ ಸಮಕಾಲೀನವಾದ ವೈಶಿಷ್ಟ್ಯವೂ ಇದೆ. ಅರವತ್ತರ ದಶಕದಲ್ಲಿ ಅವರು ಚರ್ಚೆಗೆ ಗ್ರಾಸವಾಗಿದ್ದಾರೆ. 'ಕೃತಿ ಸಂಸ್ಕೃತಿ' ವಿಶ್ಲೇಷಣೆಗೆ ತೊಡಗುವ ಎಂಜಿಕೆ ಅವರು ಸಮಕಾಲೀನ ಸೃಜನಶೀಲತೆಯ ಬೆಳವಣಿಗೆಗೆ ಯಾವತ್ತೂ ಅಗತ್ಯವಾಗಿ ಉಳಿಯವಂತಹದ್ದನ್ನು ನೀಡಿದ್ದಾರೆ.

ಡಾ. ಸುಮತೀಂದ್ರ ನಾಡಿಗರ 'ವಿಮರ್ಶೆಯ ದಾರಿಯಲ್ಲಿ', ಡಾ. ಬಸವರಾಜ ಸಬರದರ 'ಸಾಹಿತ್ಯ ಸಂಗಾತಿ' ಎಂಬ ವಿಮರ್ಶಾ ಕೃತಿಗಳೂ ಈ ವರ್ಷದಲ್ಲಿ ಪ್ರಕಟವಾಗಿವೆ. ಆಧುನಿಕ ಕನ್ನಡ ಸಾಹಿತ್ಯದ ಕೆಲವು ಪ್ರಕಾರಗಳನ್ನು, ಕೆಲವು ಲೇಖಕರನ್ನು, ಕೆಲವು ಕೃತಿಗಳನ್ನು ಕುರಿತ ಬರೆದ ಲೇಖನಗಳನ್ನು ನಾಡಿಗರ ಕೃತಿಯಲ್ಲಿ ಕಾಣಬಹುದು. ಬಂಡಾಯದ ನೆಲೆಯಲ್ಲಿ ನಿಂತು ಬಂಡಾಯದಾಚೆಗಿನ ಕೃತಿಗಳಾದ 'ಮುಕ್ತಿ', 'ಬಂಡಾಯ' ದಂತಹ ಕಾದಂಬರಿಗಳನ್ನು ಅರ್ಥಪೂರ್ಣವಾಗಿ ವ್ಯಾಖ್ಯಾನಿಸುವುದನ್ನು ಸಬರದ ಕೃತಿಯಲ್ಲಿ ನೋಡಬಹುದು. ಜನ್ನ, ಸರ್ವಜ್ಞ, ಮಾಸ್ತಿಯವರ ಕಥೆಗಳು, ಇನಾಂದಾರರ ಕಾದಂಬರಿಗಳು- ಕುರಿತು ಬರೆದ ಕೆಲವು ಕಿರು ವಿಮರ್ಶಾಕೃತಿಗಳೂ ಈ ವರ್ಷ ಬಂದಿವೆ. ದು. ನಿಂ. ಬೆಳಗಲಿ ಅವರ 'ದೇವದಾಸಿ' ಕಾದಂಬರಿಯನ್ನು ಕುರಿತು ವಿವಿಧ ವಿಮರ್ಶಕರು ವಿವಿಧ ನೆಲೆಗಳಿಂದ ವ್ಯಾಖ್ಯಾನಿಸಿರುವ ಹನ್ನೆರಡು ಲೇಖನಗಳ ಸಂಕಲನ ಸಹ ಈ ವರ್ಷ ಪ್ರಕಟವಾಗಿದೆ.

ಡಾ. ಶಿವರಾಮ ಕಾರಂತರಿಗೆ ೯೦ ನೇ ವರ್ಷ ತುಂಬಿದ ನೆನಪಿನ ಸಂದರ್ಭದಲ್ಲಿ ಪ್ರೊ. ಟಿ. ಪಿ. ಅಶೋಕ ಅವರು ಸಂಪಾದಿಸಿರುವ ಕೃತಿ 'ಕಾರಂತ ಮಂಥನ'; ಕನ್ನಡದ ಬಹುಮುಖ್ಯ ಪ್ರತಿಭೆ ಕಾರಂತರ ವ್ಯಕ್ತಿತ್ವ ಹಾಗೂ ಬರಹಗಳನ್ನು ಕುರಿತು ವಿವಿಧ ವಿದ್ವಾಂಸರು ಕಳೆದ ಕಾಲು ಶತಮಾನದಲ್ಲಿ ಬರೆದ ಬರಹಗಳನ್ನು ಇಲ್ಲಿ ಕೂಡಿ ಹಾಕಲಾಗಿದೆ. ಕಾರಂತರ ವ್ಯಕ್ತಿಚಿತ್ರ, ಸಂದರ್ಶನ, ವಿಮರ್ಶೆ, ಸಂಶೋಧನೆಗಳಿಂದ ಕೂಡಿದ ಲೇಖನಗಳು ಇಲ್ಲಿವೆ. ಕಾರಂತರ ವ್ಯಕ್ತಿಚಿತ್ರ ಕುರಿತು ಡಾ. ಹಾ. ಮಾ. ನಾಯಕ, ಪ್ರೊ. ಕೀರ್ತಿನಾಥ ಕುರ್ತಕೋಟಿ, ಪ್ರೊ. ಎಲ್. ಎಸ್. ಶೇಷಗಿರಿರಾವ್, ಪ್ರೊ. ಗೋಪಾಲಕೃಷ್ಣ ಅಡಿಗ, ಡಾ. ಎಸ್. ಎಲ್. ಭೈರಪ್ಪ ಮುಂತಾದ ಲೇಖಕರು ಬರೆದಿದ್ದಾರೆ. ಕಾರಂತರ ಕಾದಂಬರಿಗಳನ್ನು ಕುರಿತು ಡಾ. ಶಂಕರ ಮೊಕಾಶಿ ಪುಣೇಕರ, ಪ್ರೊ. ಜಿ. ಎಚ್. ನಾಯಕ, ಡಾ. ಡಿ. ಆರ್. ನಾಗರಾಜ, ಪ್ರೊ. ಟಿ. ಪಿ. ಅಶೋಕ,

ಡಾ. ಜಿ. ಎಸ್. ಶಿವರುದ್ರಪ್ಪ, ಡಾ. ಕೆ. ವಿ. ನಾರಾಯಣ, ಪ್ರೊ. ಕಿ. ರಂ. ನಾಗರಾಜ, ಡಾ. ಶಾಂತಿನಾಥ ದೇಸಾಯಿ ಅವರು ಬರೆದ ಲೇಖನಗಳಿವೆ. ಕಾರಂತರನ್ನು ಡಾ. ಯು. ಆರ್. ಅನಂತಮೂರ್ತಿ ಮತ್ತು ಶ್ರೀ ಜಿ. ರಾಜಶೇಖರ ಅವರು ಸಂದರ್ಶಿಸಿರುವ ಲೇಖನಗಳಿವೆ. ಕಾರಂತರ ವ್ಯಕ್ತಿತ್ವ ಹಾಗೂ ಅವರ ಕಾದಂಬರಿಗಳ ವೈಶಿಷ್ಟ್ಯವನ್ನು ಈ ಬರಹಗಳು ಅಧಿಕೃತವಾಗಿ ಕಟ್ಟಿಕೊಡುತ್ತವೆ. ಕಾರಂತರನ್ನು ಕುರಿತು ಅಧ್ಯಯನ ಮಾಡುವವರಿಗೆ ಇದೊಂದು ಉತ್ತಮ ಸಹಾಯಕ ಕೃತಿಯಾಗಿದೆ.

ವಚನಕಾರರ ವಿವಿಧ ಪರಿಕಲ್ಪನೆಗಳನ್ನು ಆಯ್ದುಕೊಂಡು ಕನ್ನಡದ ಪರಿಣತ ವಿದ್ವಾಂಸರು ವಿವೇಚಿಸಿರುವ ಲೇಖನಗಳ ಸಂಕಲನ, 'ವಚನಕಾರರ ಪ್ರಮುಖ ಪರಿಕಲ್ಪನೆಗಳು.' ನಿರ್ದಿಷ್ಟ ಸಂದರ್ಭವೊಂದರಲ್ಲಿ ವಿವಿಧ ವಿದ್ವಾಂಸರು ನೀಡಿದ ಉಪನ್ಯಾಸಗಳ ಸಂಪಾದಿತ ಕೃತಿ ಇದು. ಇದನ್ನು ಶ್ರೀ ಷಣ್ಮುಖಯ್ಯ ಅಕ್ಕೂರ ಮಠ ಅವರು ಸೊಗಸಾಗಿ ಸಂಪಾದಿಸಿಕೊಟ್ಟಿದ್ದಾರೆ. ವಚನಾಕಾರರ ಸ್ತ್ರೀಕಲ್ಪನೆ, ಅನುಭಾವದ ಪರಿಕಲ್ಪನೆ, ಕಾಯಕ ದಾಸೋಹದ ಪರಿಕಲ್ಪನೆ, ಅರಿವು, ಶರಣ ಮುಂತಾದ ಪರಿಕಲ್ಪನೆಗಳ ಬಗ್ಗೆ ಇಲ್ಲಿಯ ಲೇಖನಗಳು ಮಂಥನ ನಡೆಸಿವೆ. ಡಾ. ಪಿ. ವಿ. ನಾರಾಯಣ, ಡಾ. ಎಸ್. ವಿದ್ಯಾಶಂಕರ, ಡಾ. ಸಾ. ಶಿ. ಮರುಳಯ್ಯ, ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ ಇವರು ವಚನಕಾರರ ವಿವಿಧ ಪರಿಕಲ್ಪನೆಗಳನ್ನು ವಿವಿಧ ನಿಟ್ಟಿನಿಂದ ಸಮರ್ಥವಾಗಿ ವಿಶ್ಲೇಷಿಸಿದ್ದಾರೆ. ಡಾ. ಜಿ. ಎಸ್. ಶಿವರುದ್ರಪ್ಪನವರು 'ಮನವೇ ದೇವಾಲಯ' ಎಂದು ನಂಬಿದ ವಚನಕಾರರ ಸಾಂಸ್ಥಿಕ ದೇವಾಲಯದ ಪರಿಕಲ್ಪನೆಯನ್ನು ಸೋದಾಹರಣವಾಗಿ ವಿವರಿಸಿದ್ದಾರೆ. ವಚನಕಾರರ 'ಕಳ್ಳುಬಳ್ಳಿ' ಸಂಬಂಧದ ಪ್ರೀತಿಯ ಪರಿಕಲ್ಪನೆಯನ್ನು ಡಾ. ಎಂ. ಚಿದಾನಂದ ಮೂರ್ತಿ ಅವರು ಪಾಂಡಿತ್ಯಪೂರ್ಣವಾಗಿ ವ್ಯಾಖ್ಯಾನಿಸಿದ್ದಾರೆ. ವಚನ ಸಾಹಿತ್ಯದ ಬಗ್ಗೆ ಅಧ್ಯಯನ ಮಾಡುವ ಸಂಶೋಧಕರು ಗಮನಿಸಬಹುದಾದ ಕೃತಿ ಇದಾಗಿದೆ.

೧೯೯೪ ರ ಸಾಹಿತ್ಯ ವಿಮರ್ಶೆ ಮುಖ್ಯವಾಗಿ ಸಂಪಾದಿತ ವಿಮರ್ಶಾ ಕೃತಿಗಳ ವರ್ಷವಾಗಿದೆ. ಸ್ವತಂತ್ರ ವಿಮರ್ಶಾ ಕೃತಿಗಳು ಬಂದಿದ್ದರೂ ಅವು ಒಂದೆರಡು ಹೊಸ ಲೇಖನಗಳನ್ನೊಳಗೊಂಡು ಹಳೆಯದರ ಮರುಮುದ್ರಣದ ರೂಪದಲ್ಲಿ ಬಂದಿವೆ. ಮೊದಲ ಬಾರಿಗೆ ಬಂದಿರುವ ವಿಮರ್ಶಾ ಕೃತಿಗಳೂ ಸಹ ಈಗಾಗಲೇ ಎಲ್ಲೋ ಓದಿದ ಲೇಖನಗಳನ್ನು ಒಳಗೊಂಡು ಪುಸ್ತಕವಾಗಿ ಪ್ರಕಟಗೊಂಡಿವೆ. ಹೊಸದ್ದಕ್ಕಿಂತ ಹಳೆಯದ್ದೇ ಹೆಚ್ಚು ಅರ್ಥಪೂರ್ಣವಾಗಿದೆ.

## ಸಂಶೋಧನೆ-೧

*ಟಿ. ಎಸ್. ಸತ್ಯನಾಥ್*

ಈ ವರ್ಷದಲ್ಲಿ ಹೊರಬಂದ ಭಾಷೇತರ ಸಂಶೋಧನೆಗೆ ಸಂಬಂಧಿಸಿದ ಪ್ರಕಟಣೆಗಳು ಸುಮಾರು ೨೫. ಅದರಲ್ಲಿ ಕೇವಲ ಹದಿನಾರು ಪ್ರಕಟಣೆಗಳು ಮಾತ್ರ ಉಪಲಬ್ಧವಿದ್ದು ಅವುಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

ಸಂಶೋಧನೆ ಭಿನ್ನ ಭಿನ್ನ ಕಾಲ ಘಟ್ಟದಲ್ಲಿ ಪ್ರತಿಯೊಂದು ಸಂಸ್ಕೃತಿ ತನ್ನ ಅರಿವು-ತಿಳಿವುಗಳ ಹಿನ್ನೆಲೆಯಲ್ಲಿ ಸಮಕಾಲೀನ ಹಾಗೂ ಪರಂಪರೆಯ ಆಗು ಹೋಗುಗಳನ್ನು ವಿಶ್ಲೇಷಿಸಿ ಅರ್ಥಮಾಡಿಕೊಳ್ಳುವ, ಆ ಮೂಲಕ ಪ್ರಸ್ತುತವನ್ನು ಸ್ಪಷ್ಟಮಾಡಿಕೊಳ್ಳಲು ಪ್ರಯತ್ನಿಸುವ ಕೆಲಸವಾಗಿರುತ್ತವೆ. ಹೀಗಾಗಿ ಆಧುನಿಕ ಜಗತ್ತಿನ ವಿದ್ಯಾಭ್ಯಾಸ ವ್ಯವಸ್ಥೆಯ ಅಂತಿಮ ಸಾಧನೆಯಾಗಿ ಸಂಶೋಧನೆ ಹಾಗೂ ಅದರ ಬಗ್ಗೆ ಪ್ರಬಂಧವನ್ನು ರಚಿಸುವ ವ್ಯವಸ್ಥೆ ರೂಪುಗೊಂಡಿದೆ. ಈ ಹಿನ್ನೆಲೆಯಲ್ಲಿ ಈ ವರ್ಷದ ಸಂಶೋಧನಾ ಪ್ರಕಟನೆಗಳತ್ತ ನೋಡಿದಾಗ ಅದರ ಗುಣಾತ್ಮಕತೆ ನಮ್ಮನ್ನು ಆತಂಕ ಮತ್ತು ಭಯಗಳತ್ತ ತೂಗುಯ್ಯಾಲೆ ಆಡುವಂತೆ ಮಾಡುತ್ತದೆ. ಕನ್ನಡ ಸಾಹಿತ್ಯದ ಸೃಜನಶೀಲ ಬರಹಗಳು, ಅವುಗಳ ಪ್ರಖರತೆ ಮತ್ತು ಹೊಸತನ ಅಖಿಲ ಭಾರತೀಯ ಮಟ್ಟದಲ್ಲಿ ಗಮನಾರ್ಹವಾಗುತ್ತಿರುವಾಗ ಕನ್ನಡ ಸಂಶೋಧನಾರಂಗ ತೀರ ನಿರಾಶೆಯನ್ನುಂಟು ಮಾಡುವಂಥದ್ದಾಗಿದೆ. ಒಂದತ್ತ ಪಾರಂಪರಿಕವಾದ ಹಳತಾದ ತಾತ್ತ್ವಿಕ ಚೌಕಟ್ಟುಗಳು ಮತ್ತು ಅಧ್ಯಯನ ಕ್ರಮಗಳು, ಇನ್ನೊಂದತ್ತ ಸಂಶೋಧನೆಯಲ್ಲಿ ಹೊಸತು ಹಾಗೂ ಸಮಕಾಲೀನತೆಯ ಪ್ರಸ್ತುತತೆಯನ್ನು ಕಾಣಲು ಹಾಗೂ ಕಂಡುಕೊಳ್ಳಲು ಇರುವ ಹಿಂಜರಿತ ನಮ್ಮ ಸಂಶೋಧನಾ ಪ್ರಕಟನೆಗಳ ವ್ಯಾಪ್ತಿ ಮತ್ತು ಆಳವನ್ನು ಕುಗ್ಗಿಸಿವೆ. ಇಲ್ಲಿನ ಅನೇಕ ಪ್ರಕಟಣೆಗಳು ಪಿಹೆಚ್. ಡಿ. ಪ್ರಬಂಧಗಳಾಗಿರುವುದರಿಂದ ಇಲ್ಲಿ ವಿವೇಚನೆಯಾಗಿರುವ ಸಂಶೋಧಕರು ತಮ್ಮ ಸಂಶೋಧನಾ ಉಪಕರಣಗಳನ್ನು ಒರೆಗೆ ಹಚ್ಚಿ ತೀಕ್ಷ್ಣವಾಗಿಸಿಕೊಳ್ಳಬಹುದಾದ ಆಶಾಕಿರಣ ಒಂದತ್ತ ಹಾಗೂ ಹೊಸತನ ಮತ್ತು ಸಂಶೋಧನ ತೀಕ್ಷ್ಣತೆಯಿಂದ ತುಂಬಿದ ಕೆಲವಾದರೂ ಪ್ರಕಟಣೆಗಳು ಹೊರಬಂದಿರುವ ಸಮಾಧಾನ ಇನ್ನೊಂದತ್ತ ಇದೆ.

ಮ. ನ. ಜವರಯ್ಯ ಅವರ 'ಪರಂಪರೆ ಹಾಗೂ ದಲಿತಬಂಡಾಯ ಸಾಹಿತ್ಯ: ಸಮಗ್ರ ಅಧ್ಯಯನ' ದಲಿತ ಬಂಡಾಯದ ತಾತ್ವಿಕ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಪರಂಪರೆಯನ್ನು ವಿಶ್ಲೇಷಣೆ ಮಾಡುವ ಪ್ರಯತ್ನವಾಗಿದೆ. ಹದಿನಾರು ಬಿಡಿಲೇಖನಗಳ ಸ್ವರೂಪದಲ್ಲಿ ಪರಿಗ್ರಹಿಸಲಾಗಿರುವ ಈ ಕೃತಿಯಲ್ಲಿ ಪ್ರಾಚೀನ ಕನ್ನಡ ಸಾಹಿತ್ಯಕ್ಕೆ

ಸಂಬಂಧಿಸಿದಂತೆ ಹಾಗೂ ಮಧ್ಯಕಾಲೀನ ಭಕ್ತಿ ಪರಂಪರೆಗೆ ಸಂಬಂಧಿಸಿದಂತೆ ಒಂದೊಂದು ಲೇಖನಗಳನ್ನು ಬಿಟ್ಟರೆ ಉಳಿದೆಲ್ಲ ಲೇಖನಗಳು ಆಧುನಿಕ ಕನ್ನಡ ಸಾಹಿತ್ಯ ಅದರಲ್ಲೂ ಬಂಡಾಯ ಸಾಹಿತ್ಯವನ್ನು ಕೇಂದ್ರವಾಗಿಟ್ಟುಕೊಂಡಿವೆ. ಲೇಖಕರ ಅಧ್ಯಯನದ ಕೇಂದ್ರ 'ಮಾನವ ಮಾನವನಿಗೇ ಮೋಸವೆಸಗುವ ಪ್ರವೃತ್ತಿ' ಹಾಗೂ 'ಅದರ ವಿರುದ್ಧ ಬಂಡಾಯ'. ಈ ಅರ್ಥದಲ್ಲಿ ಬಂಡಾಯದ ಧೋರಣೆಯಾದ ಜನ ವಿರೋಧಿ ಸಾಹಿತ್ಯದ ನೆಲೆಗಳನ್ನು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಗುರುತಿಸಿ, ಖಂಡಿಸಿ, ಜನಪರವಾದ ಸಂಸ್ಕೃತಿ ಮತ್ತು ಸಾಹಿತ್ಯಿಕ ಮೌಲ್ಯಗಳನ್ನು ಭದ್ರಗೊಳಿಸಲು ಪ್ರಯತ್ನಿಸುವುದು ಇಲ್ಲಿನ ಲೇಖನಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ತೀರ ಸಮರ್ಥ ಮತ್ತು ಸಾಧಾರವಾಗಿ ಮಂಡಿತಗೊಂಡಿರುವ ಮನಜ ಅವರ ವೈಚಾರಿಕ ಚಿಂತನೆಗಳು ದಲಿತಬಂಡಾಯ ವಿಮರ್ಶೆಯ ಚಿಂತನಾಕ್ರಮಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಒಂದು ಅಮೂಲ್ಯಕೊಡುಗೆ. ಸಂಸ್ಕೃತಿಯ ಅಧ್ಯಯನದಲ್ಲಿ ಪರ್ಯಾಯ ದೃಷ್ಟಿಕೋಣವೊಂದನ್ನು ಪ್ರತಿಬಿಂಬಿಸುವ ಈ ಬರಹಗಳು ಇಂತಹ ಪರ್ಯಾಯ ದೃಷ್ಟಿಕೋಣದ ಚಿಂತನೆಗಳನ್ನು ಕೆಣಕುತ್ತವೆ. ಅದರಿಂದಾಗಿ ಹಳೆಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಬಗ್ಗೆ ಹೆಚ್ಚು ಖಚಿತ ಮತ್ತು ನಿರ್ಣಾಯಕವಾಗುವ ಅವರ ವಿಶ್ಲೇಷಣೆಗಳು ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ವಿವಾದಾತ್ಮಕವಾಗಿ ಸಂವಾದಗಳನ್ನು ಬೆಳೆಸುವ ಸಾಧ್ಯತೆಗಳನ್ನು ಪಡೆದಿವೆ.

ಜಾನಪದವನ್ನು ಒಂದು ಕೋಣೀಕೃತ ಶಿಸ್ತು ಎಂದು ಅಧ್ಯಯನ ಮಾಡಲಾಗುತ್ತಿರುವ ಸಂದರ್ಭದಲ್ಲಿ 'ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು: ಒಂದು ಅಧ್ಯಯನ'ದಲ್ಲಿ ಶಿಷ್ಟ ಮತ್ತು ಜಾನಪದಗಳ ನಡುವೆ ಸಂವಾದವೊಂದನ್ನು ಮಾಡಲು ಪ್ರಯತ್ನಿಸಿರುವ ಆರ್. ಸುನಂದಮ್ಮನವರ ಈ ಅಧ್ಯಯನ ಸ್ವಾಗತಾರ್ಹವಾದ ಪ್ರಕಟಣೆ. 'ದಾಸ ಸಾಹಿತ್ಯ ಗ್ರಂಥಸ್ಥ ರೂಪಕ್ಕಿಂತ ವಾಕ್ ಪರಂಪರೆಯಲ್ಲೇ ಉಳಿದು ಬಂದಿರುವುದು ಹೆಚ್ಚು' ಹಾಗೂ 'ಪುರಂದರ ಕನಕರ ಕಾಲದ ಹಸ್ತಪ್ರತಿಗಳು ಉಪಲಬ್ಧವಿಲ್ಲ' ಎಂಬ ಸ್ಪಷ್ಟ ಸಾಂಸ್ಕೃತಿಕ ತಿಳುವಳಿಕೆಯ ಮಾತುಗಳನ್ನು ಈ ಅಧ್ಯಯನದಲ್ಲಿ ಕಾಣುವುದು ತುಂಬಾ ಚೇತೋಹಾರಿಯಾದ ಸಂಗತಿಯಾಗಿದೆ. ಜಾನಪದ ಮತ್ತು ಶಿಷ್ಟ ಸಾಹಿತ್ಯಗಳ ನಡುವಣ ಗೋಡೆಯನ್ನು ಒಡೆದು ಒಂದು ಏಕರೂಪಿ ಅಧ್ಯಯನ ಕ್ರಮವನ್ನು ನಿರೂಪಿಸಿಕೊಳ್ಳುವ ಅಗತ್ಯವಿರುವ ಇಂದಿನ ಸಂದರ್ಭದಲ್ಲಿ ಹಾಗೂ ಭಕ್ತಿಪರಂಪರೆಯನ್ನು ಗ್ರಂಥಸ್ಥ ಪರಂಪರೆಯಲ್ಲಿ ಸಂವಹನಗೊಂಡ ಸಾಹಿತ್ಯ ಎಂದು ಅಧ್ಯಯನ ಮಾಡಲಾಗುತ್ತಿರುವ ಇಂದಿನ ಸಂದರ್ಭದಲ್ಲಿ ಲಿಖಿತ ಪಠ್ಯ ಪರಂಪರೆಯ ಪ್ರಾಧಾನ್ಯತೆಯನ್ನು ಪ್ರಶ್ನಿಸುವ ಇಂತಹ ಅಧ್ಯಯನಗಳು ತೀರ ಅಗತ್ಯವಾದ ಅಧ್ಯಯನಗಳಾಗುತ್ತವೆ. ಆದರೂ ಶಿಷ್ಟಪದ-ಜಾನಪದಗಳೆಂಬ ಎರಡು ಹಂತಗಳ ವಿವಕ್ಷೆ, ಸಾಂಪ್ರದಾಯಿಕ ಜಾನಪದ ಚೌಕಟ್ಟಿನಲ್ಲಿ ಮಾಡಿರುವ ವಿಶ್ಲೇಷಣೆಗಳು ಈ ಅಧ್ಯಯನ ಹಾರಬೇಕಾಗಿದ್ದ ನೆಗೆತಕ್ಕಿಂತ ಹಿಂದೆ ಬಿದ್ದಂತಾಗಿ ಕೊಂಚ ನಿರಾಶೆಯನ್ನುಂಟು ಮಾಡುತ್ತವೆ. ಶಿಷ್ಟಪದ-ಜಾನಪದ ಎಂದು ಇಂದು ಹೆಸರಿಸಲಾಗುತ್ತಿರುವ ವಲಯಗಳನ್ನು ಮುಟ್ಟಲು ಸಾಧ್ಯವಾದ ಭಕ್ತಿ

ಮತ್ತು ಅದರ ರಚನೆಗಳು ಯಾವ ಬಗೆಯ ಸಮಾಜಕ್ಕಾಗಿ ರಚನೆಗೊಂಡವು ಹಾಗೂ ಅಂತಹ ಸಮಾಜದ ಸ್ವರೂಪವನ್ನು ಭಕ್ತಿರಚನೆಗಳ ಮೂಲಕ ಹೇಗೆ ಪುನಾರಚಿಸಬಹುದು ಎಂಬ ಪ್ರಶ್ನೆಯನ್ನು ಈ ಅಧ್ಯಯನ ಮುಂದಿಟ್ಟುಕೊಂಡಿದ್ದರೆ ಮಧ್ಯಕಾಲೀನ ಕನ್ನಡ ಸಂಸ್ಕೃತಿಯ ಬಗ್ಗೆ ಹೊಸದಾದ ಒಳನೋಟಗಳನ್ನು ಪಡೆಯಲು ಸಾಧ್ಯವಾಗುತ್ತಿತ್ತು. ಇಷ್ಟಾಗಿ ಕೂಡ ಈ ಅಧ್ಯಯನ ಮುಂದೆ ಅಂತಹ ಅಧ್ಯಯನಗಳು ಸಾಧ್ಯ ಎಂಬ ಭರವಸೆಯನ್ನು ನೀಡುತ್ತದೆ.

ಡಿ. ವಿ. ಪರಶಿವಮೂರ್ತಿಯವರ 'ಶಾಸನ ಸಂಶೋಧನೆ' ಹೊಸದಾಗಿ ಕಂಡುಹಿಡಿದ ಕೆಲವು ಶಾಸನಗಳ ಪರಿಚಯ ಮತ್ತು ಪಾಠಗಳನ್ನು ನೀಡುತ್ತದೆ. ಈ ದೃಷ್ಟಿಯಿಂದ ಮಾನವಿಕ ಶಿಸ್ತುಗಳ ಅಧ್ಯಯನಾಸಕ್ತರಿಗೆ ಇವು ಅಮೂಲ್ಯವಾದ ಮಾಹಿತಿಗಳಾಗಿವೆ. ಮೂರುಜಾವಿದೇವನ ಬಗ್ಗೆ ನೀಡಿರುವ ಶಾಸನ ಮಾಹಿತಿಗಳು ಯಾವುದೇ ಖಚಿತ ನಿರ್ಧಾರಗಳಿಗೆ ನಮ್ಮನ್ನು ಕೊಂಡೊಯ್ಯುವುದಿಲ್ಲವಾದರೂ ಕರ್ನಾಟಕ ಲಾಕುಳ ಕಾಳಾಮುಖರ ಚರಿತ್ರೆಗೆ, ಆ ಮೂಲಕ ಏಕಾಂತ ರಾಮಯ್ಯ ಹಾಗೂ ವೀರಶೈವ ಇತಿಹಾಸಕ್ಕೆ ಸಂಬಂಧಿಸಿದಂತೆ ಕೆಲವು ಹೊಸ ಟಿಪ್ಪಣಿಗಳನ್ನು ಸೇರಿಸುತ್ತವೆ. ಶಾಸನ ಶಿಲ್ಪಗಳನ್ನು ಕುರಿತಾದ ಲೇಖನದಲ್ಲಿ ಸಂಶೋಧನೆಯ ಹೊಸ ದಿಗಂತಗಳನ್ನು ಲೇಖಕರು ಹುಡುಕುತ್ತಿರುವ ಸೂಚನೆಗಳಿವೆ. ಈ ಎಲ್ಲ ಅಂಶಗಳಿಂದ ಈ ಪ್ರಕಟನೆ ಸಂಶೋಧಕರು ಗಮನಿಸಬೇಕಾದ ಕೃತಿಯಾಗಿದೆ. ಕೊನೆಯ ಶಾಸನ ಮತ್ತು ಕ್ಷೇತ್ರಕಾರ್ಯ ಎಂಬ ಲೇಖನ ತುಂಬಾ ಪ್ರಾಥಮಿಕ ಮಟ್ಟದ್ದಾಗಿದ್ದು ಈ ಸಂಕಲನದ ಲೇಖನಗಳ ಮಟ್ಟಕ್ಕಿಂತ ತುಂಬಾ ಕೆಳಗೆ ಉಳಿಯುತ್ತದೆ.

'ಕನ್ನಡದ ಆದಿತೀರ್ಥಂಕರರ ಚರಿತೆಗಳು: ತೌಲನಿಕ ಅಧ್ಯಯನ' ಸರಸ್ವತಿ ವಿಜಯಕುಮಾರ ಅವರ ಪಿಹೆಚ್.ಡಿ. ಅಧ್ಯಯನದ ಫಲವಾಗಿ ಬಂದ ಕೃತಿ. ಎಂಟು ಅಧ್ಯಾಯಗಳಲ್ಲಿ ಸಂಸ್ಕೃತ, ಪ್ರಾಕೃತ ಮತ್ತು ಕನ್ನಡದ ಆದಿಪುರಾಣಗಳ ತೌಲನಿಕ ಅಧ್ಯಯನಕ್ಕೆ ಹೊರಡುವ ಈ ಕೃತಿ ತೌಲನಿಕ ಅಧ್ಯಯನದ ತಾತ್ತ್ವಿಕ ಚೌಕಟ್ಟಿನ ಕೊರತೆಯಿಂದ ಸೊರಗಿದೆ. ಕೇವಲ ವೈದೃಶ್ಯ-ಸಾದೃಶ್ಯಗಳ ವಿವರಣಾತ್ಮಕ ಪಟ್ಟಿಯನ್ನುಕೊಡುವಷ್ಟರಲ್ಲೇ ತೃಪ್ತಿಗೊಂಡು ನಿಲ್ಲುವ ಈ ಅಧ್ಯಯನ ಈ ವೈದೃಶ್ಯ-ಸಾದೃಶ್ಯಗಳನ್ನು ಕಾವ್ಯಗಳ ಮೈಯಲ್ಲಿ ಅಂತರೀಕರಣಗೊಳಿಸಿದ ಸಾಂಸ್ಕೃತಿಕ ನೆಲೆಗಳತ್ತ ನಮ್ಮನ್ನು ಕೊಂಡಯ್ಯಬಹುದಾಗಿದ್ದು ಅದನ್ನು ಸಂಪೂರ್ಣವಾಗಿ ವಿವಂಚಿತಗೊಳಿಸಿಬಿಟ್ಟಿದೆ. ಕಾವ್ಯಗುಣದ ಚರ್ಚೆಯನ್ನೇ ಇಡೀ ಪ್ರಬಂಧದುದ್ದಕ್ಕೂ ಮಾಡಲಾಗಿದ್ದರೂ 'ಒಂದು ರೀತಿಯ ಧರ್ಮಪ್ರಚಾರಕ ಕ್ರಿಯಾಂಶವೇ ಇವುಗಳಲ್ಲಿ ಅಡಕಗೊಂಡಿದೆ ಎಂದು ಹೇಳಬಹುದಾಗಿದೆ' (ಪು. ೪೨೫) ಎಂದು ಲೇಖಕರು ತಲುಪುವ ನಿರ್ಧಾರ ಮಾತ್ರ ಆಶ್ಚರ್ಯ ಹುಟ್ಟಿಸುತ್ತದೆ. ಆದಿತೀರ್ಥಂಕರರ ಚರಿತ್ರೆಗಳು ರಚನೆಗೊಂಡ ಭಿನ್ನಭಿನ್ನ ಕಾಲ, ದೇಶ, ಸಮಾಜಗಳ ವೈಚಾರಿಕ ನೆಲೆಗಳ ತೌಲನಿಕ ಅಧ್ಯಯನವಾಗಿ ಅಮೂಲ್ಯವಾದ ಕೊಡುಗೆಯಾಗಬಹುದಾದ ಸಾಧ್ಯತೆಯನ್ನು ತೌಲನಿಕ

ಅಧ್ಯಯನದ ಸ್ಪಷ್ಟವಾದ ತಾತ್ವಿಕ ಚೌಕಟ್ಟಿಲ್ಲದೆ ಹೋಗುವುದರಿಂದ ಈ ಅಧ್ಯಯದ ಕಳೆದುಕೊಂಡಿದೆ.

ಜೀವಣ್ಣ ಮಸಳಿಯವರ 'ರಾಮಾಯಣದಲ್ಲಿ ವೈಶ್ವಕರ್ಮಣರು' ಎಂಬ ಕೃತಿ ಇಂದಿನ ವಿಶ್ವಕರ್ಮ ಜನಾಂಗ ವೈದಿಕ ಮತ್ತು ರಾಮಾಯಣದ ವಿಶ್ವಕರ್ಮ ಬ್ರಾಹ್ಮಣರ ಮುಂದುವರೆಯುವಿಕೆಯಿಂದಾಗಿದೆ ಎಂಬ ಸಿದ್ಧಾಂತವನ್ನು ಮಂಡಿಸುತ್ತದೆ. ವೇದಗಳು, ರಾಮಾಯಣದಿಂದ ಹಿಡಿದು ಇಪ್ಪತ್ತನೆಯ ಶತಮಾನದಲ್ಲಿ ರಚನೆಗೊಂಡ ಪೌರಾಣಿಕ ಕಾದಂಬರಿಯವರೆಗೆ ವಿಶ್ವಕರ್ಮ ಬ್ರಾಹ್ಮಣರ ಬಗ್ಗೆ ಮಾಹಿತಿಯನ್ನು ಒಟ್ಟಿಗೆ ಕಲೆಹಾಕಿ ವಿಶ್ವಕರ್ಮರ ಹಿಂದಿನ ಚಿನ್ನದಯುಗವೊಂದನ್ನು ಪುನಾರಚಿಸಲು ಲೇಖಕರು ಪ್ರಯತ್ನ ಪಟ್ಟಿದ್ದಾರೆ. ಅವರ ಪ್ರಕಾರ ಸಪ್ತಾರ್ಷೇಯ ಬ್ರಾಹ್ಮಣ (ಗೋಬ್ರಾಹ್ಮಣ)ರು ಪಂಚಾರ್ಷೇಯ ಬ್ರಾಹ್ಮಣ (ವಿಶ್ವಬ್ರಾಹ್ಮಣ)ರನ್ನು ಸತ್ಯನಾಶ ಮಾಡಲು ಹೊರಟ ಕ್ರಿಯೆಪ್ರಕ್ರಿಯೆಗಳ ಪರಿಣಾಮದ ಸಾರವೇ ವಾಲ್ಮೀಕಿ ರಾಮಾಯಣ. ಈ ಅರ್ಥದಲ್ಲಿ ಮಹಾಕಾವ್ಯವೊಂದನ್ನು ಜನಾಂಗಿಕ ಚರಿತ್ರೆಯನ್ನು ರಚಿಸುವ ಮಾಹಿತಿಕಣಜವನ್ನಾಗಿ ಪರಿಗಣಿಸಿ ಅಲ್ಲಿಂದ ಬೇಕಾದಂತಹ ಉಲ್ಲೇಖಗಳನ್ನು ತಮ್ಮ ಸಿದ್ಧಾಂತಗಳಿಗೆ ಪೂರಕವಾಗುವಂತೆ ಬಳಸಿಕೊಳ್ಳುವುದರಿಂದ ಅಂತಹ ಸಂಶೋಧನೆಯಲ್ಲಿ ಉಂಟಾಗಬಹುದಾದ ಎಲ್ಲ ಮಿತಿಗಳಿಗೂ ಈ ಅಧ್ಯಯನ ಒಳಪಟ್ಟಿದೆ. ಈ ಜನಾಂಗಿಕ ಚರಿತ್ರೆಯ ಪುನಾರಚನೆಯ ಉತ್ಸಾಹದಲ್ಲಿ ಈ ಕುಶಲಕರ್ಮಿ ಜನಾಂಗಕ್ಕೆ ಸಂಬಂಧಿಸಿದಂತೆ ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಉಪಲಬ್ಧವಿರುವ ಮಾಹಿತಿಗಳನ್ನು ಕೂಡ ಲೇಖಕರು ನೋಡಹೋಗಿಲ್ಲ. ಪ್ಯಾರಾಗಟ್ಟಲೆ, ಕೆಲವು ಬಾರಿ ಪುಟಗಟ್ಟಲೆ ಉದ್ದದ ಉದ್ಧರಣೆಗಳು ಸಂಶೋಧನಾ ಕ್ರಮದ ಎಲ್ಲ ನಿಯಮಗಳನ್ನು ಮೀರಿ ಉಲ್ಲೇಕಗೊಂಡಿವೆ. ಉದಾಹರಣೆಗೆ ಟಿಪ್ಪಣಿಗಳ ಅಂಕಿಗಳು ಉದ್ಧರಣೆಗಳ ಕೊನೆಯಲ್ಲಿ ಬರುವುದರ ಬದಲಿಗೆ ಮೊದಲಿಗೆ ಬರುತ್ತವೆ. ಕೆಲವು ಉದ್ಧರಣೆಗಳು ಪ್ಯಾರಾಗಳಷ್ಟು ದೀರ್ಘವಾಗಿರುವುದರಿಂದ ಪ್ರತಿಯೊಂದು ಪ್ಯಾರಾ ಒಂದು ಟಿಪ್ಪಣಿಯ ಅಂಕಿಯಿಂದ ಆರಂಭವಾಗುತ್ತವೆ.

ಸಾಂಸ್ಕೃತಿಕವಾಗಿ ಅಮೂಲ್ಯ ಕೊಡುಗೆಯನ್ನು ನೀಡಿದ ವಿದ್ವಾಂಸರನ್ನು ಕುರಿತು ಬರೆಯಲಾದ ವಿಮರ್ಶೆ ಮತ್ತು ವಿಶ್ಲೇಷಣಾತ್ಮಕ ಬರಹಗಳನ್ನು ಒಂದುಗೂಡಿಸಿ ಸಂಪಾದಿಸಿ ಪ್ರಕಟಿಸುವ ಮೂಲಕ ಸಂಸ್ಕೃತಿಯ ಅಧ್ಯಯನಾಸಕ್ತರಿಗೆ ಅಗತ್ಯವಿರುವ ಅಧ್ಯಯನ ಸಾಮಗ್ರಿಯನ್ನು ಒಟ್ಟಿಗೆ ಒದಗಿಸುವುದು ಸಂಕಲನ ಗ್ರಂಥಗಳ ವಿಶೇಷ. ಮಲ್ಲೇಪುರಂ ಜಿ. ವೆಂಕಟೇಶ ಅವರ 'ಪಾತಾಳಿ' ಈ ಅರ್ಥದಲ್ಲಿ ಶಂ. ಬಾ. ಜೋಶಿಯವರ ಅಧ್ಯಯನಾಸ್ತಕರಿಗೆ ಅವರ ಬಗ್ಗೆ ಬಂದ ಬರಹಗಳನ್ನು ಸಂಕಲಿಸಿ ಕೊಡುವ ಉದ್ದೇಶ್ಯದಿಂದ ಬಂದ ಕೃತಿ. ಇದರಲ್ಲಿ ಆಲೂರು ವೆಂಕಟರಾಯರಿಂದ ಹಿಡಿದು ಇಂದಿನ ಪೀಳಿಗೆಯ ಬರಹಗಾರರ ವರೆಗೆ ಶಂ. ಬಾ. ಬಗ್ಗೆ ಬಂದ ಬರಹಗಳಿವೆ. ಅವುಗಳಲ್ಲಿ ಕೆಲವು ಶಂ.ಬಾ. ರವರ ಸಂಸ್ಕೃತಿ ಅಧ್ಯಯನ ಬಗ್ಗೆ ಬಂದ ಬರಹಗಳಾದರೆ ಮತ್ತೆ ಕೆಲವು ಅವರ ವ್ಯಕ್ತಿತ್ವಪರಿಚಯ ಮಾಡುವ ಬರಹಗಳು. ಇವುಗಳಲ್ಲವೂ ಬಹಳ

ಮೌಲಿಕವಾದ ಮಾಹಿತಿಗಳೇನೋ ಸರಿ. ಆದರೆ ಇಂತಹ ಸಂಕಲಿತ ಕೃತಿಗಳಿಗೆ ಒಂದು ಆಳವಾದ ಅಧ್ಯಯನ ಮಾಡಿದ ಸುದೀರ್ಘ ಪರಿಚರ್ಚೆಯ ಅಗತ್ಯವಿತ್ತು ಎನಿಸುತ್ತದೆ. ಈ ಚರ್ಚೆ ಚಾರಿತ್ರಿಕತೆ, ಸಂಶೋಧನಾಕ್ರಮ, ತಾತ್ವಿಕ ಚೌಕಟ್ಟು ಇತ್ಯಾದಿ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಸಂಕಲನದ ಬರಹಗಳನ್ನು ವಿವಿಧ ರೀತಿಯ ಪುನರ್‌ಪರಿಶೀಲನೆಗೆ ಒಳಗು ಪಡಿಸುವ ಮೂಲಕ ಕನ್ನಡ ಸಂಸ್ಕೃತಿ ಶಂ. ಬಾ. ರವರ ಅಧ್ಯಯನಗಳಿಗೆ ಸ್ಪಂದಿಸಿದ ರೀತಿಯನ್ನು ಗುರುತಿಸುವ ಜಾಡು ಕೂಡ ಆಗುವ ಸಾಧ್ಯತೆಯನ್ನು ಪಡೆಯ ಬಹುದಾಗಿತ್ತು. ಅನುಬಂಧಗಳಲ್ಲಿ ನೀಡಿರುವ ಮಾಹಿತಿ ಶಂ.ಬಾ ಅಧ್ಯಯನಾಸಕ್ತರಿಗೆ ಉಪಯುಕ್ತವಾಗಬಹುದಾದ ಮಾಹಿತಿ.

ಎ. ಎಸ್. ಜಯರಾಂ ಅವರ 'ಸ್ವಗತ ಪ್ರಕಾಶ' ಹನ್ನೆರಡು ಲೇಖನಗಳ ಸಂಗ್ರಹ. ಇದರಲ್ಲಿ ಕೆಲವು ಮಧ್ಯಕಾಲೀನ ಕನ್ನಡ ಸಾಹಿತ್ಯದ ಬಗ್ಗೆ ಮಾಡಿದ ಅಧ್ಯಯನಗಳು, ಕೆಲವು ಆಧುನಿಕ ಕವಿತೆಯ ಬಗ್ಗೆ ಬಂದ ವಿಮರ್ಶಾತ್ಮಕ ಲೇಖನಗಳು ಹಾಗೂ ಉಳಿದವು ಭಾಷೆಯ ಬಗ್ಗೆ ಬರೆದ ಬರಹಗಳು. 'ದೇವರು ರುಜು ಮಾಡಿದನು' ಎಂಬ ಪ್ರಾಯೋಗಿಕ ವಿಮರ್ಶೆ ಈಗಾಗಲೇ ಪ್ರಕಟಗೊಂಡಿರುವ ಲೇಖನ. ಜಯರಾಂ ಅವರು ನಡುಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ತೋರುವ ವಿಷಯ ಸಂಗ್ರಹಣೆ, ವಿಶ್ಲೇಷಣೆಯ ಪ್ರಖರತೆ ಹಾಗೂ ಖಚಿತತೆಗಳು ಆಧುನಿಕ ಕಾಲಕ್ಕೆ ಬಂದಂತೆ ಸಡಿಲವಾಗುತ್ತದೆ. ಆದರೂ ಭಿನ್ನ ಆಕರಗಳಿಂದ ಮಾಹಿತಿಯನ್ನು ಸಂಗ್ರಹಿಸಿ ತೌಲನಿಕ ಸಾಹಿತ್ಯದ ಅಧ್ಯಯನದ ಕ್ರಮವನ್ನು ಉಪಯೋಗಿಸುವಲ್ಲಿ ಕೆಲವು ಹೊಸ ನೋಟಗಳನ್ನು ನೀಡಲು ಅವರಿಗೆ ಸಾಧ್ಯವಾಗಿದೆ. ಕೆಲವಡೆ ಅವರ ವಿಚಾರವಾದದ ಹಿನ್ನೆಲೆಯಲ್ಲಿನ ವಿಶ್ಲೇಷಣೆಯಿಂದಾಗಿ ಸಿದ್ಧರಾಮ ಚಾರಿತ್ರದಂತಹ ನಡುಗನ್ನಡ ಕೃತಿಯೊಂದು ಆಧುನಿಕ ವಿಚಾರವಾದದ ಮೂಸೆಯಲ್ಲಿ ಪರೀಕ್ಷೆಗೊಳಗಾಗಬೇಕಾಗುತ್ತದೆ. ಆದರೂ ಅವರ ಕೆಲವು ಟಿಪ್ಪಣಿಗಳು ಒಳ್ಳೆಯ ಒಳನೋಟಗಳನ್ನು ಕೆಲವೊಮ್ಮೆ ಕೊಡುತ್ತವೆ. ಉದಾಹರಣೆಗೆ ಜಂಗಮರೂಪಿಯಾಗಿ ಬಂದ ಶಿವ ಬಾಲಕ ಸಿದ್ದರಾಮನಿಗೆ ತನ್ನ ನಿಜರೂಪವನ್ನು ತೋರುವ ಬಗೆಗೆ ಅವರ ಪ್ರತಿಕ್ರಿಯೆ: 'ಅಂಗದ ನಿರಾಕಾರ ಕಲ್ಪನೆಯಲ್ಲಿ ಮೈಮರೆತಿದ್ದ ಬಾಲಕನಿಗೆ ನಿಜಸ್ವರೂಪ ಇದೇ ಎಂದು ವೇಷ ಕೊಟ್ಟುನಿಂತ ಈಶ್ವರನನ್ನು ಏನನ್ನಬೇಕು' (ಪು. ೩೦). ಈ ಸಂಕಲನದಲ್ಲಿ ಕಂಡುಬರುವ ವಿಷಯ ವೈವಿಧ್ಯದ ಹರಹು ಮತ್ತು ಕೊನೆಯಲ್ಲಿ ಬರುವ ಕೇವಲ ಪರಿಚಯಾತ್ಮಕ ಹಾಗೂ ವಿವರಣಾತ್ಮಕ ಲೇಖನಗಳು ಆರಂಭದ ಲೇಖನಗಳ ಸಂಶೋಧನಾತ್ಮಕ ಪ್ರಖರತೆಯನ್ನು ಮಬ್ಬು ಮಾಡಿವೆ.

ಪಿ. ಸತ್ಯನಾರಾಯಣ ಭಟ್ಟರ 'ಲಿಂಗ ಮತ್ತು ಕಂತೆ' ಆಯುರ್ವೇದ ವೈದ್ಯರೊಬ್ಬರು ಧಾರ್ಮಿಕ ಆಚರಣೆಯೊಂದರ ಬಗ್ಗೆ ನಡೆಸಿದ ಸಾಂಸ್ಕೃತಿಕ ಅನ್ವೇಷಣೆಯ ಪರಿಣಾಮವಾಗಿ ಬಂದ ಕೃತಿ. ಚಾರಿತ್ರಿಕ ದಾಖಲೆಗಳು ಮತ್ತು ಸಮಕಾಲೀನ ಕ್ಷೇತ್ರಕಾರ್ಯದ ಮಾಹಿತಿಗಳ ಮೂಲಕ ಲಿಂಗದರಚನೆಯ ಹಿನ್ನೆಲೆಯ ಜೀವ ರಸಾಯನಶಾಸ್ತ್ರಕ್ಕೆ ಹೋಗಿ ತಲುಪುವ ಈ ಅಧ್ಯಯನ ದಟ್ಟವಾದ ಮಾಹಿತಿಗಳಿಂದ

ಕೂಡಿದೆ. ಆದರೆ ಲೇಖಕರು ಅಥರ್ವವೇದದ ರಕ್ಷಾಮಣಿ ಮತ್ತು ಇಂದಿನ ಲಿಂಗಧಾರಣೆ ಸಂಪ್ರದಾಯದ ನಡುವಣ ಇತಿಹಾಸ ಪುನಾರಚನೆಯಲ್ಲಿ ಕಲ್ಪಿಸಿಕೊಳ್ಳುವ ವೃಕ್ಷಮಾದರಿ ಸಂಬಂಧ ಹಾಗೂ ಇಂದು ನಮಗೆ ಉಪಲಬ್ಧವಿರುವ ವೀರಶೈವಧರ್ಮದ ಸಾಂಸ್ಕೃತಿಕ ಆಕೃತಿಯ ಹಿನ್ನೆಲೆಯಲ್ಲಿ ಸಿಕ್ಕ ಮಾಹಿತಿಯನ್ನು ವಿಶ್ಲೇಷಿಸುವ ಪ್ರಯತ್ನ ಹಲವಾರು ಪ್ರಶ್ನೆಗಳನ್ನು ಎತ್ತುವಂತೆ ಮಾಡುತ್ತದೆ. ಲಿಂಗಧಾರಣೆ ಕೇವಲ ವೀರಶೈವ ಪರಂಪರೆಗೆ ಮಾತ್ರ ಸೇರಿದುದೆ? ಪಾಶುಪತ ಮುಂತಾದ ವೀರಶೈವಪೂರ್ವ ಪಂಥಗಳಲ್ಲಿ ಲಿಂಗಧಾರಣೆ ಇದ್ದುದಕ್ಕೆ ದಾಖಲೆಗಳಿವೆ. ಎರಡನೆಯದಾಗಿ ಲಿಂಗ ರಚನೆಯ ಹಿಂದಿರುವ ಸದೃಢ ದೇಹ ಮತ್ತು ಧೀರ್ಘಾಯುಷ್ಯದ ಆಶಯಗಳು ಇಂತಹ ಅಗತ್ಯಗಳನ್ನು ಒತ್ತಿ ಹೇಳಿದ ಹಟಯೋಗದ ಕಡೆ ನಮ್ಮನ್ನು ನೋಡುವಂತೆ ಮಾಡುತ್ತವೆ. ಮೂರನೆಯದಾಗಿ ಕಂಥಾಚಾರ್ಯ, ಕಂಥೆಯಬಡೆಯ ಮುಂತಾದ ವಿಶೇಷಣಗಳು ಪಾಶುಪತ, ಲಾಕುಳೀಶ ಹಾಗೂ ಕಾಳಾಮುಖ ಪಂಥದ ಗುರುಗಳಿಗಿದ್ದುದನ್ನು ಶಾಸನಗಳು ತಿಳಿಸುತ್ತವೆ. ಈ ಯಾವುದೇ ಪ್ರಶ್ನೆಯನ್ನು ಉದ್ದೇಶಿಸದಿದ್ದರೂ ಕಂತೆಯ ಬಗೆಗಿನ ಈ ಮಾಹಿತಿ ಸಂಗ್ರಹ ವೀರಶೈವಪೂರ್ವ ಶೈವಪಂಥಗಳ ಇತಿಹಾಸ ಹಾಗೂ ವೀರಶೈವಯುಗವೆಂದು ಕರೆಯಲಾಗುವ ಕಾಲದಲ್ಲಿ ಗುಪ್ತವಾಗಿ ಬದುಕುಳಿದ ಈ ರಹಸ್ಯ ಪಂಥಗಳ ಸಾಂಸ್ಕೃತಿಕ ವಿಶ್ಲೇಷಣೆಯತ್ತ ನಮ್ಮನ್ನು ಸೆಳೆಯುವ ಸಾಧ್ಯತೆಯನ್ನು ಪಡೆದಿದೆ.

'ಕಿಟೆಲ್ ಜೀವನ ಹಾಗೂ ಸಾಧನೆ': ಕಿಟೆಲ್ ಕಾಲೇಜಿನ ಬೆಳ್ಳಿಹಬ್ಬದ ಸಮಾರಂಭದ ಅಂಗವಾಗಿ ಕಿಟೆಲ್‌ರನ್ನು ಕುರಿತಂತೆ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಐದು ಪ್ರಬಂಧಗಳು ಮತ್ತು ಅಧ್ಯಕ್ಷ ಭಾಷಣಗಳು ಜಿ. ಎಂ. ಹೆಗಡೆಯವರಿಂದ ಸಂಪಾದನೆಗೊಂಡ ಈ ಕೃತಿಯಲ್ಲಿವೆ. ಕಿಟೆಲ್‌ರವರ ಜೀವನ ಮತ್ತು ಅಧ್ಯಯನಗಳನ್ನು ಕುರಿತಂತೆ ಪತ್ರಾಗಾರ ದಾಖಲೆಗಳನ್ನು ಆಧರಿಸಿ ಬರೆದ ಶ್ರೀನಿವಾಸ ಹಾವನೂರರ ಲೇಖನ ಹಲವಾರು ಮಹತ್ವದ ಅಂಶಗಳನ್ನು ನಮ್ಮ ಮುಂದಿಡುತ್ತದೆ. ಉಳಿದ ಲೇಖನಗಳು ಕೇವಲ ಪರಿಚಯಾತ್ಮಕವಾಗಿದ್ದು ಮಾಹಿತಿ ನೀಡುವುದರಲ್ಲಿ ಮುಕ್ತಾಯಗೊಂಡಿವೆ. ಅಪ್ಪಟ ಸಂಶೋಧಕನೊಬ್ಬನ ವೈಜ್ಞಾನಿಕವಾದ ಅಧ್ಯಯನಗಳನ್ನು ಕುರಿತಂತೆ ಬಂದಿರುವ ಈ ಕೃತಿ ಕಿಟಲ್‌ರವರ ವೈಜ್ಞಾನಿಕ - ಸಂಶೋಧಕ ಮನೋಧರ್ಮಕ್ಕೆ ಒಂದು ಅಪವಾದದಂತಿದೆ. ಪ್ರತಿಯೊಂದು ಲೇಖನವೂ ಭಿನ್ನವಾದ ಆಧಾರಗ್ರಂಥಗಳನ್ನು ನೀಡುವ ಮಾದರಿಯನ್ನು ಉಪಯೋಗಿಸಿವೆ. ಕೆಲವು ಲೇಖಕರು ಅದನ್ನು ಕೂಡ ನೀಡುವ ಗೋಜಿಗೆ ಹೋಗಿಲ್ಲ. ಅತ್ಯಂತ ವೈಜ್ಞಾನಿಕ ರೀತಿಯಲ್ಲಿ ಸಂಶೋಧನೆ ನಡೆಸಿದ ವಿದ್ವಾಂಸನೊಬ್ಬನ ಬಗ್ಗೆ ನಡೆದ ವಿಚಾರಸಂಕಿರಣದ ಬರಹಗಳು ಈ ರೀತಿ ಅಧ್ಯಯನ ಕ್ರಮದ ಸುಸೂತ್ರತೆ ಇಲ್ಲದೆ ಪ್ರಕಟಗೊಂಡಿರುವುದು ವಿಷಾದನೀಯ. ಸಂಪಾದಕರು ಇದರ ಬಗ್ಗೆ ನಿಗಾವಹಿಸಬೇಕಾದುದು ಸಂಪಾದಕ ಧರ್ಮದ ಅವಶ್ಯಕತೆಗಳಲ್ಲಿ ಒಂದು.

'ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು' ಎ. ಸುಬ್ಬಣ್ಣ ರೈ ಅವರ ಪಿಹೆಚ್. ಡಿ. ಅಧ್ಯಯನದ ಫಲವಾಗಿ ಬಂದ ಕೃತಿ. ಏಳು ಅಧ್ಯಾಯಗಳು ಮತ್ತು

ಅನುಬಂಧಗಳನ್ನೊಳಗೊಂಡ ಈ ಅಧ್ಯಯನ ದಕ್ಷಿಣ ಕನ್ನಡದ ಐತಿಹ್ಯಗಳನ್ನು ತುಂಬಾ ದಟ್ಟವಾದ ಕೇತ್ರಕಾರ್ಯ ವಿವರಗಳು ಹಾಗೂ ಅನ್ಯಮೂಲಗಳಿಂದ ಒಟ್ಟುಗೂಡಿಸಿದ ಮಾಹಿತಿಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಿದೆ. ಸಾಂಪ್ರದಾಯಿಕವಾದ ವಿಶ್ಲೇಷಣಾ ಕ್ರಮ ಮತ್ತು ವರ್ಗೀಕರಣ ಇತ್ಯಾದಿ ವಿವರಗಳಿಂದ ಕೂಡಿದ್ದರೂ ಸಾಂಸ್ಕೃತಿಕ ಇತಿಹಾಸದಲ್ಲಿ ರಚನೆಯಲ್ಲಿ ಐತಿಹ್ಯಗಳ ಬಳಕೆಯ ಸಾಧ್ಯತೆಗಳು ಮತ್ತು ಐತಿಹ್ಯ ಮತ್ತು ಆಧುನಿಕತೆಯ ಬಗ್ಗೆ ಅವರು ಮಾಡಿರುವ ಚರ್ಚೆ ಕೊಂಚ ಆಸೆಯನ್ನು ಹುಟ್ಟಿಸುವ ವಿಶ್ಲೇಷಣೆಗಳಾಗಿವೆ. ಮೂಲತಃ ಬೇರೆ ಯಾವುದೇ ಬಗೆಯ ಚರಿತ್ರೆಯ ರಚನೆ ಸಾಧ್ಯವಿಲ್ಲದಿರುವ ಈ ಭೌಗೋಳಿಕ ಪ್ರದೇಶಕ್ಕೆ ಸಂಬಂಧಿಸಿದ ಈ ಐತಿಹ್ಯಗಳು ಅಮೂಲ್ಯವಾದ ಸಾಂಸ್ಕೃತಿಕ ದಾಖಲೆಗಳಾಗಿವೆ. ಆದರೆ ವಿಶ್ಲೇಷಣೆಯಲ್ಲಿ ಇನ್ನೂ ಆಳವಾದ ಅಧ್ಯಯನದ ಅಗತ್ಯತೆ ಇತ್ತು. ಅದರಲ್ಲೂ ಡೇವಿಡ್ ಷುಲ್‌ಮನ್ ಅವರು ತಮಿಳು ಸ್ಥಳಪುರಾಣಗಳ ಅಧ್ಯಯನದಲ್ಲಿ ಕೊಡುವ ಒಳನೋಟಗಳನ್ನು ತಾವು ಸಂಗ್ರಹಿಸಿದ ಮಾಹಿತಿಗೆ ಕೊಡುವ ಸಾಧ್ಯತೆಯನ್ನು ರೈ ಅವರು ಪರಿಗಣಿಸಬಹುದಿತ್ತು.

ವಿಶ್ವನಾಥ ಬದಿಕಾನರ 'ಗೌಡಕನ್ನಡದ ಜನಪದ ಕಥೆಗಳು: ವರ್ಗ ಮತ್ತು ಆಶಯಸೂಚಿ' ಎಂ. ಫಿಲ್. ಅಧ್ಯಯನದ ಪ್ರಬಂಧ. ಆರು ಅಧ್ಯಾಯಗಳು ಹಾಗೂ ಅನುಬಂಧಗಳಿರುವ ಈ ಕೃತಿ ಸಂಶೋಧನೆ ಮತ್ತು ಕ್ಷೇತ್ರಕಾರ್ಯದ ಅಧ್ಯಯನಕ್ರಮದ ಸೂತ್ರಗಳನ್ನು ಬದಿಕಾನರು ಚೆನ್ನಾಗಿ ಅರಗಿಸಿಕೊಂಡಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ತುಂಬಾ ಚೊಕ್ಕವಾಗಿ ಮತ್ತು ಉಪಲಬ್ಧ ಮಾಹಿತಿಯನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡು ಅಚ್ಚುಕಟ್ಟಾಗಿ ಕೆಲಸಮಾಡುವ ಸಿದ್ಧಿ ಲೇಖಕರಿಗೆ ಲಭಿಸಿದೆ. ಆದರೆ ಇಂತಹ ಅಧ್ಯಯನಗಳು ಕೇವಲ ಯಾಂತ್ರಿಕವಾದ ಇಂತಹ ವರ್ಗೀಕರಣಗಳಲ್ಲಿ ನಿಲ್ಲದೆ ಅದನ್ನು ದಾಟಿ ಸಂಸ್ಕೃತಿಯನ್ನು ಅರ್ಥೈಸುವ ದಿಕ್ಕಿನಲ್ಲಿ ಸಾಗಬೇಕಾಗುತ್ತದೆ. ಈ ಅರ್ಥದಲ್ಲಿ ಈ ಅಧ್ಯಯನ ಕೇವಲ ವರ್ಗ ಮತ್ತು ಆಶಯ ಸೂಚಿಗಳನ್ನು ಪಟ್ಟಿಮಾಡುವುದರಲ್ಲಿಯೇ ನಿಂತುಬಿಡುತ್ತದೆ. ಅನುಬಂಧದಲ್ಲಿ ನೀಡಲಾಗಿರುವ ಪಠ್ಯ ಮತ್ತಿತರ ವಿವರಗಳು ಭಾಷಾವಿಜ್ಞಾನಿಗಳು ಮತ್ತು ಜಾನಪದ ಅಭ್ಯಾಸಿಗಳಿಗೆ ಉಪಯುಕ್ತವಾಗುವ ಮಾಹಿತಿಗಳಾಗಿವೆ.

ಬಿ. ಮಹಾದೇವಪ್ಪನವರ 'ಕೊಳ್ಳಿಹೊಡೆದ ಒಳ್ಳೆ ಪದಗಳು' ಕಡಕೋಳ ಮಡಿವಾಳಪ್ಪನವರ ಹಾಡುಗಳು, ಶಿಶುನಾಳ ಶರೀಫ, ಪುರಂದರದಾಸರಂತಹ ಸಂತರ ಹಾಡುಗಳಲ್ಲಿ ಬೆರೆತು ಪ್ರಕಟಗೊಂಡು ಮಡಿವಾಳಪ್ಪನವರಿಗೆ ಅನ್ಯಾಯವಾಗುತ್ತಿದೆ. ಎಂಬ ಕಳಕಳಿಯಿಂದ ಬಂದಂಥ ಪ್ರಕಟನೆಯಾಗಿದೆ. ಮೂಲತಃ ಹೈದರಾಬಾದ್ ಕರ್ನಾಟಕ ಪ್ರದೇಶ ಅದರಲ್ಲೂ ಕಲಬುರ್ಗಿ ಜಿಲ್ಲೆಯ ಸಾಹಿತಿಗಳು ಹಾಗೂ ಕಲಾವಿದರಿಗೆ ಅನ್ಯಾಯವಾಗುತ್ತಿದೆ; ಸೂಕ್ತ ಪ್ರಾತಿನಿಧ್ಯ ಸಿಗುತ್ತಿಲ್ಲ ಎಂಬ ಐಡೆಂಟಿಟಿಯ ಕ್ರೈಸಿಸ್‌ನಿಂದ ಬಂದಂತೆ ಕಾಣುವ ಈ ಲೇಖನ ಯಾರು ಈ ಹಾಡುಗಳ ಮೂಲಕರ್ತೃ ಎಂಬುದನ್ನು ಪ್ರತಿಸ್ಥಾಪಿಸುವ ನೆಲೆಗೆ ಹೋಗಿ ತಲುಪುತ್ತದೆ. ಭಕ್ತಿರಚನೆಗಳು ಒಬ್ಬ ನಿರ್ದಿಷ್ಟ ಕವಿ ನಿರ್ಮಿತವಾದವು ಹಾಗೂ ಅವುಗಳಿಗೆ ನಿರ್ದಿಷ್ಟವಾದ ಮತ್ತು

ಪುನಾರಚನೆ ಸಾಧ್ಯವಾಗಬಲ್ಲ ಪಠ್ಯವಿದೆ ಎಂದು ಭಾವಿಸುವ ಕವಿ ಮತ್ತು ಪಠ್ಯ ಕೇಂದ್ರೀಕೃತ ಚರ್ಚೆಯನ್ನು ನಾವು ಈಗ ಪುನರ್‌ಪರಿಶೀಲನೆಗೆ ಒಳಮಾಡುವ ಅವಶ್ಯಕತೆ ಇದೆ. ಮೌಖಿಕವಾಗಿ ಈವರೆಗೆ ಹರಿದು ಬಂದು, ಎಲ್ಲ ವಿಧವಾದ ಗುಂಪು, ಕೋಮು, ಜನಾಂಗಗಳಿಂದ ಪೋಷಣೆಯನ್ನು ಪಡೆದು, ಹಾಡಿ ಮುಂದುವರೆಸಲ್ಪಟ್ಟ ಈ ಭಕ್ತಿಪರಂಪರೆಯ ಹಾಡುಗಳು ಪಠ್ಯ ಮತ್ತು ಕವಿಕೇಂದ್ರದಿಂದ ಸಮುದಾಯಕೇಂದ್ರೀಕೃತ ಚರ್ಚೆಗಳಾಗಬೇಕಾಗಿದೆ. ಆಗ ಅವುಗಳಲ್ಲಿ ಅಡಗಿರುವ ಜಾತಿ ಮತ್ತು ಕೋಮುಗಳಿಂದ ಅತೀವವಾದ ವಸ್ತು, ಸಂಗೋಪನ ಮತ್ತು ಪ್ರಸರಣಗಳು ಭಕ್ತರಚನೆಗಳನ್ನು ಜಾತಿ, ಕೋಮು, ಪಠ್ಯ, ಕವಿ ಕೇಂದ್ರೀಕೃತ ಜಾತಿಗಳಿಂದ ಹೊರತರಲು ಸಾಧ್ಯವಾಗುತ್ತದೆ, ಆ ಮೂಲಕ ಅಂತಹ ರಚನೆಗಳ ಹಿಂದಿನ ಮನಸ್ಸು ಮತ್ತು ಸಮಾಜಗಳನ್ನು ಅರ್ಥಮಾಡಿಕೊಳ್ಳುವತ್ತ ನಮ್ಮನ್ನು ಕೊಂಡೊಯ್ಯಲು ಸಾಧ್ಯವಿದೆ.

ಶಿರೀಷ ಜೋಶಿಯವರ 'ಚೆಲುವ ಕನ್ನಡನಾಡು' ಅವರೇ ಹೇಳಿಕೊಂಡಿರುವಂತೆ ಕನ್ನಡ ನಾಡಿನ ಇತಿಹಾಸ, ಸಾಹಿತ್ಯ, ಸಂಸ್ಕೃತಿ, ಪರಂಪರೆಯ ಅಡಕವಾದ ಮಾಹಿತಿ (ಕೈಪಿಡಿ!). ಕರ್ನಾಟಕದ ಪ್ರಾಚೀನತೆಯಿಂದ ಉದಯವಾಯಿತು ನಮ್ಮ ಚೆಲುವ ಕನ್ನಡನಾಡುವರೆಗೆ ಸುಮಾರು ೩೦ ಲೇಖನಗಳಲ್ಲಿ ಎರಡು ಮೂರು ಪುಟಗಳ ಅಡಕ ಮಾಹಿತಿಯನ್ನು ಪ್ರತಿ ಶೀರ್ಷಿಕೆಯ ಮೇಲೆ ನೀಡಲಾಗಿದೆ. ಈ ಅಡಕಗೊಳಿಸುವ ಕ್ರಿಯೆಯೇ ಈ ಕೃತಿಯನ್ನು ಸಂಶೋಧನೆ ಹಾಗೂ ಅಧ್ಯಯನ ಕ್ರಮದ ವಿವಿಧ ಅಂಶಗಳಿಂದ ಹೊರತಾಗಿಸಿಬಿಟ್ಟಿದೆ. ಒಂದು ಮುನ್ನುಡಿ ಕೂಡ ಬರೆಯಲಾರದೆ ಪ್ರಕಟಗೊಂಡಿರುವ ಈ ಕೃತಿ ಯಾರಿಗಾಗಿ, ಯಾವ ಉದ್ದೇಶ್ಯದಿಂದ ಹಾಗೂ ಯಾವ ಧೋರಣೆಗಳಿಂದ ರಚನೆಯಾಯಿತು ಎಂಬುದನ್ನು ಕೂಡ ತಿಳಿಸದೇ ಹೋಗಿದೆ. ಸಂಶೋಧಕರಿಗೆ ಯಾವ ವಿಧದ ಮಾಹಿತಿಯನ್ನು ಕೂಡ ಒದಗಿಸದ ಈ ಕೃತಿ ಸಂಶೋಧನೆಗೆ ಒಂದು ಅಪವಾದದಂತಿದೆ.

ದಿವಸ್ಪತಿ ಹೆಗಡೆಯವರ 'ಕನ್ನಡ ನವ್ಯ ನಾಟಕ ಮತ್ತು ಪಾಶ್ಚಾತ್ಯ ಪ್ರಭಾವ' ಫ್ರೆಂಚ್ ತೌಲನಿಕ ಅಧ್ಯಯನ ಪಂಥದ ವಿಶ್ಲೇಷಣಾವಳಿಗಳನ್ನು ಆಧರಿಸಿ ಮಾಡಿದ ಅಧ್ಯಯನದಂತೆ ಕಾಣುತ್ತದೆ. ಪಾಶ್ಚಾತ್ಯ ಪ್ರಭಾವವನ್ನು ಕನ್ನಡದ ನವ್ಯನಾಟಕಗಳ ಮೇಲೆ ಗುರುತಿಸುತ್ತಾ ಕನ್ನಡದ ಸಾಂಸ್ಕೃತಿಕ ಸಂದರ್ಭದಲ್ಲಿ ರೂಪುಗೊಂಡ ಕನ್ನಡ ನಾಟಕಗಳ ಸಾಲುಗಳ ಮೂಲವನ್ನು ಪಾಶ್ಚಾತ್ಯ ನಾಟಕಗಳ ಸಾಲುಗಳಲ್ಲಿ ಹುಡುಕುವ ಪತ್ತೇದಾರಿ ಕೆಲಸವನ್ನು ಲೇಖಕರು ಮಾಡಿದ್ದಾರೆ. ಸಾಹಿತ್ಯ ಕೃತಿಯೊಂದು ಅನುವಾದವೇ ಆಗಿರಲಿ ಸ್ವತಂತ್ರ ಕೃತಿಯೇ ಆಗಿರಲಿ ಅದು ಹುಟ್ಟಿಬಂದ ಸಾಂಸ್ಕೃತಿಕ ಪರಿಸರವನ್ನು ಪರೋಕ್ಷವಾಗಿಯೋ ಪ್ರತ್ಯಕ್ಷವಾಗಿಯೋ ಉದ್ದೇಶಿಸುವುದು ಅನಿವಾರ್ಯ. ಈ ಅರ್ಥದಲ್ಲಿ ಪ್ರಭಾವ ಮಾಡಿದ ಕೃತಿ ಮತ್ತು ಅದರ ಪರಿಸರಕ್ಕೆ ಕೇಂದ್ರೀಕೃತಗೊಳ್ಳುವ ಚರ್ಚೆ ಪ್ರಭಾವ (influence)ಕ್ಕೆ ಒತ್ತುಕೊಡುವ ವಸಾಹತುಶಾಹಿ ಅಧ್ಯಯನದ ಧೋರಣೆಯಾಗಿದ್ದು ಹೆಗಡೆಯವರ ಅಧ್ಯಯನ ಚೌಕಟ್ಟಿನ ಅವಿಭಾಜ್ಯ ಅಂಗವಾಗಿರುವಂತೆ ಭಾಸವಾಗುತ್ತದೆ. ಕೃತಿಚೌರ್ಯದ ಬೆನ್ನುಹತ್ತಿ ಹೊರಟರೆ ಕನ್ನಡದ

ನಾಟಕ ಪರಂಪರೆ ಮತ್ತು ಸಾಂಸ್ಕೃತಿಕ ಸಂದರ್ಭಗಳು ವಿಶ್ಲೇಷಕನಿಗೆ ಎಷ್ಟು ಗೌಣವಾಗಬಹುದು ಎಂಬುದನ್ನು ಈ ಅಧ್ಯಯನ ಸ್ಪಷ್ಟವಾಗಿ ತೋರಿದೆ.

ಸಿ. ಪಿ. ಕೆ ಅವರ 'ಜನ್ನನ ಯಶೋಧರ ಚರಿತಂ:ಒಂದು ಸಮೀಕ್ಷೆ' ವಾದಿರಾಜನ ಯಶೋಧರ ಚಂಪೂ ಮತ್ತು ಜನ್ನನ ಯಶೋಧರ ಚರಿತೆಗಳ ತಾಲನಿಕ ಪರ್ಯಾಲೋಚನೆಯನ್ನು ಒಳಗೊಂಡಿದೆ ಎಂದು ಹೇಳಿಕೊಳ್ಳುತ್ತದೆ. ೪೪ ಪುಟಗಳ ಈ ಪರ್ಯಾಲೋಚನೆಯಲ್ಲಿ ಸುಮಾರು ೧೯ ಪುಟಗಳನ್ನು ಕಥಾಸಾರ ಮತ್ತು ಆಕರ ಮಾಹಿತಿಗಳು ಆಕ್ರಮಿಸಿವೆ. ಉಳಿದ ೨೫ ಪುಟಗಳಲ್ಲಿ ವಾದಿರಾಜ ಮತ್ತು ಜನ್ನರ ತಾಲನಿಕ ಅಧ್ಯಯನ, ಕೃತಿಯ ಪ್ರಣಯ ಸಮಸ್ಯೆಯನ್ನು ಕುರಿತಾದ ಚರ್ಚೆ, ಕವಿಯ ಉದ್ದೇಶ್ಯ, ಕವಿತಾಕಲೆ ಹಾಗೂ ಒಟ್ಟುನೋಟ ಎಂಬ ಶೀರ್ಷಿಕೆಯ ಕೆಳಗೆ ಮೂರು ಅಥವಾ ನಾಲ್ಕು ಪುಟಗಳ ಪರಿಚಯಾತ್ಮಕ ಬರವಣಿಗೆ ಇದೆ. ತಾಲನಿಕ ಅಧ್ಯಯನದ ದೃಷ್ಟಿಯಿಂದಗಲಿ ಅಥವಾ ಯಶೋಧರ ಚರಿತೆಯ ಬಗ್ಗೆ.ಆಗಲಿ ಈ ತನಕ ಬಂದಿರುವ ಬರಹಗಳಿಗಿಂತ ಹೊಸದಾಗಿ ಏನನ್ನೂ ಹೇಳಲು ಲೇಖಕರಿಗೆ ಸಾಧ್ಯವಾಗಿಲ್ಲ.

ಕೆ. ವಿ. ಅಕ್ಷರರವರ 'ರಂಗಪ್ರಪಂಚ' ಪ್ರಪಂಚದ ರಂಗಭೂಮಿಗಳ ಪರಿಚಯಾತ್ಮಕ ಅಧ್ಯಯನ ಎಂದು ತನ್ನನ್ನು ಕರೆದುಕೊಂಡಿದೆ. ಆದರೆ ಚೊಕ್ಕಟವಾಗಿ ಆಳವಾದ ಪರಿಶ್ರಮ ಹಾಗೂ ಶ್ರದ್ಧೆಗಳಿಂದ ಹಲವಾರು ವರ್ಷಗಳ ಬೋಧನೆಯ ಮೂಲಕ ಪರಿಪಕ್ವಗೊಂಡು ಹೊರಬಂದಿರುವ ಈ ಕೃತಿ ಒಂದು ಅಮೂಲ್ಯವಾದ ಕೊಡುಗೆ. ಏಳು ಭಾಗಗಳಲ್ಲಿ ಪಾಶ್ಚಾತ್ಯ ಮತ್ತು ಭಾರತೀಯ ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ರಂಗಭೂಮಿಯ ಪರಿಚಯ ಹಾಗೂ ಪೂರ್ವದ ಆಧುನಿಕ ಪೂರ್ತಿ ರಂಗಭೂಮಿಯ ಪರಿಚಯವನ್ನು ಖಚಿತವಾಗಿ ಮತ್ತು ಸಮರ್ಪಕವಾಗಿ ಮಾಡಿಕೊಡಲಾಗಿದೆ. ಈ ದೃಷ್ಟಿಯಿಂದ ನೋಡಿದಾಗ ಪರಿತಯಾತ್ಮಕ ಅಧ್ಯಯನ ಎಂದು ಹೇಳಿಕೊಂಡಿದ್ದರೂ. ಸಂಶೋಧನೆಯಾಗುವ ಅನೇಕ ಲಕ್ಷಣಗಳನ್ನು ಈ ಅಧ್ಯಯನ ಪಡೆದಿದೆ: ಆದರೂ ಇಷ್ಟೆಲ್ಲ ಸಮರ್ಪಕತೆಗಳ ನಡುವೆ ಕೆಲವು ಅಂಶಗಳು ಎದ್ದುಕಾಣುವಂತಿದೆ. ಹಿಂಪುಟದ ಚಿತ್ರಗಳನ್ನು ನೀಡಲಾಗಿರುವ ಪೂರ್ವದ ಮುಖವಾಡಗಳು ಪ್ರತಿನಿಧಿಸುತ್ತಿರುವ ಪೂರ್ವದ ರಂಗಭೂಮಿಯ ಬಗ್ಗೆ (ಅದನ್ನು ಆಧುನಿಕ ಪೂರ್ವ ಎಂದು ಒಟ್ಟಾಗಿ ಕರೆಯಲಾಗಿದೆ) ಬಂದಿರುವ ಚರ್ಚೆ ಸುಮಾರು ೨೨ ಪುಟಗಳು ಮಾತ್ರ. ಇದು ಒಂದು ಬಗೆಯ ಅಸಮತೋಲನೆಯನ್ನು ಉಂಟುಮಾಡಿದೆ. ಎರಡನೆಯದಾಗಿ ಭಾರತೀಯ ರಂಗಭೂಮಿಯ ಬಗ್ಗೆ ಮಾಡಿರುವ ವಿವರಣೆ, ವಿಶ್ಲೇಷಣೆಗಳಿಗೂ ಪಾಶ್ಚಾತ್ಯ ರಂಗಭೂಮಿಯ ವಿವರಣ ವಿಶ್ಲೇಷಣೆಗಳೂ ತೌಲನಿಕವಾಗಿ ಭಿನ್ನ ನೆಲೆಯಲ್ಲಿ ನಿಂತು. ಮಾಡಿರುವಂತೆ ಕಂಡುಬರುತ್ತದೆ. ಮೂರನೆಯದಾಗಿ ಅನೇಕ ಅಭಿಪ್ರಾಯಗಳು ಮತ್ತು ಚಿಂತನೆಗಳನ್ನು ಅವುಗಳ ಮೂಲ ಚಿಂತಕರ ಹೆಸರನ್ನು ಉದ್ಧರಿಸದೆ ಮಂಡಿಸಲಾಗಿದೆ. ಈ ಬಗೆಯ ಮಂಡನೆ ಇನ್ನಷ್ಟು ಖಚಿತವಾಗಬಹುದಿತ್ತು. ಅಂತೆಯೇ ಅನೇಕ ಚಿತ್ರಗಳನ್ನು ಅನ್ಯಮೂಲಗಳಿಂದ ತೆಗೆದುಕೊಂಡಂತೆ ಕಾಣುತ್ತಿದ್ದು ಅವುಗಳ ಆಕರಗಳನ್ನು ಕೊಡುವ ಅಗತ್ಯವಿತ್ತು.

ನೌಂಟಂಕಿಯ ಬಗ್ಗೆ ಬಂದಿರುವ ಶಾಬ್ದಿಕ ವಿವರಣೆಯ ಚಾಕ್ಷುಕ ರೂಪವಾದ ಹಾಗೂ ಆ ವಿವರಗಳಿಲ್ಲದ ಒಂದು ರೇಖಾಚಿತ್ರದ ಬದಲಿಗೆ ಒಂದು ಉತ್ತಮ ಛಾಯಚಿತ್ರ ನೀಡಬಹುದಿತ್ತು. ಆದರೆ ಈ ಎಲ್ಲ ಮಿತಿಗಳನ್ನು ದಾಟಿ ಒಂದು ಅಮೂಲ್ಯ ಮಾಹಿತಿ ದಾಖಿಲೆಯಾಗಬಲ್ಲ ಶಕ್ತಿ ಈ ಕೃತಿಗೆ ಇದೆ.

ಸಂಶೋಧನೆ ಒಂದು ಭಾಷೆ ತನ್ನ ವೈಚಾರಿಕ, ತಾತ್ವಿಕ ನಿಲುವುಗಳನ್ನು ನಿರ್ವಚಿಸಿಕೊಳ್ಳುವ ಹಾಗೂ ಅದರ ಬೆಳಕಿನಲ್ಲಿ ಭೂತ ಮತ್ತು ವರ್ತಮಾನಗಳನ್ನು ಕಾಡುವ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವ ಚಿಂತನೆಗಳು. ಇದನ್ನು ಸಮರ್ಥವಾಗಿ ರೂಪಿಸಿಕೊಳ್ಳಬೇಕಾದ ಅಗತ್ಯವಿದ್ದು ಈ ದಿಕ್ಕಿನಲ್ಲಿ ಸಂಶೋಧಕರು ಪ್ರಾಮಾಣಿಕವಾದ ಹಾಗೂ ಆಳವಾದ ಪ್ರಯತ್ನಗಳನ್ನು ಕೈಗೊಳ್ಳಬೇಕಾದ ಅಗತ್ಯವಿದೆ.

# ಸಂಶೋಧನೆ-೨

*ಎಸ್. ಎಸ್. ಅಂಗಡಿ*

ಪ್ರತಿ ವರ್ಷ ಸಾವಿರಾರು ಪುಸ್ತಕಗಳು ಪ್ರಕಟವಾಗುತ್ತವೆ. ಅವುಗಳಲ್ಲಿ ಲಾಕ್ಷಣಿಕ ವಿಷಯಗಳಿಗೆ ಸಂಬಂಧಪಟ್ಟ ಗ್ರಂಥಗಳು ವಿರಳ. ಆದರೆ ಈ ವರ್ಷ ಕೆಲವು ಉತ್ತಮ ಗ್ರಂಥಗಳು ಪ್ರಕಟವಾಗಿವೆ ಹಳೆಗನ್ನಡ ಮತ್ತು ಮರಾಠೀ ನಿಘಂಟು ರಚನಾ ವಿಜ್ಞಾನ, ಎರಡು ಮಹತ್ವದ ಗ್ರಂಥಗಳು. ಕಿಟೆಲ್‌ರ ಸಾಧನೆಯನ್ನು ವಿವರಿಸುವ ಒಂದು ಪಿಎಚ್. ಡಿ. ನಿಬಂಧ ಬಂದಿದೆ. ಉಳಿದವು ಶಾಲಾ ವ್ಯಾಕರಣಗಳಿಗೆ ಸಂಬಂಧ ಪಟ್ಟವು.

* * * *

ನಿಘಂಟು ರಚನಾ ವಿಜ್ಞಾನ ಎಂಬುದು ಡಾ. ವಿಲ್ಯಂ ಮಾಡ್ತ ಮತ್ತು ಆರ್.ವೈ. ಕುಲಕರ್ಣಿಯವರು ಜೊತೆ ಸೇರಿ ಬರೆದ ಗ್ರಂಥ: ಕನ್ನಡದಲ್ಲಿ ಅನೇಕ ನಿಘಂಟುಗಳು ಬಂದಿವೆ ನಿಜ. ಆದರೆ ನಿಘಂಟನ್ನು ಯಾವ ರೀತಿಯಾಗಿ ಸಿದ್ಧಪಡಿಸಬೇಕು ಎಂಬುದನ್ನು ಕುರಿತ ಸೈದ್ಧಾಂತಿಕ ಗ್ರಂಥಗಳು ಬಂದಿರಲಿಲ್ಲ. ಕಳೆದ ವರ್ಷ ಪ್ರೊ. ಜಿ. ವೆಂಕಟಸುಬ್ಬಯ್ಯನವರ 'ಕನ್ನಡ ನಿಘಂಟು ಶಾಸ್ತ್ರ ಪರಿಚಯ' ಎಂಬ ಗ್ರಂಥ ಬಂದರೂ ಅದು ಅವರ ಸ್ವಅನುಭವಗಳನ್ನು ಹೆಚ್ಚು ಒಳಗೊಂಡಿದೆ. ಪ್ರಸ್ತುತ 'ನಿಘಂಟು ರಚನಾ ವಿಜ್ಞಾನವು' ನಿಘಂಟು ರಚನೆಯ ತತ್ವಗಳನ್ನೊಳಗೊಂಡು ಸಿದ್ಧಪಡಿಸಿದ ಗ್ರಂಥವಾಗಿದೆ.

ಈ ಗ್ರಂಥದಲ್ಲಿ ಆರು ಅಧ್ಯಾಯಗಳಿವೆ. ನಿಘಂಟು ವಿಜ್ಞಾನ, ನಿಘಂಟು ರಚನೆ, ಕನ್ನಡ ನಿಘಂಟುಗಳ ಬೆಳವಣಿಗೆ ಈ ಮೂರು ಅಧ್ಯಾಯಗಳಲ್ಲಿ ನಿಘಂಟನ್ನು ರಚಿಸುವಾಗ ಬೇಕಾಗುವ ನಿಘಂಟಿಮಗಳನ್ನು ಸಂಗ್ರಹಿಸುವ ರೀತಿ, ಅವುಗಳ ದಾಖಲಿಸುವಿಕೆಯ ಚರ್ಚೆಯಿದೆ. ನಿಘಂಟನ್ನು ಏಕಕಾಲಿಕ, ಬಹುಕಾಲಿಕ ಎಂದು ಎರಡು ರೀತಿಯಾಗಿ ವರ್ಗೀಕರಿಸಿ ಅವುಗಳ ರಚನಾ ವಿಧಾನವನ್ನು ತಿಳಿಸಿದ್ದಾರೆ. ನಿಘಂಟು ರಚನೆಯಲ್ಲಿ ಕ್ಷೇತ್ರ ಕಾರ್ಯದ ಮಹತ್ವವನ್ನು ಲೇಖಕರು ಒತ್ತಿ ಹೇಳಿರುವುದು ಸಹಜವೆ ಆಗಿದೆ. ಇನ್ನು ಮೂರು ಅಧ್ಯಾಯಗಳಲ್ಲಿ ನಿಘಂಟು ರಚನೆಯ ತತ್ವಗಳನ್ನು ವೃತ್ತಿಪದಕೋಶಕ್ಕೆ ಅನ್ವಯ ಮಾಡಿಕೊಂಡಿದ್ದಾರೆ. ಭಾರತದಲ್ಲಿ ವೃತ್ತಿಪದಕೋಶಗಳ ಚರಿತ್ರೆಯನ್ನು ಸೋದಾಹರಣವಾಗಿ ವಿವರಿಸಿದ್ದಾರೆ. ಕನ್ನಡದಲ್ಲಿ ಬಂದಿರುವ ಮೂರು ವೃತ್ತಿಪದಕೋಶಗಳ ರಚನಾ ವಿಧಾನದ ಬಗ್ಗೆ ವಿವರಣೆ ಆವಶ್ಯಕತೆ ಇತ್ತು. ಒಂದು ನಿರ್ದಿಷ್ಟ ವೃತ್ತಿಸಮುದಾಯದ ಸಂಸ್ಕೃತಿಯನ್ನರಿಯಲು ವೃತ್ತಿಪದಕೋಶಗಳು ಆವಶ್ಯಕವಾಗಿವೆ. ವೃತ್ತಿಪದಕೋಶದ ಸ್ವರೂಪ ಮತ್ತು ರಚನೆಯಲ್ಲಿ ಲೇಖಕರು ಕೃಷಿ,

ನೇಕಾರಿಕೆ ವೃತ್ತಿಗಳ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ಸಂಶೋಧಕ ನಿಘಂಟಿಮಗಳ ಸಂಗ್ರಹಕ್ಕಾಗಿ ಕ್ಷೇತ್ರಕಾರ್ಯಕ್ಕೆ ಹೋದಾಗ ಅವನಿಗೆ ಬೇಕಾದ ಆವಶ್ಯಕ ಸಾಧನವೆಂದರೆ ಪ್ರಶ್ನಾವಳಿ. ಲೇಖಕರು ವೃತ್ತಿ ಪದಕೋಶಕ್ಕೆ ಸಂಬಂಧಿಸಿದ ಮಾದರಿ ಪ್ರಶ್ನಾವಳಿಯೊಂದನ್ನು ಕೊಟ್ಟು ಉಪಕರಿಸಿದ್ದಾರೆ.

ಪುಸ್ತಕದ ಕೊನೆಯಲ್ಲಿ ಶಬ್ದಸೂಚಿ ಇರಬೇಕಾಗಿತ್ತು. ಇದು ಹೊಸ ವಿಷಯವಾದುದರಿಂದ ಹೆಚ್ಚು ಹೆಚ್ಚು ಉದಾಹರಣೆಗಳ ಆವಶ್ಯಕತೆ ಇದ್ದವು. ವಿಷಯ ನಿರೂಪಣೆಯಲ್ಲಿ ನಿಖರತೆ, ಸ್ಪಷ್ಟತೆ ಶಾಸ್ತ್ರವಿಷಯವನ್ನು ಯಾವುದೇ ಸಂದೇಹಕ್ಕೆಡೆಯಿಲ್ಲದೆ ಹೇಳುವ ರೀತಿ ಲೇಖಕರಿಗಿದೆ. ನಿಘಂಟುವಿಜ್ಞಾನವು ಭಾಷಾಶಾಸ್ತ್ರದ ಒಂದು ಅಂಗವಾಗಿ ಬೆಳೆದಿದೆ. ಕರ್ನಾಟಕದಲ್ಲಿ ಇದು ಶೈಶವಾವಸ್ಥೆಯಲ್ಲಿದೆ. ಕೋಶಗಳನ್ನು ರಚಿಸುವಾಗ ಅದರಲ್ಲೂ ವೃತ್ತಿಪದಕೋಶ, ಉಪಭಾಷಾಕೋಶ 'ಸಿದ್ಧಪಡಿಸುವಾಗ ಪ್ರಸ್ತುತ ನಿಘಂಟು ರಚನಾ ವಿಜ್ಞಾನ ''ಗ್ರಂಥದ ನೆರವು ಅತ್ಯಗತ್ಯ ಎಂಬುದರಲ್ಲಿ ಸಂದೇಹವಿಲ್ಲ.'

'ರೆ.ಎಫ್. ಕಿಟಲ್ ಒಂದು ಸಮಗ್ರ ಅಧ್ಯಯನ' ಇದು ಕೆ.ಎಂ. ಮ್ಯಾಥ್ಯೂರವರ ಪಿಎಚ್.ಡಿ ನಿಬಂಧ. ಕನ್ನಡಕ್ಕೆ ಕ್ರೈಸ್ತ ವಿದ್ವಾಂಸರ ಕೊಡುಗೆ ಎಂದಾಕ್ಷಣ ಕೂಡಲೆ ನೆನಪಾಗುವುದು ಕಿಟೆಲ್‌ರವರ ಕನ್ನಡ- ಇಂಗ್ಲಿಷ್ ನಿಘಂಟು. ಕಿಟೆಲ್‌ರ ಜೀವನ ಸಾಧನೆಯನ್ನೊಳಗೊಂಡ ಸಮಗ್ರ ಅಧ್ಯಯನ ಈವರೆಗೆ ನಡೆದಿರಲಿಲ್ಲ. ಈ ಕೊರತೆಯನ್ನು ಶ್ರೀ ಮ್ಯಾಥ್ಯೂರವರು ಹೋಗಲಾಡಿಸಿದ್ದಾರೆ. ಈ ನಿಬಂಧದಲ್ಲಿ ಹನ್ನೊಂದು ಅಧ್ಯಾಯಗಳಿವೆ. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಎಂಬ ಮೊದಲನೆಯ ಅಧ್ಯಾಯದಲ್ಲಿ ಕಿಟೆಲ್‌ರ ಬಗ್ಗೆ ಈವರೆಗೆ ನಡೆದಿರುವ ಕಾರ್ಯವನ್ನು ಸಮೀಕ್ಷಿಸಿ ಅವುಗಳಲ್ಲಿ ಕೊರತೆಯನ್ನು ತೋರಿಸಿದ್ದಾರೆ. ಎರಡನೆಯ ಅಧ್ಯಾಯದಲ್ಲಿ ಕಿಟೆಲ್ಲರು ಸೇವೆಸಲ್ಲಿಸಿದ ಬಾಸೆಲ್ ಮಿಶನ್ ಶಿಕ್ಷಣ ಸಂಸ್ಥೆಯ ಪರಂಪರೆಯನ್ನು ನಂತರದ ಅಧ್ಯಾಯಗಳಲ್ಲಿ ಕಿಟೆಲ್‌ರ ಸಾಹಿತ್ಯಿಕ ಕಾರ್ಯವನ್ನು ವಿವರಿಸಲಾಗಿದೆ. ಈ ಭಾಗದಲ್ಲಿ ಕಿಟೆಲ್ಲರ ಧಾರ್ಮಿಕ ಕೃತಿಗಳು, ಪಠ್ಯ ಪುಸ್ತಕಗಳು, ಗ್ರಂಥ ಸಂಪಾದನೆ, ಕೋಶ ರಚನೆ. ಮತ್ತು ಭಾಷಾಶಾಸ್ತ್ರಕ್ಕೆ ಕಿಟೆಲ್‌ರ ಕೊಡುಗೆಯನ್ನು ಚರ್ಚಿಸಿದುದು ಮೆಚ್ಚತಕ್ಕದ್ದು. ನಿಬಂಧ ರಚನೆಯಲ್ಲಿ ಅಪಾರವಾದ ಸಾಮಗ್ರಿ ಸಂಗ್ರಹಿಸಿ ವ್ಯವಸ್ಥಿತವಾಗಿ ಸಂಯೋಜಿಸಿದ್ದಾರೆ. ೧೦ನೇ ಅಧ್ಯಾಯದಲ್ಲಿ ಕಿಟೆಲ್‌ಕೋಶದ ಬಗ್ಗೆ ಹೇಳುವಾಗ ಕಿಟೆಲ್ ನಿಘಂಟಿಗೂ ಗುಂಡರ್ಟ್ ಅಪ್ಪೆಕೋಶಗಳ ತೌಲನಿಕ ವಿವೇಚನೆ ಮಾಡಿದ್ದಾರೆ. ಅದು ಸಮರ್ಪಕವಾಗಿದೆ. ಕಿಟೆಲ್ ಕೋಶದ ಕೆಲವು ಕುಂದುಕೊರತೆಗಳನ್ನು ತೋರಿಸಿದ್ದಾರೆ. ಆ ವೇಳೆಯಲ್ಲಿ ಸಂಶೋಧಕರ ನಿಷ್ಪಕ್ಷಪಾತ ಮನೋಭಾವ ಮೆಚ್ಚಿಕೆಗೆ ಪಾತ್ರವಾಗಿದೆ.

ಡಾ. ಮ್ಯಾಥ್ಯೂರವರಿಗೆ ಕಿಟೆಲ್ ಶಬ್ದಕೋಶದ ರಚನಾ ವಿಧಾನದ ಬಗ್ಗೆ ಹೆಚ್ಚಿನ ಬೆಳಕನ್ನು ಬೀರಲು ಸಾಧ್ಯವಾಗಿಲ್ಲ, ಆಧುನಿಕ ನಿಘಂಟು ರಚನಾ ಶಾಸ್ತ್ರದ ಹಿನ್ನೆಲೆಯಲ್ಲಿ ಅದನ್ನು ವಿಶ್ಲೇಷಣೆ ಮಾಡಲು ಕಿಟೆಲ್ ಶಬ್ದಕೋಶದ ಬಗ್ಗೆ ವಿಸ್ತಾರವಾಗಿ ವಿಷಯ

ಪ್ರತಿಪಾದನೆ ಮಾಡಲು ಆಗಿಲ್ಲ ಅನಿಸುತ್ತದೆ. ಏಕೆಂದರೆ ಕಿಟೆಲ್ ಎಂದರೆ ಶಬ್ದಕೋಶ, ಶಬ್ದಕೋಶ ಎಂದರೆ ಕಿಟೆಲ್. ಅಷ್ಟರ ಮಟ್ಟಿಗೆ ಅವು ಜೋಡಿ ಪದಗಳಾಗಿವೆ. ಕಿಟೆಲ್‌ರ ಹೆಸರು ಶಾಶ್ವತವಾಗಿ ಉಳಿಯಬೇಕಾದರೆ ಅವರ ಶಬ್ದಕೋಶವೊಂದೇ ಸಾಕು. ಎಲ್ಲಿ ನಾವು ಹೊಸತನ್ನು ನಿರೀಕ್ಷಿಸುತ್ತೇವೊ ಅಲ್ಲಿ ಮ್ಯಾಥ್ಯೂ ನಿರಾಶೆಗೊಳಿಸುತ್ತಾರೆ. ಅಧ್ಯಾಯ ೧೦ರಲ್ಲಿ ಕಿಟೆಲ್ ಶಬ್ದಕೋಶದ ಬಗ್ಗೆ ಹೇಳುವಾಗ ನಾನಾರ್ಥ ಶಬ್ದಕೋಶ, ಸಮಾನಾರ್ಥ ಶಬ್ದಕೋಶ, ಶಬ್ದಕೋಶದ ಪ್ರಕಾರಗಳು ಇವುಗಳ ಚರ್ಚೆ ನಿಬಂಧದಲ್ಲಿ ಅನಗತ್ಯವಾಗಿ ಬಂದಿದೆ.

ಅಧ್ಯಾಯ ೫, ೬ ಕಿಟೆಲ್‌ರ ಪುಸ್ತಕಗಳು, ಕಿಟೆಲ್‌ರ ಗ್ರಂಥ ಸಂಪಾದನೆ ಎಂದು ಪ್ರತ್ಯೇಕ ಅಧ್ಯಾಯ ಮಾಡಿರುವುದು ಅನಗತ್ಯ. ಕಿಟೆಲರ ಸಾಹಿತ್ಯ ಚರಿತ್ರೆಯ ಅಧ್ಯಯನ, ಕಿಟೆಲರ ಸಂಶೋಧನ ಲೇಖನಗಳು ಇವು ವಿದ್ಯಾರ್ಥಿಗಳು ಪರೀಕ್ಷೆಗೆ ಸಿದ್ಧತೆ ಮಾಡಿಕೊಂಡ ಟಿಪ್ಪಣಿಗಳಂತಿವೆ. ಲೇಖಕರು ಛಂದಸ್ಸು, ವ್ಯಾಕರಣ, ಭಾಷಾಶಾಸ್ತ್ರಕ್ಕೆ ಕಿಟೆಲರ ಕೊಡುಗೆ ಮತ್ತು ಕಿಟೆಲ್‌ರ ಸಂಶೋಧನೆಯ ವಿಧಾನದ ಬಗ್ಗೆ ಒತ್ತಿ ಹೇಳಿಲ್ಲ. ಈ ಸಂಶೋಧಕರು ಡಾ. ವಿಲ್ಯಂ ಮಾಡ್ತ ರವರ ನಿಘಂಟು ರಚನಾ ವಿಜ್ಞಾನ, ಮತ್ತು ಕಿಟೆಲ್ ಜೀವನ ಸಾಧನೆ ಮತ್ತು ಕೋಶ ರಚನೆ ಎಂಬ ಗ್ರಂಥಗಳನ್ನು ಬಳಸಿಕೊಂಡರೂ ಗ್ರಂಥಸೂಚಿಯಲ್ಲಿ ಅವರ ಕೃತಿಗಳ ಹೆಸರುಗಳೇ ಇಲ್ಲ. ಅವರ ಸೂಚನೆಗಳ ಉಲ್ಲೇಖಗಳೂ ಇಲ್ಲ. ಕೋಶರಚನೆಯ ವಿಧಾನದ ಬಗ್ಗೆ ಡಾ. ಮಾಡ್ತ ರವರು ಪಟ್ಟ ಶ್ರಮ, ಮಾಡಿದ ಆಲೋಚನೆ ಅಪಾರವಾದುದು. ಡಾ. ಮ್ಯಾಥ್ಯೂರವರು ಇದನ್ನು ಗಮನಿಸಬೇಕಿತ್ತು.

ಕೆಲವು ಅಧ್ಯಾಯಗಳು ಪರಿಚಯಾತ್ಮಕವಾಗಿವೆ. ಅನೇಕ ಕಡೆಗೆ ವಿಷಯದ ಮೇಲ್ಮೈಯನ್ನೆ ನೋಡುವ ಪ್ರವೃತ್ತಿ ಇದೆ. ಪುಸ್ತಕದ ಕೊನೆಯಲ್ಲಿ ಶಬ್ದಸೂಚಿ ಇಲ್ಲದಿರುವುದು ಗ್ರಂಥದ ಮೌಲ್ಯವನ್ನು ತಗ್ಗಿಸಿದೆ. ಒಟ್ಟಾರೆ ಇದು ನಿರಾಶೆಯನ್ನುಂಟು ಮಾಡುವ ನಿಬಂಧವಾಗಿದೆ. ಈ ಗ್ರಂಥಕ್ಕೆ ಡಾ. ಎಂ.ಎಂ. ಕಲಬುರ್ಗಿ ಯವರ ಮುನ್ನುಡಿ ಇದೆ.

'ಹಳಗನ್ನಡ ಮತ್ತು ಮರಾಠಿ' ಎಂಬುದು ರಂ.ಶ. ಲೋಕಾಪುರರವರ ಗ್ರಂಥ. ಲೇಖಕರು ಕನ್ನಡ ಮತ್ತು ಮರಾಠಿ ಎಂಬ ಭಾಗದಲ್ಲಿ ಕನ್ನಡ ಮರಾಠಿ ಭಾಷೆಗಳ ಭಾಷೆ ಮತ್ತು ಸಂಸ್ಕೃತಿಗಳ ಸಂಬಂಧವನ್ನು ಹೇಳಿದ್ದಾರೆ; ಅಪಭ್ರಂಶ, ಮರಾಠಿ ಹಾಗೂ ಕನ್ನಡ ಎಂಬ ಪ್ರತ್ಯೇಕ ಅಧ್ಯಾಯವಿದ್ದು ಲೇಖಕರು ಈ ಮೂರು ಭಾಷೆಗಳ ಸಂಬಂಧವನ್ನು ಚರ್ಚಿಸಿದ್ದಾರೆ. ಅಪಭ್ರಂಶ ಭಾಷೆಯ ಮೇಲೆ ದ್ರಾವಿಡ ಭಾಷೆ, ವ್ಯಾಕರಣಗಳ ಪ್ರಭಾವ ಕುರಿತು ಪ್ರತ್ಯೇಕ ಸಂಶೋಧನೆ ಇನ್ನೂ ಆಗಬೇಕಿದೆ. ಮರಾಠಿ ಭಾಷೆಯಲ್ಲಿನ ವಿಭಕ್ತಿಪ್ರತ್ಯಯ ಮತ್ತು ಆಖ್ಯಾತ ಪ್ರತ್ಯಯ ಹಳಗನ್ನಡದ ಪ್ರತ್ಯಯಗಳೊಡನೆ ಹೋಲಿಸಿ ನೋಡಲು ಯತ್ನಿಸಿ ಸಫಲರಾಗಿದ್ದಾರೆ. ವ್ಯಾಕರಣದ ಜೀವಾಳವಾದ ಪ್ರತ್ಯಯಗಳಲ್ಲಿಯೂ ಎರಡು ಭಾಷೆಗಳ ಸಂಬಂಧವನ್ನು ಶೋಧಿಸಿದ್ದಾರೆ. ಸಂದರ್ಭಕ್ಕೆ

ತಕ್ಕಂತೆ ಉತ್ತರ ಕರ್ನಾಟಕದ ಆಡುನುಡಿಯಲ್ಲಿ ಬಳಕೆಯಾದ ವಿಭಕ್ತಿ ಮತ್ತು ಆಖ್ಯಾತ ಪ್ರತ್ಯಯಗಳನ್ನು ಉದಾಹರಿಸಿದ್ದಾರೆ.

ಜ್ಞಾನೇಶ್ವರೀ ಕಾಲೀನ ಮರಾಠಿಯಲ್ಲಿಯ ಕೆಲವು ಹಳಗನ್ನಡ ಶಬ್ದ ಪ್ರಯೋಗಗಳು, ಪ್ರತ್ಯಯಗಳು ಅವು ಮರಾಠಿ ಭಾಷೆಯಲ್ಲಿ ಬಳಕೆಯಾದ ಅರ್ಥ ಮತ್ತು ಸಂದರ್ಭವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಕನ್ನಡ- ಮರಾಠಿ ಸಂಬಂಧ ಕೇವಲ ಭಾಷೆಗಷ್ಟೇ ಸೀಮಿತವಾಗಿರದೆ ಸಂಸ್ಕೃತಿಗೂ ಸೀಮಿತವಾಗಿದೆ ಎಂಬುದನ್ನು ತಿಳಿಯಲು ಈ ಭಾಗ ತುಂಬ ಮಹತ್ವಪೂರ್ಣವಾಗಿದೆ. ಈ ಇಂಡೋ ಆರ್ಯನ್ ಭಾಷೆಯು ಹಳಗನ್ನಡದ ಅನೇಕ ವ್ಯಾಕರಣರೂಪಗಳನ್ನು ತನ್ನದಾಗಿಸಿಕೊಂಡಿದೆ.

ಕನ್ನಡ ಮತ್ತು ಮರಾಠಿ ಭಾಷೆಗಳು ಬೇರೆ ಬೇರೆ ಭಾಷಾವರ್ಗಗಳಿಂದ ಹುಟ್ಟಿಬಂದ ಭಾಷೆಗಳಾಗಿದ್ದರೂ ಅವುಗಳಲ್ಲಿ ಸಮಾನ ಅಂಶಗಳಿವೆ. ಮಹಾರಾಷ್ಟ್ರವು ನಮ್ಮ ನೆರೆಯ ರಾಜ್ಯವಾದುದರಿಂದ ಭಾಷಾ ಸಂಪರ್ಕ, ಸಾಮಾಜಿಕ ಸಂಪರ್ಕ ಇದಕ್ಕೆ ಕಾರಣವಾಗಿದೆ. ಭಾಷೆ ಮತ್ತು ಸಂಸ್ಕೃತಿಗಳ ಸಮಾನ ಅಂಶಗಳನ್ನು ಅರಿಯಲಿಕ್ಕೆ ಇಂತಹ ತೌಲನಿಕ ಅಧ್ಯಯನಗಳು ಅಗತ್ಯ. ಕನ್ನಡ ಮತ್ತು ಇಂಡೋ ಆರ್ಯನ್ ಭಾಷೆಗಳ ಸಂಬಂಧವನ್ನು ತಿಳಿಸುವ ಗ್ರಂಥಗಳು ಕನ್ನಡದಲ್ಲಿ ನನಗೆ ತಿಳಿದ ಮಟ್ಟಿಗೆ ಇರಲಿಲ್ಲ [ಕೆಲವು ಲೇಖನಗಳು ಬಂದಿವೆ] ಶ್ರೀ ಲೋಕಾಪುರರವರು ಇಂತಹ ಗ್ರಂಥವನ್ನು ಬರೆದು ತುಂಬ ಉಪಕರಿಸಿದ್ದಾರೆ. ಗ್ರಂಥದ ಕೆಲವು ಭಾಗಗಳಲ್ಲಿ ಬರೆವಣಿಗೆ ಶುಷ್ಕವಾಗಿದೆ. ಓದುಗರಿಗೆ ಅನುಕೂಲವಾಗುವಂತೆ ಪುಸ್ತಕದ ಕೊನೆಯಲ್ಲಿ ವಿಸ್ತಾರವಾದ ಶಬ್ದ ಸೂಚಿಯ ಅಗತ್ಯವಿತ್ತು. ಒಟ್ಟಿನಲ್ಲಿ ಕನ್ನಡ-ಮರಾಠಿ ಭಾಷಾ ಬಾಂಧವ್ಯವನ್ನು ತಿಳಿಸುವ ಒಂದು ಮೌಲಿಕ ಕೃತಿ ಇದಾಗಿದೆ.

'ಕನ್ನಡ ವ್ಯಾಕರಣ ದೀಪಿಕೆ' ಎಂಬುದು ಆರ್.ಡಿ.ಜಿ.ಯವರು ಮಾಧ್ಯಮಿಕ ಮತ್ತು ಪ್ರೌಢಶಾಲಾ ಹಂತದ ವಿದ್ಯಾರ್ಥಿಗಳಿಗೆ ಬರೆದ ಉಪಯುಕ್ತವಾದ ವ್ಯಾಕರಣ ಗ್ರಂಥ. ವ್ಯಾಕರಣ, ಛಂದಸ್ಸು ಮತ್ತು ಅಲಂಕಾರ ಈ ಮೂರು ಲಾಕ್ಷಣಿಕ ವಿಷಯಗಳನ್ನು ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ಲೇಖಕರು ನಿಯಮ-ಉದಾಹರಣೆಗಳ ಮೂಲಕ ವಿಷಯ ನಿರೂಪಣೆ ಮಾಡಿದ್ದಾರೆ. ವ್ಯಾಕರಣ ನಿಯಮಗಳಿಗೆ ತಕ್ಕಂತೆ ಉದಾಹರಣೆಗಳು ಸ್ಪಷ್ಟವಾಗಿವೆ ಬಿಡಿಬಿಡಿಯಾಗಿವೆ.

ಲೇಖಕರು ಮೊದಲನೆಯ ಅಧ್ಯಾಯದಲ್ಲಿ ಅಕ್ಷರಗಳು ಹುಟ್ಟುವ ಸ್ಥಾನಗಳನ್ನು ಸ್ಪಷ್ಟವಾಗಿ ಹೇಳಬೇಕಾಗಿತ್ತು. ಅಲ್ಲಿ ತುಂಬ ದೋಷಗಳಿವೆ. ದೇಶ್ಯ-ಅನ್ಯದೇಶ್ಯ ಪದಗಳನ್ನು ಹೇಳುವಾಗ ಮೊದಲು ಅವುಗಳ ಅರ್ಥವನ್ನು ಹೇಳಿ ಅನಂತರ ಉದಾಹರಣೆಗಳನ್ನು ಕೊಡಬೇಕಿತ್ತು. ಉದಾಹರಣೆಗಳು ಇಲ್ಲದೆಯಿದ್ದರೆ ನಮ್ಮ ಬರೆಹಗಳು ಶುಷ್ಕವಾಗುತ್ತವೆ. ಅಲಂಕಾರ ಮತ್ತು ಛಂದಸ್ಸಿನ ಬಗ್ಗೆ ಒಂದೊಂದು

ಅಧ್ಯಾಯದಲ್ಲಿ ಲೇಖಕರು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಆ ಎರಡು ಅಧ್ಯಾಯಗಳನ್ನು ಉದಾಹರಣೆಗಳ ಮೂಲಕ ವಿಸ್ತಾರವಾಗಿ ಹೇಳಬೇಕಾಗಿತ್ತು. ಅಂಶಗಣದ ದೇಶೀಯ ಮಟ್ಟುಗಳನ್ನು ಲೇಖಕರು ಮರೆತಂತಿದೆ. ಆದರೂ ಇಡೀ ಪುಸ್ತಕವನ್ನು ಒಮ್ಮೆ ಓದಿದಾಗ ಹೊಸಗನ್ನಡ ವ್ಯಾಕರಣದ ಒಂದು ಸ್ಪಷ್ಟ ಚಿತ್ರ ನಮ್ಮ ಗಮನಕ್ಕೆ ಬರುತ್ತದೆ. ಮಾಧ್ಯಮಿಕ ಮತ್ತು ಪ್ರೌಢಶಾಲಾ ವಿದ್ಯಾರ್ಥಿಗಳಷ್ಟೆ ಅಲ್ಲ ವ್ಯಾಕರಣದಲ್ಲಿ ಆಸಕ್ತರಾದ ವಿದ್ವಾಂಸರು ಈ ಗ್ರಂಥದ ಪ್ರಯೋಜನವನ್ನು ಪಡೆಯಬಹುದಾಗಿದೆ.

'ಭಾಷಾಪ್ರದೀಪ' ಎಂಬುದು ಕೆ. ನಾರಾಯಣಭಟ್ಟರು ಮಿಡ್ಲಸ್ಕೂಲ್ ಮತ್ತು ಹೈಸ್ಕೂಲ್ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಸಿದ್ಧಪಡಿಸಿದ ವ್ಯಾಕರಣ ಪುಸ್ತಕವಾಗಿದೆ. ಇದರಲ್ಲಿ ವ್ಯಾಕರಣಸಾರ, ವಿವಿಧ ಶಬ್ದಗಳು, ಛಂದಸ್ಸು ಮತ್ತು ಅಲಂಕಾರ ಎಂಬ ನಾಲ್ಕು ಭಾಗಗಳಿವೆ. ಶಾಲಾ ವಿದ್ಯಾರ್ಥಿಗಳಿಗೆ ರಚಿಸಲ್ಪಟ್ಟಿರುವ ಇತರ ವ್ಯಾಕರಣ ಗ್ರಂಥಗಳಿಗಿಂತಲೂ ಭಿನ್ನವಾದ 'ವಿವಿಧ ಶಬ್ದಗಳು' ಎಂಬ ಹೊಸ ವಿಭಾಗವು ಇದರಲ್ಲಿದೆ. ವಿದ್ಯಾರ್ಥಿಗಳಲ್ಲಿ ಶಬ್ದಸಂಪತ್ತನ್ನು ಹೆಚ್ಚಿಸಿ ಭಾಷಾ ಪ್ರಭುತ್ವ, ಭಾಷಾ ಸ್ವಾಮಿತ್ವ ಉಂಟಾಗುವಂತೆ ಮಾಡುವುದು ಮಾತೃಭಾಷಾಬೋಧನೆಯ ಉದ್ದೇಶಗಳಲ್ಲಿ ಒಂದಾಗಿದೆ. ಇದು ವ್ಯಾಕರಣ ಬಲದಿಂದ ಪೋಷಣೆಯಾಗಬೇಕಷ್ಟೆ.

ಇದರಲ್ಲಿ ಮಕ್ಕಳಲ್ಲಿ ಸಾಹಿತ್ಯಾಭಿರುಚಿಯನ್ನು ಹುಟ್ಟಿಸಲು ನೆರವಾದ ನುಡಿಗಟ್ಟು ಗಾದೆಗಳಂತ ಭಾಷಿಕ ಚಟುವಟಿಕೆಗಳನ್ನು ಸೇರಿಸಿರುವುದು ಸೂಕ್ತವಾಗಿದೆ. ಮಕ್ಕಳ ಅನುಭವಕ್ಕೆ ಬರುವ ಉದಾಹರಣೆಗಳನ್ನೂ ಕೊಟ್ಟಿದೆ. ಸರಳವಾದ ರೀತಿಯಲ್ಲಿ ವಿಷಯ ನಿರೂಪಣೆಮಾಡಲಾಗಿದೆ ಇದು ಶಾಲಾ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಉಪಯುಕ್ತವಾಗಬಲ್ಲ ಉತ್ತಮ ವ್ಯಾಕರಣ ಗ್ರಂಥ ಇದನ್ನು ರಚಿಸಿದಕ್ಕಾಗಿ ಕೆ. ನಾರಾಯಣಭಟ್ಟರನ್ನು ಅಭಿನಂದಿಸಬೇಕು.

ಇದು ಶ್ರೀ ಮದ್ದಿವಾಕರ ಭಟ್ಟಾರಕ ಮುನೀಂದ್ರ ವಿರಚಿತ 'ತತ್ತ್ವಾರ್ಥ ಸೂತ್ರಾನುಗತ ಕರ್ಣಾಟ ಲಘುವೃತ್ತಿ.' ಇದನ್ನು ಡಾ. ಹಂಪ ನಾಗರಾಜಯ್ಯನವರು ಸಂಪಾದಿಸಿದ್ದಾರೆ. ಇದರಲ್ಲಿ ೧೦ ಅಧ್ಯಾಯಗಳಿವೆ. ಕ್ರಿ.ಶ. ಪೂ. ೬ ನೇ ಶತಮಾನದಲ್ಲಿ ಭಗವಾನ್ ಮಹಾವೀರನ ಉಪದೇಶಗಳು ಅಂದಿನ ಜನಸಾಮಾನ್ಯರ ಭಾಷೆಯಾಗಿದ್ದ ಪ್ರಾಕೃತದಲ್ಲಿದ್ದವು. ಮಹಾವೀರನ ಶಿಷ್ಯರು ಆ ತತ್ತ್ವೋಪದೇಶಗಳನ್ನು ಬರೆದು ಪ್ರಚಾರಗೊಳಿಸಿದರು. ಪ್ರಾಕೃತದಲ್ಲಿದ್ದ ಮಹಾವೀರನ ತತ್ವ ಉಪದೇಶಗಳನ್ನು ಆಮೂಲಾಗ್ರವಾಗಿ ಅಧ್ಯಾಯನ ಮಾಡಿ ಶ್ರೀ ಉಮಾಸ್ವಾಮಿಗಳು 'ತತ್ವಿಸೂತ್ರ' ಎಂಬ ಹೆಸರಿನಿಂದ ಸಂಸ್ಕೃತ ಭಾಷೆಯಲ್ಲಿ ಬರೆದರು. ಈ ಗ್ರಂಥಕ್ಕೆ ಭಾರತೀಯ ಭಾಷೆಗಳಲ್ಲಿ ಟೀಕೆ-ವ್ಯಾಖ್ಯಾನಗಳು ಬಂದವು. ಅಂತಹ ಗ್ರಂಥಗಳಲ್ಲಿ ಶ್ರೀ ದಿವಾಕರ ನಂದಿ ಭಟ್ಟಾರಕ ಮುನೀಂದ್ರ ಬರೆದ 'ತತ್ತ್ವಾರ್ಥ ಸೂತ್ರಾನುಗತ ಕರ್ಣಾಟ ಲಘು ವೃತ್ತಿ' ಒಂದು ಅಪೂರ್ವ ಕೃತಿಯಾಗಿದೆ. ಇದರಲ್ಲಿ ಸೂತ್ರಗಳ ಜೊತೆಗೆ ಪದಶಃ ಅರ್ಥವನ್ನು ಬರೆದಿರುವುದರಿಂದ ಸಾಹಿತ್ಯಾಸಕ್ತರಿಗೆ ಸುಲಭವಾಗಿ ಅರ್ಥವಾಗುತ್ತದೆ.

ಅಭ್ಯಾಸ ಪೂರ್ಣವಾದ ವಿಸ್ತಾರವಾದ ಪ್ರಸ್ತಾವನೆಯಲ್ಲಿ ಹಂಪನಾ ಅವರು ಕವಿ, ಕೃತಿ, ಅವರ ಟೀಕಾ ಗ್ರಂಥಗಳು ಕೃತಿಯಲ್ಲಿರುವ ಧಾರ್ಮಿಕ ಅಂಶಗಳ ಬಗ್ಗೆ ವಿಚಾರ ಮಾಡಿದ್ದಾರೆ. ಮೂರು ಹಸ್ತಪ್ರತಿಗಳ ನೆರವಿನಿಂದ ಇದನ್ನು ಪ್ರಪ್ರಥಮವಾಗಿ ಮತ್ತು ಸಮರ್ಥವಾಗಿ ಸಂಪಾದಿಸಿದ್ದಾರೆ. ಕೊನೆಗೆ ಸಂಸ್ಕೃತ ಶ್ಲೋಕಗಳು, ಪ್ರಾಕೃತಗಾಥೆಗಳು ಗ್ರಂಥಾಭ್ಯಾಸಕ್ಕೆ ತುಂಬ ಅನುಕೂಲವಾಗಿವೆ.

ಈ ತನಕ ಈ ವರ್ಷದಲ್ಲಿ ಬಂದಿರುವ ಕೆಲವು ಶಾಸ್ತ್ರಗ್ರಂಥಗಳ ಸಮೀಕ್ಷೆ ಮಾಡಲಾಯಿತು. ಇತ್ತಿತ್ತಲಾಗಿ ಈ ಕ್ಷೇತ್ರದ ಸಂಶೋಧನೆ ಕ್ಷೀಣವಾಗುತ್ತಿದೆ ಅನಿಸುತ್ತದೆ. ಶಕ್ತಿಯುತ ಗ್ರಂಥಗಳು, ಲೇಖನಗಳು ತುಂಬ ಕಡಿಮೆ. 'ಹಳಗನ್ನಡ ಮತ್ತು, ಮರಾಠಿ', 'ನಿಘಂಟು ರಚನಾ ವಿಜ್ಞಾನ' ಈ ಎರಡು ಗ್ರಂಥಗಳು ಸ್ವತಂತ್ರ ವಿಚಾರ ಶಕ್ತಿಯನ್ನು ವ್ಯಕ್ತಪಡಿಸಿವೆ. ಕಿಟೆಲ್‌ರ ಬಗ್ಗೆ ಬಂದ ಪಿಎಚ್.ಡಿ. ನಿಬಂಧ ಪ್ರಕಟಣೆಗೆ ಮುಂಚೆ ತಿದ್ದುಪಡಿ ಮಾಡಿದ್ದರೆ ಉತ್ತಮವಾಗುತ್ತಿತ್ತು. ಶಾಲಾ ವ್ಯಾಕರಣಗಳಿಗೆ ಸಂಬಂಧಪಟ್ಟ ಎರಡು ಪುಸ್ತಕಗಳಲ್ಲಿ ಒಂದು ಮಾತ್ರ ಚೆನ್ನಾಗಿದೆ. ಇನ್ನೊಂದು ('ಭಾಷಾ ಪ್ರದೀಪ') ನಿರಾಸೆಗೊಳಿಸುತ್ತದೆ. ತತ್ಸಮ-ತದ್ಭವಕೋಶ ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾಗಿದೆ. ಧಾರ್ಮಿಕ ಗ್ರಂಥವನ್ನು ಸಂಪಾದಕರು ಮೂರು ಹಸ್ತಪ್ರತಿಗಳ ನೆರವಿನಿಂದ ಸಮರ್ಥವಾಗಿ ಸಂಪಾದಿಸಿದ್ದಾರೆ.

# ಜಾನಪದ

*ಎ. ವಿ. ನಾವಡ*

---

೧೯೯೩ರನ್ನು ಹೋಲಿಸಿದಾಗ ೯೪ ರ ಕೊಯ್ಲಿನಲ್ಲಿ ಜಾನಪದ ಕ್ಷೇತ್ರದಲ್ಲಿ ಹೆಚ್ಚು ಬೆಳೆ ಬಂದಿರುವುದು ಗೋಚರವಾಗುತ್ತದೆ. ಪಿಎಚ್.ಡಿ, ಎಂ. ಫಿಲ್ ಮಹಾಪ್ರಬಂಧಗಳನ್ನುಳಿದು ಅಧ್ಯಯನ, ಸಂಗ್ರಹದ ನಿಟ್ಟಿನಿಂದ ಈ ಬಾರಿ ಮೂವತ್ತು ಕೃತಿಗಳು ಪ್ರಕಟವಾಗಿರುವುದು ನನ್ನ ಗಮನಕ್ಕೆ ಬಂದಿವೆ. ಜಾನಪದ ಬದಲಾಗುತ್ತಿರುವ ದೇಶಕಾಲಕ್ಕನುಸರಿಸಿ 'ವಿಕಾಸಶೀಲ ಅಧ್ಯಯನ'ದ ರೂಪದಲ್ಲಿ ಬೆಳೆಯುತ್ತಿರುವ ಜ್ಞಾನಶಾಖೆ ಆಗಿರುವುದರಿಂದ ಬಂದಿರುವ ಕೃತಿಗಳಲ್ಲಿ ಈ ಹೊಸ ಆಲೋಚನೆಗಳ ಹೊಳಪು ಕಾಣಿಸುತ್ತಿದೆ. ಅದರ ಚಲನಶೀಲ ಗುಣ ವ್ಯಕ್ತಗೊಂಡಿದೆ. ಹಾಗೆಯೇ ಜಾನಪದವೆನ್ನುವುದು ಇನ್ನೂ ಅನಕ್ಷರಸ್ಥ ಗ್ರಾಮೀಣ ಮುಗ್ಧರ ಬದುಕಿನ ಅಭಿವ್ಯಕ್ತಿ, ಅದು 'ಇಂದಲ್ಲ', 'ನಿನ್ನೆ' ಹೇಗಿತ್ತು ಎಂದು ಶೋಧಿಸಿ ಬರೆಯುವುದು ಜಾನಪದತಜ್ಞನ ಗುರಿ ಎಂದು ಭಾವಿಸಿ ಬರೆದ ಕೃತಿಗಳೂ ಬಂದಿವೆ. ಜನಪದ ಸಂಸ್ಕೃತಿ ನಾಶವಾಗುತ್ತಿದೆ ಎನ್ನುತ್ತಾ ವರ್ತಮಾನ ಕಾಲದ ಆರ್ಥಿಕ ಸಾಮಾಜಿಕ ಒತ್ತಡಗಳಿಗೆ ಕಣ್ಣುಮುಚ್ಚಿಕೊಳ್ಳುತ್ತಿರುವ ಜಾನಪದ ವಿದ್ವಾಂಸರೂ ಇದ್ದಾರೆ. ಸಂಸ್ಕೃತಿ ಒಂದು ಸ್ಥಿರ ಬಿಂದುವಲ್ಲ, ಅದು ನಿರಂತರ ಸಾಗುತ್ತಿರುವ ಪ್ರವಾಹ ಎಂಬುದನ್ನು ಒಪ್ಪಿಕೊಂಡಾಗ ನಮ್ಮ ಜಾನಪದದ ಕುರಿತ ಪರಿಭಾವನೆಯೇ ಬದಲಾಗಬೇಕಾಗುತ್ತದೆ. ಇಂದಿನ ಆಧುನಿಕ ವೈಜ್ಞಾನಿಕ ತಾಂತ್ರಿಕತೆ ತಂದ ಸಮಾಜದಲ್ಲಿ ಜಾನಪದ ಹುಟ್ಟುವ ಮೂಲ ಹಿಂದಿನಷ್ಟು ಸಮೃದ್ಧ ಅಲ್ಲದೆ ಹೋಗಬಹುದು, .ಆದರೆ ಜಾನಪದ ಇದ್ದೇ ಇರುತ್ತದೆ, ನಿನ್ನೆಯ ರೂಪದಲ್ಲಿ ಅಲ್ಲ, ಇಂದಿನ ಕಾಲಕ್ಕೆ ತಕ್ಕಂತೆ ಹೊಸ ರೂಪದಲ್ಲಿ.

ಈ ವರ್ಷ ಬಂದ ಕೃತಿಗಳನ್ನು ಕಂಡರೆ 'ಜಾನಪದ ಸಂಗ್ರಹ' ಕ್ಕೆ ವಿಶೇಷ ಒತ್ತು ಇದ್ದಂತಿಲ್ಲ. ಒಂದು ವಿಷಯವನ್ನು ಕುರಿತಂತೆ ಕ್ಷೇತ್ರಕಾರ್ಯ ನಡೆಸಿ ಲಭ್ಯ ಮಾಹಿತಿಗಳ ವಿಶ್ಲೇಷಣೆ ಗಂಭೀರವಾಗಿ ನಡೆದಿದೆ. ಈ ನಿಟ್ಟಿನಲ್ಲಿ 'ಲಿಂಗ ಮತ್ತು ಕಂತೆ', 'ಮಳೆ ಜನಪದೀಯ ಅಧ್ಯಯನ' ವನ್ನು ವಿಶೇಷವಾಗಿ ಪರಿಗಣಿಸಬೇಕಾಗಿದೆ. ವೈಜ್ಞಾನಿಕ ಜಾನಪದಕ್ಕೆ ಅತ್ಯುತ್ತಮ ಮಾದರಿಯಾಗಿ 'ಜಾನಪದ: ಕೆಲವು ಅಧ್ಯಯನಗಳು' ಬಂದಿದೆ. ಜನಪದ ಇತಿಹಾಸ ಮೌಖಿಕ ಇತಿಹಾಸದ ಆಕರವನ್ನು ಬಳಸಿ ಒಂದು ಜನಾಂಗದ ಪೂರ್ವೇತಿಹಾಸವನ್ನು ಪುನರ್‌ರಚಿಸಲು ಸಾಧ್ಯ ಎನ್ನುವುದಕ್ಕೆ ಅತ್ಯುತ್ತಮ ದೃಷ್ಟಾಂತವಾಗಿ 'ಫಣಿಯರವರ ಸಮಾಜ ಮತ್ತು ಜಾನಪದ ಇತಿಹಾಸ' ಕೃತಿ ಬಂದಿದೆ. ಜಾನಪದದ ತೀರಾ

ಈಚೆಗಿನ ಆಲೋಚನೆಗಳನ್ನು ಒಂದೆಡೆ ಕ್ರೋಢೀಕರಿಸಿರುವ 'ಜಾನಪದ: ಹೊಸದೃಷ್ಟಿ' ಗಮನಾರ್ಹ ಕೃತಿ.

'ಜಾನಪದ: ಹೊಸದೃಷ್ಟಿ' ಹೆಸರೇ ಹೇಳುವಂತೆ ಜಾನಪದವನ್ನು ಕುರಿತ ಹೊಸ ಆಲೋಚನೆಗಳನ್ನು ಕುರಿತ ಹತ್ತು ಲೇಖನಗಳ ಸಂಕಲನ. ಗ್ರಂಥದ ಸಂಪಾದಕರು ಕರ್ನಾಟಕ ವಿಶ್ವವಿದ್ಯಾಲಯದ ಡಾ. ಎಚ್.ಎಂ. ಮಹೇಶ್ವರಯ್ಯ ಹಾಗೂ ಡಾ.ಎ. ಮುರಿಗೆಪ್ಪ. ಕರ್ನಾಟಕದಲ್ಲಿ ಜಾನಪದ ಅಧ್ಯಯನ ತನ್ನ ಪರಂಪರಾನುಗತ ದೃಷ್ಟಿ ಧೋರಣೆಗಳನ್ನು ಕೈಬಿಟ್ಟು ಹೊಸದರ ಕಡೆಗೆ ಕೈಚಾಚಿಕೊಳ್ಳುತ್ತಿರುವ ಫಲಿತದ ರೂಪದಲ್ಲಿ ಇಲ್ಲಿನ ಲೇಖನಗಳಿವೆ. ಜಾನಪದ ವಿಜ್ಞಾನದ ಕೆಲವೊಂದು ಸಿದ್ಧಾಂತಗಳು, ಆನ್ವಯಿಕ ಜಾನಪದ, ಸಂಕೇತ ವಿಜ್ಞಾನ, ಸ್ತ್ರೀವಾದದ ಸಾಂಸ್ಕೃತಿಕ ನೆಲೆಗಳು, ಜಾನಪದದ ಚಲನಶೀಲತೆ, ಅನನ್ಯತೆ- ಹೀಗೆ ಜಾನಪದವನ್ನು ಭಿನ್ನ ನೆಲೆಗಳಿಂದ ನೋಡಿ ಬರೆದ ಗಂಭೀರ ಲೇಖನಗಳು ಇಲ್ಲಿವೆ.

ವಸಾಹತುಶಾಹಿ ಹಾಗೂ ರಾಷ್ಟ್ರೀಯತಾ ಚಳುವಳಿಯ ಸಂದರ್ಭದಲ್ಲಿ ಜನಪದ ಸಾಹಿತ್ಯದ ಸಂಗ್ರಹದ ಮೂಲಕ ಆರಂಭವಾದ ಜಾನಪದ ಅಧ್ಯಯನ ಇಂದು ಮಾನವನ ಸಮಸ್ತಬದುಕಿನ ವ್ಯಾಪಾರಗಳನ್ನು ಎಟುಕಿಸುವ ಮೂಲಕ ಸಂಕೀರ್ಣ ಶಿಸ್ತಾಗಿ ಜಾಗತಿಕ ಸ್ವರೂಪವನ್ನು ಪಡೆಯುತ್ತಿದೆ. ಈ ಶಾಸ್ತ್ರದಲ್ಲಿ ಅಂತಾರಾಷ್ಟ್ರೀಯ ಸಿದ್ಧಾಂತಗಳು ಹುಟ್ಟಿಕೊಳ್ಳುತ್ತಿದ್ದು ಆ ಹಿನ್ನೆಲೆಯಲ್ಲಿ ನಮ್ಮ ಪರಿಕರಗಳನ್ನು ಪರಿಭಾವಿಸುವ ಪ್ರಯತ್ನ ನಡೆಯುತ್ತಿದೆ. ಆದರೆ ಜಾನಪದವನ್ನು ದೇಸೀಯ ಚಿಂತನೆಗಳ ಬೆಳಕಿನಲ್ಲಿ ನೋಡಿ ಅರ್ಥೈಸಬೇಕು, ಅಧ್ಯಯನಕ್ಕೆ ಒಳಪಡಿಸಬೇಕು, ಆಗ ಮಾತ್ರ ನಮ್ಮ ಜಾನಪದದ ಅನನ್ಯತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ, ವಿದೇಶಿ ಚಿಂತನೆಗಳ ವಿನ್ಯಾಸಗಳಿಗೆ ನಮ್ಮ ವಿಚಾರಗಳನ್ನು ಒಗ್ಗಿಸಿ ಕೂರಿಸುವ ಪ್ರಯತ್ನ ಸಲ್ಲದು ಎನ್ನುವ ದೇಸೀಯವಾದದ ಪ್ರತಿಪಾದನೆಯೂ ಕೇಳಿ ಬರುತ್ತಿದೆ. ಜಾನಪದವನ್ನು ಬದುಕಿನ ಮೇಲ್ಮೆಗೆ ಬಳಸಿಕೊಳ್ಳಬೇಕೆನ್ನುವ ವಿದ್ವಾಂಸರು ಅದರ ಮೂಲವಾದ ಜನಪದರ ಬಗೆಗೆ ಮೌನವಾಗಿರುವುದನ್ನು ಪ್ರಶ್ನಿಸುತ್ತಿದ್ದಾರೆ. ಹೀಗೆ ಜಾನಪದವನ್ನು ಎಲ್ಲ ಮಗ್ಗುಲುಗಳಿಂದ ನೋಡಿ ಬರೆದ ಬರೆಹಗಳು ಇಲ್ಲಿವೆ. ಈ ಎಲ್ಲ ಆಲೋಚನೆಗಳ ಮೂಲಕ ನಮ್ಮ ಜಾನಪದದ ಅಧ್ಯಯನದ ಸಾಧ್ಯತೆಯನ್ನು ವಿಸ್ತರಿಸಬಹುದಾಗಿದೆ.

ಕರ್ನಾಟಕ ಜಾನಪದವನ್ನು ಸೈದ್ಧಾಂತಿಕ ನೆಲೆಯಿಂದ ಗಂಭೀರವಾಗಿ ಆಲೋಚಿಸಿ ಬರೆಯುತ್ತಿರುವವರಲ್ಲಿ ಅಂಬಳಿಕೆ ಹಿರಿಯಣ್ಣ ಒಬ್ಬರು. ಅವರು ಬರೆದ ಪ್ರೌಢ ಪ್ರಬಂಧಗಳ ಸಂಕಲನ 'ಜಾನಪದ: ಕೆಲವು ಅಧ್ಯಯನಗಳು'; ಜಾನಪದ ಕಳೆದುಹೋಗುತ್ತಿದೆ ಎಂಬ ಆತಂಕದಿಂದ ಹಳ್ಳಿಗೆ ಓಡಿಹೋಗಿ ಮಾಹಿತಿ ತಂದು ಅಟ್ಟಿಗೆ ಒಳಪಡಿಸುವ ನಮ್ಮಲ್ಲಿನ ಅನೇಕರು ತಮ್ಮ ಸಾಮಗ್ರಿಗಳನ್ನು ಹೇಗೆ ಅಚ್ಚುಕಟ್ಟಾಗಿ ಸಂಪ್ರಬಂಧವಾಗಿ ರೂಪಿಸಬಹುದು ಎನ್ನುವುದಕ್ಕೆ ಮಾದರಿಯಾಗಿ ನೋಡಬೇಕು.

ಇಲ್ಲಿನ ಕೆಲವೊಂದು ಲೇಖನಗಳು ಕರ್ನಾಟಕ ಜಾನಪದ ಅಧ್ಯಯನಕ್ಕೆ ಹೊಸಜೋಡಣೆ. ಜನಪದ ವಾಸ್ತುವನ್ನು ಕುರಿತ 'ದಕ್ಷಿಣ ಕರ್ನಾಟಕದ ಪ್ರಾಣಿ ವಸತಿ', 'ಪ್ರಕೃತಿಯನ್ನು ಗ್ರಹಿಸುವ ಮೂಲಕ ವ್ಯಕ್ತಗೊಳ್ಳುವ ಜನಪದರ ಲೋಕದೃಷ್ಟಿಯನ್ನು ಹೇಳುವ 'ಜನಪದ ಸಾಹಿತ್ಯದಲ್ಲಿ ನಿಸರ್ಗ ಗ್ರಹಿಕೆಯ ವಿಧಾನ'. ಒಳ್ಳೆಯ ಲೇಖನ 'ಬುಡಕಟ್ಟು ಜನರ ಬದಲಾಗುತ್ತಿರುವ ಆರ್ಥಿಕ ಜೀವನ' ಬದಲಾಗುತ್ತಿರುವ ಆರ್ಥಿಕ-ಸಾಮಾಜಿಕ ಸನ್ನಿವೇಶದ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯವನ್ನು ವಿಶ್ಲೇಷಿಸಿರುವ ಬರಹ. ನಮ್ಮ ಬುಡಕಟ್ಟು ಸಮುದಾಯಗಳು ಒಂದು ನಾಗರಿಕ ಸಮಾಜಗಳ ಸಂಪರ್ಕಕ್ಕೆ ಒಳಗಾಗುತ್ತಿರುವ ಫಲವಾಗಿ ಏರ್ಪಡುತ್ತಿರುವ ಇಕ್ಕಟ್ಟನ್ನು ಎದುರಿಸಲು ಬರಿಯ ಆರ್ಥಿಕ ಯೋಜನೆಗಳನ್ನು ರೂಪಿಸಿದರೆ ಸಾಕೇ ಎನ್ನುವುದು ವಿಚಾರಣೀಯ ಅಂಶ. ಒಂದೊಂದು ಸಮುದಾಯದ ಮನಸ್ಸನ್ನು ರೂಪಿಸಿದ ಸಾಂಸ್ಕೃತಿಕ ಇತಿಹಾಸವನ್ನು ಗಮನಿಸಿ ಅದಕ್ಕೆ ತಕ್ಕಂತೆ ಅವರನ್ನು ಆಧುನಿಕತೆಗೆ ಒಡ್ಡುವ ಯೋಜನೆ ರೂಪಿಸಬೇಕಾಗಿದೆ. ಎಲ್ಲರಿಗೂ ಸಮಾನವಾದ ಆಧುನಿಕ ಶಿಕ್ಷಣ, ಆರ್ಥಿಕ-ಸಾಮಾಜಿಕ ಯೋಜನೆಗಳನ್ನು ಬುಡಕಟ್ಟು ಜನರ ಅಭಿವೃದ್ಧಿಗಾಗಿ ರೂಪಿಸದೆ ಅವರ ಪರಂಪರಾನುಗತ ಕೌಶಲ್ಯದ ಲಾಭವನ್ನು ಅವರಿಗೇ ಒದಗಿಸಿದಾಗ ಆಧುನಿಕತೆಯ ಜಾರುನೆಲದಲ್ಲಿ ಅವರು ಗಟ್ಟಿಯಾಗಿ ಉಳಿಯಬಲ್ಲರು. ಇದು ಅಂಬಳಿಕೆಯವರ ಬರಹಕ್ಕೆ ಪೂರಕ ಅಂಶ ಎಂದು ನಾನು ಭಾವಿಸಿದ್ದೇನೆ. 'ಪಾಶ್ಚಾತ್ಯ ಜಾನಪದ ಸಿದ್ಧಾಂತಗಳು ಮತ್ತು ದೇಶೀಯವಾದ' ಎಂಬ ಲೇಖನದಲ್ಲಿ ಜಾನಪದವನ್ನು ಆಯಾದೇಶದ ಸಾಮಾಜಿಕ-ಸಾಂಸ್ಕೃತಿಕ ಸಂದರ್ಭಗಳ ಹಿನ್ನೆಲೆಯಲ್ಲಿ ದೇಶೀಯ ನೆಲೆಯಲ್ಲಿ ವಿವೇಚಿಸಬೇಕು (ಪುಟ ೧೪೩) ಎಂದಿರುವರಾದರೂ ಮುಂದೆ ಈ (ಜಾನಪದ) ಅಧ್ಯಯನ ದೇಸೀವಲಯದ ಸೀಮಿತ ವ್ಯಾಪ್ತಿಯಲ್ಲಿ ನಡೆಯದೆ ಜಾಗತಿಕ ನೆಲೆಯಲ್ಲಿ ಅಖಂಡ ಹಿನ್ನೆಲೆಯಲ್ಲಿ ನಡೆದಾಗ ಮಾತ್ರ ಸಾರ್ಥಕವಾಗುತ್ತದೆ ಎಂದಿದ್ದಾರೆ.

'ಮಲೆನಾಡು ಶೈವ ಒಕ್ಕಲಿಗರು - ಶ್ರೀಮತಿ ವೈ.ಸಿ. ಭಾನುಮತಿ ಅವರ ಕ್ಷೇತ್ರಕಾರ್ಯಾಧರಿತ ಜಾನಪದೀಯ ಅಧ್ಯಯನ ಗ್ರಂಥ. ಕಳೆದ ಶತಮಾನದಲ್ಲಿ ಯುರೋಪಿನ ಜನ ಜಗತ್ತಿನಾದ್ಯಂತ ತಮ್ಮ ವಸಾಹತುಗಳನ್ನು ಕಟ್ಟಿಕೊಂಡು ಅಲ್ಲಿನ ಜನರನ್ನು ನಾಗರಿಕರನ್ನಾಗಿ ಮಾಡಿ ಆ ಮೂಲಕ ಮತಾಂತರಿಸುವ ಸನ್ನಾಹದಲ್ಲಿ ತೊಡಗಿದಾಗ ಜನಾಂಗ ಅಧ್ಯಯನಗಳಿಗೆ (ಮಾನವ ಶಾಸ್ತ್ರೀಯ) ಚಾಲನೆ ಬಂದಿತು. ಕರ್ನಾಟಕದ ವಿಶ್ವವಿದ್ಯಾನಿಲಯಗಳ ಭಾಷಾ ವಿಭಾಗಗಳು ಜಾನಪದ ಅಧ್ಯಯನಕ್ಕೆ ತೊಡಗಿದ ಬಳಿಕ ಜಾನಪದೀಯ ಅಧ್ಯಯನ ಎಂಬ ಹೆಸರಿನಲ್ಲಿ ಬುಡಕಟ್ಟು ಅಥವಾ ಜನಾಂಗ ಅಧ್ಯಯನಗಳು ಆರಂಭವಾದುವು. ನಮ್ಮ ಬಹುತೇಕ ಅಧ್ಯಯನಗಳು ಸಿದ್ಧಮಾದರಿಯೊಂದನ್ನಿರಿಸಿಕೊಂಡು ಮಾನವಶಾಸ್ತ್ರದ ವಿವರಣಾತ್ಮಕ ಸ್ವರೂಪವನ್ನು ಪಡೆದವುಗಳು. ನಮ್ಮ ಸಮುದಾಯ ನಾಗರಿಕ ಪ್ರಭಾವಕ್ಕೊಳಗಾಗುವ ಮುನ್ನ ಅದರ ಮೂಲರೂಪದಲ್ಲಿ ಹೇಗಿತ್ತು ಎನ್ನುವುದನ್ನು ತಿಳಿಯುವುದು ಪ್ರತಿಯೊಂದು ಆಧುನಿಕ ಸಮಾಜಕ್ಕೆ ಇರುವ ಕುತೂಹಲದ ಅಂಶ. ಆಧುನಿಕ ಕಾಲಪ್ರವಾಹದಲ್ಲಿ ಸಹಜವಾಗಿ ಸಂಸ್ಕೃತೀಕರಣ (acculturation) ಕ್ಕೊಳಗಾಗುವ ಸಮುದಾಯವೂ ಅಧ್ಯಯನದ

ಸಂದರ್ಭದಲ್ಲಿ ಈ ಪ್ರಕ್ರಿಯೆಯನ್ನು ನೇತ್ಯಾತ್ಮಕ ಅಂಶವೆಂದೇ ಪರಿಭಾವಿಸುತ್ತಿರುವುದು ಈ ಅಧ್ಯಯನಗಳಲ್ಲಿ ಸಾಮಾನ್ಯವಾಗಿ ಕಾಣಿಸುವ ಅಂಶ.

ಈ ಗ್ರಂಥವನ್ನು ಕೊಡಗು, ಚಿಕ್ಕಮಗಳೂರು, ಹಾಸನ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿರುವ ಮಲೆನಾಡು ಶೈವ ಒಕ್ಕಲಿಗರು ಅಥವಾ ವಿಭೂತಿ ಗೌಡ ಸಮುದಾಯವನ್ನು ಅನುಲಕ್ಷಿಸಿ ಬರೆಯಲಾಗಿದೆ. ಗ್ರಂಥಕಾರರು ಸ್ವತಃ ಈ. ಸಮುದಾಯದ ಒಳಗಿನವರೇ ಆಗಿರುವುದರಿಂದ ಮಾಹಿತಿಗಳು ಹೆಚ್ಚು ಆಪ್ತವೂ ಕರಾರುವಕ್ಕಾಗಿಯೂ ನಿರ್ವಹಣೆಗೊಂಡಿರುವ ಸಾಧ್ಯತೆಗಳಿವೆ. ಇಲ್ಲಿನ ಎದ್ದುಕಾಣುವ ಸಂಗತಿಯೆಂದರೆ ಸೂಕ್ಷ್ಮವೂ ವ್ಯಾಪಕವೂ ಆಗಿ ನಡೆದಿರುವ ಕ್ಷೇತ್ರಕಾರ್ಯ. ಮೌಖಿಕ ರೂಪದಲ್ಲಿ ಸಂಗ್ರಹಿಸಿರುವ ಮಾಹಿತಿಗಳಿಗೆ ಪೂರಕವಾಗಿ ಶಾಸನ, ಗಜೆಟಿಯರ್, ಕಾವ್ಯಗಳಿಂದ ಸಾಮಗ್ರಿಗಳನ್ನು ತಂದು ಜೋಡಿಸಿದ್ದಾರೆ. ಭಿನ್ನ ಭಿನ್ನ ಭೌಗೋಳಿಕ ಪ್ರದೇಶಗಳ ಶೈವ ಒಕ್ಕಲಿಗರ ನಡವಳಿಕೆ, ಆಚಾರ ವಿಚಾರಗಳಲ್ಲಿ ಭಿನ್ನತೆ ಇದ್ದಾಗಲೆಲ್ಲ ಅವುಗಳನ್ನು ತೌಲನಿಕವಾಗಿ ದಾಖಲಿಸಿದ್ದಾರೆ. ಮಲೆನಾಡು ಶೈವ ಒಕ್ಕಲಿಗರ ಜೀವನಾವರ್ತನ ಹಾಗೂ ವಾರ್ಷಿಕಾವರ್ತನಗಳ ಕ್ರಿಯಾವಿಧಾನಗಳ ವಿವರವನ್ನು ಅತ್ಯಂತ ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಜೊತೆಗೆ ಬೇಟೆ, ಬೇಸಾಯ, ಅಡುಗೆ ಸಂಪ್ರದಾಯ, ವೈದ್ಯ, ಮನೆಮಾದರಿ, ಭಾಷೆ ಮತ್ತು ಸಾಹಿತ್ಯ - ಹೀಗೆ ಇದು ಒಂದು ಸಮುದಾಯದ ಬಗೆಗಿನ 'ಸರ್ವಸಂಗ್ರಾಹಕ ' ಮಾದರಿಯಾಗಿದೆ. ಆದರೆ ಮುಂದಿನ ಹಂತ-ವಿಶ್ಲೇಷಣೆಗೆ ವಿಶೇಷ ಪ್ರಯತ್ನಿಸಿಲ್ಲ. ವಿವರಣೆಯಲ್ಲೇ ನಿಲ್ಲುತ್ತಾರೆ. ಶಾಸ್ತ್ರಗ್ರಂಥವೊಂದರಲ್ಲಿ ಇರಬೇಕಾದ ವಕ್ತೃವಿವರ, ವಿಶಿಷ್ಟಪದ ಸೂಚಿ, ನಕ್ಷೆ ಇತ್ಯಾದಿಗಳಿಂದ ಕೂಡಿದ್ದು ಗ್ರಂಥ ವೈಜ್ಞಾನಿಕ ಸ್ವರೂಪವನ್ನು ಪಡೆದಿದೆ.

ಇಂತಹ ಜನಾಂಗ/ಜನವರ್ಗಗಳ ಅಧ್ಯಯನದ ವೈಧಾನಿಕತೆಯ ಬಗ್ಗೆ ಒಂದು ಪ್ರಶ್ನೆ. ಮಾನವಶಾಸ್ತ್ರೀಯ ಅಧ್ಯಯನ ಹಾಗೂ ಜಾನಪದೀಯ ಅಧ್ಯಯನ- ಈ ವಿಧಾನಗಳ ವ್ಯತ್ಯಾಸದ ಗಡಿರೇಖೆ ಯಾವುದು? ವಿವಿಧ ಆಚರಣೆಗಳ ಸಂದರ್ಭದಲ್ಲಿ ಜನಸಮುದಾಯ ನಿರೂಪಿಸುವ ಮೌಖಿಕ ಸಾಹಿತ್ಯವನ್ನು ಉದ್ಧರಿಸಿದೊಡನೆ ಜಾನಪದೀಯ ಅಧ್ಯಯನವಾಗುತ್ತದೆಯೇ? ಸಮಾಜದಲ್ಲಿ ಆ ಸಾಹಿತ್ಯದ ಕಾರ್ಯ ಏನು? ಅದರ ಮೂಲಕ ಉದ್ದಿಷ್ಟ ಸಮಾಜದ ಅನನ್ಯಾಂಶಗಳನ್ನು ಹೇಳಲು ಸಾಧ್ಯವೇ? ಜನವರ್ಗವೊಂದು ವರ್ತಮಾನದಲ್ಲಿ ಒಳಗಾಗುತ್ತಿರುವ ಸಾಮಾಜಿಕ-ಸಾಂಸ್ಕೃತಿಕ ಬದಲಾವಣೆಯನ್ನು ವಾಸ್ತವಿಕ ನೆಲೆಯಲ್ಲಿ ಒಪ್ಪಿಕೊಂಡು ಅದಕ್ಕೆ ವಿಶ್ಲೇಷಣೆಯಲ್ಲಿ ಸ್ಥಾನ ಕೊಡಬೇಡವೇ? ಈ ಗ್ರಂಥವನ್ನು ಓದಿದಾಗ ಇಷ್ಟೆಲ್ಲಾ ಪ್ರಶ್ನೆಗಳು ಎದುರಾದರೂ ಈ ಗ್ರಂಥದ ಹಿಂದಿರುವ ಅಗಾಧ ಶ್ರಮ ಹಾಗೂ ಬೃಹತ್ ಪ್ರಮಾಣದ ಸಾಮಗ್ರಿಗಾಗಿ ಮೆಚ್ಚಬೇಕಾಗಿದೆ.

ಮೂಲತಃ ಮಾನವಶಾಸ್ತ್ರಜ್ಞರಾದ ಶ್ರೀ ಎನ್. ಪಿ. ಶಂಕರನಾರಾಯಣರಾಯರು ಕನ್ನಡದ ಜನಾಂಗೀಯ ಅಧ್ಯಯನಕ್ಕೊಂದು ಮಾದರಿ ಆಗಬಲ್ಲಂತಹ ಹಾಗೂ ನಮ್ಮ ಬುಡಕಟ್ಟು ಅಧ್ಯಯನ ಸಾಗಬೇಕಾದ ಗೊತ್ತುಗುರಿಗಳ ಕಡೆಗೆ ಬೆಳಕು ಚೆಲ್ಲುವ

'ಪಣಿಯರವರ ಸಮಾಜ ಮತ್ತು ಜಾನಪದ ಇತಿಹಾಸ' ಎಂಬ ಮಹತ್ವದ ಪುಸ್ತಿಕೆಯನ್ನು ಈ ಸಾಲಿನಲ್ಲಿ ಪ್ರಕಟಿಸಿದ್ದಾರೆ. ನಮ್ಮ ಬುಡಕಟ್ಟು ಜನರ ನೋವಿನ ನೆಲೆಯನ್ನು ಗುರುತಿಸಿ ಅವರನ್ನು ಆಧುನಿಕ ಜೀವನವಿಧಾನಕ್ಕೆ ಅಳವಡಿಸಲು ಅನುಕೂಲವಾಗುವಂತಹ ಯೋಜನೆಗಳನ್ನು ರೂಪಿಸುವಲ್ಲಿ ಜನಾಂಗೀಯ ಅಧ್ಯಯನಗಳು, ಮೌಖಿಕವಾಗಿ ಹರಿದು ಬಂದ ಇತಿಹಾಸಗಳ ವಿಶ್ಲೇಷಣೆಗಳು ನೆರವಾಗಬೇಕು ಎನ್ನುವ ಗಂಭೀರ ಆಲೋಚನೆಯನ್ನು ಈ ಗ್ರಂಥ ಮುಂದಿಟ್ಟಿದೆ.

ಪಣಿಯರವರ 'ಹಿಂದಿ'ನಿಂದ 'ಇಂದಿ'ನ ವರೆಗಿನ ಬದುಕನ್ನು, ರೀತಿನೀತಿ ನಡಾವಳಿಯನ್ನು, ಸಂಸ್ಕಾರ, ವಿಧಿ, ನಿಷೇಧಗಳನ್ನು ಕ್ಷೇತ್ರಕಾರ್ಯದ ಮೂಲಕ ವ್ಯವಸ್ಥಿತವಾಗಿ ಸಂಗ್ರಹಿಸಿ ಕೊಟ್ಟಿದ್ದಾರೆ. ಮುಂದಿನ ಭಾಗದಲ್ಲಿ ಲೇಖಕರು ಆ ಸಮುದಾಯದ ಪುರೋಹಿತವರ್ಗಕ್ಕೆ ಸೇರಿದ ಅಟ್ಟಾಳಿ ಕರಿಯನು ಹೇಳಿದ ಹಾಡೊಂದರ ಸಹಾಯದಿಂದ (ಚತ್ತವಂಡಪಾಟ್) ಅವರ ಇತಿಹಾಸವನ್ನು ಪುನಾರಚಿಸುವ ಪ್ರಯತ್ನ ಮಾಡಿದ್ದಾರೆ. ಒಂದು ನೆಲದ, ಜನರ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಲಿಖಿತ ಆಕರಗಳೇ ಕರಾರುವಾಕ್ಕಾದವುಗಳು ಎನ್ನುವ ನಮ್ಮ ಅನೇಕ ಅಕೆಡೆಮಿಕ್ ವಿದ್ವಾಂಸರ ಚಿಂತನ ವಿಧಾನಕ್ಕೆ ಪರ್ಯಾಯ ಮಾದರಿಯೊಂದು ಇಲ್ಲಿ ಲಭ್ಯವಾಗುತ್ತದೆ. ಒಂದು ಸಮುದಾಯದ ಬದುಕನ್ನು 'ಹೊರಗಿನ' ವಿದ್ವಾಂಸರು ನೋಡಿ ಕೇಳಿ ಅರ್ಥೈಸಿದ ಮಾದರಿಯನ್ನು ನಾವು ಈಗಾಗಲೇ ನೋಡಿದ್ದೇವೆ. ಆದರೆ ಒಂದು ಜನಾಂಗ ತನ್ನ ಇತಿಹಾಸವನ್ನು ತಾನೇ ರೂಪಿಸಿದಾಗ ಆ ಸಾಮಗ್ರಿಯನ್ನು ವಿದ್ವಾಂಸರು ಹೇಗೆ ವಿಶ್ಲೇಷಿಸಬಹುದು ಎನ್ನುವುದಕ್ಕೆ ಇದು ಮಾದರಿಯಾಗುತ್ತದೆ.

ಕೇರಳ-ಕರ್ನಾಟಕ-ತಮಿಳುನಾಡು ಈ ಮೂರು ರಾಜ್ಯಗಳು ಕೂಡುವ ಪ್ರದೇಶದಲ್ಲಿ ವಾಸಮಾಡುವ ಹಲವು ಬುಡಕಟ್ಟು ಸಮುದಾಯಗಳಲ್ಲಿ 'ಪಣಿಯರವ' ಒಂದು. ಪ್ರಕೃತ ಗ್ರಂಥವನ್ನು ಕೊಡಗಿನ ತಿತಿಮತಿ ಪ್ರದೇಶದ ಪಣಿಯರವರನ್ನು ಗಮನಿಸಿ ಬರೆಯಲಾಗಿದೆ. ಅಲ್ಲಿನ ಭದ್ರಗೋಳ ಗಿರಿಜನ ಕಾಲೊನಿಯ ಅಟ್ಟಾಳಿ ಕರಿಯ ಹೇಳಿದ ಹಾಡಿನ ಮೂಲಕ ಪಣಿಯರವ ಸಮುದಾಯದ ಇತಿಹಾಸವನ್ನು ಪುನಾರಚಿಸುವ ಪ್ರಯತ್ನ ಇಲ್ಲಿ ನಡೆದಿದೆ. ಜಗತ್ತಿನ ಸೃಷ್ಟಿ, ಮಾಯಿಲಿ ಮಾಮನ ಕತೆ, ಪಣಿಯರವರ ಬವಣೆಯ ಬದುಕು- ಈ ಹಾಡಿನ ಕಥಾಪ್ರವಾಹದ ಮೂರು ಮುಖ್ಯ ಕವಲುಗಳು. ಮೊದಲ ಭಾಗದಲ್ಲಿ ಬರುವ ಜಗತ್ತಿನ ಸೃಷ್ಟಿಯ ಕತೆ ತುಂಬ ಮಹತ್ವದ್ದು. ಒಂದು ಸಮುದಾಯದ ವಿಶಿಷ್ಟ ಲೋಕದೃಷ್ಟಿಯನ್ನು ಅರ್ಥೈಸುವಲ್ಲಿ ಇಂತಹ ಸೃಷ್ಟಿ ಪುರಾಣಗಳು ಮಹತ್ವದ ಪಾತ್ರವಹಿಸುತ್ತವೆ. ಬಂಧುತ್ವ ಸಮಾಜಕ್ಕೆ ಸೇರಿದ ಪಣಿಯರವರ ಲೈಂಗಿಕ ಸಂಬಂಧಗಳ ವಿಧಿ ನಿಷೇಧಗಳಿಗೆ ಮಾಯಿಲಿ ಮಾಮನ ಕತೆ ಬೆಳಕು ಚೆಲ್ಲುತ್ತದೆ. ಅವರ ಮದುವೆ ಸಂಪ್ರದಾಯದ ವಿವರ ಈ ಹಾಡಿನಲ್ಲಿದೆ. ಈ ಗ್ರಂಥದ ಕೆಚ್ಚು ಇರುವುದು ಹಾಡಿನ ಮೂರನೆ ಎಳೆ - ಪಣಿಯರವರ ಬದುಕನ್ನು ವಿವರಿಸುವ ಭಾಗದಲ್ಲಿ. ಈ ಸಮುದಾಯದ ದಟ್ಟ ನೆಲೆಗಳಾದ ಹೆಗ್ಗಡೆ ದೇವನಕೋಟೆ, ಪಿರಿಯಾ ಪಟ್ಟಣ, ವೈನಾಡು ಪ್ರದೇಶಗಳ ಆರ್ಥಿಕ ಸಾಮರ್ಥ್ಯವನ್ನು ಗಮನಿಸಿದ ಮೈಸೂರು

ಒಡೆಯರು, ವಿದೇಶಿ ಕಂಪೆನಿಗಳು ಅವುಗಳನ್ನು ತಮ್ಮ ನಿಯಂತ್ರಣಕ್ಕೊಳಪಡಿಸಿಕೊಳ್ಳಲು ನಡೆಸಿದ ಪ್ರಯತ್ನ, ಆ ಪ್ರದೇಶಗಳೊಂದಿಗೆ ಇರಿಸಿಕೊಂಡ ವ್ಯಾಪಾರ ವಹಿವಾಟಿನ ಸಂಬಂಧಗಳ ಹಿನ್ನೆಲೆಯಲ್ಲಿ ಹಾಡಿನ ಕ್ರಿಯಾಘಟನೆಗಳನ್ನು ತರ್ಕಿಸಿ ಅದು ಹದಿನೇಳು, ಹದಿನೆಂಟನೆ ಶತಮಾನಕ್ಕೆ ಸೇರಿರಬಹುದೆಂದು ಊಹಿಸುತ್ತಾರೆ. ಕಾಡುಗಳಲ್ಲಿ ಆಹಾರ ಸಂಗ್ರಹಿಸಿ ಬದುಕುತ್ತಿದ್ದ ಇಡಿಯ ಜನಾಂಗ ನಾಗರಿಕತೆಯ ಸಂಪರ್ಕಕ್ಕೆ ಬಂದು ಭೂಮಾಲಿಕರ ಜೀತದಾಳುಗಳಾಗಿ ಬದುಕಬೇಕಾಗಿ ಬಂದಿರಬೇಕೆಂದು ತರ್ಕಿಸುತ್ತಾರೆ. ಈ ಊಹೆಗೆ ಮಾನಾತುರುಗಳನ್ನು ಬಲೆಬೀಸಿ ಹಿಡಿದ ಐತಿಹ್ಯ, ಕುಮೇರು ಕೃಷಿಯನ್ನು ಅವಲಂಬಿಸದೆ ಆಹಾರ ಸಂಗ್ರಹವನ್ನೇ ಅವಲಂಬಿಸಿದ್ದ ಆಂತರಿಕ ಸಾಕ್ಷ್ಯಗಳನ್ನು ಬಳಸಿಕೊಳ್ಳುತ್ತಾರೆ. ಇದಕ್ಕೆ ದೊರೆವ ವಸಾಹತುಶಾಹಿ ಪುರಾವೆಗಳನ್ನು ನಮ್ಮ ಮುಂದೆ ಇರಿಸುತ್ತಾರೆ. ಅರಣ್ಯವನ್ನು ಕೃಷಿಭೂಮಿಯಾಗಿ ಬದಲಾಯಿಸಿದ ಸುದೀರ್ಘಕಾಲದ ಅವರ ಶ್ರಮಪೂರ್ಣ ದಯನೀಯ ಬದುಕನ್ನು ಕತೆಯೊಳಗಿನ ಆಧಾರಗಳಿಂದ ವಿವರಿಸುತ್ತಾರೆ. ಪೊನ್ನುರುವನ್ನು ತಂದು ಮಾನಾತುರುಗಳಿಗೆ ಕೊಡಿಸಿ ಚೈತನ್ಯ ತುಂಬಿದ ವಿಚಾರ, ಕೃಷಿ ಕೆಲಸವನ್ನು ಕಲಿಸಿಕೊಟ್ಟ ಪಿರಾಮೆ ಕೋಯಿಲಪ್ಪ ಯಾರಿರಬಹುದೆನ್ನುವ ಜಿಜ್ಞಾಸೆ-ಇಲ್ಲೆಲ್ಲ ಲೇಖಕರು ಊಹೆಯ ಬಹುತ್ವವನ್ನು ಪ್ರಶ್ನೆಯ ರೂಪದಲ್ಲೇ ನಮ್ಮ ಮುಂದೆ ಇರಿಸುವ ಮೂಲಕ ಅರಿವಿನ ವಿಸ್ತಾರಕ್ಕೆ ಅವಕಾಶಮಾಡಿಕೊಡುತ್ತಾರೆ. ಇಲ್ಲಿನ ಹಾಡು ನೆಲ-ಕುಲ ಇಲ್ಲದ ಪಣಿಯರವರ ನೋವಿನ ಕತೆಯನ್ನು ಹೇಳುತ್ತದೆ. ತಮ್ಮ ಈ ದುಸ್ಥಿತಿಗೆ ಯಾರು ಹೇಗೆ ಕಾರಣರು ಎನ್ನುವುದನ್ನು ಅವರು ತಮ್ಮ ಹಾಡುಗಳಲ್ಲಿ ಪ್ರಸ್ತಾಪಿಸದೆ ಇರುವುದು ಅವರ ಹೀನಾಯ ಬದುಕಿಗೆ ಹಿಡಿದ ಕನ್ನಡಿ. ಪಣಿಯರವರ ಈ ದುಸ್ಥಿತಿಯನ್ನು ಹತ್ತೊಂಬತ್ತನೆಯ ಶತಮಾನದ ಯುರೋಪಿನವರು ಅಭಿವೃದ್ಧಿಪಡಿಸಿದ ಕಾಫಿ, ಚಾ ತೋಟಗಳ ಕಾರ್ಮಿಕರ ದುಸ್ಥಿತಿಯೊಂದಿಗೆ ಅತ್ಯಂತ ತಾರ್ಕಿಕವಾಗಿ ಹೋಲಿಸಲಾಗಿದೆ. ಕಣ್ಣೀರಿನಲ್ಲಿ ಗಂಜಿ ಕಾಯಿಸಿಕೊಂಡು ಬದುಕುತ್ತಿದ್ದ ಅವರು ಗುಂಪುಕೂಡಿ ಕಾಡಿಗೆ ಓಡಿಹೋದದ್ದು ಅಲ್ಲಿ ಕೆಲವರು ಸಾವನ್ನಪ್ಪಿದುದು ಅವರ ಅಂದಿನ ದಯನೀಯ ಬಾಳನ್ನು ಧ್ವನಿಸುವುದಾಗಿ ಲೇಖಕರು ಹೇಳುತ್ತಾರೆ.

ಈ ಗ್ರಂಥವನ್ನು ಓದಿಯಾದ ಮೇಲೆ ಜಾನಪದ ಅಧ್ಯಯನದ ಹೊಸ ಸಾಧ್ಯತೆಗಳತ್ತ ಗಮನ ಹರಿಸುವುದು ಸಾಧ್ಯವಾಗುತ್ತದೆ. ಜಾನಪದ ನಮ್ಮ ಪ್ರಾಚೀನ ಸಂಸ್ಕೃತಿಯ ಪಳೆಯುಳಿಕೆಯಷ್ಟೇ ಅಲ್ಲ, ಕಾಲದ ನಿರಂತರ ಸಾಗುವಿಕೆಯಲ್ಲಿ ಹೊಸ ಸಾಮಗ್ರಿಗಳನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಾ ಹೋಗುವ ಜೀವಂತ ಪ್ರಕ್ರಿಯೆ ಎಂಬ ಅರಿವು ನಮ್ಮದಾಗುತ್ತದೆ. ಇಂತಹ ''ಜನಪದ ಸಾಹಿತ್ಯದ ಸಂಗ್ರಹ, ವಿಶ್ಲೇಷಣೆ, ಪ್ರಾದೇಶಿಕ ಹಾಗೂ ಅಖಿಲಭಾರತ ಆರ್ಥಿಕ-ಸಾಮಾಜಿಕ ರಾಜಕೀಯ ಇತಿಹಾಸದೊಂದಿಗೆ ಅವು ನಿರೂಪಿಸುವ ಫಲಿತಗಳ ಜೋಡಣೆ ಅಗತ್ಯವಾಗಿ ಆಗಬೇಕಾದ ಕಾರ್ಯ. ಅಂತಹ ಕಾರ್ಯ ಸಾಮಾಜಿಕ ಇತಿಹಾಸಕ್ಕೆ ಅಮೂಲ್ಯ ಕೊಡುಗೆಯಾಗುತ್ತದೆಂಬುದರಲ್ಲಿ ಸಂದೇಹವಿಲ್ಲ''- ಎನ್ನುವ ಲೇಖಕರ ಮಾತು ಜನಪದ ಅಧ್ಯಯನ ಸಾಗಬೇಕಾದ ಹೊಸದಾರಿಯನ್ನು ಸೂಚಿಸುತ್ತದೆ.

ಶ್ರೀ ಎಂ. ಪ್ರಭಾಕರ ಜೋಶಿಯವರ 'ಯಕ್ಷಗಾನ ಪದಕೋಶ' ಭಾಷಾಕ್ಷೇತ್ರಕ್ಕೆ ವಿಶೇಷವಾಗಿ, ಕರ್ನಾಟಕ ಜಾನಪದ ಕ್ಷೇತ್ರಕ್ಕೆ ಈ ವರುಷದ ಮಹತ್ವದ ಕೊಡುಗೆ. ನಿಘಂಟುಕಾರ ಜೋಶಿಯವರು ಯಕ್ಷಗಾನದ ಪ್ರಾಚೀನ, ಅರ್ವಾಚೀನ ರಂಗ ಪರಂಪರೆಯನ್ನು ಚೆನ್ನಾಗಿ ತಿಳಿದುಕೊಂಡವರು. ಯಕ್ಷಗಾನ ತಾಳಮದ್ದಳೆ ಕಲಾವಿದರಾಗಿ, ರಂಗತಜ್ಞರಾಗಿ, ಮೌಖಿಕ ಮಾಧ್ಯಮದಲ್ಲಿ ತಮ್ಮ ಪಾಂಡಿತ್ಯವನ್ನು ಹಾಯಿಸಬಲ್ಲ ವಿದ್ವಾಂಸರು ಹಲವರಿರಬಹುದು. ಆದರೆ ಜೋಶಿಯವರಂತೆ ಅಲಿಖಿತ ಅರಿವಿನ ಪರಂಪರೆಯನ್ನು ಲಿಖಿತ ಪರಂಪರೆಯಲ್ಲಿ ದಾಖಲಿಸಬಲ್ಲವರು ಕೆಲವರು ಮಾತ್ರ. ಜಾನಪದ ಸಂಗತಿಯೊಂದು ಚಲನಶೀಲವಾಗಿದ್ದು, ಬದಲಾಗುತ್ತಿರುವ ಎಲ್ಲ ಮೌಲ್ಯಗಳನ್ನು ಅರಗಿಸಿಕೊಂಡು ಹೊಸರೂಪಗಳನ್ನು ಆವಿಷ್ಕರಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಆಯಾಕಾಲದ ಜಾನಪದವನ್ನು ಲಿಖಿತಪರಂಪರೆಗೆ ಅಳವಡಿಸಬೇಕಾದುದು ಐತಿಹಾಸಿಕವಾಗಿ ಬಹಳ ಮುಖ್ಯವಾದ ಕೆಲಸವಾಗುತ್ತದೆ. ಇದು ಒಮ್ಮೆ ಮಾಡಿ ಮುಗಿಯತಕ್ಕ ಕೆಲಸವಲ್ಲ. ಇದು ಮತ್ತೆ ಮತ್ತೆ ನಡೆಯುತ್ತಲೇ ಇರಬೇಕಾದ ಸತತ ಕ್ರಿಯೆ. ನೆಲಸಿದ ಕಾಲದ ತುರ್ತಿಗನುಗುಣವಾಗಿ ಏರ್ಪಡುವ ಬದಲಾವಣೆಯನ್ನು ನಿರ್ಲಿಪ್ತ ಸ್ಥಿತಿಯಲ್ಲಿ ಸ್ವೀಕರಿಸಿ ದಾಖಲಿಸುವ ಮನಸ್ಥಿತಿ ವಿದ್ವಾಂಸರಿಗೆ ಇರಬೇಕಾಗಿದೆ. ಈ ದೃಷ್ಟಿಯಿಂದ 'ಯಕ್ಷಗಾನ ಪದಕೋಶ' ಜಾನಪದ ಅಭ್ಯಾಸಿಗಳಿಗೆ, ಭಾಷಾ ಕುತೂಹಲಿಗಳಿಗೆ ಉಪಯುಕ್ತ ಗ್ರಂಥ.

ಮಾನವಿಕ ವಿಜ್ಞಾನ, ಶುದ್ಧವಿಜ್ಞಾನ, ಕ್ರೀಡೆ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಪಾರಿಭಾಷಿಕ ನಿಘಂಟುಗಳು ಇತ್ತೀಚಿನ ದಿನಗಳಲ್ಲಿ ರಚನೆಯಾಗುತ್ತಿವೆ. ಅಲ್ಲೆಲ್ಲ ಲಿಖಿತ ಆಕರಗಳನ್ನು ಬಳಸಿ ನಿಘಂಟು ರಚನೆಯಾಗುತ್ತಿದ್ದರೆ, ಯಕ್ಷಗಾನದಂತಹ ಮೌಖಿಕ ಪರಂಪರೆಯ ಕಲಾಪ್ರಕಾರವೊಂದರ ಸಮಗ್ರಮಾಹಿತಿಗಳನ್ನು ಬಳಸಿಕೊಂಡು ಶಾಸ್ತ್ರಪರಿಭಾಷೆಯ ಹಿನ್ನೆಲೆಯಲ್ಲಿ ಸರ್ವಸಂಗ್ರಾಹಕ ನಿಘಂಟು ರಚನೆಯಲ್ಲಿ ಜೋಶಿಯವರು ಆದ್ಯರಾಗುತ್ತಾರೆ. ಇದು ಕುಳಿತು ಬುದ್ಧಿಯ ಬಲದಿಂದ ಮಾತ್ರ ರೂಪಿಸಿದ ಕೆಲಸವಲ್ಲ. ಈ ಆಕರ ಗ್ರಂಥದ ರಚನೆಯು ಜೋಶಿಯವರ ನಿಡುಗಾಲದ ಕ್ಷೇತ್ರಕಾರ್ಯ, ವಿದ್ವಜ್ಜನ ಸಮಾಲೋಚನಧಿಂದ ಪಡೆದ ಅನುಭವ, ಗಾಢವಾದ ಸ್ವಾಧ್ಯಾಯದ ಬಲದಿಂದ ಸಂಪನ್ನವಾಗಿದೆ. ಈ ಗ್ರಂಥದ ಒಡಲಿನ ಬಹುಪಾಲು ಕರಾವಳಿ ಕರ್ನಾಟಕದ ತೆಂಕುತಿಟ್ಟು, ಬಡಗುತಿಟ್ಟು ಹಾಗೂ ಉತ್ತರಕನ್ನಡತಿಟ್ಟುಗಳ ಮಾಹಿತಿಗಳಿಂದ ತುಂಬಿದೆ. ಮೂಡಲಪಾಯ, ಘಟ್ಟದ ಕೋರೆ ಸಂಪ್ರದಾಯಗಳನ್ನು ಗಮನಿಸದೆ ಬಿಟ್ಟಿಲ್ಲ. ಕೆಲವು ನಮೂದುಗಳ ಬಗೆಗೆ ಕೋಶ ತೌಲನಿಕವಾಗಿ ನಡೆಸುವ ವಾಗ್ವಾದಗಳಲ್ಲಿ ಘಟ್ಟದ ಮೇಲಿನ ಯಕ್ಷಗಾನ ಸಂಪ್ರದಾಯ, ಗೊಂಬೆಯಾಟಗಳ ವಿವಿಧ ಸಂಪ್ರದಾಯಗಳನ್ನು ಗಮನಿಸಿದ್ದಾರೆ.

ನಿಘಂಟು ರಚನೆಯಲ್ಲಿ ಸಾಮಾನ್ಯವಾಗಿ ಬಳಕೆಯಾಗುವ 'ಚಾರಿತ್ರಿಕ ವಿಧಾನ' ಹಾಗೂ ' ವಿಶ್ವಕೋಶಮಾದರಿ' ಎರಡೂ ಇಲ್ಲಿ ಮೇಳೈಸಿದೆ. ಒಂದು ಪದದ ಮೂಲಾರ್ಥ, ಕಾಲಾನುಕಾಲಕ್ಕೆ ಉಂಟಾದ ರೂಪ, ಅರ್ಥ ಬದಲಾವಣೆ, ಪ್ರಾದೇಶಿಕ

ಅರ್ಥವ್ಯತ್ಯಾಸಗಳನ್ನು ನೀಡುವುದರ ಜತೆಗೆ ಈ ಕುರಿತು ವಿವಿಧ ವಿದ್ವಾಂಸರ ಅಭಿಪ್ರಾಯ ನಿರೂಪಣೆ- ಇದು ಕೋಶದ ಸ್ವರೂಪ. ಸಂದರ್ಭಾನುಸಾರ ತುಳು, ಮಲೆಯಾಳಂ, ಸಂಸ್ಕೃತಗಳಿಂದಲೂ ದೃಷ್ಟಾಂತ, ಜ್ಞಾತಿಗಳನ್ನು ನೀಡುವವರಲ್ಲದೆ ಸಂಗತವಾದ ಪೂರಕಮಾಹಿತಿಗಳನ್ನು ಒದಗಿಸುತ್ತಾರೆ. ಚಾಲ್ತಿ ತಪ್ಪಿರುವ ಅನೇಕ ಆಚರಣೆಗಳ ಹಾಗೂ ಪದಗಳ ವಿವರಣೆ ತುಂಬ ಕುತೂಹಲಕಾರಿಯಾಗಿವೆ. ಆಧುನಿಕ ಸಂದರ್ಭದಲ್ಲಿ ಯಕ್ಷಗಾನದ ಪ್ರೇಕ್ಷಕವರ್ಗ ಹುಟ್ಟುಹಾಕಿರುವ ಪರಿಭಾಷೆಗಳನ್ನು ಲೇಖಕರು ಗಮನಿಸಿದ್ದಾರೆ. ಇಂತಹ ಪದಗಳು ಮೊತ್ತ ಮೊದಲ ಬಾರಿಗೆ ದಾಖಲಿತವಾದವು. ಪೂರ್ವರಂಗದ ಕಟ್ಟುಹಾಸ್ಯಗಳೆಂದು ಗುರುತಿಸಲ್ಪಟ್ಟಿರುವ ಬ್ರಾಹ್ಮಣಪುರೋಹಿತ, ಆಚಾರಿಭಟ್ಟ, ಒತ್ತೆಬೈರಾಗಿ, ಮಡಿವಾಳ, ಕೊರವಂಜಿ, ಕಿರಿಸ್ತಾನ್ ಹಾಸ್ಯ- ಇವುಗಳನ್ನು ನಾಟ್ಯಶಾಸ್ತ್ರದಲ್ಲಿ ಹೇಳಿದ ಅಸತ್ಪ್ರಲಾಪ, ವಾಕ್ಕೇಲಿ, ಸಿಂಗಕಗಳೊಂದಿಗೆ ಹೋಲಿಸುತ್ತಾರೆ. ಈ ಹಾಸ್ಯರೂಪಗಳನ್ನು ಕರ್ನಾಟಕದ ವಿವಿಧ ಆರಾಧನಾ ಸಂಪ್ರದಾಯಗಳಾದ ಜಾಲಾಟ, ಪಾಣ್ಣರಾಟ, ಕಾಡ್ಯನಾಟ, ಭೂತಾರಾಧನೆಗಳಲ್ಲಿ ಕಂಡುಬರುವ ಹಾಸ್ಯರೂಪಗಳಾದ ಕೋಲ, ಉತ್ತರಕನ್ನಡದ ಹಗರಣಗಳೊಂದಿಗೆ ಹೋಲಿಸಿ ಗಮನಿಸಬೇಕಾಗಿದೆ. ಸಮಾನಾರ್ಥಕ ಆದರೆ, ಧ್ವನ್ಯಾತ್ಮಕವಾಗಿ ಭಿನ್ನರೂಪದ ಪದಗಳನ್ನು ದಾಖಲಿಸುವ, ವೃಕ್ಷ, ಖನಿಜಗಳಿಗೆ ಅಂತಾರಾಷ್ಟ್ರೀಯ ದ್ವಿನಾಮಗಳನ್ನು ಹೇಳುವ ವೈಜ್ಞಾನಿಕ ವಿಧಾನವನ್ನು ಬಳಸಿದ್ದಾರೆ. ಯಕ್ಷಗಾನ ಪ್ರಕಾರದ ಕಿರುಪ್ರಕಾರಗಳಂತಿರುವ ಹೂವಿನಕೋಲು, ರಾಧಾಕೃಷ್ಣ ವೇಷ, ಚಿಕ್ಕಮೇಳ, ಶನಿಕತೆ- ಇವುಗಳ ವಿವರ ನೀಡುವ ಮೂಲಕ ಅವುಗಳಿಗೆ ಯಕ್ಷಗಾನದೊಂದಿಗಿನ ಪೂರಕ ಸಂಬಂಧಗಳನ್ನು ಬಿಡಿಸಿ ಹೇಳುತ್ತಾರೆ. ವೇಷಭೂಷಣ, ಮುಖವರ್ಣಿಕೆ, ಆಯುಧಗಳ ಬಗೆಗಳು, ರಂಗಸ್ಥಳದ ವಿನ್ಯಾಸ, ರಂಗಪರಿಕರಗಳು- ಇವುಗಳನ್ನು ರೇಖಾಚಿತ್ರಗಳೊಂದಿಗೆ ತೋರಿಸುವ ಮೂಲಕ ನಿಘಂಟಿನಲ್ಲಿರಬೇಕಾದ ಎಲ್ಲಾ ವೈಜ್ಞಾನಿಕ ನಿಖರತೆಗಳನ್ನು ಪಾಲಿಸಿದ್ದಾರೆ. ಜೋಶಿಯವರ ಅಪಾರ ಬೌದ್ಧಿಕಶ್ರಮ, ಸೂಕ್ಷ್ಮ ಒಳನೋಟ, ಪ್ರಾದೇಶಿಕ ಪೂರ್ವಗ್ರಹರಹಿತ ದೃಷ್ಟಿ, ಸರಳ-ನೇರ ನಿರೂಪಣೆಗಾಗಿ ಅಭಿನಂದಿಸಬೇಕಾಗಿದೆ. ಈ ಕೃತಿಯಿಂದಾಗಿ ಯಕ್ಷಗಾನ ಪ್ರಪಂಚದ ನಿಡುಗಾಲದ ಕೊರತೆ ತುಂಬಿ ಬಂದಿದೆ. ಅವರು ನಡೆಸಿದ ಕ್ಷೇತ್ರಕಾರ್ಯ, ಅನುಸರಿಸಿದ ವೈಧಾನಿಕತೆ. ಮುಂದೆ ನಡೆಯಬೇಕಾದ ಕೆಲಸದ ಬಗ್ಗೆ ಒಂದು ಮುನ್ನೋಟವನ್ನು ಒಳಗೊಂಡಿದ್ದ ಒಂದು ತಾತ್ವಿಕ 'ಪ್ರವೇಶ'ವನ್ನು ಬರೆದಿದ್ದರೆ ಓದುಗರಿಗೆ ಅನುಕೂಲವಾಗುತ್ತಿತ್ತು.

ಯಕ್ಷಗಾನ ತಾಳಮದ್ದಳೆ ಪ್ರಕಾರದ ಅಗ್ರಮಾನ್ಯ ಅರ್ಥಧಾರಿ ಶ್ರೀ ಶೇಣಿ ಗೋಪಾಲಕೃಷ್ಣಭಟ್ಟರು ರಾಮಾಯಣ ಪ್ರಸಂಗದ ವಿವಿಧ ಪದ್ಯಗಳಿಗೆ ಹೇಳಿದ ಅರ್ಥಗಳಿಂದ ಹೆಣೆದ ಆಶುರೂಪದ ಗದ್ಯಕಾವ್ಯ `ಶೇಣಿ ರಾಮಾಯಣ`. ಪ್ರಸಂಗಪಠ್ಯದ ಆಧಾರದಲ್ಲಿ ಅರ್ಥಧಾರಿಯ ಲೋಕಜ್ಞಾನ, ಪುರಾಣ ಪ್ರಜ್ಞೆ, ಪುರಾಣವನ್ನು ಸಮಕಾಲೀನ ತಿಳಿವಳಿಕೆಯ ಹಿನ್ನೆಲೆಯಲ್ಲಿ ಅರ್ಥೈಸುವ ಜಾಣ್ಮೆ, ತರ್ಕಕುಶಲತೆಯ ಹಂದರದ ಮೇಲೆ ಪಾತ್ರ ವಿವೇಚನೆ ಇಲ್ಲಿ ಬೆಳೆಯುತ್ತದೆ. ಶೇಣಿಯಂತಹ ಅದ್ಭುತ

ಸೃಜನಶೀಲ ಮಾತಿನಮಲ್ಲ ಮೌಖಿಕವಾಗಿ ಕಟ್ಟಿಕೊಟ್ಟ ಗದ್ಯ ಕಾವ್ಯವನ್ನು ಲಿಪಿಗಿಳಿಸುವ ಮೂಲಕ ಶ್ರಾವ್ಯ ಮಾಧ್ಯಮದಲ್ಲಿದ್ದುದನ್ನು ಚಾಕ್ಷುಷ ರೂಪಕ್ಕೆ ತಿರುಗಿಸಿದುದು ಸಂಪಾದಕ ಡಾ. ಗೋಪಾಲಕೃಷ್ಣ ಹೆಗಡೆಯವರ ದೊಡ್ಡ ಶ್ರಮಪೂರ್ಣ ಕೆಲಸ. ವಾಸ್ತವಿಕವಾಗಿ ಶೇಣಿಯವರು ವಿವಿಧ ತಾಳಮದ್ದಳೆಯ ಸಂದರ್ಭಗಳಲ್ಲಿ ಕಟ್ಟಿದ 'ಹಲವು' ಮೌಖಿಕ ರಾಮಾಯಣಗಳಲ್ಲಿ 'ಒಂದು' ಮಾದರಿ ನಮಗೆ ದೊರಕಿದೆ. ಸಂಪಾದಕರ ಮಾತಿನಂತೆ......'ಶೇಣಿಯವರ ಶೈಲಿಯೊಂದಿಗೆ ಲಿಪಿರೂಪದಲ್ಲಿ ದಾಖಲಿಸುವ ಮೊದಲ ಸಾಹಸ ಇದು.'

ಇಲ್ಲಿ ಒಂದು ಮಾತು. ಯಕ್ಷಗಾನ ತಾಳಮದ್ದಳೆಯಂತಹ ಪ್ರಕಾರದಲ್ಲಿ ಮೇಲುನೋಟಕ್ಕೆ ಮಾತು ಮುಖ್ಯ ಹೌದು. ಆದರೆ ಆ ಪ್ರಕಾರದ ಪ್ರದರ್ಶನದ ಸಂದರ್ಭದಲ್ಲಿ ಏರ್ಪಡುವ ಬೃಹತ್ ಪಠ್ಯದಲ್ಲಿ ಮಾತು ಒಂದು ಭಾಗ ಮಾತ್ರ. ಭಾಷೆಯ ನಿರೂಪಣೆಯ ಎಲ್ಲ ಸಾಮರ್ಥ್ಯವನ್ನು ಲಿಪಿಯಲ್ಲಿ ಹಿಡಿದಿಡಲು ಸಾಧ್ಯವೇ? ಮೌಖಿಕತೆಯಲ್ಲೇ ತನ್ನ ಜೀವಂತಿಕೆಯನ್ನು ಕಂಡುಕೊಳ್ಳುವ ಜಾನಪದ ಅಕ್ಷರ ರೂಪಕ್ಕೆ ತಿರುಗಿದೊಡನೆ ಪೇಲವವಾಗುತ್ತದೆ ಎನ್ನುವುದಕ್ಕೆ 'ಶೇಣಿರಾಮಾಯಣ' ಸಾಕ್ಷಿ. ಅಂದ ಮಾತ್ರಕ್ಕೆ ಇಂತಹ ಕೆಲಸ ನಿರುಪಯುಕ್ತ ಎಂದರ್ಥವಲ್ಲ. ಶೇಣಿಯಂತಹ ಪ್ರತಿಭಾವಂತ ಕಲಾವಿದರ ವಚೋವಿಲಾಸದ ಒಂದು ಪರಿಚಯವಾಗುತ್ತದೆ.

ಈ ಗ್ರಂಥ ಸಂಪಾದನೆಯಲ್ಲಿ ಸಂಪಾದಕರು ಬಳಸಿದ ತಾಂತ್ರಿಕತೆಯ ಬಗ್ಗೆ ಒಂದು ಪ್ರಶ್ನೆ. ಶೇಣಿಯವರು ಸಹಸ್ರಾರು ಸಂಖ್ಯೆಯ ಪ್ರೇಕ್ಷಕರೆದುರು ಪ್ರದರ್ಶಿಸಿದ ತಾಳಮದ್ದಳೆಯ ಅರ್ಥಗಾರಿಕೆಯ ಪಠ್ಯವನ್ನು ಸಂಪಾದಕರು ಬಳಸದೆ ವಾಣಿಜ್ಯ ಉದ್ದೇಶಕ್ಕಾಗಿ ಮುಚ್ಚಿದ ಕೊಠಡಿಯೊಳಗೆ ಸೀಮಿತ ಕಾಲಾವಧಿಗೆ ಬದ್ಧವಾದ ಪ್ರೇರಿತ ಸಂದರ್ಭದಲ್ಲಿ ದಾಖಲಿಸಿಕೊಂಡ ಧ್ವನಿಸುರುಳಿಗಳನ್ನು ಲಿಪ್ಯಂತರಕ್ಕೆ ಬಳಸಿಕೊಂಡದ್ದು. ಹೀಗಾಗಿ ಇಲ್ಲಿ ದೊರಕಿರುವುದು ಶೇಣಿಯವರ ಪೂರ್ಣಾಭಿವ್ಯಕ್ತಿ ಅಲ್ಲ. ಇದು ಅವರ ಅದ್ಭುತ ಸಾಮರ್ಥ್ಯದ ನೆರಳು ಮಾತ್ರ. ಈಗಾಗಲೇ ನಾಡಿನಾದ್ಯಂತ ಖಾಸಗೀ ವ್ಯಕ್ತಿಗಳಲ್ಲಿ ಅಥವಾ ದಾಖಲಾತಿಕೇಂದ್ರಗಳಲ್ಲಿ ದೊರೆವ ಶೇಣಿಯವರ 'ಲೈವ್ ಕ್ಯಾಸೆಟು' ಗಳನ್ನು ಲಿಪ್ಯಂತರಗೊಳಿಸಿ ಪ್ರಕಟಿಸಿದಲ್ಲಿ ಹೆಚ್ಚು ಅರ್ಥಪೂರ್ಣವಾಗುತ್ತಿತ್ತು. ಎರಡನೆಯದು, ಸಂಪಾದಕರು ಎದುರುಪಾತ್ರಧಾರಿಯ 'ಅರ್ಥ'ವನ್ನು ಕೈಬಿಟ್ಟು ಶೇಣಿಯವರ ಮಾತನ್ನು ಮಾತ್ರ ಬಳಸಿಕೊಂಡುದು. 'ಇದಿರಾಳಿಯ ಮಾತುಗಳ ದಾಖಲಾತಿಯ ಅಗತ್ಯವೇ ಇಲ್ಲದೆ ಕಥೆ ನಮಗೆ ಅರ್ಥವಾಗುತ್ತ ಸಾಗುತ್ತದೆ' (ಪ್ರಸ್ತಾವನೆ) ಎಂದು ಸಂಪಾದಕರು ಹೇಳಿದರೂ ಯಕ್ಷಗಾನ ತಾಳಮದ್ದಳೆಯಂತಹ ತರ್ಕಪ್ರಧಾನವಾದ ಸಂಭಾಷಣಾರೂಪದ ಪ್ರಕಾರವನ್ನು ದಾಖಲಿಸಿಕೊಂಡು ಓದುಗರಿಗೆ ನೀಡುವಾಗ ಅದರ ರೂಪ (form) ದ ಮೂಲಕ ಸಿದ್ಧಿಸುವ ಮೌಖಿಕತೆಗ ಅಪಚಾರವಾಗಬಾರದಲ್ಲ! ಇದಿರಾಳಿಯ ಅರ್ಥವನ್ನು ಚಿಕ್ಕ ಗಾತ್ರದ ಮೊಳೆಯಲ್ಲಿ ನೀಡಿದ್ದರೆ ಶೇಣಿಯವರ ಸಾಮರ್ಥ್ಯದ ಇನ್ನೊಂದು ಮುಖವೂ ಬೆಳಕಿಗೆ ಬರುತ್ತಿತ್ತು. ಶೇಣಿಯವರ ಪ್ರತಿಭಾಸಾಮರ್ಥ್ಯವನ್ನು ನಮ್ಮ ಜನ ಧ್ವನಿಸುರುಳಿಗಳ ಮೂಲಕ 'ಕೇಳಿ'

ಸುಖಿಸುತ್ತಿದ್ದರು. ಶ್ರೀ ಹೆಗಡೆಯವರ ಪ್ರಯತ್ನದಿಂದಾಗಿ ಇನ್ನೊಂದು ವರ್ಗದ ಪ್ರೇಕ್ಷಕರು 'ಓದಿ' ಸುಖಪಡುವಂತಾಗಿದೆ. ಆದರೆ ಅದು ಎಷ್ಟರ ಮಟ್ಟಿನದು? ಶೇಣಿಯವರ 'ಕೇಳುಗವಲಯ'ದ ವಿಸ್ತಾರಕ್ಕಾಗಿ ಮಾತ್ರ ಗೋಪಾಲಕೃಷ್ಣ ಹೆಗಡೆಯವರನ್ನು ಅಭಿನಂದಿಸಬೇಕಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ ನಡೆಸಿಕೊಂಡು ಬರುತ್ತಿರುವ ಜಾನಪದ ಸಮ್ಮೇಳನಗಳಲ್ಲಿ ಮಂಡಿತವಾದ ಪ್ರಬಂಧಗಳ ಸಂಕಲನ 'ಜಾನಪದ ಸಾಹಿತ್ಯ ದರ್ಶನ' ಮಾಲಿಕೆಯಲ್ಲಿ ಈ ಬಾರಿ ನಾಲ್ಕು ಪುಸ್ತಕಗಳು ಬಂದಿವೆ. 'ಆಕಾಶ ಜಾನಪದ' (ಸಂ: ಡಾ. ಎಂ.ಎಂ. ಕಲ್ಬುರ್ಗಿ) ತೊಗಲು ಗೊಂಬೆಯಾಟ (ಸಂ: ಡಾ. ಎಸ್.ಜಿ. ಇಮ್ರಾಪುರ) ಹಾಗೂ 'ಮೈಲಾರ ಲಿಂಗ' (ಸಂ: ಡಾ. ಎಸ್. ಜಿ. ಇಮ್ರಾಪುರ) 'ಪುರಾಣ-ಐತಿಹ್ಯ-ಪವಾಡ-ದಂತ ಕಥೆ' (ಸಂ: ಎಸ್. ಜಿ. ಇಮ್ರಾಪುರ)

ನಿರ್ದಿಷ್ಟ ವಿಷಯವನ್ನು ಕುರಿತಂತೆ ನಡೆಸುವ ವಿಚಾರಸಂಕಿರಣ ಹಾಗೂ ಅಲ್ಲಿ ಓದಿದ ಪ್ರಬಂಧಗಳನ್ನು ಪ್ರಕಟಿಸುವ ಈ ಯೋಜನೆ ತುಂಬ ಮೌಲಿಕವಾದುದು. ಪ್ರಕೃತ 'ಆಕಾಶ ಜಾನಪದ'ದಲ್ಲಿ ಸೂರ್ಯ, ಚಂದ್ರ, ಆಕಾಶ, ಮೋಡ-ಮಳೆ, ಗಾಳಿ, ಗ್ರಹ, ನಕ್ಷತ್ರಗಳನ್ನು ಕುರಿತು ಪ್ರಬಂಧಗಳ ಜತೆಗೆ ನೀಗ್ರೊ, ರೆಡ್ಇಂಡಿಯನ್ ಹಾಗೂ ಭಾರತದ ಬುಡಕಟ್ಟುಗಳಲ್ಲಿ ದೊರೆವ ಆಕಾಶ ಜಾನಪದವನ್ನು ಕುರಿತ ಸಾಮಗ್ರಿಗಳನ್ನು ವಿಶ್ಲೇಷಿಸಲಾಗಿದೆ. ಆಕಾಶ, ಆಕಾಶಕಾಯ, ನಕ್ಷತ್ರ, ಮಳೆಗಳನ್ನು ಕುರಿತಂತೆ ನಮ್ಮ ಪಾರಂಪರಿಕ ತಿಳಿವಳಿಕೆಯನ್ನು ಸಂಗ್ರಹಿಸಿ ವಿಶ್ಲೇಷಿಸುವುದು ಮತ್ತು ಆಧುನಿಕ ಅರಿವಿನ ಒರೆಗಲ್ಲಿಗೆ ಹಾಕಿ ಉಜ್ಜಿನೋಡುವುದು ಅರ್ಥಪೂರ್ಣವಾಗುವುದು ಖಂಡಿತ. ನಮ್ಮ ಜನಪದೀಯರ ವಿಶೇಷವಾಗಿ ಬುಡಕಟ್ಟುಜನರ ಲೋಕದೃಷ್ಟಿ, ಅವರು ಹೇಳುವ ಪುರಾಣ, ಕಟ್ಟಿಕೊಡುವ ವಿಚಾರ ಪ್ರಪಂಚ ನಮ್ಮ ಆಧುನಿಕ ಅರಿವಿನ ಸ್ಫೋಟಕ್ಕೆ ಅನುಕೂಲ ಮಾಡಿಕೊಡುವುದರಲ್ಲಿ ಸಂಶಯವಿಲ್ಲ. ಆ ನಿಟ್ಟಿನಲ್ಲಿ ಇಲ್ಲಿನ ಬಹುತೇಕ ಲೇಖನಗಳು ಮಹತ್ವದ ಒಳನೋಟವನ್ನು ನೀಡುತ್ತವೆ. ಜೊತೆಗೆ ನಮ್ಮನ್ನು ಹೆಚ್ಚಿನ ಹುಡುಕಾಟಕ್ಕೆ ಪ್ರೇರೇಪಿಸುತ್ತವೆ.

'ತೊಗಲು ಗೊಂಬೆಯಾಟ' ಗ್ರಂಥದಲ್ಲಿ ತೊಗಲುಗೊಂಬೆಯಾಟದ ಪ್ರಾಚೀನತೆ, ದಕ್ಷಿಣಭಾರತದಲ್ಲಿ ಅದರ ಪ್ರಸರಣ, ಇತರ ಸಂವಾದಿ ಪ್ರದರ್ಶಕ ಕಲೆಗಳೊಂದಿಗೆ ತೌಲನಿಕ ವಿವೇಚನೆ, ಗೊಂಬೆಯಾಟದ ಸಾಹಿತ್ಯ, ಸಂಗೀತ, ಗೊಂಬೆಗಳ ತಯಾರಿ, ರಂಗಸಜ್ಜಿಕೆ ಹಾಗೂ ರೂಢ ಪ್ರದರ್ಶಕ ಕಲೆಯ ಮೇಲೆ ಆಧುನಿಕತೆಯ ಪ್ರಭಾವ -ಹೀಗೆ ಎಲ್ಲ ಮುಖಗಳ ವಿವೇಚನೆ ನಡೆದಿದೆ. ಮಾಹಿತಿಗಳ ವಿವೇಚನೆ ಸಾಕಷ್ಟು ಸಮಗ್ರವಾಗಿಯೇ ನಡೆದಿದೆ. ಗೊಂಬೆಯಾಟದ ಕಲಾವಿದರಿಂದಲೇ ಇನ್ನಷ್ಟು ಹೆಚ್ಚಿನ ಮಾಹಿತಿ ಸಂಗ್ರಹ ನಡೆದು ದಾಖಲಾದಲ್ಲಿ ಜಾನಪದ ಅಧ್ಯಯನಕ್ಕೆ ಉಪಯುಕ್ತವಾದೀತು. ಸಮ್ಮೇಳನದ ಸರ್ವಾಧ್ಯಕ್ಷರು (ಡಾ. ಚಂದ್ರಶೇಖರ ಕಂಬಾರ) ತಮ್ಮ ಉಪನ್ಯಾಸದಲ್ಲಿ ವರ್ತಮಾನದ ಸಂದಿಗ್ಧ ಸಂಕ್ರಮಣಾವಸ್ಥೆಯಲ್ಲಿ ಜಾನಪದದ ಭವಿಷ್ಯದ ಬಗ್ಗೆ ತುಂಬ ಮೌಲಿಕ ವಿವೇಚನೆ ನಡೆಸಿದ್ದಾರೆ.

ಮೈಲಾರಲಿಂಗನ ಸಂಪ್ರದಾಯ ಕರ್ನಾಟಕದ ಅತ್ಯಂತ ಪ್ರಭಾವಿ ಹಾಗೂ ಮಹತ್ವದ ಆರಾಧನಾಪಂಥ. ಸಮಾಜದ ಏಣಿಶ್ರೇಣಿ ವ್ಯವಸ್ಥೆಯಲ್ಲಿ ಎಲ್ಲಾ ವರ್ಗದವರಲ್ಲೂ ಮೈಲಾರಲಿಂಗನನ್ನು ನಂಬುವ ಒಕ್ಕಲುಗಳಿದ್ದಾರೆ. ಇತಿಹಾಸದುದ್ದಕ್ಕೂ ಅನೇಕ ಸಾಮಾಜಿಕ, ರಾಜಕೀಯ, ಧಾರ್ಮಿಕ ಪ್ರಭಾವಗಳಿಗೆ ಒಳಗಾಗುತ್ತಾ ಬಂದು ಅತ್ಯಂತ ಸಂಕೀರ್ಣ ಧಾರ್ಮಿಕ ಪಂಥವಾಗಿ ಉಳಿದಿದೆ. ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶಗಳೊಳಗೆ ಪ್ರಸರಣಗೊಂಡು ಸ್ಥಳೀಯ ಆಗುಹೋಗುಗಳಿಂದ ಸಂಕೀರ್ಣಗೊಂಡಿರುವ ಈ ಸಂಪ್ರದಾಯದ ಅಧ್ಯಯನ ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ, ಧಾರ್ಮಿಕ ಇತಿಹಾಸವನ್ನು ಪುನರ್ರಚಿಸುವುದಕ್ಕೆ ನೆರವಾಗಬಲ್ಲುದು. ಇಷ್ಟಿದ್ದರೂ ಈ ಗ್ರಂಥದ ಬಹುತೇಕ ಲೇಖನಗಳು ಮೈಲಾರಲಿಂಗನ ಆಚರಣೆಗಳನ್ನ ವಿವರಿಸುವುದರಲ್ಲಿ ಸಂತೃಪ್ತವಾಗಿವೆ. ಡಾ. ದೇವೇಂದ್ರಕುಮಾರ ಹಕಾರಿ ಹಾಗೂ ಶ್ರೀ ಹ.ಕ. ರಾಜೇಗೌಡರ ಲೇಖನಗಳು ಉದ್ದಿಷ್ಟ ವಿಷಯವನ್ನು ಎಲ್ಲ ಮಗ್ಗುಲುಗಳಿಂದಲೂ ನೋಡಲು ಪ್ರಯತ್ನಿಸಿವೆ. ಈ ಶತಮಾನದ ಅರುವತ್ತರ ದಶಕದಲ್ಲಿ ಜರ್ಮನ್ ಮಾನವಶಾಸ್ತ್ರಜ್ಞ ಡಾ. ಸಾಂತಾಮಿರ್ ಅವರು ಬರೆದ 'ಮೈಲಾರ-ಒಂದು ಕುರಿಗಾಹಿ ದೈವ' ಎಂಬ ಸಂಶೋಧನಾ ಗ್ರಂಥ ಯಾರ ಗಮನಕ್ಕೂ ಬಾರದೆ ಹೋದುದು ಆಶ್ಚರ್ಯ.

'ಪುರಾಣ-ಐತಿಹ್ಯ-ಪವಾಡ-ದಂತಕಥೆ' - ಈ ಜನಪದ ಪ್ರಕಾರಗಳನ್ನು ವಿಶ್ಲೇಷಿಸಿರುವ ' ಜನಪದಸಾಹಿತ್ಯ ದರ್ಶನ-೧೫' ತುಂಬ ಉಪಯುಕ್ತ ಕೃತಿ. ಜಾನಪದದ ಒಂದು ಪ್ರಮುಖ ಕವಲಾಗಿರುವ ಪುರಾಣ- ಐತಿಹ್ಯಗಳ ನಿರ್ವಚನ-ವ್ಯಾಖ್ಯಾನಗಳನ್ನು ಕುರಿತು ಕನ್ನಡದಲ್ಲಿ ಮೊತ್ತಮೊದಲ ಬಾರಿಗೆ ವಿಸ್ತೃತವಾದ ವಾಗ್ವಾದ ಇಲ್ಲಿ ನಡೆದಿದೆ. ಸಾಹಿತ್ಯದಲ್ಲಿ ಜಾನಪದವು ಹೊಂದಿರುವ ಸಂಬಂಧ, ಸೃಜನಶೀಲ ಬರಹವೊಂದರಲ್ಲಿ ಜಾನಪದ ಅಂಶವನ್ನು ಗುರುತಿಸುವ ಮತ್ತು ವ್ಯಾಖ್ಯಾನ ಮಾಡುವ ಬಗ್ಗೆ ಡಾ. ಬಿ.ಎ. ವಿವೇಕ ರೈಯವರು ಬಹಳ ಗಂಭೀರವಾದ ಒಂದು ಸಂಕಥನವನ್ನು ಬೆಳೆಸಿದ್ದಾರೆ. ಸಾಹಿತ್ಯಕೃತಿಯೊಂದರಲ್ಲಿನ ಜಾನಪದ ಅಂಶಗಳನ್ನು ಕೇವಲ ಪಟ್ಟಿ ಮಾಡುವುದು ಸಾಹಿತ್ಯ ವಿಮರ್ಶಕರ ಅವಹೇಳನಕ್ಕೆ ಗುರಿಯಾಗಿರುವ ಸಂಗತಿಯನ್ನು ನಮ್ಮ ಜಾನಪದ ವಿದ್ವಾಂಸರ ಗಮನಕ್ಕೆ ಅವರು ತಂದಿದ್ದಾರೆ. ನಡೆಯಬೇಕಾದ ಅಧ್ಯಯನದ ದಾರಿಯನ್ನು ಸೂಚಿಸಿದ್ದಾರೆ. ಇಂತಹ ಬರಹಗಳು ನಮ್ಮ ಜಾನಪದ ಅಧ್ಯಯನವನ್ನು ಮುಂದುವರಿಸುತ್ತವೆಯೇ ಹೊರತು ನಮ್ಮ ಪರಂಪರೆಯನ್ನು ಹಾಡಿ ಹೊಗಳುವ ಬರಹಗಳಲ್ಲ. ಡಾ. ಬಿಳಿಮಲೆ, ಡಾ. ರಾಮಚಂದ್ರೇಗೌಡ, ಡಾ. ವಿಲ್ಯಂ ಮಾಡ್ತಾ, ಡಾ. ಜಮೀರುಲ್ಲಾ- ಇವರ ಲೇಖನಗಳು ಪುರಾಣ-ಐತಿಹ್ಯ-ದಂತಕತೆ- ಪವಾಡಗಳನ್ನು ಬೇರೆ ಬೇರೆ ಮಗ್ಗುಲುಗಳಿಂದ ನೋಡಿ ಅರ್ಥಪೂರ್ಣ ವ್ಯಾಖ್ಯಾನ ನೀಡುವುದರಲ್ಲಿ ಯಶಸ್ವಿಯಾಗಿವೆ.

ಡಾ. ಎಸ್. ಪಿ. ಪದ್ಮಪ್ರಸಾದ್ ಅವರ 'ಮಳೆ ಒಂದು ಜಾನಪದೀಯ ಅಧ್ಯಯನ- ವಿಷಯನಿಷ್ಠ ಜಾನಪದಕ್ಕೆ ಸಂಬಂಧಿಸಿದ ಒಂದು ಒಳ್ಳೆಯ ಆಕರಗ್ರಂಥ.

ಬಹುಶಃ ಡಾ. ಚಿದಾನಂದಮೂರ್ತಿ ಅವರ 'ಸಂಪೂರ್ಣ ಸೂರ್ಯಗ್ರಹಣ- ಒಂದು ಜಾನಪದೀಯ ಅಧ್ಯಯನ'ದ ಅನಂತರ ಒಂದು ವಿಷಯವನ್ನು ಎಲ್ಲ ನಿಟ್ಟಿನಿಂದ 'ನೋಡಿ' 'ಕೇಳಿ' ಬರೆದ ಒಳ್ಳೆಯ ಗ್ರಂಥಗಳಲ್ಲಿ ಇದು ಒಂದು. ಮಳೆಯನ್ನ ಕುರಿತ ನಮ್ಮ ಪಾರಂಪರಿಕ ಜ್ಞಾನವನ್ನು ಕ್ಷೇತ್ರಕಾರ್ಯದ ಮೂಲಕ ಹೊರಗೆಳೆಯುವ ಜೊತೆಗೆ ಈ ಬಗ್ಗೆ ಬಂದಿರುವ ಲಿಖಿತ ರೂಪದ ಸಾಹಿತ್ಯದ ವಸ್ತುಮಾಹಿತಿಗಳನ್ನು ತುಲನೆ ಮಾಡುವ ಒಳ್ಳೆಯ ಪ್ರಯತ್ನ ಈ ಗ್ರಂಥದಲ್ಲಿ ನಡೆದಿದೆ. ಭಾರತದಂತಹ ಸುದೀರ್ಘ ಮೌಖಿಕ ಸಾಂಸ್ಕೃತಿಕ ಪರಂಪರೆ ಹಾಗೂ ಸಹಸ್ರಾರು ವರ್ಷಗಳ ಅಕ್ಷರ ಸಂಸ್ಕೃತಿ ಉಳ್ಳ ಈ ನಾಡಿನ 'ತಿಳಿವಳಿಕೆ' ಇಂದು ಇಂಗ್ಲಿಷ್ ಮೂಲದ ಜ್ಞಾನಸಂಪನ್ನರಿಗೆ ನಿರುಪಯುಕ್ತವಾಗಿ ಕಾಣಿಸತೊಡಗಿದೆ. ಅವರಿಗೆ ನಮ್ಮ ಪಾರಂಪರಿಕ ಜ್ಞಾನದ ಬೇರು ಅರಸುವ ಕೆಲಸ ಬೇಕಾಗಿಲ್ಲ. ನಮ್ಮ ಪರಂಪರೆಯ ತಿಳಿವಳಿಕೆಯಲ್ಲಿ ಸಾಕಷ್ಟು 'ಕಳೆ' ಇರುವುದು ನಿಜ. ಅದನ್ನು ಕೀಳುವ ಮೂಲಕ ನಮ್ಮ ಪರಂಪರೆಯ ಜ್ಞಾನದ ಲಾಭವನ್ನು ಪಡೆಯಬೇಕಾಗಿದೆ. ಈ ನಿಟ್ಟಿನಿಂದ ಶ್ರೀ ಪದ್ಮಪ್ರಸಾದರ ಪ್ರಯತ್ನ ಸ್ವಾಗತಾರ್ಹವಾದುದು.

ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲೆ ನಿಂತಿರುವ ವಿವಿಧ ಪಂಚಾಂಗಗಳು ಹಾಗೂ ಆಧುನಿಕ ಹವಾಮಾನ ಶಾಸ್ತ್ರ ನೀಡುವ ತಿಳಿವಳಿಕೆಗಳನ್ನು ತೌಲನಿಕವಾಗಿ ಪರಿವೀಕ್ಷಣೆ ನಡೆಸುವುದು ಅವಶ್ಯ. ಮಳೆಗೆ ಸಂಬಂಧಿಸಿದಂತೆ ಇರುವ ಆಚರಣೆಗಳ ಬಗ್ಗೆ ಸಂಗ್ರಹವಾಗಿ ಲೇಖಕರು ಬರೆದಿದ್ದಾರೆ. ಅವುಗಳಲ್ಲಿ ಜೋಕುಮಾರನ ಹಬ್ಬ, ಬೆಳ್ದಿಂಗಳಪ್ಪನ ಪೂಜೆಯಂತಹ ಆಚರಣೆಗಳ ಬೃಹತ್‌ಪಠ್ಯದ ನಿರ್ಮಾಣದ ಮೂಲಕ ಅಧ್ಯಯನದ ಕಕ್ಷೆಯನ್ನು ವಿಸ್ತರಿಸಲು ಸಾಧ್ಯವಿದೆ.

ಡಾ. ಬಸವರಾಜ ಪೋಲಿಸ ಪಾಟೀಲರ 'ಜಾನಪದ ಸೌರಭ' ಸಂಕಲನವು ಜಾನಪದದ ನವೋದಯಕಾಲಯದ ಪರಿಕಲ್ಪನೆಯನ್ನು ಬಳಸಿಕೊಂಡು ಬರೆದಿರುವ ಕೃತಿ. ನಾಗರಿಕತೆಗೆ ವಿರುದ್ಧವಾದ ಗ್ರಾಮೀಣ ಮೂಲದ ಸಂಸ್ಕೃತಿಯನ್ನಷ್ಟೇ ಜನಪದ ಸಂಸ್ಕೃತಿ ಎಂದು ಪರಿಭಾವಿಸುವ ಹಾಗೂ ಜಾನಪದದಿಂದ ಶಿಷ್ಟಪದ ಬೆಳೆದು ಬಂದಿತೆನ್ನುವ ವಿಕಾಸವಾದಿ ಚಿಂತನಗಳು ಈ ಸಂಕಲನದುದ್ದಕ್ಕೂ ಹರಿದಾಡುತ್ತವೆ. ಪೋಲಿಸ ಪಾಟೀಲರಲ್ಲಿ ಜನಪದ ಜೀವನದ ಹಾಗೂ ಜಾನಪದದ ಬಗ್ಗೆ ತೀವ್ರ ಕಾಳಜಿಯಿದೆ. ಕ್ಷೇತ್ರಕಾರ್ಯ ಮಾಡುವ ಉತ್ಸಾಹವಿದೆ. ಇದು ಮುಂದಿನ ಕೃತಿಗಳಲ್ಲಿ ವಿಶ್ಲೇಷಣೆಯ ರೂಪು ತಳೆದು ಬಂದರೆ ಉತ್ತರ ಕರ್ನಾಟಕದ ಜಾನಪದದ ಅನಾವರಣವಾದೀತು.

'ಜಾನಪದ ಲೋಚನ' ಈ ವರ್ಷ ಬಂದಿರುವ ಡಾ. ಅಂಬಳಿಕೆ ಹಿರಿಯಣ್ಣನ ಜಾನಪದವನ್ನ ಕುರಿತ ಎವಡನೆ ಸಮಾಲೋಚನ ಕೃತಿ. ಇಲ್ಲಿನ ಆರು ಸಂಪ್ರಬಂಧಗಳು ವಿವಿಧ ವಿಚಾರಸಂಕಿರಣಗಳಲ್ಲಿ ಓದಿದವುಗಳು. ಹೀಗಾಗಿ ಬಹುತೇಕ ಬರಹಗಳು ವಿವರಣಾತ್ಮಕ, ಸಮೀಕ್ಷಾ ರೂಪದವು. ಆದರೆ ಎಲ್ಲ ಲೇಖನಗಳ ವಿಷಯ ಪ್ರತಿಪಾದನೆಯಲ್ಲಿ ಒಂದು ಬಗೆಯ ಖಚಿತತೆ ಇದೆ. ಜಾನಪದದ ಬಗೆಗೆ ಸ್ಪಷ್ಟ ಕಲ್ಪನೆ ಇದೆ. ಎಲ್ಲೂ ವಿಷಯವನ್ನು ವೈಭವೀಕರಿಸುವ, ಉದಾರವಾದಿತನವನ್ನು ಪ್ರದರ್ಶಿಸುವ

ಧಾರಾಳತನವನ್ನು ತೋರುವುದಿಲ್ಲ. (ಗಮನಿಸಿ: ಸ್ವಾತಂತ್ರ್ಯಪೂರ್ವ ಜಾನಪದ ಅಧ್ಯಯನದ ದೃಷ್ಟಿ ಧೋರಣೆಗಳು ಪು ೧-೧೩) 'ದಕ್ಷಿಣ ಕರ್ನಾಟಕ ಗ್ರಾಮದೇವತೆಗಳು', 'ಮಾಟ-ಮಂತ್ರ-ಮೋಡಿ', ' ಜನಪದ ಸಂಪ್ರದಾಯಗಳು' - ಲೇಖನಗಳು ದಟ್ಟವಾದ ಕ್ಷೇತ್ರಮಾಹಿತಿಯನ್ನು ಲೇಖನದ ಉದ್ದೇಶಕ್ಕೆ ಹೇಗೆ ಬಳಸಿ ದುಡಿಸಿಕೊಳ್ಳಬಹುದೆನ್ನುವುದಕ್ಕೆ ಸ್ಪಷ್ಟ ಉದಾಹರಣೆಗಳಾಗಿವೆ. ಕರ್ನಾಟಕ ಜಾನಪದದ ಸಂಶೋಧನೆ ಮುಂದೇನು?'- ಈ ಬರಹ ಸಂಕಲನದ ಅತ್ಯುತ್ಕೃಷ್ಟ ಬರಹ ಎಂದು ನನ್ನೆಣಿಕೆ. ಜಾನಪದವನ್ನು ಇಂದು ಜಾನಪದ ವಿಜ್ಞಾನವಾಗಿ ಅಂತಾರಾಷ್ಟ್ರೀಯ ನಿಟ್ಟಿನಿಂದ ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿ ವಿದ್ವಾಂಸನಾದವನಿಗೆ ಹೆಚ್ಚಿನ ನೈಪುಣ್ಯ, ಗಂಭೀರ ಶಾಸ್ತ್ರಾಧ್ಯಯನ ಆ ಮೂಲಕ ಪಡೆವ ಒಳನೋಟ ಅವಶ್ಯವಿದೆ. ಈ ವಿದ್ವತ್ತನ್ನು ಭಾಷೆ ಹಾಗೂ ಸಾಹಿತ್ಯದ ಅಧ್ಯಯನ ಮಾದರಿಗಳಿಂದ ಭಿನ್ನವಾದ ಚೌಕಟ್ಟಿನಲ್ಲಿ ವಿಶ್ಲೇಷಣ ಕಾರ್ಯ ನಡೆಸಬೇಕೆನ್ನುವ ಆಲೋಚನೆ ಬಹಳ ಮಹತ್ವದ್ದು (ಪು. ೮೯) ಜಾನಪದ ಸಾಮಗ್ರಿಗಳನ್ನು ಭಾರತೀಯ ಭವ್ಯಪರಂಪರೆಯ ಜೊತೆಗಿಟ್ಟು ತೂಗುವುದು, ಇಂಡೋ ಯೂರೋಪಿಯನ್ ತತ್ವಾದರ್ಶನಗಳ ಬೆಳಕಿನಲ್ಲಿ ಲಿಖಿತ ಪಠ್ಯಗಳಿಗಷ್ಟೇ ಸೀಮಿತಗೊಳಿಸಿ ನೋಡುವುದು ಮುಂತಾದ ಅಡ್ಡದಾರಿಗಳನ್ನು ಲೇಖಕರು ಪ್ರಶ್ನಿಸಿದ್ದಾರೆ. ಜಾನಪದ ವಿದ್ಯಾರ್ಥಿಗಳೆಲ್ಲರೂ ಓದಲೇಬೇಕಾದ ಕೃತಿ ಇದು.

'ಮಲಿಯಮ್ಮ ನಿನ್ನಾಲ್ಕುಧೋ ಉಧೋ .........' ಡಾ. ಮಂಜುನಾಥ ಬೇವಿನಕಟ್ಟೆ ಅವರು ಹ್ಯಾರಡದ ಗ್ರಾಮದೇವತೆ ಮಲಿಯಮ್ಮನನ್ನು ಕುರಿತು ನಡೆಸಿದ ಜಾನಪದೀಯ ಅಧ್ಯಯನ. ತನ್ನ ಹುಟ್ಟೂರ ಗ್ರಾಮದೇವತೆ ಮಲಿಯಮ್ಮನ ಬಗ್ಗೆ ಕೇಳಿ ಬರುವ ಪುರಾಣಗಳ ತಾತ್ವಿಕತೆ, ಆ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಆಚರಣೆಗಳ ಕ್ರಿಯಾವಿಧಾನ, ಭಾರತೀಯ ಸನ್ನಿವೇಶದಲ್ಲಿ ಬುಡಕಟ್ಟು ಜನರ ದೇವತೆಗಳ ಪರಿಕಲ್ಪನೆಯಲ್ಲಾಗುತ್ತಿರುವ ಸ್ಥಿತ್ಯಂತರ, ಜಾತ್ರೆಯ ವಿವರ, ಜಾತ್ರೆಯ ಭಾಗೇದಾರರ ಕಾರ್ಯ ಮತ್ತು ಪಾತ್ರ- ಹೀಗೆ ಮಲಿಯಮ್ಮನನ್ನು ಕೇಂದ್ರವಾಗಿರಿಸಿಕೊಂಡು ಎಲ್ಲ ಮಗ್ಗುಲುಗಳಿಂದ ಗಮನಿಸಿ ಈ ಅಧ್ಯಯನವನ್ನು ನಡೆಸಿದ್ದಾರೆ. ಕ್ಷೇತ್ರಕಾರ್ಯದ ಸಮೃದ್ಧ ಮಾಹಿತಿಯನ್ನೂ ನೀಡಿದ್ದಾರೆ. ಮಲಿಯಮ್ಮ ಇಂದು ಜಾತಿ ಸಮಾಜದ ಆರಾಧನಾದೇವತೆಯಾದರೂ ಅಲ್ಲಿನ ಪುರಾಣ, ಆರಾಧನೆಯ ಸ್ವರೂಪ, ಜಾತ್ರೆಯ ವಿವರಗಳ ಮೂಲಕ ಅದರಲ್ಲಿ ಬುಡಕಟ್ಟು ಸಮಾಜದ ಆರಾಧನೆಯ ಮೂಲಮಾತೃಕೆಯನ್ನು ಸಂಯೋಜಿಸುವುದರಲ್ಲಿ ಸಂಶೋಧಕರು ಯಶಸ್ವಿಯಾಗಿದ್ದಾರೆ. ಭಗವತ್‌ಶರಣ ಉಪಾಧ್ಯಾಯ, ಡಿ.ಡಿ. ಕೊಸಾಂಬಿ ಮುಂತಾದ ವಿದ್ವಾಂಸರ ಚರ್ಚೆಯನ್ನು ತಮ್ಮ ಉದ್ದೇಶದ ಆಕೃತಿ ನಿರ್ಮಾಣದಲ್ಲಿ ಸಮೃದ್ಧವಾಗಿ ಬಳಸಿಕೊಂಡಿದ್ದಾರೆ. ಜಾತ್ರೆಯ ವಿಧಿವಿಧಾನಗಳ ಎಳೆಯ ಬೆನ್ನು ಹತ್ತಿ ಚಾರಿತ್ರಿಕ ಕಾಲದ ವರ್ಗಸಂಘರ್ಷದ ಸಾಧ್ಯತೆಯನ್ನು ಹೇಳುತ್ತಾರೆ. ಜನ ವಿಚಾರವಂತರಾಗುತ್ತಿದ್ದರೂ ಜಾತ್ರೆಯ ಸಂದರ್ಭವನ್ನು ಗಮನಿಸಿ 'ಸಾಂಸ್ಕೃತಿಕ ಏಕಸ್ವಾಮ್ಯ'ಕ್ಕೆ ಪಕ್ಕಾಗುತ್ತಿರುವ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಿದ್ದಾರೆ.

ಮಲಿಯಮ್ಮನ ಬಗೆಗೆ ಇರುವ ಪುರಾಣ ಅಥವಾ ಐತಿಹ್ಯವನ್ನು ಸಂಶೋಧಕರು ಕಥೆ ಎಂದೇ ಕರೆದು ( ಅವರ ದೃಷ್ಟಿಯಲ್ಲಿ ಗ್ರಾಮದೇವತೆಗಳ ಬಗ್ಗೆ ಪುರಾಣಗಳು ಸೃಷ್ಟಿಯಾಗಿಲ್ಲ) ಅಂತಹ ಎರಡನ್ನು ಕುರಿತು ವಿವರವಾಗಿ ಚರ್ಚಿಸುತ್ತಾರೆ. ಮೊದಲನೆಯದನ್ನು ಅವರು ಮೂಲಕಥೆಯಿರಬೇಕೆಂದು ತರ್ಕಿಸುತ್ತಾ ಬರಗಾಲದ ಸಂದರ್ಭದಲ್ಲಿ ಹ್ಯಾರಡಕ್ಕೆ ಮಲೆನಾಡಿನಿಂದ ವಲಸೆಬಂದ ದೇವತೆ- ಮಲಿಯಮ್ಮ ಎನ್ನುತ್ತಾರೆ. ಎರಡನೆಯದು ಅನುಲೋಮ ವಿವಾಹದ ನಿಷೇಧದ ಕಥೆಯೆಂದೂ ಅದು ಸಂಸ್ಕೃತೀಕರಣದ ಪ್ರಕ್ರಿಯೆಯಲ್ಲಿ ಹೇರಲ್ಪಟ್ಟುದೆಂದೂ ಹೇಳುತ್ತಾರೆ. ಈ ಎರಡನೆಯ ಪುರಾಣದ ಬಗ್ಗೆ ಸಂಶೋಧಕರಲ್ಲಿ ಸಾಕಷ್ಟು ಆಂತರಿಕ ವೈರುಧ್ಯಗಳಿವೆ (ನೋಡಿ ಪುಟ: ೧೦,೧೧) ಶೂದ್ರರ ದೇವತೆಗಳನ್ನೇ ಬೆದರಿಕೆಯ ಸಾಧನವಾಗಿ ಬಳಸಿ ಸಂಬಂಧಪಟ್ಟ ಜನಾಂಗಗಳನ್ನು ಅಂಕೆಗೊಳಪಡಿಸಿದ್ದಕ್ಕೆ ಧರ್ಮಸ್ಥಳದ ಅಣ್ಣಪ್ಪಸ್ವಾಮಿಯನ್ನು ಉದಾಹರಿಸಿ ಆತ ಶಿಕ್ಷೆಯ ದೇವರು (ಪುಟ. ೯) ಎಂದುದು ಚರ್ಚಾಸ್ಪದ ಸಂಗತಿ. ಭೂತಾರಾಧನೆಯ ಸ್ವರೂಪ, ಕಾರ್ಯಗಳನ್ನು ಗಮನಿಸಿದಾಗ ಭೂತಗಳು ಶಿಕ್ಷಕ ಹಾಗೂ ರಕ್ಷಕ ಎರಡೂ ಹೌದು.

ಡಾ. ಕೆ. ರುದ್ರಪ್ಪ ಅವರ 'ಬಳ್ಳಾರಿ ಜಿಲ್ಲೆಯ ಜನಪದ ಸಾಹಿತ್ಯ' ಒಂದು ಸೀಮಿತ ಉದ್ದೇಶವುಳ್ಳ ಪರಿಚಯಾತ್ಮಕ ಕೃತಿ. ಕೃತಿಯ ಮೊದಲಿಗೆ ಜನಪದ (ಜಾನಪದ), ಭಾರತೀಯ ಜಾನಪದ, ಕರ್ನಾಟಕ ಜಾನಪದವನ್ನು ಕುರಿತಂತೆ ಬಂದಿರುವ ಆಧುನಿಕ ತಿಳುವಳಿಕೆಯ ವಿವರ ನೀಡಿ ಮುಂದೆ ಬಳ್ಳಾರಿ ಜಿಲ್ಲೆಯಲ್ಲಿ ಪ್ರಚಲಿತವಾಗಿರುವ ಜನಪದ ಕಥೆ, ಗೀತ ಸಾಹಿತ್ಯ, ಪ್ರಕಾರದಲ್ಲಿ ಬರುವ ಸಂಪ್ರದಾಯದ ಹಾಡು, ಹಾಸ್ಯದ ಹಾಡು, ಸವಾಲ್ ಪದಗಳು, ಕೋಲಾಟದ ಪದಗಳು, ಜೋಕುಮಾರನ ಹಾಡು, ಮೈಲಾರಲಿಂಗನ ಹಾಡು ಮುಂತಾದವುಗಳನ್ನು ದೃಷ್ಟಾಂತದೊಂದಿಗೆ ಪರಿಚಯಿಸುತ್ತಾರೆ. ಇನ್ನೂ ಅನೇಕರಲ್ಲಿ ಜನಪದ/ಜಾನಪದ/ ಜನಪದ ಸಾಹಿತ್ಯಗಳ ಅರ್ಥಕಲ್ಪನೆಯಲ್ಲಿ ಗೊಂದಲವಿರುವಂತೆ ಇಲ್ಲೂ ಅದು ಕಾಣಿಸಿದೆ. ಬಳ್ಳಾರಿಜಿಲ್ಲೆಯ ಜಾನಪದದ ಮೊದಲ ಪರಿಚಯ ಮಾಡಿಕೊಳ್ಳುವವರಿಗೆ ಒಳ್ಳೆಯ ಪ್ರವೇಶಿಕೆ.

ಅಕಾಡೆಮಿಕ್ ವಿದ್ವಾಂಸರಲ್ಲದವರು ಸಹಜಕುತೂಹಲ ಹಾಗೂ ಕ್ಷೇತ್ರಾನುಭವದ ಬಲದಿಂದ ಎಂತಹ ಒಳ್ಳೆಯ ವಿವೇಚನೆಯನ್ನು ಮಾಡಬಲ್ಲರು ಎನ್ನುವುದಕ್ಕೆ ಕೆ.ಎಸ್. ಉಪಾಧ್ಯಾಯರ 'ಜಾನಪದಕಲೆ- ಬದುಕು' ಕೃತಿ ಒಳ್ಳೆಯ ಉದಾಹರಣೆ . ಯಕ್ಷಗಾನ ಕಲಾವಿದರು, ವಿದೇಶಿಪರಿಣತರು, ಸ್ಥಳೀಯ ಜನಸಮುದಾಯ-ಇವರೊಂದಿಗೆ ಆಪ್ತ ಹೊಕ್ಕು ಬಳಕೆಯಿದ್ದ ಉಪಾಧ್ಯಾಯರು ನಿಡುಗಾಲದ ಜಾನಪದ ಕುತೂಹಲಿ. ದಕ್ಷಿಣ ಕನ್ನಡದ ಕೊಗ್ಗ ಕಾಮತರ ಯಕ್ಷಗಾನ ಗೊಂಬೆಯಾಟವನ್ನು ಜಾಗತಿಕ ಮಟ್ಟದ ಕಲೆಯಾಗಿಸುವಲ್ಲಿ ಪರಿಶ್ರಮಿಸಿದ ಉಪಾಧ್ಯಾಯರಿಗೆ ದೇಶವಿದೇಶಗಳ ಜಾನಪದ ಕಲಾಪ್ರಕಾರಗಳನ್ನು ' ನೋಡಿ-ಕೇಳಿ' ಪರಿಚಯವಿತ್ತು. ಅವರ ಬರವಣಿಗೆಯಲ್ಲಿ ಪಾಂಡಿತ್ಯಕ್ಕಿಂತ ಸ್ವಾನುಭವಜನ್ಯ ತಿಳುವಳಿಕೆಯದೇ ಮೇಲುಗೈ. ಹೀಗಾಗಿ ಅನೇಕ ದೇಸೀಯ ಮೂಲದ ಒಳನೋಟಗಳನ್ನು

ಗುರುತಿಸಬಹುದು. ಕರಾವಳಿಯ ಕಂಬಳ, ಕೋಳಿಯಂಕ, ನಾಗಮಂಡಲ ಮುಂತಾದ ಆಚರಣೆಗಳನ್ನು ಕುರಿತ ಲೇಖನಗಳು ಸಾಮಯಿಕವಾದವುಗಳು, ಪತ್ರಿಕೆಗಳಿಗಾಗಿ ಬರೆದವುಗಳು. ಭಾರತದ ಯಕ್ಷಗಾನ, ಗೊಂಬೆಯಾಟ ತಂಡಗಳ ನೇತಾರರಾಗಿ ವಿದೇಶಗಳಿಗೆ ತೆರಳಿ ಅಲ್ಲಿ ನಡೆದ ಪ್ರದರ್ಶನಗಳನ್ನು ಕುರಿತು ಅವರು ಬರೆದ ಬರೆಹಗಳು ಈ ಸಂಕಲನದ ತಿರುಳು.

ಡಾ. ಬಸವರಾಜ ಸಬರದ ಅವರ 'ಜನಪದ ದೇವತೆಗಳು-ಶಿಷ್ಟದೇವತೆಗಳು' - ಈ ವಿಷಯವನ್ನು ಅತ್ಯಂತ ಚೊಕ್ಕವಾಗಿ ನಿರೂಪಿಸಿದ ಪುಸ್ತಿಕೆ. ಈ ವಿಷಯದ ಮೇಲೆ ಈ ತನಕ ಬಂದಿರುವ ಅಧ್ಯಯನ ಸಾಮಗ್ರಿಗಳೆಲ್ಲವನ್ನೂ ಗಮನಿಸಿ ಮಾನವಶಾಸ್ತ್ರ ಹಾಗೂ ಜಾನಪದರ ತೋರ್ಕೆಯಲ್ಲಿ ವಿಷಯವನ್ನು ಗ್ರಹಿಸಿ ನಿರೂಪಿಸಿದ್ದಾರೆ. ನಿರ್ಭಾವುಕ, ಆಕ್ರೋಶರಹಿತ ನಿರೂಪಣೆ ಇಲ್ಲಿನ ವಿಶಿಷ್ಟತೆ. ಜನಪದ ದೇವತೆ-ಶಿಷ್ಟದೇವತೆಗಳ ಸ್ವರೂಪ, ಆಶಯ, ಅದು ಸಮಾಜದ ಮೇಲೆ ಬೀರಿದ ಪ್ರಭಾವಗಳ ತೌಲನಿಕ ವಿಶ್ಲೇಷಣೆ ಸಮರ್ಪಕವಾಗಿ ಈ ಕೃತಿಯಲ್ಲಿ ನಡೆದಿದೆ.

ಬನ್ನಂಜೆ ಬಾಬು ಅಮೀನರ 'ತುಳುವರ ಜಾನಪದ ಆಚರಣೆಗಳು' ತುಳುವ ಸಂಸ್ಕೃತಿಯನ್ನು ಪರಿಚಯಿಸುವ ಕೃತಿ. ಒಂದು ಸಂಸ್ಕೃತಿಯ ಒಳಗಿನವರೊಬ್ಬರು ಸ್ವಾನುಭವ ಹಾಗೂ ಕ್ಷೇತ್ರಕಾರ್ಯದ ಮೂಲಕ ಒಂದು ಭಾಷಿಕ ಸಮುದಾಯದ ಬದುಕಿನ ಮೇಲುಪದರದ ಚಿತ್ರವನ್ನು ಹೇಗೆ ಕಟ್ಟಿಕೊಡಬಹುದೆನ್ನುವುದಕ್ಕೆ ಈ ಪುಸ್ತಕ ದೃಷ್ಟಾಂತ. ತುಳುವರ ಜೀವನಾವರ್ತನ ಹಾಗೂ ವಾರ್ಷಿಕಾವರ್ತನಗಳನ್ನು ಬದುಕಿನ ವಿವರಗಳನ್ನು ದಾಖಲಿಸುವ ಕೆಲಸ ಇಲ್ಲಿ ನಡೆದಿದೆ. ಒಂದು ನೆಲದ ಸಂಸ್ಕೃತಿಯನ್ನು ಪರಿಚಯಿಸುವುದರ ಜೊತೆಗೆ ಒಬ್ಬ ಸುಧಾರಣಾವಾದಿಯಾಗಿಯೂ ಇಲ್ಲಿ ಲೇಖಕರು ಕಾಣಿಸಿಕೊಳ್ಳುತ್ತಾರೆ. ತುಳುವ ಸಂಸ್ಕೃತಿಯ ಆಧುನಿಕತೆ ಹಾಗೂ ಸಂಸ್ಕೃತಾನುಸರಣ ಪ್ರಕ್ರಿಯೆಗೆ ಒಳಗಾಗುತ್ತಿರುವ ಬಗ್ಗೆ ಲೇಖಕರಿಗೆ ವಿಷಾದವಿದೆ. ಆದರೆ ಸಾಮೂಹಿಕ ಬದುಕಿನ ಉತ್ಪನ್ನವಾದ ಸಂಸ್ಕೃತಿಪ್ರವಾಹದ ಗತಿಯನ್ನು ತಡೆಹಿಡಿಯುವ ಕೆಲಸ ಸುಲಭ ಸಾಧ್ಯವಲ್ಲ ಎಂಬುದನ್ನು ಗಮನಿಸಬೇಕಾಗಿದೆ. ಸಂಸ್ಕೃತಿ ಸಮ್ಮಿಶ್ರಣವನ್ನು ಪ್ರತಿರೋಧಿಸುತ್ತಾ ಮೂಲಸಂಸ್ಕೃತಿಯನ್ನು ಶೋಧಿಸುವ ಪ್ರಯತ್ನ ಪ್ರವಾಹದ ವಿರುದ್ಧ ಈಸು. ಈ ಗ್ರಂಥದ ಮೂಲಕ ತುಳುವ ಸಂಸ್ಕೃತಿಗೆ ಸಂಬಂಧಪಟ್ಟಂತೆ ಅಲಿಖಿತ ಪರಂಪರೆಯಲ್ಲಿದ್ದ ಅಪೂರ್ವ ಮಾಹಿತಿಗಳು ಒಂದೆಡೆ ದಾಖಲಿತವಾದುವು. ಇದು ಮುಂದೆ ಮಹತ್ವದ ಸಂಸ್ಕೃತಿ ವಿಶ್ಲೇಷಣೆಗೆ ಆಕರವಾಗುವುದರಲ್ಲಿ ಸಂದೇಹವಿಲ್ಲ.

ಹಿ. ಶಿ. ರಾಮಚಂದ್ರೇ ಗೌಡರ 'ನಮ್ಮ ಜನಪದ ಕತೆಗಳು' ಚಿಕ್ಕ ಆದರೆ ಗಮನಾರ್ಹ ಕೃತಿ. ಜನಪದ ಕತೆಗಳನ್ನು ಕುರಿತಂತೆ ಈ ತನಕ ನಡೆದಿರುವ ಎಲ್ಲ ಅಧ್ಯಯನಗಳನ್ನು ಈ ಕೃತಿಯಲ್ಲಿ ಗಮನಿಸಿದ್ದಾರೆ. ಆದರೆ ಹೇಳುವಿಕೆಯಲ್ಲಿ ಅಷ್ಟೇ ಅಲ್ಲ ಹೇಳುವ ವಿಷಯದಲ್ಲೂ ಹೊಸತು ಇದೆ. ನಮ್ಮ ವಿದ್ವಾಂಸರು ಈ ಸಂಬಂಧ ಏನು ಚರ್ಚಿಸಿದ್ದಾರೋ ಅದಕ್ಕಿಂತ ಆಚೆಗಿನದನ್ನು ಶ್ರೀ ಗೌಡರು ಹೇಳುತ್ತಾರೆ. ಆ ಮೂಲಕ ಸಣ್ಣಕತೆಯ ಅಧ್ಯಯನದ ಸಾಧ್ಯತೆಯನ್ನು ವಿಸ್ತರಿಸುತ್ತಾರೆ. ಕಾಗಕ್ಕ-ಗುಬ್ಬಕ್ಕನಂತಹ

ಒಂದು ಕತೆಯನ್ನು ವಿಶ್ಲೇಷಿಸುವ ಮೂಲಕ ಅದು ವರ್ಣ, ವರ್ಗ ಹಾಗೂ ಬೌದ್ಧಿಕ ತಾರತಮ್ಯವನ್ನು ಹೇಳುತ್ತದೆ ಎನ್ನುತ್ತಾರೆ.

ಡಾ. ಮಂಜುನಾಥ ಬೇವಿನಕಟ್ಟೆಯವರ 'ಜನಪದ ಸಂಸ್ಕೃತಿ' ಜಾನಪದವನ್ನು ಕುರಿತ ಎಂಟು ಲೇಖನಗಳ ಸಂಗ್ರಹ. ಸಾಂಸ್ಕೃತಿಕ ಮಾನವಶಾಸ್ತ್ರದಿಂದ ಸಜ್ಜಿತ ಮನಸ್ಸೊಂದು ಬದುಕನ್ನು ನೋಡಿದ ಬಗೆ ಇಲ್ಲಿನ ಬರಹಗಳಲ್ಲಿ ಕಾಣಿಸಿದೆ. ಜಾನಪದವನ್ನು ಸಾಂಪ್ರದಾಯಿಕ 'ಪಳೆಯುಳಿಕೆ' ಸ್ವರೂಪದಲ್ಲಿ ಗ್ರಹಿಸದೆ, ವೈಭವೀಕರಿಸುವ ಪ್ರವೃತ್ತಿಗೂ ಹೋಗದೆ ಅದರ ಚಲನಶೀಲತೆಯನ್ನು ಒಪ್ಪುವ ಆಧುನಿಕ ಧೋರಣೆ ಎಲ್ಲ ಬರವಣಿಗೆಯಲ್ಲೂ ಕಾಣಿಸುತ್ತದೆ. ಆಧುನೀಕರಣದ ಫಲವಾಗಿ ಎಲ್ಲ ಸ್ತರಗಳಲ್ಲೂ ಸಾಂಸ್ಕೃತಿಕ ಪತನವಾಗುತ್ತಿರುವ ಬಗ್ಗೆ ಲೇಖಕರು ವಿಷಾದ ಪಡುತ್ತಾರೆ. ಇಲ್ಲೆಲ್ಲ ಲೇಖಕರು ಒಬ್ಬ ಸುಧಾರಣವಾದಿಯಾಗಿ ತೋರುತ್ತಾರೆ. 'ಬುಡಕಟ್ಟು ಸಂಸ್ಕೃತಿ ಮತ್ತು ಬದಲಾವಣೆ' ಲೇಖನದುದ್ದಕ್ಕೂ ಬುಡಕಟ್ಟು ಸಮಾಜವನ್ನು ಕೌಟುಂಬಿಕ ನೆಲೆಯಲ್ಲಿ ನೋಡಿ ಯಾವ ತರದ ಬದಲಾವಣೆ ಆಗಬೇಕು, ಆಗಬಾರದು ಎನ್ನುವ ಬಗ್ಗೆ ಹೇಳುತ್ತಲೇ ಹೋಗುತ್ತಾರೆ. ಸಾಮುದಾಯಿಕ ಸ್ವರೂಪದ ಬುಡಕಟ್ಟು ಜನರ ಅಭಿವೃದ್ಧಿ ಇತರ ಹಿಂದುಳಿದ ಸಮುದಾಯಕ್ಕಿಂತ ಭಿನ್ನ ಜಾಡಿನಲ್ಲಿ ನಡೆಯಬೇಕು. ಅವರಿಗೆ ಪರಂಪರೆಯಿಂದ ಬಂದಿರುವ ಎಲ್ಲ ಸಾಮಾಜಿಕ ಸಾಂಸ್ಕೃತಿಕ ಮೌಲ್ಯಗಳನ್ನು ಯಾವುದೇ ಬದಲಾವಣೆಗೆ ಗುರಿಪಡಿಸದೆ 'ಕಾಪಿಡುವ' ಮೂಲಕ ಅವರನ್ನು ಮ್ಯೂಸಿಯಂ ಸರಕುಗಳನ್ನಾಗಿಸುವುದರಲ್ಲಿ ಅರ್ಥವಿಲ್ಲ. ಅವರ ಬದುಕಿನ ಉತ್ಪನ್ನವಾಗಿರುವ ನೈಸರ್ಗಿಕ ಸಂಪತ್ತನ್ನು ಕೊಳ್ಳೆ ಹೊಡೆಯದೆ ಅವರ ಮೇಲ್ಮೆಗಾಗಿಯೇ ಬಳಸುವ ಯೋಜನೆ ಹಾಕಿಕೊಳ್ಳಬೇಕು. ಅವರನ್ನು ಇತರ ಸಮಾಜದಿಂದ ಬೇರ್ಪಡಿಸಿ 'ಗುಂಪು ಅಭಿವೃದ್ಧಿ' ಮಾಡುವುದರಲ್ಲೂ ಅರ್ಥವಿಲ್ಲ. ಅವರನ್ನು ನಾಡಿನ ಮುಖ್ಯವಾಹಿನಿಯ ಭಾಗೀದಾರರನ್ನಾಗಿಸಬೇಕು. ಪರಂಪರಾಗತವಾಗಿ ಅನುಭವಿಸಿಕೊಂಡು ಬರುತ್ತಿರುವ ಸಂಪನ್ಮೂಲಗಳ ಮೇಲಿನ ಹಕ್ಕುಗಳನ್ನು ಮಾನ್ಯ ಮಾಡಬೇಕು. ಇಂತಹ ಆಲೋಚನೆಗಳ ಕೊರತೆ ಈ ಲೇಖನದಲ್ಲಿದೆ. ಸಂಗ್ರಹಿಸಿದ ದತ್ತಗಳನ್ನು ಸೈದ್ಧಾಂತಿಕ ಚೌಕಟ್ಟಿಗೆ ಅಳವಡಿಸಿ ಲೇಖನ ಕಟ್ಟುವ ಕಲೆಯನ್ನು ಸಿದ್ಧಿಸಿಕೊಂಡರೆ ಲೇಖಕರಿಗೆ ಒಳ್ಳೆಯ ಭವಿಷ್ಯವಿದೆ.

ನ್ಯಾಷನಲ್ ಬುಕ್‌ಟ್ರಸ್ಟ್‌ನವರು 'ಭಾರತೀಯ ಜಾನಪದ ಮಾಲೆ' ಸರಣಿಯಲ್ಲಿ ಈ ವರ್ಷ ಕನ್ನಡದಲ್ಲಿ ಎರಡು ಪುಸ್ತಗಳನ್ನು ತಂದಿದ್ದಾರೆ. ಒಂದು ತಮಿಳುನಾಡಿನ ಜಾನಪದ (ಲಕ್ಷ್ಮಣನ್ ಚೆಟ್ಟಿಯಾರ್ ಅನು: ಜೀ. ಶಂ. ಪರಮಶಿವಯ್ಯ) ಇನ್ನೊಂದು ರಾಜಸ್ಥಾನದ ಜಾನಪದ (ಅಹುಜಾ ಅನು ಸಿ.ಪಿ.ಕೆ) ಒಂದು ಭಾಷಿಕ-ಸಾಂಸ್ಕೃತಿಕ ವಲಯದ ಜಾನಪದದ ಪರಿಚಯ ಇನ್ನೊಂದೆಡೆಗೆ ಆಗಬೇಕಾದುದು ಅವಶ್ಯ. ಒಂದು ಸಮುದಾಯದ ಅನನ್ಯತೆ ಹಾಗೂ ಇನ್ನೊಂದರೊಂದಿಗೆ ಅದು ಹಂಚಿಕೊಳ್ಳುವ ಸಮಾನಾಂಶಗಳನ್ನು ತಿಳಿದುಕೊಳ್ಳುವುದರಲ್ಲಿ ಇಂತಹ ಕೃತಿಗಳು ಅನುಕೂಲವಾಗುತ್ತವೆ. 'ತಮಿಳುನಾಡಿನ

ಜಾನಪದ' ಈ ನಿಟ್ಟಿನಲ್ಲಿ ತುಂಬ ಉಪಯುಕ್ತ. ಈ ಗ್ರಂಥದಲ್ಲಿ ಮೂಲಲೇಖಕರು ಅಪಾರ ಮಾಹಿತಿಯನ್ನು ಒದಗಿಸಿದ್ದಾರೆ. ಆದರೆ ವಿಶ್ಲೇಷಣೆ ಮಾತ್ರ ಸಾಂಪ್ರದಾಯಿಕ ಬಗೆಯದು, ಮೇಲಾಗಿ ವಿವರಣಾತ್ಮಕವಾದುದು. 'ರಾಜಸ್ಥಾನದ ಜಾನಪದ' ಎಲ್ಲ ದೃಷ್ಟಿಯಿಂದಲೂ ಸೊರಗಿದ ಗ್ರಂಥ. ರಾಜಸ್ಥಾನದ ಭೌಗೋಳಿಕ, ಇತಿಹಾಸಿಕ, ವಿವರಗಳನ್ನು ಓದಿ ರಾಜಸ್ಥಾನದ ಬಗ್ಗೆ ನಾವು ಕಟ್ಟಿಕೊಳ್ಳುವ ಚಿತ್ರಕ್ಕೆ ಪೂರಕವಾದ ಜಾನಪದ ಸಾಮಗ್ರಿ ದೊರೆಯದೆ ನಿರಾಶರಾಗುತ್ತೇವೆ. ಮೂಲಲೇಖಕರಿಗೆ ಜಾನಪದ ಪರಿಕಲ್ಪನೆಯ ಬಗೆಗೇ ಗೊಂದಲವಿದ್ದಂತೆ ಕಾಣುತ್ತದೆ. ಒಂದೇ ವಿಷಯ ಹಲವು ಅಧ್ಯಾಯಗಳಲ್ಲಿ ಮೇಲ್ ಸೇರುವಿಕೆಗೆ ಒಳಗಾಗಿದೆ. ಎರಡೂ ಕೃತಿಗಳ ಅನುವಾದ ಸೊಗಸಾಗಿದ್ದು ಓದಿಸಿಕೊಂಡು ಹೋಗುತ್ತದೆ.

ನಗುವನಹಳ್ಳಿ ಪಿ. ರತ್ನ ಅವರ 'ಜಾನಪದ ಜೀವಾಳ' ಪುಸ್ತಕ ಕನ್ನಡ ಜಾನಪದದ ನವೋದಯ ಕಾಲದ ಬರಹಗಳನ್ನು ನೆನಪಿಸುತ್ತದೆ. ಜಾನಪದವೆಂದರೆ ಗ್ರಾಮೀಣಸಂಸ್ಕೃತಿಯ ಫಲಿತಗಳು, ಅವು ನಮ್ಮ ಬದುಕಿಗೆ ಸೊಗಸನ್ನು ಅರ್ಥವಂತಿಕೆಯನ್ನು ಕೊಡಬಲ್ಲವು, ಇಂದು ಆಧುನಿಕತೆ ಎಲ್ಲವನ್ನೂ ವಿರೂಪಗೊಳಿಸುತ್ತಿದೆ ಎನ್ನುವ ಗ್ರಹಿಕೆ ಈ ಪುಸ್ತಕದುದ್ದಕ್ಕೂ ಕಾಣಿಸುತ್ತಿದೆ. ಜಾನಪದ ಸಂಗ್ರಹ, ವರ್ಗೀಕರಣಕ್ಕೆ ನಮ್ಮ ಕೆಲಸ ನಿಲ್ಲಬಾರದು, ವಿಶ್ಲೇಷಣೆ, ತಾತ್ವಿಕ ವಿವೇಚನೆಯ ಕಡೆಗೆ ಹಾಯಬೇಕು. ಶ್ರೀಮತಿ ರತ್ನ ಅವರ ಪುಸ್ತಕದಲ್ಲಿ ಅಪಾರ ಪ್ರಮಾಣದ ಮಾಹಿತಿಗಳು ಮಾಹಿತಿಗಳಾಗಿಯೇ ಕೊಳಗೊಂಡಿವೆ. ವಿಶ್ಲೇಷಣೆಯನ್ನು ಕೋರುತ್ತವೆ.

'ಮದಗದ ಕೆಂಚಮ್ಮ' ಬಳ್ಳೇಕೆರೆ ಹನುಮಂತಪ್ಪನವರು ಸಂಪಾದಿಸಿದ ಜನಪದ ಕಥನ ಕಾವ್ಯ. ಜನಪದ ಕಾವ್ಯವೊಂದರ ಸಂಪಾದನೆಯಲ್ಲಿ ಸಂಪಾದಕನೊಬ್ಬ ಅನುಸರಿಸಬೇಕಾದ ಎಲ್ಲ ವಿಧಿವಿಧಾನಗಳನ್ನು ಅನುಸರಿಸಿದ್ದಾರೆ. ಮದಗಕ್ಕೆ ಹಾರವಾದ ಕೆಂಚಮ್ಮ, ಆಕೆಯಿಂದಾಗಿ ನಿರ್ಮಾಣವಾದ ಮದಗ, ಆಕೆಯ ಬಗೆಗಿನ ಐತಿಹ್ಯ, ನಿರ್ಮಾಣವಾದ ಗುಡಿ, ಅಲ್ಲಿ ನಡೆವ ಪೂಜೆಯ ಆಶಯ, ಸ್ವರೂಪ, ಈ ಘಟನಾವಳಿಗಳ ಐತಿಹಾಸಿಕತೆ- ಎಲ್ಲ ವಿವರಗಳನ್ನೊಳಗೊಂಡ ಪ್ರಸ್ತಾವನೆಯನ್ನು ಬರೆದಿದ್ದಾರೆ. ಜನಪದ ಕಾವ್ಯದಲ್ಲಿ ಬಂದಿರುವ ಮೌಲ್ಯಗಳೆಲ್ಲವೂ ಅರ್ಥಪೂರ್ಣವೆಂದೂ, ಭಾರತೀಯ ಸಂಸ್ಕೃತಿಯ ಪ್ರತಿನಿಧಿಯೆಂದೂ ವೈಭವೀಕರಿಸಿ ಮಾತನಾಡುವುದು ಸಾಮಾನ್ಯ ಸಂಗತಿ. ಈ ಗ್ರಹೀತದಿಂದ ಈ ಕಾವ್ಯವೂ ಪಾರಾಗಿಲ್ಲ. ಅದುವೇ ಈ ಕಾವ್ಯದ ಬಗ್ಗೆ ನಮಗಿರುವ ತಕರಾರು. ಮನೆಯ ಹಿರಿಯರು ಹೆಣ್ಣೊಬ್ಬಳನ್ನು ಬಲವಂತವಾಗಿ ಕೆರೆಗೆ ಹಾರವಾಗಿಸಿದ ಪ್ರಕರಣ (ನಾಡಿನ ಸಮಷ್ಟಿಯ ಹಿತಕ್ಕಾಗಿ ಎಂಬ ನೆಪ ಬೇರೆ!) ವನ್ನು 'ತ್ಯಾಗ ಬಲಿದಾನದ ಮಹೋನ್ನತ ಕಾವ್ಯವೆಂದು ಸ್ವೀಕರಿಸುವುದು ಸಾಧ್ಯವೇ ? ಪ್ರಕೃತ ಕಾವ್ಯ ಭಾರತೀಯ ಸ್ತ್ರೀಯ ಆದರ್ಶದ ಚಿತ್ರಣ ಎಂದು ನಂಬಿರುವ ಮಾನ್ಯ

ಸಂಪಾದಕರು ಪ್ರಸ್ತಾವನೆಯುದ್ದಕ್ಕೂ' ಬಲಿದಾನವಾದ ಕೆಂಚಮ್ಮನ ಮಾತು ಸ್ತ್ರೀಜಾತಿಗೆ ಆದರ್ಶವಾದುದಲ್ಲವೇ? ( ಪುಟ. ೨೦) 'ಕೆಂಚಮ್ಮನ ದೃಢನಿರ್ಧಾರ ಕನ್ನಡನಾಡಿನ ಮಹಿಳೆಯರಿಗೆಲ್ಲ ಆದರ್ಶಪ್ರಾಯವಾದುದಲ್ಲವೇ? ಈ ಜನಪದ ಕಾವ್ಯ ಕನ್ನಡಮ್ಮನ ಕಾಲ್ಗೆಜ್ಜೆಯಾಗಿ ಕನ್ನಡಿಗರ ಮನ-ಮನೆಗಳಲ್ಲಿ ಸದಾ ಧ್ವನಿಗೂಡಲಿ' ಎನ್ನುತ್ತಾರೆ. ಅಂದರೆ ಸಂಪಾದಕರು ಕಾವ್ಯದಲ್ಲಿ ಪ್ರತಿಪಾದಿಸಲಾಗಿರುವ ಮೌಲ್ಯಗಳನ್ನು ಸ್ವೀಕರಿಸುತ್ತಾರೆಯೇ ವಿನಾ ಪ್ರಶ್ನಿಸುವ ಗೋಜಿಗೆ ಹೋಗುತ್ತಿಲ್ಲ.

ಜನಪದ ಸಾಹಿತ್ಯವನ್ನು ಆಯಾಕಾಲದ ಸಮುದಾಯದ ಪುರಾಣವೆಂದೋ, ಸಮಷ್ಟಿಪ್ರಜ್ಞೆಯ ಅಭಿವ್ಯಕ್ತಿಯೆಂದೋ ನೋಡುವುದರ ಜತೆಗೆ ಅದು ಮಾನವೀಯ ನೆಲೆಯಲ್ಲಿ ಪ್ರತಿಪಾದಿಸುವ ಮೌಲ್ಯಪ್ರಜ್ಞೆಯನ್ನು ಕಾವ್ಯದ ಮಗ್ಗುಲಲ್ಲೇ ಇರಿಸಿ ನೋಡಬೇಕಾದುದು ಅವಶ್ಯ. ಸಮಷ್ಟಿಯ ಹಿತಕ್ಕಾಗಿ ಒಬ್ಬರ ಬಲಿದಾನವನ್ನು ವೈಭವೀಕರಿಸುವ, ಸಂಸ್ಕೃತಿಯ ಆದರ್ಶವೆಂದು ಗುಣಗಾನ ಮಾಡುವುದು ಸಾಧುವಾಗುತ್ತದೆಯೇ? ಹೆಣ್ಣೊಬ್ಬಳ ಕಣ್ಣಿಂದ ಈ ಬಲವಂತದ ಬಲಿದಾನವು ಅಮಾನವೀಯವಾಗುವುದಿಲ್ಲವೇ? ಹೀಗಾಗಿ ಜನಪದ ಸಾಹಿತ್ಯದಲ್ಲಿ ಒಟ್ಟಿನಲ್ಲಿ ಜಾನಪದ ಪ್ರತಿಪಾದಿಸುವ ಮೌಲ್ಯಗಳನ್ನು ಹೊಸದೃಷ್ಟಿಯಿಂದ ನೋಡಿ ಪರಿಭಾವಿಸುವ ಅವಶ್ಯಕತೆಯಿದೆ.

ಶ್ರೀ ರಾಜೇಂದ್ರ ಯರನಾಳೆ ಅವರ 'ಶೀಗಿ ಹಾಡುಗಳು ಕನ್ನಡ ಜಾನಪದ ಅಧ್ಯಯನಕ್ಕೊಂದು ಅರ್ಥಪೂರ್ಣ ಸೇರ್ಪಡೆ. ಉತ್ತರ ಕರ್ನಾಟಕದ ಬೀದರ್ ಜಿಲ್ಲೆಯಲ್ಲಿ ಜೀವಂತವಾಗಿರುವ ಈ ಜಾನಪದ ಪ್ರಕಾರವನ್ನು ವೈಜ್ಞಾನಿಕವಾಗಿ ದಾಖಲಿಸಿ ಸಾಕಷ್ಟು ವಿಶ್ಲೇಷಣೆಯೊಂದಿಗೆ ನಮ್ಮ ಮುಂದುವರಿಸಿದ್ದಾರೆ. ಶೀಗಿ ಹಾಡುಗಳು ಕನ್ನಡದ ವಿಶಿಷ್ಟ ಮಹಿಳಾ ಜಾನಪದ ಪ್ರಕಾರ. ಸಂಪಾದಕರು ಈ ಆಚರಣೆಯ ಉದ್ದೇಶ, ಸ್ವರೂಪ, ಸಂದರ್ಭ, ಆವರಣ, ಭಾಗಾಳುಗಳ ಕ್ರಿಯಾವಿನ್ಯಾಸ, ಪ್ರೇಕ್ಷಕವರ್ಗ, ಹಾಡುಗಳ ಕ್ರಿಯಾಭಿವ್ಯಕ್ತಿ, ಅನನ್ಯತೆ- ಇತ್ಯಾದಿಗಳನ್ನು. ತುಂಬ ಗಂಭೀರವಾಗಿ ಚರ್ಚಿಸಿದ್ದಾರೆ. ಭಿನ್ನಪಾಠಗಳು ಜಾನಪದದ ಜೀವಾಳ. ಇದನ್ನು ಗಮನಿಸಿದ ಸಂಪಾದಕರು ಪುಸ್ತಕದ ಕೊನೆಯಲ್ಲಿ ಅನುಬಂಧರೂಪದಲ್ಲಿ ಪಠ್ಯದಲ್ಲಿ ಬಂದಿರುವ ಹಾಡುಗಳ ಪಾಠಾಂತರವನ್ನೂ ನೀಡಿದ್ದಾರೆ. ಇಂತಹ ಹಲವು ಪಾಠಾಂತರಗಳನ್ನು ಗಮನಿಸಿ ಒಂದು ಪೂರ್ಣ ಹಾಡನ್ನು ಸಿದ್ಧಮಾಡುವುದು ಸಮ್ಮತವಲ್ಲ ಎನ್ನುವ ಎಚ್ಚರ ಸಂಪಾದಕರಿಗೆ ಇರುವುದು ತುಂಬ ಮಹತ್ವದ ಧೋರಣೆ. ಹಾಡಿನ ವಸ್ತುವನ್ನು ಆಚರಣೆಯ ಸಂದರ್ಭದ ಹಿನ್ನೆಲೆಯಲ್ಲಿ ಅರ್ಥೈಸುವ ಕೆಲಸವನ್ನು ಸಂಪಾದಕರು ಮಾಡಿದ್ದರೆ ಗ್ರಂಥದ ಉಪಯುಕ್ತತೆ ಇನ್ನೂ ಹೆಚ್ಚುತ್ತಿತ್ತು. ಏನಿದ್ದರೂ ಈ ಕೃತಿಯನ್ನು ಹೊರತರುವಲ್ಲಿ ಸಂಪಾದಕರು ವಹಿಸಿರುವ ಎಚ್ಚರ ಹಾಗೂ ಕಾಳಜಿಗಾಗಿ ಅಭಿನಂದಿಸಬೇಕಾಗಿದೆ.

ಪ್ರೊ. ಬಿ. ಕೃಷ್ಣಪ್ಪ ರೆಡ್ಡಿಯವರ 'ಗಾದೆಯ ಕಥೆಗಳು' ಜನಪದಕತೆಯ ಪ್ರಕಾರದಲ್ಲೊಂದು ಉಪಪ್ರಕಾರ. ಈ ಬಗೆಯ ಕಥೆಗಳು ಕನ್ನಡ ಜಾನಪದ ಸಂದರ್ಭದಲ್ಲಿ ಈಗಾಗಲೇ ದಾಖಲುಗೊಂಡರೂ ಗಾದೆಯ ಹಿನ್ನೆಲೆಯಲ್ಲಿರುವ ಕತೆಗಳನ್ನು ಬೇರೆಯಾಗಿಯೇ ಸಂಗ್ರಹಿಸಿ ಸಂಪಾದಕರು ಹೊಸದೊಂದು ಪ್ರಕಾರದ ಕಡೆಗೆ ವಿದ್ವಾಂಸರ ಗಮನ ಸೆಳೆದಿದ್ದಾರೆ. ಇಂತಹ ಕತೆಗಳನ್ನು ಕತೆಗಳ ಅಧ್ಯಯನದ ವಲಯದೊಳಗಿರಿಸಿ ನೋಡಬೇಕೆ ಅಥವಾ ಗಾದೆಗಳ ಒಳಗೋ ಎನ್ನುವುದರ ಬಗ್ಗೆ ತಿಳಿವು ವಿಸ್ತಾರಗೊಳ್ಳಬೇಕಾಗಿದೆ. ಈ ಮಾಲೆಯ ಪ್ರಧಾನ ಸಂಪಾದಕರಾದ ಡಾ. ಜೀ. ಶಂ. ಪರಮಶಿವಯ್ಯನವರು "ಅದು ಒಂದು ಕಥೆಯ ಸ್ವರೂಪದಲ್ಲಿ ಅರಳಿ ಗಾದೆಯಿಂದ ಆರಂಭವನ್ನೋ ಅಂತ್ಯವನ್ನೋ ಕಂಡಿರಬೇಕು" ಎಂದಿದ್ದಾರೆ. ಅಂದರೆ ಕತೆಯ ಒಡಲಲ್ಲಿ ಗಾದೆ ಕಾರ್ಯಭಾರಿಯ ಬಾಯಿಯಿಂದ ಬರಬೇಕು ಎಂದಾಯಿತು. ಆದರೆ ಇಲ್ಲಿನ ಕತೆಗಳೊಳಗೆ ಗಾದೆಯ ಮಾತು ಬರುವುದಿಲ್ಲ. ಸಂಪಾದಕರು ಆಯಾ ಕತೆಗೆ ಹೊಂದುವ ಗಾದೆಯ ಮಾತನ್ನು ತಲೆಬರಹವಾಗಿ ನೀಡುತ್ತಾರೆ. ಹೀಗಾಗಿ ಇದು ಒಂದು ತಾಂತ್ರಿಕ ದೋಷ ಎಂದೆನಿಸದೆ? ಕತೆಗಳನ್ನು ವಕ್ತೃಗಳ ಬಾಯಿಯಿಂದ ದಾಖಲಿಸಿಕೊಂಡಂತೆ ಯಥಾವತ್ತಾಗಿ ನೀಡಿರುವುದು, ಈ ಹೊಸ ಉಪಪ್ರಕಾರವನ್ನು ಪಂಡಿತ ಲೋಕಕ್ಕೆ ನೀಡಿದ್ದು ಅಭಿನಂದಿಸಬೇಕಾದ ಸಂಗತಿ. ಇಂತಹ ಕತೆಗಳು ಹುಟ್ಟುವುದಕ್ಕೆ ವಿಶಿಷ್ಟ ಸನ್ನಿವೇಶಗಳಿವೆಯೇ, ಕತೆ ಹೇಳಿರುವವರೆಲ್ಲರೂ ಗಂಡಸರೇ ಆಗಿರುವುದರಿಂದ ಲಿಂಗಭೇದವು ವಸ್ತುನಿರ್ವಹಣೆಯ ಮೇಲೆ ಪರಿಣಾಮ ಆಗಿದೆಯೇ?- ಇಂತಹ ವಿಚಾರಗಳ ಬಗ್ಗೆ ಸಂವಾದ ಬೆಳೆಯಬೇಕಾಗಿದೆ.

ಕೆರೆಗೆ ಹಾರದ ಆಶಯವನ್ನೊಳಗೊಂಡ ಸಂಗ್ರಹ 'ಶ್ರೀ ಕೆಂಚಮ್ಮ ದೇವತೆ' (ಸಂಪಾದಕರು: ಲಕ್ಷ್ಮಣಯ್ಯ) ಮದಗದ ಕೆಂಚಮ್ಮನ ಕಥೆಯ ಇನ್ನೊಂದು ಪಾಠಾಂತರ. ಜಾನಪದ ಸಂಗ್ರಹವೆಂದರೆ ಬಾಯಲ್ಲಿರುವ ಸಾಹಿತ್ಯವನ್ನು ಅಕ್ಷರದಲ್ಲಿ ಮೂಡಿಸುವುದು ಎಂಬ ಸರಳಸೂತ್ರವನ್ನು ಇಲ್ಲಿ ಅನುಸರಿಸಿದಂತೆ ಕಾಣುತ್ತದೆ. ಕೆಂಚಮ್ಮನ ದೈವತ್ವೀಕರಣ, ಆರಾಧನಾ ಕೇಂದ್ರ, ಆರಾಧನೆಯ ಸ್ವರೂಪ, ಆಶಯ, ಭಕ್ತವರ್ಗ, ಆರಾಧನೆಗೂ ಪುರಾಣಕ್ಕೂ ಇರುವ ಸಂಬಂಧ, ಪುರಾಣವು ಕ್ರಿಯಾಭಿನಯಗೊಳ್ಳುವ ಸಂದರ್ಭ ಹೀಗೆ ರೂಪುಗೊಳ್ಳುವ ಬೃಹತ್‌ಪಠ್ಯದ ವಿವರವಿಲ್ಲದೆ ಬರಿಯ ಶಾಬ್ದಿಕ ಪಠ್ಯದಿಂದಾಗಿ ಕೃತಿ ಸೊರಗಿದೆ. ಇಂದು ಜಾನಪದವೆಂದರೆ ಜನಪದ ಸಾಹಿತ್ಯವಷ್ಟೇ ಅಲ್ಲ ಎಂಬ ತಿಳಿವಳಿಕೆ ಬಂದಿರುವಾಗ ಸಂಪಾದಕನ ಜವಾಬ್ದಾರಿ ಹೆಚ್ಚಿದೆ. ಅದನ್ನು ನಮ್ಮ ಜಾನಪದ ಸಂಗ್ರಾಹಕರು ಗಮನಿಸಿದಷ್ಟೂ ನಮ್ಮ ಜಾನಪದ ಅಧ್ಯಯನ ಬೆಳೆದೀತು. ಮದುವೆ, ಮೈನೆರೆವ ಸಂದರ್ಭದ ಆಚರಣೆ ಹೆರಿಗೆ, ಬಾಣಂತನ- ಇಂತಹ ಜೀವನಾವರ್ತಗಳ ಸಾಮಾಜಿಕ ವಿವರಗಳಿಂದಾಗಿ ಪಠ್ಯ ಕುತೂಹಲಕಾರಿಯಾಗಿದೆ.

ಡಾ. ಕಮಲಾ ಹಮ್ಮಿಗೆಯವರ 'ದೇವರಿಗೆ ಶರಣೆನ್ನುವೆನೇ' ಡೊಳ್ಳಿನ ಪದಗಳ ಸಂಗ್ರಹ. ಕುರುಬ ಜನಾಂಗದವರು ತಮ್ಮ ಧಾರ್ಮಿಕ ಹಿನ್ನೆಲೆಯಲ್ಲಿ ಡೊಳ್ಳುನುಡಿಸಿ ಹಾಡುವ ಹಾಡನ್ನು ಸಂಪಾದಕರು ಸಂಗ್ರಹಿಸಿ ಅಚ್ಚಿಸುವ ಶ್ರಮ ತೆಗೆದುಕೊಂಡಿದ್ದಾರೆಯೇ ವಿನಾ ಆ ಬಗೆಗಿನ ಸಾಂದರ್ಭಿಕ ವಿವರವನ್ನಾಗಲೀ, ಅಧ್ಯಯನಪೂರ್ಣ ವಿವೇಚನೆಯನ್ನಾಗಲೀ ಮಾಡದೆ ಹೋದುದು ಕೃತಿಯ ದುರ್ಬಲಾಂಶ. ಹಾಡುಗಳ ಸಾಮಾಜಿಕ, ಸಾಂಸ್ಕೃತಿಕ ಮಹತ್ವ, ಒಂದು ಬುಡಕಟ್ಟು ಸಮಾಜದ ಬದುಕಿನ ಉತ್ಪನ್ನವಾದ ಈ ಪದಗಳ ಅನನ್ಯತೆಯನ್ನು ಓದುಗರು ಸಂಗ್ರಾಹಕರಿಂದ ನಿರೀಕ್ಷಿಸುವುದು ಸಹಜ. ಉತ್ತರ ಕರ್ನಾಟಕದ ಡೊಳ್ಳಿನ ಪದಗಳ ಒಂದು ವಿಶಿಷ್ಟ ಪಾಠ ದೊರೆತಿರುವುದೊಂದೇ ಈ ಕೃತಿಯ ಗುಣಾತ್ಮಕ ಅಂಶ.

ಕನ್ನಡ ಜಾನಪದದ ನವೋದಯ ಕಾಲಾವಧಿಯಲ್ಲಿ ಶ್ರೀ ಎಸ್. ಕೆ. ಕರೀಂಖಾನರ ಹೆಸರು ಮುಂಚೂಣಿಯದು. ಜನರ ನಾಲಿಗೆಯಲ್ಲಿದ್ದ ಗೀತಗಳನ್ನು ಸಂಗ್ರಹಿಸಿ, ಮುದ್ರಿಸಿ ಊರೂರು ಅಲೆದು ಜನಪದ ಗೀತಗಳ ಸೊಗಸನ್ನು ಎಲ್ಲರಿಗೆ ಮುಟ್ಟಿಸಿದ ಉಪಯುಕ್ತ ಕೆಲಸ ಮಾಡಿದವರು ಅವರು. ಅಂತಹ ಜನಪ್ರಿಯ ಜನಪದ ಗೀತೆಗಳ ಒಂದು ಸಂಕಲನವನ್ನು 'ಕನ್ನಡ ಜನಪದ ಗೀತೆಗಳು' ಎಂಬ ಹೆಸರಿನಲ್ಲಿ ಈ ವರ್ಷ ಪ್ರಕಟಿಸಿದ್ದಾರೆ. ಅವರ ಸೀಮಿತ ಉದ್ದೇಶಕ್ಕೆ ತಕ್ಕಂತೆ ಬರಿಯ ಪಠ್ಯವಷ್ಟೇ ಇಲ್ಲಿ ಅಚ್ಚಾಗಿದೆ.

ಕರ್ನಾಟಕ ಜಾನಪದ ಅಧ್ಯಯನ ಹೊಸದಾರಿಯಲ್ಲಿ ಸಾಗುವ ಸ್ಪಷ್ಟ ಸೂಚನೆಗಳು ಕಾಣಿಸುತ್ತಿವೆ. 'ಸಂಗ್ರಹ' ಪ್ರಕಾರಕ್ಕಿಂತ ವಿಶ್ಲೇಷಣೆ ಪ್ರಕಾರಕ್ಕೆ ವಿದ್ವಾಂಸರ ತುಡಿತ ಹೆಚ್ಚು ಇರುವಂತಿದೆ. ಭಾರತದಂತಹ ಶ್ರೀಮಂತ ಪರಂಪರೆ ಉಳ್ಳ ಸಮಾಜದಲ್ಲಿ ಶಾಬ್ದಿಕ ಜನಪದದ ಕಲೆ ನಾಶವಾಗುವುದಂತೂ ಅಸಾಧ್ಯ. ಪ್ರದರ್ಶಕ ಕಲೆಗಳು ತಮ್ಮ ಮೂಲಸ್ವರೂಪವನ್ನು ಬದಲಾಯಿಸಿಕೊಳ್ಳಬಹುದು. ಆದುದರಿಂದ ಕಾಲದಿಂದ ಕಾಲಕ್ಕೆ ಸಂಗ್ರಹಿಸುವ, ದಾಖಲಿಸುವ ಪ್ರಕ್ರಿಯೆ ನಡೆಯುತ್ತಲೇ ಇರಬೇಕು. ಸಾಧ್ಯವಾದಷ್ಟು ಮಟ್ಟಿಗೆ ಸಂದರ್ಭದ ಹಿನ್ನೆಲೆಯಲ್ಲೇ ಸಂಗ್ರಹ ಕಾರ್ಯ ನಡೆಸಬೇಕೇ ವಿನಾ ಇನ್ನೂ ವಕ್ತೃಗಳಿಂದ 'ಹೇಳಿ ಬರೆಸಿಕೊಳ್ಳುವ' ವಿಧಾನ ಕೈಬಿಡಬೇಕು. ಸಂಗ್ರಹಿಸಿದ ಪಠ್ಯವನ್ನು ಬರಿಯ ಸಾಹಿತ್ಯದ ನಿಟ್ಟಿನಿಂದ ನೋಡದೆ ಅನ್ಯಶಿಸ್ತುಗಳ ಬೆಳಕಿಗೊಡ್ಡಿ, ವಕ್ತೃಗಳ ವ್ಯಾಖ್ಯಾನಕ್ಕೆ ಮನ್ನಣೆ ನೀಡಿ ಪ್ರಕಟಿಸುವ ಕೆಲಸ ನಡೆಯಬೇಕು. ಈ ನಿಟ್ಟಿನಲ್ಲಿ ಈ ವರ್ಷ ಬಂದಿರುವ ಪಣಿಯವರರನ್ನು ಕುರಿತ ಕೃತಿ ಜಾನಪದ ಅಧ್ಯಯನದಲ್ಲೊಂದು ಮೈಲಿಗಲ್ಲು. ಜಾನಪದ ಮಾಹಿತಿಗಳಿಗೆ ನಿಘಂಟು ರಚನೆ, ಮೌಖಿಕ ಇತಿಹಾಸ ರಚನೆಯಲ್ಲಿ ಸಾಹಿತ್ಯದ ಬಳಕೆ, ಸಿದ್ಧಾಂತಗಳ ಹಿನ್ನೆಲೆಯಲ್ಲಿ ಜಾನಪದವನ್ನು ಗಮನಿಸುವ ಪ್ರಕ್ರಿಯೆ, ಜಾನಪದದ ಹಿನ್ನೆಲೆಯಲ್ಲಿ ಒಂದು ಜನಾಂಗವನ್ನು ವಿಶ್ಲೇಷಿಸುವ ಪ್ರಯತ್ನ, -ಹೀಗೆ ಜಾನಪದ ಈ ಬಾರಿ ಅನೇಕ ಹೊಸ ಸಾಧ್ಯತೆಗಳತ್ತ ಹೊರಳಿದೆ.

ಹೆಚ್. ಜೆ. ರಾಮಯ್ಯಂಗಾರ್ ಅವರು 'ಕೆಲವು ಶಿಕ್ಷಣ ಪದ್ಧತಿ' ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಅವರು ಭಾರತೀಯ ಮತ್ತು ಪಾಶ್ಚಾತ್ಯ ಶಿಕ್ಷಣ ಪದ್ಧತಿಗಳ ಬಗೆಗೆ ಸ್ಥೂಲವಾದ ವಿವರ ನೀಡಿದ್ದಾರೆ. ಈ ವಿವರಗಳ ಮಂಡನೆಗೆ ಅವರು ಅನುಸರಿಸುವ ವಿಧಾನವನ್ನು ನೋಡಬೇಕು. ಅವರ ದೃಷ್ಟಿಯಲ್ಲಿ ಪ್ರಾಚೀನ ಭಾರತದ ಶಿಕ್ಷಣ ಪದ್ಧತಿ ಅತ್ಯಂತ ಶ್ರೇಷ್ಠವಾಗಿತ್ತು ಆ ಕಾರಣದಿಂದಲೇ ಇಲ್ಲಿ ಶ್ರೇಷ್ಠವರ್ಗದ ನಾಗರಿಕತೆಯು ಹೂವಿನಂತೆ ಅರಳಿದೆ. ಈ ನಿಲುವನ್ನು ಅವರು ಶ್ರೀಮತಿ ಮ್ಯಾನಿಂಗ್, ಫೋಡೆನ್ಬಾರ್ ಮೊದಲಾದವರ ಹೊಗಳಿಕೆಯ ಮಾತುಗಳನ್ನು ಉಲ್ಲೇಖಿಸಿ ಸಮರ್ಥಿಸಿಕೊಳ್ಳುತ್ತಾರೆ. ಅವರ ಮಾತುಗಳು ಇಂತಿವೆ - ''ವೇದಾಧಿಕಾರವಿಲ್ಲವೆಂದು ತೀರ್ಮಾನವಾಗಿದ್ದ ಜಾತಿಗಳಿಗೆ ಸೇರಿದವರೂ ತಮ್ಮ ಹಿರಿಯರಿಂದ ಕುಲಕಸುಬನ್ನು ಕಲಿಯುವಷ್ಟರಿಂದಲೇ ತೃಪ್ತರಾದರು, ಇದರ ಫಲವಾಗಿ ವೈದಿಕ ಶಿಕ್ಷಣವು ಹೆಚ್ಚು ಶ್ರಮಿಸಲು ಇಷ್ಟಪಟ್ಟ ಬ್ರಾಹ್ಮಣ ಕುಟುಂಬದವರಿಗೇ ಮೀಸಲಾಯಿತು. ಅವರೇ ಪೌರೋಹಿತ ವೃತ್ತಿಗೆ ಸರಿ ಎಂದು ಭಾವಿಸಲಾಯಿತು''. ಹೀಗೆ, ಇಲ್ಲಿ ಬ್ರಾಹ್ಮಣರನ್ನು ಹೆಚ್ಚು ಕೆಲಸ ಮಾಡುವವರೆಂದೂ, ಬ್ರಾಹ್ಮಣೇತರರನ್ನು ವೃತ್ತಿನಿರತ ಅಲ್ಪ ತೃಪ್ತರೆಂದೂ ಭಾವಿಸಲಾಗಿದೆ. ಮುಂದೆ ಲೇಖಕರು ಇಂಗ್ಲೀಷ್ ಭಾಷೆಯು ಭಾರತೀಯ ಶಿಕ್ಷಣ ಪದ್ಧತಿಯನ್ನು ಹೇಗೆ ಕೃಶಗೊಳಿಸಿತು ಎಂಬ ಬಗ್ಗೆ ಸಾಕಷ್ಟು ವಿವರಗಳನ್ನು ನೀಡಿದ್ದಾರೆ. ಆದರೆ ಒಂದು ಕಾಲದಲ್ಲಿ ಬಲಿಷ್ಠವಾಗಿತ್ತು ಎನ್ನಲಾದ ಪ್ರಾಚೀನ ಶಿಕ್ಷಣ ಪದ್ಧತಿಯನ್ನು ಕೇವಲ ೫೦ ವರ್ಷಗಳಲ್ಲಿ ಶಿಥಿಲಗೊಳಿಸಲು ಇಂಗ್ಲಿಷ್ ಶಿಕ್ಷಣ ಪದ್ಧತಿಗೆ ಹೇಗೆ ಸಾಧ್ಯವಾಯಿತು? ಎಂಬಂಥ ಪ್ರಶ್ನೆಯನ್ನು ಅವರು ಕೇಳಿಕೊಳ್ಳುವುದಿಲ್ಲ ಅಥವಾ ''ಇಂಗ್ಲಿಷರು ಬಾರದಿದ್ದರೆ ನಾನು ಬ್ರಾಹ್ಮಣರ ಮನೆಯಲ್ಲಿ ಸೆಗಣಿ ಹೆಕ್ಕುತ್ತಿದ್ದೆ '' ಎಂದು ಹೇಳಿದ ಕುವೆಂಪುರವರ ಮಾತಿಗೆ ಮುಖಾಮುಖಿಯಾಗುವ ಧೈರ್ಯವನ್ನು ಅವರು ತೋರುವುದಿಲ್ಲ. ಜೊತೆಗೆ ಕರ್ನಾಟಕದಲ್ಲಿ ಹಿಂದೆ ಇದ್ದ ಕೋಡಿಯ ಮಠ, ಶಬ್ದ ಮಣಿದರ್ಪಣ ಮಠ, ಟೀಕಿನ ಮಠ ಮೊದಲಾದುವುಗಳಲ್ಲಿ ಹೇಳಿಕೊಡುತ್ತಿದ್ದ ಕೃಷಿ ವಿಧಾನ, ಚಿಕಿತ್ಸಾ ವಿಧಾನ, ಕಮ್ಮಾರಿಕೆ ಮೊದಲಾದುವುಗಳ ಬಗೆಗೆ ಅವರು ಚರ್ಚಿಸುವುದಿಲ್ಲ. ಶಾಲೆಗಳ ಕಲ್ಪನೆಯೇ ಇಲ್ಲದೆ, ಯಕ್ಷಗಾನವನ್ನು ಹೇಳಿಕೊಡುತ್ತಿದ್ದ ಬಗೆ ಹೇಗೆ? ಅಂಥ ಕಡೆ ಇರುವ ಶಿಕ್ಷಣದ ಪರಿಕಲ್ಪನೆ ಏನು? ಎಂಬಿತ್ಯಾದಿ ವಿಚಾರಗಳ ಬಗೆಗೂ ಅವರು ಆಸಕ್ತಿ ತೋರುವುದಿಲ್ಲ. ಇದರ ಬದಲು ಮಂಟೆಸೋರಿ, ಡಾಲ್ಟನ್, ಬಾಲೋದ್ಯಾನ, ಗ್ಯಾರಿ, ಬಟೇವಿಯಾ, ಡೆಕ್ರಾಲಿ, ಕಸಿನೆಟ್ ಮೊದಲಾದ ಶಿಕ್ಷಣ ಪದ್ಧತಿಗಳ ಬಗೆಗೆ ಅವರು ಮಾಹಿತಿ ನೀಡುತ್ತಾ ಹೋಗುತ್ತಾರೆ. ಕೃತಿಯ ಕೊನೆಯಲ್ಲಿ ಗಾಂಧೀಜಿಯ ವರ್ಧಾಶಿಕ್ಷಣದ ಬಗೆಗೆ ವಿಶೇಷ ಮಾಹಿತಿ ನೀಡಿದ್ದಾರೆ.

ಶಿಕ್ಷಣದ ಬಗೆಗೂ ಇಂಥ ಸಾಂಪ್ರದಾಯಕ ತಿಳುವಳಿಕೆಯಿಂದ ಹೊರಟರೆ ಎಂಥ ಅನಾಹುತವಾಗಿಬಿಡಬಹುದು ಎಂಬುದಕ್ಕೆ ಭೀಮಂಡ. ಈ. ಕುಶಾಲಪ್ಪನವರು ಗಾಂಧಿಯವರ ಬಗೆಗೆ ಬರೆದ ಪುಸ್ತಕವೇ ಸಾಕ್ಷಿ. ಗಾಂಧಿಯವರ ಕೊಲೆಯನ್ನು ಕೋಮುವಾದೀ ನೆಲೆಗಳಿಂದ ಸಮರ್ಥಿಸಿಕೊಳ್ಳುವ ಲೇಖಕರು ಕೃತಿಯ ಕೊನೆಯಲ್ಲಿ 'ಹಿಂದೂ ದ್ರೋಹಿ ಗಾಂಧಿಯನ್ನು ಕೊಂದ ಗೋಡ್ಸೆಗೆ ಸರಕಾರ ಮರಣೋತ್ತರ ಪ್ರಶಸ್ತಿ

# ಮಾನವಿಕಗಳು

*ಪುರುಷೋತ್ತಮ ಬಿಳಿಮಲೆ*

ಮಾನವಿಕಗಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಹೆಚ್ಚು ಹೆಚ್ಚು ಕೆಲಸ ನಡೆಯಬೇಕಾದ ಆವಶ್ಯಕತೆಯಿದೆ. ಏಕೆಂದರೆ ಅದು ಕನ್ನಡಿಗರ ತಿಳುವಳಿಕೆಯ ಪರಿಧಿಗಳನ್ನು ಗಮನಾರ್ಹವಾಗಿ ವಿಸ್ತರಿಸಬಲ್ಲದು ಮತ್ತು ಕನ್ನಡದ ಶಕ್ತಿಯನ್ನು ಸಂವರ್ಧಿಸಬಲ್ಲದು. ಜಗತ್ತು ಇಂದು ಬೆಳೆಯುತ್ತಿರುವ ವೇಗದ ಪ್ರಮಾಣ ಮತ್ತು ಪಡೆಯುತ್ತಿರುವ ಜ್ಞಾನದೊಡನೆ ಕನ್ನಡ ಸ್ಪರ್ಧಿಸಬೇಕಾಗಿದೆ ಮತ್ತು ಹಾಗೆ ಸ್ಪರ್ಧಿಸುತ್ತಿರುವುದರ ಮೂಲಕ ತನ್ನನ್ನು ತಾನೇ ಸಮಕಾಲೀನಗೊಳಿಸಿಕೊಳ್ಳಬೇಕಾಗಿದೆ. ಇಂಥ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳುವ ವಿಧಾನದ ಬಗ್ಗೆ ಸಾಕಷ್ಟು ಭಿನ್ನಭಿಪ್ರಾಯಗಳಿವೆ ಮತ್ತು ಇರುವುದಕ್ಕೆ ಸಾಧ್ಯ ಕೂಡಾ. ಅದು ಜಾಗತೀಕರಣವನ್ನು ಅರ್ಥಮಾಡಿಕೊಳ್ಳುವಲ್ಲಿ ಇರುವ ಬಿಕ್ಕಟ್ಟನ್ನೇ ಸಂಕೇತಿಸುತ್ತದೆ. ಮುಂದುವರಿದ ರಾಷ್ಟ್ರಗಳನ್ನು ಮಾದರಿಯಾಗಿ ಸ್ವೀಕರಿಸಿದರೆ, ಅವುಗಳ ಹಿಂದೆಯೇ ಸಾಗುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಇದನ್ನು ವಿರೋಧಿಸಿ ಪಶ್ಚಿಮದ ರಾಷ್ಟ್ರದ ವಿಶ್ವಕಲ್ಪನೆಯನ್ನೇ ನಿರಾಕರಿಸಿ, ಅವುಗಳೆದುರು ಪೂರ್ವದ ತಾತ್ತ್ವಿಕತೆಯನ್ನು ನಿಲ್ಲಿಸಲು ಸಾಧ್ಯವಾದರೆ, ಆಗ ಪಶ್ಚಿಮದ ಅಹಂಕಾರ ನಡುಗುತ್ತದೆ. ಪೂರ್ವಕ್ಕೆ ಬೆಳೆಯಲು ಬೇಕಾದಷ್ಟು ಸ್ವಾಭಿಮಾನ ಕೂಡ ದತ್ತವಾಗುತ್ತದೆ. ಈ ಅರ್ಥದಲ್ಲಿ ಕನ್ನಡವು ಕೇವಲ ಒಂದು ಭಾಷೆಯಾಗಿ ಉಳಿಯಬೇಕಾಗಿಲ್ಲ. ಆದರ ಬದಲು ಪಶ್ಚಿಮದ ಅಹಂಕಾರವನ್ನು ಮುರಿಯಬಲ್ಲ ಒಂದು ಸಾಧನವೂ ಆದೀತು.

ಮಾನವಿಕಗಳಿಗೆ ಸಂಬಂಧಿಸಿದಂತೆ ಈ ಮಾತನ್ನು ಏಕೆ ಹೇಳುತ್ತಿದ್ದೇನೆ ಎಂದರೆ, ಕನ್ನಡದಲ್ಲಿರುವ ಮಾನವಿಕ ಬರಹಗಳೆಲ್ಲ ಪಶ್ಚಿಮದ ಹಾದಿಯನ್ನು ಹಿಡಿದು ಹೊರಟಿವೆ. ಪಶ್ಚಿಮದ ವೈಚಾರಿಕತೆಯನ್ನು ಕನ್ನಡದಲ್ಲಿ ಹೇಳುವ ಕೆಲಸವನ್ನು ಅವು ಮಾಡುತ್ತಿವೆ. ಈ ಅರ್ಥದಲ್ಲಿ ಮಾನವಿಕಗಳಿಗೆ ಸಂಬಂಧಿಸಿದಂತೆ ಕನ್ನಡವು ಅನುವಾದ ಭಾಷೆಯಾಗಿ ಮಾರ್ಪಡುವ ಅಪಾಯದಲ್ಲಿ ಸಿಲುಕಿಕೊಂಡಿದೆ. ಕಾವ್ಯ, ನಾಟಕ, ಜಾನಪದದಲ್ಲಿರುವಂತೆ ಅದು ಸೃಜನಾತ್ಮಕವಾಗಿಲ್ಲ. ಸ್ವತಂತ್ರ ಚಿಂತನೆಗೂ ಕೊರತೆ ಇದೆ. ಇದು ಮಾನವಿಕಗಳಲ್ಲಿ ಕಂಡು ಬರುವ ಬಹುದೊಡ್ಡ ಕೊರತೆ ಕೂಡಾ.

ಕೆಲವು ಉದಾಹರಣೆಯನ್ನು ಇಲ್ಲಿ ಗಮನಿಸಬಹುದು.

ನೀಡಲು' ಕರೆಕೊಡುತ್ತಾರೆ. ಇತಿಹಾಸದ ಬಗೆಗೆ ಯಾವುದೇ ತಿಳುವಳಿಕೆ ಇಲ್ಲದ ಮತ್ತು ವರ್ತಮಾನದ ಬಗ್ಗೆ ಬೇಜವಾಬ್ದಾರರಾಗಿರುವ ಮಂದಿಗೆ ಮಾತ್ರ ಇಂಥ ಕೃತಿಯೊಂದನ್ನು ಬರೆಯಲು ಸಾಧ್ಯ. ಸಾಮರಸ್ಯ - ಸಹಬಾಳ್ವೆಗೆ ಹೆಸರಾಗಿರುವ ಕರ್ನಾಟಕ ಸಂಸ್ಕೃತಿ ಇದೀಗ ಬೇರೆಡೆಗೆ ಚಲಿಸುತ್ತಿರುವುದರ ಸೂಚನೆಯೊಂದನ್ನು ಈ ಕೃತಿ ನೀಡುತ್ತಿದೆಯೋ ಏನೋ?

ಮೇಲಿನ ಚಿಂತನಾಕ್ರಮಕ್ಕೆ ವಿರುದ್ಧವಾದ ಚಿಂತನಾಕ್ರಮನ್ನು ಕೂಡಾ ಕನ್ನಡದಲ್ಲಿದೆ ಎಂಬುದು ಸಂತೋಷದ ವಿ. ಫಾ. ದಯಾನಂದ ಪ್ರಭುಗಳು 'ಮೈಸೂರು ಸಂಸ್ಥಾನದ ಕ್ರೈಸ್ತರ ಇತಿಹಾಸ' ಎಂಬೊಂದು ಕೃತಿಯಲ್ಲಿ ಕರ್ನಾಟಕ ಸಂಸ್ಥೆಗೆ ಕ್ರೈಸ್ತರು ನೀಡಿದ ಕೊಡುಗೆಯನ್ನು ಸಾಧಾರವಾಗಿ ಪರಿಚಯಿಸಿದ್ದಾರೆ. ಮತಾಂತರದ ಉದ್ದೇಶಕ್ಕೆಂದೇ ಭಾರತಕ್ಕೆ ಬಂದ ಕ್ರೈಸ್ತ ಮಿಶನರಿಗಳು ಹೇಗೆ ನಿಧಾನವಾಗಿ ಸಂಸ್ಕೃತಿಯ ಭಾಗವಾಗಿ ಹೋದರೆಂಬುದನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ. ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ನಡೆದಿದೆ ಎನ್ನಲಾದ ಮತಾಂತರದ ಚಟುವಟಿಕೆಗಳನ್ನು ಈ ಕೃತಿಯಲ್ಲಿ ದಾಖಲಿಸಲಾಗಿದೆ. ಹಾಗೆಯೇ ಅಬ್ಬೆದೂಬಾಯಿ ಮತ್ತು ಲೂಯಿಸ್ ಶಾರ್ಬಾನೋ ಎಂಬಿಬ್ಬರು ಮಿಶನರಿಗಳು ಮೈಸೂರು ಪ್ರದೇಶದಲ್ಲಿ ನಡೆಸಿದ ಚಟುವಟಿಕೆಗಳ ವಿಸ್ತೃತ ವಿವರವೂ ಈ ಕೃತಿಯಲ್ಲಿದೆ. ಒಂದೆಡೆ ಕ್ರೈಸ್ತರನ್ನು ಇಷ್ಟಪಡದಿರುವ ಮುಸ್ಲಿಮರು, ಇನ್ನೊಂದೆಡೆ ಜಾತಿಪದ್ಧತಿ, ಬಡತನಗಳಿಂದ ನೊಂದಿರುವ ಹಿಂದೂಗಳು ಮತ್ತು ದಲಿತರು, ಇವರ ನಡುವೆ ಕೆಲಸ ಮಾಡಿದ ಕ್ರೈಸ್ತ ಮಿಶನರಿಗಳ ಬಿಕ್ಕಟ್ಟುಗಳು ಇವುಗಳ ಬಗೆಗೆ ಈ ಕೃತಿ ಬಹಳ ಒಳ್ಳೆಯ ಮಾಹಿತಿಗಳನ್ನು ನೀಡುತ್ತದೆ. ೧೭ - ೧೮ ನೇ ಶತಮಾನದ ಕರ್ನಾಟಕದ ಚರಿತ್ರೆಯನ್ನು ಬರೆಯುವ, ಜನಗಳಿಗೆ ಈ ಕೃತಿ ಅಮೂಲ್ಯವಾದ ಮಾಹಿತಿಗಳನ್ನು ಒದಗಿಸುತ್ತದೆ.

ಡಾ. ಡಿ. ಎಸ್. ಜಯಪ್ಪಗೌಡರು ಬರೆದ 'ದಿವಾನ್ ಸರ್. ಎಂ. ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು' ಎಂಬ ಕೃತಿಯಲ್ಲಿ ಎಂ. ವಿ. ಅವರು ದಿವಾನರಾಗಿದ್ದಾಗ ಕೈಗೊಂಡ ಅಭಿವೃದ್ಧಿ ಚಟುವಟಿಕೆಗಳ ಸವಿಸ್ತಾರವಾದ ವರದಿಯಿದೆ. ಎಂ. ವಿ. ಅವರು ದಿವಾನರಾಗಿದ್ದಾಗಿನ ಕಾಲಾವಧಿ ಅತ್ಯಂತ ತೊಡಕಿನದ್ದಾಗಿತ್ತು. ಆದರೆ ದೂರದೃಷ್ಟಿ, ಅದಮ್ಯ ಉತ್ಸಾಹ, ಛಲ ಮತ್ತು ನೈಪುಣ್ಯಗಳನ್ನು ಮೈಗೂಡಿಸಿಕೊಂಡಿದ್ದವರು. ಅಂಥ ತೊಡಕುಗಳನ್ನು ಹೇಗೆ ನಿವಾರಿಸಿಕೊಂಡರು, ಮತ್ತು ಹಾಗೆ ನಿವಾರಿಸಿಕೊಳ್ಳುವುದರ ಮೂಲಕ ಮೈಸೂರು ಸಂಸ್ಥಾನವನ್ನು ಹೇಗೆ ಬೆಳೆಸಿದರು ಎಂಬುದನ್ನು ಲೇಖಕರು ಖಚಿತವಾಗಿ ವಿಶ್ಲೇಷಿಸಿದ್ದಾರೆ. ಆಕಾಲದಲ್ಲಿ ಸರ್ ಎಂ. ವಿ ಅವರ ಮೇಲಿದ್ದ ಗಹನವಾದ ಆರೋಪಗಳ ಕುರಿತು ಲೇಖಕರು ಚರ್ಚಿಸಿದ್ದಾರೆ. ರಾಜ್ಯದ ಉಿತಿಲಿಲ ಇತಿಹಾಸಕ್ಕೆ ಕಾರಣಕರ್ತರಾದ ವಿಶ್ವೇಶ್ವರಯ್ಯನವರ ಬಗ್ಗೆ ಪ್ರಕಟವಾದ ತುಂಬ ಒಳ್ಳೆಯ ಪುಸ್ತಕವಿದು.

ಕಾಕೋಳು ರಾಘವೇಂದ್ರ ಮತ್ತು ಬೆ. ಗೋ. ರಮೇಶ ಅವರು 'ಕರ್ನಾಟಕದ ದೇವಾಲಯಗಳ' ಕುರಿತು ಬರೆದ ಪುಸ್ತಕವೊಂದು ಪ್ರಕಟವಾಗಿದೆ. ಈ ಪುಸ್ತಕದ

ಉದ್ದೇಶವು ಬಹಳ ಸೀಮಿತವಾದುದು. ರಾಜ್ಯಾದ್ಯಂತ ಹರಡಿಕೊಂಡಿರುವ ವಿವಿಧ ದೇವಾಲಯಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಪರಿಚಯಿಸಲಾಗಿದೆ. ತೀರ್ಥಯಾತ್ರೆ ಮಾಡುವ ಭಕ್ತರಿಗೆ ಈ ಕೃತಿಯು ಕೈಪಿಡಿಯಂತೆ ಸಹಕರಿಸಬಹುದು.

ಮಹಾಬಲೇಶ್ವರ ಕಾಟ್ರಹಳ್ಳಿಯವರು ಬರೆದ 'ವಿಕೇಂದ್ರೀಕರಣ - ಒಂದು ಪ್ರಯೋಗ' ಕೃತಿಯು ಚಿಕ್ಕದಾಗಿದ್ದರೂ ತುಂಬ ಕುತೂಹಲಕರವಾದ ಅಂಕಿ - ಅಂಶಗಳನ್ನು ಒಳಗೊಂಡಿದೆ. ಕರ್ನಾಟಕದಲ್ಲಿ ಪ್ರಯೋಗಕ್ಕೆ ತಂದ ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯ್ತಿ ಚುನಾವಣೆಗಳ ಧನಾತ್ಮಕ ಮತ್ತು ಋಣಾತ್ಮಕ ಅಂಶಗಳನ್ನು ಪರಿಶೀಲಿಸುವುದು ಇಲ್ಲಿನ ಉದ್ದೇಶ. ಇದಕ್ಕಾಗಿ ಕಾಟ್ರಹಳ್ಳಿಯವರು ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿಕೊಂಡು, ಸಮಾಜದ ವಿವಿಧ ವರ್ಗಕ್ಕೆ ಸೇರಿದ ಜನರ ಅಭಿಪ್ರಾಯ ಸಂಗ್ರಹಣೆ ಮಾಡಿದ್ದಾರೆ. ಇದರಿಂದ ಅವರು ತಲುಪಿದ ಕೆಲವು ತೀರ್ಮಾನಗಳು ತುಂಬ ಕುತೂಹಲಕರವಾಗಿವೆ. ಮುಖ್ಯವಾಗಿ ಮಂಡಲಗಳ ವಿಂಗಡಣೆಯ ಬಗ್ಗೆ ಅವರು ಹೇಳಿರುವ ಮಾತುಗಳು ಚಿಂತನಾರ್ಹವಾಗಿವೆ. ಉಳಿದಂತೆ ಮತಗಟ್ಟೆಗಳ ವಶೀಕರಣ, ಎಣಿಕೆ ಅಕ್ರಮ, ಮದ್ಯ ಮಾರಾಟ, ನಾಯಕರ ಕೊರತೆ, ಮೊದಲಾದವುಗಳ ಬಗ್ಗೆ ಅವರು ನೀಡುವ ತೀರ್ಮಾನಗಳು ಮಾಮೂಲಿಯಾಗಿವೆ.

ಪುಸ್ತಕದ ಕೊನೆಯ ಭಾಗದಲ್ಲಿ ಪುಸ್ತಕಗಳು ಮತ್ತು ಪತ್ರಿಕೆಗಳು ನಮ್ಮ ಜನರನ್ನು ತಲುಪುತ್ತಿವೆಯೇ? ಎಂಬ ಕುರಿತು ಒಂದು ಸಮೀಕ್ಷೆ ಇದೆ. ಕರ್ನಾಟಕದ ಮಧ್ಯಮ ವರ್ಗದ ಚಿಂತನಾಕ್ರಮದ ಬಗ್ಗೆ ಇಲ್ಲಿ ಕೆಲವು ಉಪಯುಕ್ತವಾದ ಹೇಳಿಕೆಗಳಿವೆ.

ಬರಗೂರು ರಾಮಚಂದ್ರಪ್ಪನವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಕಾಲಾವಧಿಯಲ್ಲಿ ಅನೇಕ ಬಗೆಯ ಯೋಜನೆಗಳನ್ನು ಜಾರಿಗೆ ತಂದರು. ಉಪಸಂಸ್ಕೃತಿ ಅಧ್ಯಯನ ಯೋಜನೆ, ಕನ್ನಡ ಸಾಹಿತ್ಯ ಪುನರ್ ಮೌಲ್ಯೀಕರಣ ಮಾಲೆ, ಅಂತರ ಶಿಸ್ತೀಯ ಅಧ್ಯಯನ ಮಾಲೆ ಮೊದಲಾದವು ಅದರಲ್ಲಿ ಪ್ರಮುಖವಾದುವು. ಈ ಮಾಲೆಗಳಲ್ಲಿ ಅನೇಕ ಕೃತಿಗಳು ಪ್ರಕಟವಾಗಿದ್ದು, ಈಗಾಗಲೇ ಆಸಕ್ತರ ಗಮನ ಸೆಳೆದಿದೆ. ಈ ನಿಟ್ಟಿನಲ್ಲಿ ತುಂಬ ಗಮನಾರ್ಹವಾದ ಇನ್ನೊಂದು ಪ್ರಯತ್ನವೆಂದರೆ ಸಾಮಾಜಿಕ ಚಿಂತನ ಮಾಲೆಯಲ್ಲಿ ಪ್ರಕಟವಾದ ೫೫ಕ್ಕೂ ಹೆಚ್ಚು ಪುಟ್ಟ ಕೃತಿಗಳು.

ಈ ಮಾಲೆಯಲ್ಲಿ ಪ್ರಸಿದ್ಧ ಚಿಂತಕರ ಯೋಚನೆಗಳನ್ನು ಸೊಗಸಾಗಿ ಸಂಗ್ರಹಿಸಿಕೊಡಲಾಗಿದೆ. ಇಂಥವರ ಬಗ್ಗೆ ಯೋಜನೆಯ ಪ್ರಧಾನ ಸಂಪಾದಕರು ಹೀಗೆ ಹೇಳುತ್ತಾರೆ. ''ಸಾಮಾಜಿಕ ಚಿಂತಕರು ಯಾವುದೇ ಕ್ಷೇತ್ರಕ್ಕೆ ಸಂಬಂಧಿಸಿರಲಿ, ಯಾವುದೇ ಸೈದ್ಧಾಂತಿಕ ಸ್ವರೂಪವನ್ನು ಹೊಂದಿರಲಿ ಅವರವರ ಸಂದರ್ಭದಲ್ಲಿ ಮೂಲಭೂತವಾಗಿ ಮನೋಧರ್ಮವನ್ನು ಪಡೆದಿರುವುದಿಲ್ಲ; ಜಡ ಜೈಲುಗಳನ್ನು ನಿರ್ಮಿಸುವುದಿಲ್ಲ. ಅಸಮಾನತೆಯನ್ನು ಒಪ್ಪುವುದಿಲ್ಲ, ಅಮಾನವೀಯತೆಯನ್ನು ಘೋಷಿಸುವುದಿಲ್ಲ. ಆದರ ಆದ್ಯತೆಗಳಲ್ಲಿ ಅಂತರವಿರಬಹುದು, ಚಿಂತನೆಯಲ್ಲಿ ವೈರುಧ್ಯಗಳಿರಬಹುದು. ಒಟ್ಟಾರೆ ಒಂದಷ್ಟು ಮರುಚಿಂತನೆಗೆ ಒತ್ತಾಸೆಯಾಗಿ ತಾವು ಬದುಕಿದ ಪರಿಸರಕ್ಕೆ

ಮಾನವೀಯ ಮಿಡಿತ ತರುವ ಪ್ರಾಮಾಣಿಕ ಪ್ರಯತ್ನದಲ್ಲಿ ತೊಡಗಿರುತ್ತಾರೆ. ಜಗತ್ತಿನಾದ್ಯಂತ ಹರಡಿಕೊಂಡಿರುವ ಚಿಂತಕರ ಕೆಲಸಗಳನ್ನು ಈ ಮಾತುಗಳು ಸೊಗಸಾಗಿ ಅನಾವರಣ ಮಾಡುತ್ತವೆ.

ಈ ಮಾಲೆಯಲ್ಲಿ ಪ್ರಕಟವಾದ ಕೃತಿಗಳನ್ನು ಸ್ಥೂಲವಾಗಿ ನಾಲ್ಕು ಭಾಗ ಮಾಡಿಕೊಳ್ಳಬಹುದು. ಮೊದಲನೇ ಭಾಗದಲ್ಲಿ ಮಧ್ಯಕಾಲೀನ ಭಾರತಕ್ಕೆ ಸೇರಿದ ಕೆಲವು ಕವಿಗಳ ಚಿಂತನೆಗಳ ಪರಿಚಯವಿದೆ. ಬಸವಣ್ಣ, ಸರ್ವಜ್ಞ, ಅಂಬಿಗರ ಚೌಡಯ್ಯ, ಅಕ್ಕಮಹಾದೇವಿ, ವೇಮನ, ಮೊದಲಾದವರನ್ನು ಇಲ್ಲಿ ಅಡಕಗೊಳಿಸಬಹುದು. ಎರಡನೇ ವರ್ಗದಲ್ಲಿ ಆಧುನಿಕ ಪೂರ್ವಕ್ಕೆ ಸೇರಿದ ಅನೇಕ ತತ್ತ್ವಪದಕಾರರು ಸ್ಥಾನ ಪಡೆದಿದ್ದಾರೆ. ಶರೀಫ, ಕಡಕೋಳ ಮಡಿವಾಳಪ್ಪ, ಅಮೀರಖುಸ್ರು ಮೊದಲಾದವರ ಆಲೋಚನಾ ಧಾಟಿಯನ್ನು ಇಲ್ಲಿ ವಿವರವಾಗಿ ಮಂಡಿಸಲಾಗಿದೆ. ಮೂರನೇ ವರ್ಗದಲ್ಲಿ ಆಧುನಿಕ ಜಗತ್ತಿನ ಪ್ರಮುಖ ರಾಜಕಾರಣಿಗಳ ಪರಿಚಯವಿದೆ. ಲಿಂಕನ್, ಮಾವೋ, ಮಂಡೇಲ, ಮಾರ್ಕ್ಸ್, ಲೆನಿನ್, ಮೊದಲಾದವರಿಗೆ ಇಲ್ಲಿ ಸ್ಥಾನ ಕಲ್ಪಿಸಲಾಗಿದೆ. ಕೊನೆಯ ವರ್ಗದಲ್ಲಿ ಆಧುನಿಕ ಕಾಲದ ಸಾಮಾಜಿಕ ಹೋರಾಟಗಾರರಿಗೆ ಮತ್ತು ಚಿಂತಕರಿಗೆ ಅವಕಾಶ ನೀಡಲಾಗಿದೆ. ವಿವೇಕಾನಂದ, ಎಂ. ಎನ್. ರಾಯ್, ರಾಹುಲ ಸಾಂಕೃತ್ಯಾಯನ, ಅಂಬೇಡ್ಕರ್, ನಾರಾಯಣಗುರು, ಲೋಹಿಯಾ, ಗೋರಾ ಮೊದಲಾದವರ ಚಿಂತನೆಗಳನ್ನು ಇಲ್ಲಿ ದಾಖಲಿಸಲಾಗಿದೆ. ಐನ್‌ಸ್ಟಿನ್, ಕೊಪರ್ನಿಕಸ್, ಚಾಪ್ಲಿನ್, ಮೊದಲಾದವರ ಕುರಿತೂ ಕೆಲವು ಕೃತಿಗಳಿವೆ.

ಈ ಮಾಲೆಗೆ ಸಾಮಾಜಿಕ ಚಿಂತನಮಾಲೆ ಎಂದು ಹೆಸರಿಡಲಾಗಿದೆಯಾದರೂ, ಕೃತಿಗಳಲ್ಲಿ ಆಯಾ ಚಿಂತಕರ ಜೀವನದ ವಿವರಗಳನ್ನು ಅಡಕಗೊಳಿಸಲಾಗಿದೆ. ಕೃತಿಯ ಎರಡನೇ ಭಾಗದಲ್ಲಿ ಆಯಾ ಚಿಂತಕರ ಯೋಚನೆಯ ರೀತಿಯನ್ನು ಅದು ಸಮಾಜದ ಮೇಲೆ ಉಂಟುಮಾಡಿದ ಪರಿಣಾಮವನ್ನೂ ವಿಶ್ಲೇಷಿಸಲಾಗಿದೆ. ಜಗತ್ತಿನ ಪ್ರಮುಖ ಚಿಂತಕರ ಚಿಂತನೆಗಳೆಲ್ಲ ಹೀಗೆ ಸರಳವಾಗಿ ಕನ್ನಡಕ್ಕೆ ಹರಿದು ಬರುವುದು ಅಪೇಕ್ಷಣೀಯವೇ ಆಗಿದೆ. ಇಂಥವು ನಾಡಿನ ಬೌದ್ಧಿಕ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರವಹಿಸುತ್ತವೆ.

ಈ ಮಾಲೆಯಲ್ಲಿ ಪ್ರಕಟವಾದ ವ್ಯಕ್ತಿಗಳ ಹೆಸರನ್ನು ನೋಡಿದರೆ, ಬಿಟ್ಟುಹೋಗಿರುವ ಅನೇಕ ಹೆಸರುಗಳು ಕಣ್ಣಮುಂದೆ ಬರುತ್ತವೆ. ಪೆರಿಯಾರ್, ಕುದ್ಮುಲ್, ರಂಗರಾವ್, ಫುಲೆ, ಚಾರುಮಜುಂದಾರ್ ಮೊದಲಾದವರೊಡನೆ ಬುದ್ಧ, ಯೇಸು, ಪೈಗಂಬರರೂ ನೆನಪಾಗುತ್ತಾರೆ. ಮುಂದಿನ ದಿನಗಳಲ್ಲಿ ಈ ಮಾಲೆಯ ಮುಂದರಿಕೆಯಾಗಿ ಅಂಥಕೃತಿಗಳು ಬರುವುದು ಆವಶ್ಯಕ. ಜನಪದ ಚಿಂತಕರಾದ ಮೈಲಾರ, ಮಂಟೇಸ್ವಾಮಿ, ಮಾದೇಶ್ವರ, ಜುಂಜಪ್ಪ, ಸಿರಿ, ಕೋಟಿಚೆನ್ನಯ ಮೊದಲಾದವರನ್ನು ಈ ವ್ಯಾಪ್ತಿಗೆ ತರುವುದರಿಂದ ಹೆಚ್ಚು ಪ್ರಯೋಜನವಿದೆ. ಏನಿದ್ದರೂ ಇಂಥ ಪ್ರಯತ್ನಗಳ ಹಿಂದಿನ ಯೋಚನೆ ಮೆಚ್ಚುಗೆಗೆ ಅರ್ಹವಾಗಿದೆ.

ಮೇಲೆ ಚರ್ಚಿಸಿದ ಕೃತಿಗಳಲ್ಲದೆ ಇನ್ನು ಹಲವು ಕೃತಿಗಳು ಮಾನವಿಕಗಳಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ಹಲವು ಕೃತಿಗಳು ಪಠ್ಯಪುಸ್ತಕದ ರೂಪದಲ್ಲಿ ಇಲ್ಲವೇ ಗೈಡುಗಳ ರೂಪದಲ್ಲಿವೆ. ಒಂದೆರಡು ಕಡೆ ಇಂಗ್ಲಿಷ್ ಕೃತಿಗಳನ್ನು ಆಧರಿಸಿಕೊಂಡು ಕನ್ನಡದಲ್ಲಿ ಬರೆಯಲಾಗುವ ಇಂಥ ಕೃತಿಗಳಲ್ಲಿ ಸ್ವೋಪಜ್ಞ ಚಿಂತನೆಗಳಿಲ್ಲ.

ಹೀಗೆ ನೋಡಿದಾಗ ಮಾನವಿಕಗಳ ದೃಷ್ಟಿಯಿಂದ ಕನ್ನಡಿಗರು ಹೆಮ್ಮೆ ಪಡಬಹುದಾದ ಕೃತಿಗಳು ೧೯೯೪ರಲ್ಲಿ ಪ್ರಕಟವಾಗಿಲ್ಲ. ನಮ್ಮ ತಿಳಿವಿನ ಉದ್ದಗಲಗಳನ್ನು ವಿಸ್ತರಿಸುವ ಶಕ್ತಿ ಅವಕ್ಕಿಲ್ಲ. ಇದ್ದುದರಲ್ಲಿ ಸಾಮಾಜಿಕ ಚಿಂತನೆ ಮಾಲೆಯ ಕೃತಿಗಳೇ ಉಪಯುಕ್ತವಾಗಿದೆ.

# ಧರ್ಮ - ತತ್ವಶಾಸ್ತ್ರ

*ಮಲ್ಲೇಪುರಂ ಜಿ. ವೆಂಕಟೇಶ*

ಕನ್ನಡದಲ್ಲಿ ಧರ್ಮ ಮತ್ತು ತತ್ವಶಾಸ್ತ್ರಗಳಿಗೆ ಸಂಬಂಧಿಸಿದ ಕೃತಿಗಳು ಪ್ರಕಟವಾಗುತ್ತಿವೆ. ನಿಜ. ಆದರೆ, 'ಧರ್ಮ' ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿರುವ ಬಹಳಷ್ಟು ಕೃತಿಗಳು ಮತೀಯ ವಲಯದಿಂದ ಆಚೆಗೆ ಬಂದಿಲ್ಲ. ಮತ ಮತ್ತು ಧರ್ಮ ಇವುಗಳಿಗೆ ಸಂಬಂಧಿಸಿದಂತೆ ಖಚಿತವಾದ ಅರ್ಥವ್ಯಾಪ್ತಿಯನ್ನು ಈ ಕ್ಷೇತ್ರದ ವ್ಯಾಸಂಗಿಗಳು ಪಡೆದಿಲ್ಲವೆಂದು ತೋರುತ್ತದೆ. ಮತವನ್ನು ಧರ್ಮವೆಂದು ಗ್ರಹಿಸುವುದೂ ಧರ್ಮವನ್ನು ಮತವೆಂದು ಗ್ರಹಿಸುವುದೂ ಇವೆರಡನ್ನು ಏಕಾಕಾರವೆಂದು ತಿಳಿದು ಪ್ರವಾದಿಯಂತೆ ಮಾತನಾಡುವುದೂ ಬರೆಯುವುದೂ ನಮ್ಮ ಸಾಂಸ್ಕೃತಿಕ ದುರಂತ.

೧೯೯೪ರಲ್ಲಿ 'ಮತ' ತತ್ವಕ್ಕೆ ಸಂಬಂಧಿಸಿದ ಗ್ರಂಥಗಳೇ ಬಹುತೇಕವಾಗಿ ಬಂದಿವೆ. ಅದರಲ್ಲೂ ವೀರಶೈವ ಮತ್ತು ಮಾಧ್ವಮತಕ್ಕೆ ಸಂಬಂಧಿಸಿದ ಕೃತಿಗಳು ಹೆಚ್ಚಾಗಿವೆ. ಭಗವದ್ಗೀತೆಗಳ ಅನುವಾದ, ಟಿಪ್ಪಣಿ ಮತ್ತು ಸಾರಸಂಗ್ರಹಗಳನ್ನು ಒಳಗೊಂಡ ಪುಸ್ತಕ - ಪುಸ್ತಿಕೆಗಳು ಎಂದಿನಂತೆ ಹೇರಳವಾಗಿ ಪ್ರಕಟಗೊಂಡಿವೆ. ಇವುಗಳ ಜತೆಗೆ ತೌಲನಿಕ ತತ್ವಶಾಸ್ತ್ರಕ್ಕೆ ಸಂಬಂಧಿಸಿದ ಒಂದೆರಡು ಕೃತಿಗಳು ಬಂದಿರುವುದು ಸುಯೋಗ. ಈ ವಿಷಯಕ್ಕೆ ಸಂಬಂಧಿಸಿದಂತೆ ಎಲ್ಲ ಬಗೆಯ ಪುಸ್ತಕಗಳನ್ನೂ ಇಲ್ಲಿ ಗಮನಿಸಲು ಸಾಧ್ಯವಾಗಿಲ್ಲ. ಸಿಕ್ಕ ಗ್ರಂಥಗಳನ್ನು ನೋಡಿ - ಇವುಗಳ ಮುಖಾಂತರ ಈ ವರ್ಷದ ಒಲವು ಮತ್ತು ನೆಲೆಗಳನ್ನು ಗೃಹೀತ ಹಿಡಿದು ನೋಡಲಾಗಿದೆ. ಈ ವರ್ಷವೂ ಮೊದಲೇ ಹೇಳಿದಂತೆ ಹೆಚ್ಚಾಗಿ ಸಾಮಾನ್ಯ ಗ್ರಂಥಗಳೇ ಬಂದಿವೆ; ಅವು ಗತಾನುಗತಿಕವಾಗಿವೆ. ಇಷ್ಟು ಹೇಳಿದರೆ ಸಾಕು.

೧೯೯೪ರಲ್ಲಿ ಪ್ರಕಟವಾದ ದೇವೀಪ್ರಸಾದರ 'ಭಾರತೀಯ ದರ್ಶನಗಳು', ಜಿ. ರಾಮಕೃಷ್ಣರ 'ದೇವಿಪ್ರಸಾದ್ ಮತ್ತು ಲೋಕಾಯತ ದರ್ಶನ' ಷಣ್ಮುಖಯ್ಯ ಅಕ್ಕೂರ ಮಠರ 'ಧರ್ಮಸಂಪದ' ಬಿ. ಜನಾರ್ದನ ಭಟ್ ಅವರ 'ಮೂರನೆಯ ಕಣ್ಣು' - ಯು. ಆರ್. ಅನಂತಮೂರ್ತಿ ಅವರ 'ದಾವ್ ದ ಜಿಂಗ್' ಕೆ.ಬಿ. ಸಿದ್ಧಯ್ಯ, ವೀಚಿ ಇವರು ಕನ್ನಡಕ್ಕೆ ತಂದಿರುವ 'ನಾಲ್ಕು ಶ್ರೇಷ್ಠ ಸತ್ಯಗಳು' ಇವುಗಳು ಈ ವರ್ಷ ಪ್ರಕಟವಾಗಿರುವ ಗಮನಾರ್ಹ ಪುಸ್ತಕಗಳು. ಇವುಗಳ ಜತೆಗೆ ಸೇರಿಸುವುದಕ್ಕೆ ಆಗದ ಮೂವತ್ತಕ್ಕೂ ಹೆಚ್ಚಿನ ಪುಸ್ತಕಗಳು ಬಂದಿವೆ. ಅವೂ ಕೂಡ ಅನುವಾದ, ವ್ಯಾಖ್ಯಾನ,

ವಿವರಣೆ ಮತ್ತು ಪರಿಚಯಗಳ ನೆಲೆಯಲ್ಲಿ ಉಳಿದಿವೆ. ಇವೆಲ್ಲ ವೈದಿಕಮೂಲದ ಕೃತಿಗಳೊ ಶಿವಾಗಮಕ್ಕೆ ಸಂಬಂಧಿಸಿದ ಕೃತಿಗಳೊ ಆಗಿವೆ.

ಈ ಬಗೆಯ ಪುಸ್ತಸಕಗಳಲ್ಲಿ 'ಭಾರತೀಯ ದರ್ಶನಗಳು' ಈ ವರ್ಷ ಪ್ರಕಟವಾಗಿರುವ ಮುಖ್ಯ ಕೃತಿ. ಭಾರತೀಯ ತತ್ವಶಾಸ್ತ್ರವನ್ನು ಕುರಿತು ಕನ್ನಡದಲ್ಲಿ ಹಲವು ಗ್ರಂಥಗಳು ಬಂದಿರುವುದು ಸರಿಯಷ್ಟೆ. ಇವೆಲ್ಲವೂ ಇಂಗ್ಲಿಷಿನಿಂದಲೊ ಇತರ ಭಾರತೀಯ ಭಾಷೆಗಳಿಂದಲೊ ಬಂದಂಥವುಗಳು. ಕನ್ನಡದಲ್ಲಿ ಸ್ವತಂತ್ರವಾಗಿ ಬರೆದ ಗ್ರಂಥಗಳು ಇಲ್ಲವೆಂದರೂ ತಪ್ಪಾಗುವುದಿಲ್ಲ. ಭಾರತೀಯ ತತ್ತ್ವಶಾಸ್ತ್ರವನ್ನೇ ದೇವಿಪ್ರಸಾದರು 'ಭಾರತೀಯ ದರ್ಶನ' ಎಂದು ಕರೆದಿದ್ದಾರೆ. ಭಾರತೀಯ ತತ್ವಶಾಸ್ತ್ರವನ್ನು ಎರಡು ಬಗೆಯ ನೆಲಸುಗಳಿಂದ ನೋಡಬಹುದಾಗಿದೆ. ಮೊದಲನೆಯದು ಅಧ್ಯಾತ್ಮವನ್ನು ಕೇಂದ್ರವಾಗಿರಿಸಿಕೊಂಡು ಎಲ್ಲ ವಿರೋಧಗಳನ್ನು ಪರಸ್ಪರ ಸಾಂಗತ್ಯ ಹಾಗೂ ಸಾತತ್ಯದ ನೆಲೆಗೆ ತಂದುಕೊಳ್ಳುವಂಥದ್ದು. ಎರಡನೆಯದು ಈ ಬಗೆಯ ವಿರೋಧಗಳಿಗೆ ಕಾರಣವಾದ ಕ್ರಿಯಾವಸ್ತುವನ್ನು ಕೇಂದ್ರವಾಗಿರಿಕೊಂಡು ಭೌತವಾದದ ನೆಲೆಯಲ್ಲಿ ಚರ್ಚೆಗೆ ತೆಗೆದುಕೊಳ್ಳುವಂಥದ್ದು ಇವೆರಡೂ ಬಗೆಯ ವಿಶ್ಲೇಷಣೆಗಳಲ್ಲಿ ಮೊದಲನೆಯದು ಆಧುನಿಕ ತತ್ತ್ವಶಾಸ್ತ್ರಜ್ಞರ ಬರೆಹಗಳಲ್ಲಿ ಎದ್ದು ಕಾಣುತ್ತದೆ. ಎರಡನೆಯ ಬಗೆ ಅಷ್ಟಾಗಿ ಕಾಣಬರುವುದಿಲ್ಲ. ಆ ಬಗೆಯ ನೆಲಸುಗಳಲ್ಲಿ ಶೋಧನೆ, ವಿಶ್ಲೇಷಣೆ ಮತ್ತು ತುಲನಾತ್ಮಕ ವ್ಯಾಸಂಗದ ಪರಿಶ್ರಮ ಅಗತ್ಯ. ಮೊದಲನೆಯದು ಎರಡನೆಯದನ್ನು ನುಂಗಿಹಾಕಿರುವುದೇ ಈ ಬಗೆಯ ಅಧ್ಯಯನಕ್ಕೆ ಅಡ್ಡಿಯಾಗಿದೆ.

'ಭಾರತೀಯ ದರ್ಶನಗಳು' ಕೃತಿಯು ಎರಡನೇ ಬಗೆಯ ವ್ಯಾಖ್ಯಾನವನ್ನು ನೆಮ್ಮಿ ಹಿಡಿದಿದೆ. ಈ ಕೃತಿಯಲ್ಲಿ ಮೀಮಾಂಸೆ, ನ್ಯಾಯ, ವೈಶೇಷಿಕ, ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಬೌದ್ಧ, ಜೈನ, ಯೋಗ, ಸಾಂಖ್ಯ - ಹೀಗೆ ತತ್ತ್ವಶಾಸ್ತ್ರದ ಹೆದ್ದಾರಿಗಳನ್ನೂ ಕಿರುದಾರಿಗಳನ್ನೂ ಕುರಿತು ಆಳವಾದ ವಿಶ್ಲೇಷಣೆ ಬೌದ್ಧಿಕವಾಗಿ ನಡೆದಿದೆ. ಇವೆಲ್ಲವುಗಳ ಹಿಂದೆ, ಚಾರ್ವಾಕತತ್ವ ಪ್ರಭಾವಳಿಯಾಗಿ ನಿಂತು ಕೆಲಸ ಮಾಡಿದೆ. ಗ್ರಂಥದ ಕೊನೆಗೆ ಲೋಕಾಯತವಾದವನ್ನು ತಂದು ವಿಶ್ಲೇಷಿಸಿರುವುದು ಇದನ್ನೇ ಸಮರ್ಥಿಸುತ್ತದೆ. ತತ್ತ್ವಶಾಸ್ತ್ರಕ್ಕೆ ಎರಡು ಮುಖಗಳಿವೆ. ಮೊದಲನೆಯದು ಈಶ್ವರತತ್ವವನ್ನು ಕೇಂದ್ರವಾಗಿರಿಸಿಕೊಂಡು ಅವುಗಳ ಸುತ್ತ ಉಳಿದಿದ್ದನ್ನು ಪ್ರಭಾವಳಿಯಾಗಿ ನಿರ್ಮಿಸುವ ಚಾತುರ್ಯ ಮತ್ತು ಚಾಕಚಕ್ಯತೆ. ಎರಡನೆಯದು ಜಗತ್ತನ್ನು ಕೇಂದ್ರವಾಗಿರಿಸಿಕೊಂಡು ವ್ಯಕ್ತಿ ಕುಟುಂಬ, ಸಮುದಾಯದ ನೆಲೆಗಳಲ್ಲಿ ಉಳಿದ ವಿಷಯಗಳನ್ನು ಸೆಳೆದುಕೊಳ್ಳುವುದು. ನಮ್ಮ ತತ್ತ್ವಶಾಸ್ತ್ರೀಯ ಬರೆಹಗಳಲ್ಲಿ ಮೊದಲನೆಯದಕ್ಕೆ ಅಗ್ರಪಟ್ಟ. ಎರಡನೆಯದಕ್ಕೆ ಗೌಣಸ್ಥಾನ ಅಥವಾ ಇಲ್ಲವೆಂದರೂ ಸರಿಯೇ. ಹೀಗೆ ಆಗಲು ಕಾರಣವೇನು? ಜೀವನಸಂಬಂಧೀ ತತ್ತ್ವಜ್ಞಾನಕ್ಕಿಂತ, ಈಶ್ವರ ಸಂಬಂಧೀ ತತ್ತ್ವಜ್ಞಾನ ಮೇಲುಗೈ ಪಡೆಯುವುದರ ಹಿಂದಿನ ಆಶಯ ಯಾವ ಬಗೆಯದು? ಈ ಬಗೆಯ ಪ್ರಶ್ನೆಗಳಿಗೆ ದೇವಿಪ್ರಸಾದರು ಬಹಳ ಸಮರ್ಥವಾದ ಮತ್ತು ಸಮತೋಲನವಾದ ವಿವರಗಳನ್ನು ತಮ್ಮ ಕೃತಿಯಲ್ಲಿ ನೀಡಿದ್ದಾರೆ. ಈ ಬಗೆಯ

ಪಾರಂಪರಿಕ ತತ್ತ್ವದ ಬಗೆಗಳನ್ನು ಪರಿಶೀಲಿಸುವಾಗ ಒಬ್ಬ ಮಾರ್ಕ್ಸ್‌ವಾದೀ ಬರಹಗಾರ ಅಥವಾ ಚಿಂತಕ ಅನೇಕ ಬಾರಿ ಉದ್ವೇಗ ಮತ್ತು ಅಪಲಾಪಗಳಿಗೆ ಒಳಗಾಗುತ್ತಾನೆ. ಆದರೆ, ದೇವೀಪ್ರಸಾದರು ಎಲ್ಲೂ ವಿಚಲಿತರಾಗುವುದಿಲ್ಲ. ಸಮತೋಲನ ಮತ್ತು ಸೂಕ್ಷ್ಮತೆಗಳನ್ನು ಕಳೆದುಕೊಳ್ಳುವುದಿಲ್ಲ. ಅನ್ವೇಷಕ ಬುದ್ಧಿಯು, ಸತ್ಯವನ್ನು ತಿಳಿಯಬೇಕೆಂದು ಬಯಸುತ್ತದೆ. ಅದು ಬರವಣಿಗೆಯ ಹಿಂದೆ ನಿಂತು ಕೆಲಸ ಮಾಡಿಸುತ್ತದೆ. ಈ ಬಗೆಯ ಬರೆಹಗಳ ಹಿಂದಿರುವ ಸಾಮಾಜಿಕ ಸ್ವಾಸ್ಥ್ಯದ ಕಲ್ಪನೆ ಕುತೂಹಲವನ್ನು ತರುತ್ತದೆ. ನಮ್ಮ ರಾಜಕೀಯ, ಆರ್ಥಿಕ, ಸಾಮಾಜಿಕ ಸಂವೇದನೆಗಳಿಗೆ 'ಹೊರ ತಿರುವು' ಗಳನ್ನು ತಾತ್ವಿಕವಾಗಿ ಈ ಬಗೆಯ ಪುಸ್ತಕಗಳು ನೀಡಬಲ್ಲುವು. ಸಾಮಾಜಿಕ ಉತ್ಕ್ರಾಂತಿ ಮತ್ತು ಆರ್ಥಿಕ ಪರಿವರ್ತನೆಗಳನ್ನು ಪಡೆಯುತ್ತಿರುವ ಕಾಲ ಇದು. ಈ ಬಗೆಯ ' ಚಿಂತನೆ' ಹೊಸಕಾಲದ ಓದಿಗೆ, ಚಿಂತನೆಗೆ ತಕ್ಕಷ್ಟು ಆಹಾರ ಒದಗಿಸುತ್ತದೆ.

ಇದೇ ಸಾಲಿನಲ್ಲಿ ಗಮನಿಸಬಹುದಾದ ಮತ್ತೊಂದು ಪುಸ್ತಕ 'ದೇವಿಪ್ರಸಾದ್ ಮತ್ತು ಲೋಕಾಯತ ದರ್ಶನ'. ಇದು ೧೯೯೩ರಲ್ಲಿ ತೀರಿಕೊಂಡ ದೇವಿಪ್ರಸಾದರ ಜೀವನವನ್ನೂ ಅವರು ಬರೆದ ಲೋಕಾಯತವನ್ನೂ ಕುರಿತ ಸ್ವತಂತ್ರ ಬರೆಹ. ಇದನ್ನು ಅವರ ಒಡನಾಡಿಗಳಲ್ಲಿ ಒಬ್ಬರಾದ ಜಿ. ರಾಮಕೃಷ್ಣ ಅವರು ಬರೆದಿದ್ದಾರೆ. ದೇವಿಪ್ರಸಾದರು ತಮ್ಮ ಅಪಾರ ಪಾಂಡಿತ್ಯ ಸಂಶೋಧನಾ ಪ್ರತಿಭೆಗಳನ್ನು ಎರೆದು ಸಾಧಿಸಿರುವ ತತ್ವ ಪ್ರಮೇಯಗಳನ್ನು ಈ ಕಿರುಪುಸ್ತಕವು ಅತ್ಯಂತ ಸರಳವಾಗಿ ಓದುಗರಿಗೆ ಪರಿಚಯ ಮಾಡಿಕೊಡುತ್ತದೆ. ದೇವಿಪ್ರಸಾದರ ವ್ಯಕ್ತಿತ್ವದ ಹಲವು ಎಳೆಗಳನ್ನು ಜಿ. ಆರ್. ಇದರಲ್ಲಿ ಚಿತ್ರಿಸಿದ್ದಾರೆ. ಮುಖ್ಯವಾದ ಸಂಗತಿಯೆಂದರೆ ದೇವಿಪ್ರಸಾದರ ಚಿಂತನೆಗಳನ್ನು ಸಂಕ್ಷಿಪ್ತವಾಗಿಯೂ ನಿರುದ್ವಿಗ್ನವಾಗಿಯೂ ಜಿ. ಆರ್. ನಿರೂಪಿಸಿದ್ದಾರೆ. ಇದರಿಂದ ಈ ಪುಸ್ತಕದ ಉಪಯೋಗ ತನಗೆ ತಾನೆ ಸ್ಪಷ್ಟವಾಗಿದೆ.

ಬುದ್ಧನ ತತ್ವಚಿಂತನೆಯನ್ನು ಕನ್ನಡಕ್ಕೆ ಪರಿಚಯಿಸುವ ಮಾಲಿಕೆಯಲ್ಲಿ 'ನಾಲ್ಕು ಶ್ರೇಷ್ಠ ಸತ್ಯಗಳು' ಎಂಬ ಪುಸ್ತಕವು ಇಂಗ್ಲಿಷಿನಿಂದ ಕನ್ನಡಕ್ಕೆ ಬಂದಿದೆ. ಇದನ್ನು ಕನ್ನಡಕ್ಕೆ ತಂದವರು ಕೆ.ಬಿ. ಸಿದ್ಧಯ್ಯ ಮತ್ತು ಕವಿ ವೀಚಿ ಅವರು. ಇದರ ಮೂಲಲೇಖಕರು ಬೌದ್ಧಗುರು ಅಜಾನ್ ಸುಮೇಧೋ. 'ಸಿದ್ಧಾರ್ಥನು ಅರಿವು ಮೈದೋರಿದ ಬಳಿಕ ಬುದ್ಧನಾಗಿ ಕಂಡುಕೊಂಡ ಶಾಶ್ವತ ಸತ್ಯಗಳ ಅನುಭವ'ವನ್ನು ಸುಮೇಧೋ ತಿಳಿಯಾದ ಭಾಷೆಯಲ್ಲಿ ವಿವರಿಸಿದ್ದಾರೆ. ಈ ಪುಸ್ತಕವು ಬೌದ್ಧಧರ್ಮದ ಸಮರ್ಥನೆಯಾಗಲೀ ವಿಶ್ಲೇಷಣೆಯಾಗಲೀ ಅಲ್ಲ. ಬದಲಾಗಿ ಬೌದ್ಧ ಧರ್ಮದ ತಿಳಿವನ್ನು ಕನ್ನಡಕ್ಕೆ ತರುವುದೇ ಮುಖ್ಯ ಉದ್ದೇಶವಾಗಿದೆ. ಈ ಪುಸ್ತಕದಲ್ಲಿ ಆರು ಲೇಖನಗಳಿವೆ. ಮೊದಲ ಲೇಖನವು ನಾಲ್ಕು ಶ್ರೇಷ್ಠ ಸತ್ಯಗಳನ್ನು ವಿವರಿಸುತ್ತವೆ. ದುಃಖ, ಆಸೆ, ಅಶಾಶ್ವತತೆ ಮತ್ತು ಸಮ್ಯಕ್ ಗ್ರಹಿಕೆಗಳು ಇಲ್ಲಿ ಚರ್ಚಿತವಾಗಿವೆ. ಕೊನೆಯ ಎರಡು ಲೇಖನಗಳು ಧ್ಯಾನ ಮತ್ತು ಮೈತ್ರೀಭಾವವನ್ನು ವಿವೇಚಿಸುತ್ತವೆ. ಬೌದ್ಧಧರ್ಮದ 'ಸಂಯುಕ್ತ ನಿಕಾಯ' ದ ಪ್ರಮುಖ ಒಳನೋಟಗಳನ್ನು ಇಲ್ಲಿ ತಿಳಿಯಾಗಿ ಅನುವಾದಿಸಿದ್ದಾರೆ. ಬೌದ್ಧಧರ್ಮದ ಮೂಲ ಆಶಯಗಳನ್ನು ತಿಳಿಯಬಯಸುವವರಿಗೆ ಇದು ಅತ್ಯಂತ ಉಪಯುಕ್ತವಾಗಿದೆ.

'ದಾವ್ ದ ಜಿಂಗ್' ಕನ್ನಡಕ್ಕೆ ೧೯೯೪ರ ಮಹತ್ವದ ಸೇರ್ಪಡೆ. ಯು. ಆರ್. ಅನಂತಮೂರ್ತಿ ಅವರು ಇದನ್ನು ಕನ್ನಡಕ್ಕೆ ತಂದಿದ್ದಾರೆ. ಉಪನಿಷತ್ತುಗಳ ಮಾದರಿಯ 'ದಾವ್ ದ ಜಿಂಗ್'ನ್ನು ಬರೆದವನು ಚೀನಾದ ಅನುಭಾವಿ 'ಲಾವ್ ತ್ಸು' . ಇಡೀ ಪುಸ್ತಕವು ಮೂರು ಭಾಗಗಳನ್ನು ಪಡೆದಿದೆ. ಮೊದಲ ಭಾಗವು 'ಲಾವ್ ತ್ಸು' ಕುರಿತ ಆಧುನಿಕ ಚಿಂತನೆ ಮತ್ತು ವಿಶ್ಲೇಷಣೆಗಳನ್ನು ಒಳಗೊಂಡಿದೆ. 'ಲಾವ್ ತ್ಸು' ಬರೆದ 'ದಾವ ದ ಜಿಂಗ್' ಸೂತ್ರಗಳ ಅನುವಾದಗಳನ್ನು ಎರಡನೆಯ ಭಾಗ ಪಡೆದುಕೊಂಡಿದೆ. ಮೂರನೆಯ ಭಾಗದಲ್ಲಿ ಅಕ್ಷರ ಚಿಂತನೆಯ ಸಂಪಾದಕ ಡಿ. ಆರ್. ನಾಗರಾಜ್ ಬರೆದ 'ಅಧಿಕಾರದಾಚೆಗಿನ ಅಧಿಕಾರ' ಎಂಬ ಹೆಸರಿನ ಹಿನ್ನುಡಿ ಇದೆ. ಹೀಗಿವು ಒಂದಕ್ಕೊಂದು ಪೂರಕವಿವರಗಳಿಂದ ಕೂಡಿಕೊಂಡಿವೆ.

ಅನಂತಮೂರ್ತಿ ಅವರು ತಮ್ಮ ವಿಸ್ತಾರವಾದ 'ಪ್ರಸ್ತಾವನೆ'ಯಲ್ಲಿ ತಮಗೆ 'ದಾವ್ ದ ಜಿಂಗ್' ಯಾಕೆ ಮುಖ್ಯ ಆಗಿದೆ ಎಂಬುದನ್ನು ಹಲವು ನೆಲೆಗಳಲ್ಲಿ ಶೋಧಿಸಿಕೊಂಡಿದ್ದಾರೆ. ಬಹುಮುಖ್ಯವಾಗಿ ಇವತ್ತಿನ ಮನುಷ್ಯನ ಅಧಿಕಾರದ ಗತ್ತು ಮತ್ತು ವ್ಯಕ್ತಿಹುಂಬತನಗಳನ್ನು 'ಲಾವ್ ತ್ಸು' ಹೇಗೆ ವ್ಯಂಗ್ಯಗೊಳಿಸುತ್ತಾನೆಂಬ ಸಂಗತಿಯನ್ನು ತಮ್ಮ ಪ್ರಸ್ತಾವನೆಯಲ್ಲಿ ಪ್ರಸ್ತಾವಿಸುತ್ತಾರೆ. ಇಷ್ಟು ಮಾತ್ರವಲ್ಲ; ಪೂರ್ವ -ಪಶ್ಚಿಮಗಳಲ್ಲಿ ಬಾಳ್ವೆಯ ನೆಲೆಯನ್ನು ಕುರಿತಾದ ನಂಬಿಕೆಗಳ ಹಾಗೂ ಶ್ರದ್ಧೆಗಳ ಸ್ವರೂಪವನ್ನು ವಿವರಿಸುತ್ತಾರೆ; 'ಲಾವ್ ತ್ಸು' 'ಇಹ ' ಮತ್ತು 'ಪರ' ವನ್ನು ಒಗ್ಗೂಡಿಸುವ ಬಗೆಯನ್ನು ಸ್ಪಷ್ಟಪಡಿಸುತ್ತಾರೆ. ಪುಸ್ತಕದ ಹಿನ್ನುಡಿಯಲ್ಲಿ ಡಿ. ಆರ್. ಕೂಡಾ ಇದೇ ಮಾತನ್ನು ಮುಂದುವರಿಸಿ ವಿಶ್ಲೇಷಿಸುತ್ತಾರೆ. 'ಲಾವ್ ತ್ಸು' ಹೇಳುವ ಪರ್ಯಾಯ ದಾರಿಗಳ ಹುಡುಕಾಟ, ದುರಾಗ್ರಹದ ಆದರ್ಶವಾದಿತನ, ಮನುಷ್ಯನ ಅವನತಿ ಎಲ್ಲಿದೆ ಎಂಬ ಪ್ರಶ್ನೆ ಹಾಗೂ ಧ್ಯಾನಕ್ಕೆ ಹಚ್ಚುವ ವಕ್ರ ಉಪಾಯಗಳು ಯಾವುವು ಎಂಬಂತಹ ವಿಚಾರಗಳು ಓದುಗನಿಗೆ ಹೊಸ ಅನುಭವವನ್ನು ಕೊಡುತ್ತವೆ. ಲಾವ್ ತ್ಸು ಹೇಳುವ:

> ``ಉತ್ತರ ಗೊತ್ತಿದೇಂತ ತಿಳಿದುಬಿಟ್ಟ ಬುದ್ಧಿವಂತರಿಗ
> ದಾರಿ ತೋರೋದು ಬಲುಕಷ್ಟ''

ಎನ್ನುವ ಮಾತು ಆಲೋಚನೆಗೆ ಹಚ್ಚುತ್ತದೆ.

'ಭಾರತೀಯ ದರ್ಶನಗಳು' ಹಾಗೂ 'ದಾವ್ ದ ಜಿಂಗ್' ಇವೆರಡನ್ನು ಮುಖಾಮುಖಿಯಾಗಿಸಿದಾಗ ಹೊಳೆಯುವ ಅರ್ಥಗಳು ಯಾವುವು? ಭಾರತದ ಋಷಿ ಮತ್ತು ರಾಜನ ಪರಿಕಲ್ಪನೆಗಳನ್ನು ಅಧಿಕಾರದ ನೆಲೆಯಿಂದ ಕೇಳಿಕೊಳ್ಳಬೇಕಾದ ಅಗತ್ಯ ಈಗಲೂ ಉಂಟೇ? ಪೂರ್ವವು ರಾಜರ್ಷಿಯ ಪರಿಕಲ್ಪನೆಯಲ್ಲಿ ಮುಳುಗೆದ್ದಿದ್ದು ಯಾವ ನೆಲೆಯಲ್ಲಿ? ಈ ಬಗೆಯ ಪ್ರಶ್ನೆಗಳನ್ನು ಸೂಕ್ಷ್ಮವಾಗಿಯಾದರೂ ಪರಿಶೀಲಿಸುವ ಅಗತ್ಯವನ್ನು ಈ ಕೃತಿ ಎತ್ತುತ್ತದೆ. ಆ ಮಟ್ಟಿಗೆ ಇದು ರಾಜಕೀಯ ತತ್ವಶಾಸ್ತ್ರದ ದೃಷ್ಟಿ ನೆಲೆಯಿಂದ ಬಹುಮುಖ್ಯವಾದ ಪುಸ್ತಕ.

ಬಿ. ಜನಾರ್ಧನ ಭಟ್ ಅವರ 'ಮೂರನೆಯ ಕಣ್ಣು', ಒಂದು ವಿಶಿಷ್ಟ ಬಗೆಯ ಪುಸ್ತಕ. ರಹಸ್ಯತತ್ವವಾದಕ್ಕೆ ಸೇರಿದ ಈ ಪುಸ್ತಕದಲ್ಲಿ ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಬೌದ್ಧತತ್ವಜ್ಞರಾದ ಮಿಲರೇಪ, ಲೊಬ್ಸಂಗ ರಾಂಪ, ಮಹರ್ಷಿ ಸುಬ್ರಾಯ ಶಾಸ್ತ್ರಿಗಳ ಬಗೆಗೆ ಪರಿಚಯಾತ್ಮಕ ಹಾಗೂ ಸಾಧನಾತ್ಮಕವಾದ ಒಳವಿವರಗಳಿಂದ ಕೂಡಿದೆ. ಎರಡನೆಯ ಭಾಗದಲ್ಲಿ ಯೂಂಗ್ ಮೊದಲಾದವರ ಗಮನ ಸೆಳೆದ 'ಯೀಜಿಂಗ್' ಕೃತಿಯ ಸರ್ವಸಾಮೀಪ್ಯದ ಪರಿಚಯವಿದೆ. ಅದರ ಜತೆಗೆ, ಟ್ಯಾರೋ ಮತ್ತು ಚೀನೀ ವಾಸ್ತುಪರಿಸರ ಲಕ್ಷಣಶಾಸ್ತ್ರವಾದ ಪೆಂಗೆಶ್ಯಿಯ ಬಗೆಗಿನ ಸ್ಥೂಲವಿವರಗಳು ನಮ್ಮ ದೇಶೀಮೂಲದ ವಾಸ್ತುನೆಲೆಯನ್ನು ಪರಿಶೀಲಿಸುವಂತೆ ಮಾಡುತ್ತವೆ. ಮೂರ್ರನೆಯ ಭಾಗವು ಕಾರ್ಲ್‌ಯೂಂಗನ THE SPIRITUAL PROBLEMS OF MODERN MAN ಎಂಬ ಲೇಖನದ ಸಂಗ್ರಹಾನುವಾದ ಅದನ್ನು 'ಮಾಡರ್ನ್ ಮನುಷ್ಯನ ಆಧ್ಯಾತ್ಮಿಕ ತೊಳಲಾಟ' ಎಂದು ಅನುವಾದಿಸಿದ್ದಾರೆ. ಇದರ ಜತೆಗೆ 'ಅಪ್ರಜ್ಞೆಯಿಂದ ಸಲಹೆ' ಕುತೂಹಲ ಉಂಟುಮಾಡುವ ಲೇಖನವಾಗಿದೆ.

ಅನೇಕ ಬಗೆಯ ಧೋರಣೆಗಳೂ ಸಿದ್ಧಾಂತಗಳೂ ಕುಸಿದು ಬೀಳುತ್ತಿರುವ ಈ ಕಾಲದಲ್ಲಿ ಪ್ರೇರಣೆಗಾಗಿ ಮರಳಿ ನಮ್ಮೊಳಗೆ ಹೋಗುವ ಅಗತ್ಯವನ್ನು ಪ್ರಾಚೀನನಾದ ಮಿಲರೇಪನೂ ಅರ್ವಾಚೀನನಾದ ಯೂಂಗನೂ ಇಲ್ಲಿ ಏಕರಸವಾಗಿ ಹೇಳುತ್ತಿದ್ದಾರೆ. ಇದೊಂದು ಕುತೂಹಲದ ಸಂಗತಿ. ಮೌಖಿಕ ಆನುಭಾವಿಕ ಮಾರ್ಗ ಮತ್ತು ಲಿಖಿತ ಆನುಭಾವಿಕ ಮಾರ್ಗಗಳ ವಿಚಿತ್ರರೀತಿಯ ಸಾಮರಸ್ಯದ ಹೆಣಿಗೆ ಇದರಲ್ಲಿ ಕಂಡು ಬರುತ್ತದೆ.

ಷಣ್ಮುಖಯ್ಯ ಅಕ್ಕೂರಮಠ ಅವರು ನಮ್ಮ ನಡುವಿನ ಪ್ರತಿಭಾವಂತರು. ಮುಖ್ಯವಾಗಿ ಅವರು MYSTICAL LITERTURE ಬಗೆಗೆ ಓದಿಕೊಂಡ ನೆಲೆಗಳು ವಿಶಿಷ್ಟವಾಗಿವೆ. 'ಧರ್ಮಸಂಪದ' ದ ಲೇಖನಗಳು ಈ ಬಗೆಯ ಹಿನ್ನೆಲೆಯಿಂದಲೇ ರೂಪುಗೊಂಡಿವೆ. ಇವುಗಳಲ್ಲಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕವಾದ ಆಯಾಮಗಳು ಹೆಚ್ಚು ಚರ್ಚೆಯನ್ನು ಬಯಸುತ್ತವೆ. ಆದರೆ, ಆನುಭಾವಿಕ ಮಾರ್ಗದ ಇಲ್ಲಿನ ಲೇಖನಗಳು ಹೆಚ್ಚು ವಿಶಿಷ್ಟವಾಗಿವೆ. ಅವು ನಮ್ಮ ಎಂದಿನ ಚರ್ಚೆಯನ್ನು ಮುಂದುವರೆಸುತ್ತವೆ. ಇನ್ನು ಕೇವಲ ಹೆಸರಿಸಬಹುದಾದ ಪುಸ್ತಕಗಳು ಕೆಲವಿವೆ ಅವುಗಳಲ್ಲಿ ಡಿ. ಎನ್. ಶಾನಭಾಗ ಅವರು 'ಮಧ್ವಾಚಾರ್ಯ ತೋರಿಸಿದ ಸಾರ್ಥಕ ಬದುಕಿನ ದಾರಿ' ಶಿವರಾಜ ಪಾಟೀಲ ಅವರ 'ಶರಣರ ದಾಸೋಹ ಮತ್ತು ಕಾಯಕ' ಕೆ.ವಿ. ತಳಗೇರಿ ಅವರ 'ಸಾರ್ಥಕ ಬದುಕಿನೆಡೆಗೆ', ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳ 'ಕಾಯಕ ದಾಸೋಹ', ಹೆಸರಿಸಬಹುದಾದವುಗಳು. ಇವುಗಳಲ್ಲದೆ ಇಪ್ಪತ್ತಕ್ಕೂ ಹೆಚ್ಚು ಮಹತ್ವವಲ್ಲದ ಕೃತಿಗಳಿವೆ. ಅವು ಸೀಮಿತದೃಷ್ಟಿಯಿಂದ ಹೊರಬಂದವುಗಳು ಮಾತ್ರ. ಅವುಗಳಲ್ಲಿ ಹಳೆಯ ಅಭಿಪ್ರಾಯಗಳಿಗೆ ಹೊಸ

ದನಿಯನ್ನು ಮಾತ್ರ ತೊಡಿಸಲಾಗಿದೆ. ಇವು ತೇಪೆ ಹಾಕಿದ ಬಟ್ಟೆಯ ಗೊಂಬೆಗಳು ಮಾತ್ರ. ಇಂಥವುಗಳು ಕೇವಲ ಸೀಮಿತ ಜನರ ಆಸಕ್ತಿಯನ್ನು ಗೆದ್ದುಕೊಳ್ಳಬಹುದೇ ಹೊರತು; ನಮ್ಮ ಚಲನಶೀಲ ಸಮಾಜಕ್ಕೆ ನೆರವಾಗುವುದಿಲ್ಲ. ಧರ್ಮ ಮತ್ತು ತತ್ವಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳು ಸ್ವತಂತ್ರವಾಗಿ ಸೃಷ್ಟಿಗೊಳ್ಳಬೇಕು. ಈ ಹಿನ್ನೆಲೆಯಿಂದ ದೇವಿಪ್ರಸಾದರ ಪುಸ್ತಕ, ಯು. ಆರ್. ಅನಂತಮೂರ್ತಿ, ಬಿ. ಜನಾರ್ಧನಭಟ್ಟ ಕೆ. ಬಿ. ಸಿದ್ಧಯ್ಯ ಮತ್ತು ವೀ.ಚಿ ಅವರು ಅನುವಾದಿಸಿದ ಪುಸ್ತಕಗಳು ಹೊಸದಾರಿಯನ್ನು ತೋರಬಲ್ಲವು. ಇವುಗಳ ಜತೆ ಷಣ್ಮುಖಯ್ಯ ಅಕ್ಕೂರಮಠರ ಪುಸ್ತಕ ನೀರಿನ ಒರತೆಗಳಿರುವ ಜಾಗವನ್ನು ನಿರ್ದೇಶಿಸುತ್ತದೆ. ಈ ಬಗೆಯ ಒರತೆಗಳನ್ನು ತೋಡಿಕೊಂಡು ತಮಗೆ ಬೇಕಾದ ಜೀವಜಲವನ್ನು ಈ ಕ್ಷೇತ್ರದ ವ್ಯಾಸಂಗಿಗಳು ಪಡೆಯಬೇಕಾಗಿದೆ.

# ವಿಚಾರ ಸಾಹಿತ್ಯ

*ಹಿ. ಚಿ. ಬೋರಲಿಂಗಯ್ಯ*

ಈ ಸಾಲಿನಲ್ಲಿ ವೈಚಾರಿಕ ಬರಹಗಳು ಇಲ್ಲವೇ ಇಲ್ಲ ಅನ್ನುವಷ್ಟು ಕಡಿಮೆ. ಆದರೆ ಆ ಕೊರತೆಯನ್ನು ತುಂಬಲು ಎನ್ನುವಂತೆ ಬೇರೆ ಬೇರೆ ಭಾಷೆಯಲ್ಲಿನ ಅಂಥ ಬರಹಗಳ ಅನುವಾದಗಳು ಪ್ರಕಟಗೊಂಡಿವೆ. 'ದೇವಿಪ್ರಸಾದ್ ಮತ್ತು ಲೋಕಾಯತ ದರ್ಶನ' 'ರಾಮನಿಗೆ ಸೀತೆ ಏನಾಗಬೇಕು?' 'ಇದೇ ರಾಮಾಯಣ'- ಇವು ಅನುವಾದಿತ ಕೃತಿಗಳಾಗಿವೆ. ಕನ್ನಡದಲ್ಲಿ ಪ್ರಕಟಗೊಂಡ ಇಂಥ ಕೆಲವೇ ಕೃತಿಗಳಲ್ಲಿ 'ಪ್ರಸ್ತಾಪ' ಹಾಗೂ 'ಕ್ರಾಂತಿಯ ಕಿಡಿಗಳು' ಎಂಬ ಎರಡು ಪುಸ್ತಕಗಳನ್ನಷ್ಟೇ ಇಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ. ವರ್ಷಕ್ಕೆ ಎರಡರಿಂದ ಮೂರು ಸಾವಿರ ಪುಸ್ತಕಗಳು ಪ್ರಕಟಗೊಳ್ಳುವ ಕನ್ನಡದಲ್ಲಿ, ವೈಚಾರಿಕ ಬರಹಗಳ ಸಂಖ್ಯೆ ಇಷ್ಟೇಕೆ ಕಡಿಮೆ ಎಂಬ ವಿಚಾರವಾಗಿ ನಾವೆಲ್ಲ ಯೋಚಿಸಿಬೇಕಾಗಿದೆ.

**ದೇವಿಪ್ರಸಾದ್ ಮತ್ತು ಲೋಕಾಯತ ದರ್ಶನ**

ಇಂಡಿಯಾದ ಬಹುಮುಖ್ಯ ತತ್ವಶಾಸ್ತ್ರಜ್ಞರಲ್ಲಿ ಒಬ್ಬರೆಂದು ಪರಿಗಣಿಸಲ್ಪಟ್ಟ ದೇವಿಪ್ರಸಾದ್ ಚಟ್ಟೋಪಾಧ್ಯಾಯರು ಪ್ರಾಚೀನ ಭಾರತದ ಸಂಸ್ಕೃತಿಯನ್ನು ಕುರಿತಂತೆ ಆಳವಾದ ಚಿಂತನೆಗಳನ್ನು ಮಾಡಿದವರು. ಎಡರಂಗದಲ್ಲಿದ್ದುಕೊಂಡು ಪರೋಕ್ಷ ರಾಜಕಾರಣಿಯೂ ಆಗಿದ್ದ ದೇವಿಪ್ರಸಾದರು ದುಡಿಯುವ ವರ್ಗದ ಜನರ ಬವಣೆಗಳಿಗೆ ಸಾಂಸ್ಕೃತಿಕವಾದ ಪರಿಹಾರಗಳನ್ನು ಕಾಣಲು ಹೊರಟವರು. ದೇವಿಪ್ರಸಾದರಿಗೆ ಹತ್ತಿರವಾಗಿದ್ದುಕೊಂಡು ಅದೇ ವಿಚಾರಧಾರೆಯಲ್ಲಿ ನಂಬಿಕೆ ಇದ್ದ ಡಾ. ಜಿ. ರಾಮಕೃಷ್ಣ ಅವರು ದೇವಿಪ್ರಸಾದರ ವಿಚಾರಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುವ ಕಾರ್ಯವನ್ನು ಈ ಪುಟ್ಟ ಪುಸ್ತಕದಲ್ಲಿ ಮಾಡಿದ್ದಾರೆ. ದೇವಿಪ್ರಸಾದರ ಪ್ರಸಿದ್ಧ ಕೃತಿ 'ಲೋಕಾಯತ' ವಲ್ಲದೆ ಪ್ರಾಚೀನ ಭಾರತದ ಭೌತವಾದವನ್ನು ಕುರಿತ ಇತರ ಪುಸ್ತಕಗಳನ್ನು ಇಟ್ಟು ಕೊಳ್ಳುವ ಮೂಲಕ ಇಡೀ ಬರಹಕ್ಕೆ ಒಂದು ಸುಸಂಬದ್ಧತೆಯನ್ನು ತಂದುಕೊಂಡಿದ್ದಾರೆ. ದುಡಿಯುವ ವರ್ಗದವರಾದ ಶೂದ್ರಾತಿಶೂದ್ರ ವರ್ಗ ಪ್ರಾಚೀನ ಕಾಲದಿಂದಲೂ ಹೇಗೆ ಅವಗಣನೆಗೆ ಒಳಗಾಯಿತು ಎಂಬುದನ್ನು ನವಿರಾಗಿ ತೋರಿಸುತ್ತಲೇ, ಪ್ರಾಚೀನರ ಭೌತವಾದದ ಸತ್ಯತೆಯನ್ನು ಎತ್ತಿ ಹಿಡಿಯುತ್ತಾರೆ. ವೈಜ್ಞಾನಿಕ ಪ್ರಜ್ಞೆ ಎಂಬುದು ಕೇವಲ ಕೆಲವರ ಗುತ್ತಿಗೆಯಲ್ಲ ಅಥವಾ ಯಾವುದೇ ಒಂದು ವರ್ಗದ ಕೊಡುಗೆಯೂ ಅಲ್ಲ, ಬದಲಾಗಿ ನಮ್ಮ ಜಾನಪದ ಸಂಸ್ಕೃತಿಯಲ್ಲಿ ಅದು ಹೇಗೆ ಹಾಸುಹೊಕ್ಕಾಗಿದೆ ಎಂಬುದನ್ನು ದೇವಿಪ್ರಸಾದರು ಅತ್ಯಂತ ನಿಖರವಾಗಿ ತೋರಿಸಿಕೊಟ್ಟವರು.

ದೇವಿಪ್ರಸಾದರ ಇಂಥ ವೈಚಾರಿಕ ನಿಲುವು ಹಾಗೂ ಸಂಶೋಧನೆಗಳ ಸಾರವನ್ನು ಈ ಪುಸ್ತಕದ ಮೂಲಕ ಪರಿಚಯಿಸಿಕೊಟ್ಟಿರುವ ಡಾ. ಜಿ. ರಾಮಕೃಷ್ಣ ಅವರ ತೀಕ್ಷ್ಣ ಭಾಷೆ ಮತ್ತು ಧಾಟಿ ಕೂಡ ದೇವಿಪ್ರಸಾದರ ಪ್ರಭಾವದಿಂದ ಮೂಡಿದ್ದೇ ಆಗಿರಬಹುದು.

**ಇದೇ ರಾಮಾಯಣ**

ಭಾರತದ ಮಹಾಕಾವ್ಯಗಳಲ್ಲಿ ಪರಿಗಣಿಸಲ್ಪಟ್ಟ ರಾಮಾಯಣ ಕೇವಲ ಆರಾಧನೆಗೆ ಒಳಪಟ್ಟು ಪಾರಾಯಣ ಮಾತ್ರ ಆಗಿರುವ ಈ ಸಂದರ್ಭದಲ್ಲಿ, ಅದನ್ನು ವಿಮರ್ಶಾತ್ಮಕವಾಗಿ ನೋಡುವ ದೃಷ್ಟಿಕೋನವನ್ನು ನಾವಿಲ್ಲಿ ನೋಡಬಹುದಾಗಿದೆ. ತೆಲುಗಿನ ರಂಗನಾಯಕಮ್ಮನವರು ಬರೆದ ' ರಾಮಾಯಣ ವಿಷವೃಕ್ಷಮು' ಎಂಬ ಗ್ರಂಥ ನಿರ್ಣಯ ಅಧಾರವಿಟ್ಟು ಕೊಂಡು, ತಮಗೆ ಲಭ್ಯವಿರುವ ಇತರೆ ಮಾಹಿತಿಗಳನ್ನು ಬಳಸಿಕೊಂಡು ಶ್ರೀ ಬಂಜಗೆರೆ ಜಯಪ್ರಕಾಶ್ ಅವರು ಅನುವಾದಿಸಿರುವ ಈ ಪುಸ್ತಕ ಕುತೂಹಲಕಾರಿಯಾಗಿದೆ. ವಾಲ್ಮೀಕಿ ಬರೆದ ರಾಮಾಯಣವೆಷ್ಟು? ಅನಂತರದ ಸೇರ್ಪಡೆಗಳೇನು? ಭಾರತವನ್ನು ಒಳಗೊಂಡಂತೆ ಪ್ರಪಂಚದ ಇತರ ಭಾಗಗಳಲ್ಲಿ ರಾಮಾಯಣ ಯಾವಯಾವ ರೂಪಗಳಲ್ಲಿ ದೊರೆಯುತ್ತದೆ? ಮುಂತಾದ ವಿಚಾರಗಳನ್ನು ಇಟ್ಟುಕೊಂಡು ಕಾಲಾಂತರದಲ್ಲಿ ರಾಮಾಯಣ ಹೇಗೆ ಕೆಲವು ವರ್ಗಗಳ ಆಶೋತ್ತರಗಳನ್ನು ಮಾತ್ರ ಪೂರೈಸಬಲ್ಲ ಪಕ್ಷಪಾತಿ ಕಥೆಯಾಯಿತು ಎಂಬುದನ್ನು ನಿರೂಪಿಸುವುದು ಲೇಖಕರ ಉದ್ದೇಶವಾಗಿದೆ. ಲಿಖಿತ ರೂಪದಲ್ಲಿ ಹಲವು ರಾಮಾಯಣಗಳು ಬರಹಬಲ್ಲ ಸಮುದಾಯದಿಂದ ವಿಸ್ತರಿಸುತ್ತಾ ಬಂದವುಗಳು ಎಂಬುದನ್ನು ಗಮನದಲ್ಲಿಟ್ಟುಕೊಂಡು, ಈಗ ಪ್ರಚಲಿತದಲ್ಲಿರುವ ನಮ್ಮ ಜನಪದ ರಾಮಾಯಣದ ವೈವಿಧ್ಯಗಳನ್ನು ಅರ್ಥಮಾಡಿಕೊಂಡರೆ, ರಾಮಾಯಣದ ವ್ಯಾಖ್ಯಾನ ಸುಲಭವಾಗಬಹುದು. ಹಲವು ಮೂಲಗಳನ್ನು ಹುಡುಕುವ ಮೂಲಕ ತಮ್ಮ ಉದ್ದೇಶಕ್ಕೆ ನೆಲೆಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿರುವ ಬಂಜಗೆರೆ ಜನಪದ ರಾಮಾಯಣಗಳನ್ನು ಅಷ್ಟಾಗಿ ಪರಿಗಣಿಸಿಲ್ಲ. ಇದು ಇಲ್ಲಿನ ಕೊರತೆ ಅನಿಸಿದರೂ, ಈ ಕೃತಿ ಒಂದು ಹೊಸ ದೃಷ್ಟಿಕೋನ ನೀಡುವಲ್ಲಿ ಸಫಲವಾಗಿದೆ.ಎಂಬುದರಲ್ಲಿ ಅನುಮಾನವಿಲ್ಲ.

**ರಾಮನಿಗೆ ಸೀತೆ ಏನಾಗಬೇಕು?**

ವಾಲ್ಮೀಕಿಯು ರಾಮಾಯಣದ ಮೂಲ ಕರ್ತೃವೇ? ಎಂಬ ಪ್ರಶ್ನೆಯಿಂದ ಆರಂಭಿಸಿ ವಾಲ್ಮೀಕಿಗೂ ಮೊದಲು ಜನಸಾಮಾನ್ಯರಲ್ಲಿ ಪ್ರಚಲಿತವಿದ್ದ ವಿವಿಧ ರಾಮಾಯಣಗಳು ಹೇಗೆ ಮತ್ತು ಯಾವ ರೂಪದಲ್ಲಿದ್ದವು ಎಂಬುದನ್ನು ಉದಾಹರಣೆಗಳ ಸಮೇತ ಪ್ರಸ್ತುತಪಡಿಸುತ್ತ, ಕಡೆಗೆ ಸೀತೆಯ ಹುಟ್ಟು ಯಾವುದು ಎಂಬುದನ್ನು ಪರಿಶೋಧಿಸ ಹೊರಟು, ಇಂದಿನ ರಾಮಾಯಣದ ನಮ್ಮ ಕಲ್ಪನೆಗಳನ್ನು ತಲೆಕೆಳಗು ಮಾಡಬಲ್ಲ ದೃಷ್ಟಾಂತಗಳನ್ನು ಅತ್ಯಂತ ಗಂಭೀರವಾಗಿಯೇ ಮಂಡಿಸುವ ಡಾ|| ಆರುದ್ರ ಅವರ ಈ ಕೃತಿ ತುಂಬ ಕುತೂಹಲಕಾರಿಯಾಗಿದೆ. `ತ್ವಮೇವಾಹಂ' ಎಂಬ ಕಾವ್ಯವನ್ನು ಹಾಗೂ `ಸಮಗ್ರಾಂಧ್ರ ಸಾಹಿತ್ಯ' ಎಂಬ ಸಾಹಿತ್ಯ ಚರಿತ್ರೆಯನ್ನು ಬರೆದು

ತೆಲುಗಿನ ಪ್ರಮುಖ ಬರಹಗಾರರಲ್ಲಿ ಒಬ್ಬರೆನಿಸಿದ ಡಾ|| ಆರುದ್ರ ಅವರು 'ರಾಮನಿಗೆ ಸೀತೆ ಏನಾಗಬೇಕು?' ಎಂಬ ಈ ಅನೇಕ ಟಿಪ್ಪಣಿಗಳ ಸಂಕಲನದಲ್ಲಿ ವಿಶ್ಲೇಷಿಸಿರುವ ವಿಚಾರಗಳು, ಸತತ ಅಧ್ಯಯನದಿಂದ ರೂಪುಗೊಂಡವುಗಳು. ಸಂಸ್ಕೃತ, ತೆಲುಗು ಹಾಗೂ ಇಂಗ್ಲಿಷ್ ಭಾಷೆಗಳ ಹಲವು ಕೃತಿಗಳನ್ನೂ ಜನಪದ ಪರಂಪರೆಗಳನ್ನೂ ಭಾರತದಾಚೆಗೂ ಇರುವ ರಾಮಾಯಣದ ಪ್ರಭೇಧಗಳನ್ನೂ ಮನನಮಾಡಿ ರೂಪಿಸಿದಂಥವು. ಈ ಕಾರಣಕ್ಕಾಗಿಯೇ ಇಲ್ಲಿನ ವಿಚಾರಗಳು ಪೂರ್ವಾಗ್ರಹ ಪೀಡಿತವಾದ ಅಥವಾ ಕೇವಲ ಮೇಲೆ ಸ್ಥಿರದ ಗ್ರಹಿಕೆಯ ಬಡಬಡಿಕೆಗಳಾಗದೇ, ಭಕ್ತರನ್ನು ಒಮ್ಮೆ ನಿಲ್ಲಿಸಿ ಆಲೋಚನೆ ಹಚ್ಚುವ ಮಾಗಿದ ಮನಸ್ಸಿನ ಊಹೆಗಳೇ ಆಗಿವೆ.

**ಪ್ರಸ್ತಾಪ**

ಶ್ರೀ ವಸಂತ ಕುಮಾರ ಪೆರ್ಲ ಅವರ ಅಂಕಣ ಬರಹಗಳ ಸಂಕಲನವೇ ಪ್ರಸ್ತಾಪ. ಪುಟ್ಟಪುಟ್ಟ ವಾಕ್ಯಗಳ ಮೂಲಕ ಸುಂದರವಾಗಿ ನಿರೂಪಿಸಬಲ್ಲ ಇಲ್ಲಿನ ಬರಹಗಳು ಮೇಲ್ನೋಟದ ಅನುಭವಗಳನ್ನು ತಟ್ಟನೆ ವಿವರಿಸಿ, ಇನ್ನೂ ಬೇಕೆನಿಸುವಾಗಲೇ ಮಾಯವಾಗಿಬಿಡುತ್ತವೆ. ಬಹುಶಃ ಇದು ಅಂಕಣ ಬರಹಗಳ ಮಿತಿ ಇರಬಹುದು. ಶ್ರೀ ಪೆರ್ಲ ಅವರ ಅನುಭವಕ್ಕೆ ಬಂದ ಹತ್ತಾರು ವಿಚಾರಗಳು ಇಲ್ಲಿವೆ. 'ಕೊಡೆ' ಎಂಬ ಮಳೆಗಾಲದ ಸಂಗತಿಯಿಂದ ಹಿಡಿದು ನಾನಾ ವಸ್ತು ವಿಚಾರಗಳು ಇಲ್ಲಿ ಪ್ರಸ್ತಾಪಿಸಲ್ಪಡುತ್ತದೆ. ಪ್ರಕೃತಿ, ಪರಿಸರ, ಪ್ರವಾಸ, ಕೃಷಿ, ಜಾನಪದ, ವ್ಯಕ್ತಿಗಳು ಹೀಗೆ ಬರೆಯುವಾಗ ಲೇಖಕರು ಅವುಗಳ ಬಗೆಗೆ ತೋರುವ ಪ್ರೀತಿ ಮತ್ತು ಕಳಕಳಿ ಮೆಚ್ಚುವಂಥವು.

**ಕ್ರಾಂತಿಯ ಕಿಡಿಗಳು**

ಬುದ್ಧ, ಬಸವ, ಗಾಂಧಿ ಮತ್ತು ಅಂಬೇಡ್ಕರ್ ಇತ್ತೀಚಿನ ದಿನಗಳಲ್ಲಿ ಹೆಚ್ಚು ಚರ್ಚಿತವಾಗುತ್ತಿರುವ ವ್ಯಕ್ತಿತ್ವಗಳು. ಸ್ವಾತಂತ್ರ್ಯಾನಂತರ ನಮ್ಮಲ್ಲಿ ಬೆಳೆದ ಹಲವು ಮನೋಧರ್ಮಗಳು, ಸಂಘಟನೆಗೊಂಡ ಚಳುವಳಿಗಳು ಹಾಗೂ ರೂಪಿತಗೊಂಡ ಅಭಿಪ್ರಾಯಗಳು ಕೆಲವೊಮ್ಮೆ ಮನುಷ್ಯತ್ವಕ್ಕೆ ಪ್ರೇರಕವಾಗಿಯೂ ಕೆಲವೊಮ್ಮೆ ಮಾರಕವಾಗಿಯೂ ಪರಿಣಮಿಸಿವೆ. ಇಂಥ ಸಂದರ್ಭದಲ್ಲಿ ನಾವು ಹಿಂತಿರುಗಿ ಬುದ್ಧ, ಬಸವ, ಗಾಂಧಿ ಹಾಗೂ ಅಂಬೇಡ್ಕರ್ ಮುಂತಾದವರನ್ನು ಅನುಸರಿಸಬೇಕಾದ ಅಗತ್ಯವಿದ್ದೇ ಇದೆ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಈ ಎಲ್ಲ ಮಹಾತ್ಮರೂ ದುಡಿದದ್ದು ಮಾನವೀಯತೆಗಾಗಿ ಮತ್ತು ದುಃಖರಹಿತ ಸಮಾಜಕ್ಕಾಗಿ ಎಂಬುದನ್ನು ನೆನಪಿನಲ್ಲಿ ಇಟ್ಟುಕೊಳ್ಳದೇಹೋದರೆ, ಈ ಮಹಾತ್ಮರ ವಿಚಾರಗಳು ಕೂಡ ಒಬ್ಬೊಬ್ಬರಿಗೆ ಒಂದೊಂದು ತರಹ ಕಾಣಲು ಸಾಧ್ಯ.

ಶ್ರೀ ಹೋ. ಗ. ಮನೋಹರ್ ಅವರ 'ಕ್ರಾಂತಿಯ ಕಿಡಿಗಳು' ಪುಸ್ತಕವು ಈ ನಿಟ್ಟಿನಲ್ಲಿ ಒಂದು ಪ್ರಯತ್ನ. ಅಂಬೇಡ್ಕರ್ ಮತ್ತು ಬಸವಣ್ಣ ಇಬ್ಬರೂ ದುಡಿದದ್ದು ಜಾತ್ಯತೀತ ಸಮಾಜಕ್ಕೆ ಹಾಗೂ ಅವರಿಬ್ಬರ ವಿಚಾರಗಳಲ್ಲಿ ಎಷ್ಟೆಲ್ಲ ಸಹಮತವಿದೆ ಎಂಬುದನ್ನು ಪ್ರಸ್ತುತಪಡಿಸುವುದೇ ಈ ಪುಸ್ತಕದ ಉದ್ದೇಶ. ಧಾರ್ಮಿಕ ತುಲನೆ, ಸಾಮಾಜಿಕ ತುಲನೆ, ರಾಜಕೀಯ ತುಲನೆ ಹಾಗೂ ಶೈಕ್ಷಣಿಕ ಮತ್ತು ಸಾಹಿತ್ಯ ತುಲನೆ ಎಂಬ ಶೀರ್ಷಿಕೆಗಳ ಮೂಲಕ ಈ ಸಾಮ್ಯವನ್ನು ಗುರುತಿಸುವ ಪ್ರಯತ್ನ ಇಲ್ಲಿ ನಡೆದಿದೆ ಆದರೂ ಈ ಬರಹ ಇನ್ನಷ್ಟು ಆಲೋಚನೆ ಮತ್ತು ಆಳ ಅಧ್ಯಯನವನ್ನು ಬಯಸುತ್ತದೆ ಎಂದು ಮಾತ್ರ ಹೇಳಬಹುದು.

# ವಿಜ್ಞಾನ ಸಾಹಿತ್ಯ

*ಕೆ. ಜಿ. ವಾಸುಕಿ*
*ಸಿ. ಎಚ್. ಭಾಗ್ಯ*

ಈ ಶತಮಾನದ ಆರಂಭದಿಂದಲೂ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯದ ಅಗತ್ಯವನ್ನು ಮನಗಂಡು ಒಂದಿಲ್ಲೊಂದು ರೀತಿಯಲ್ಲಿ ಅದನ್ನು ಪೂರೈಸುವ ಯತ್ನಗಳು ನಡೆದೇ ಇವೆ. ೧೯೧೮ರ ಸುಮಾರಿಗೆ ಆರಂಭವಾದ 'ವಿಜ್ಞಾನ' ಎನ್ನುವ ವೈಜ್ಞಾನಿಕ ಪತ್ರಿಕೆ ಈ ನಿಟ್ಟಿನಲ್ಲಿ ಪ್ರಥಮ ಪ್ರಯತ್ನ ಎನ್ನಬಹುದು. ಹಲವು ಹತ್ತು ಬಗೆಯ ಆಸಕ್ತಿಯ ವಿಷಯಗಳನ್ನು ಸರಳವಾದ ಭಾಷೆಯಲ್ಲಿ ಬರೆಯಿಸಿ ಪ್ರಕಟಿಸಿದ ಕೀರ್ತಿ ಈ ಪತ್ರಿಕಗೆ ಸಲ್ಲುತ್ತದೆ. ಆ ನಂತರದಲ್ಲಿ ಡಾ. ಶಿವರಾಮ ಕಾರಂತರಂತಹ ಧೀಮಂತ ಸಾಹಿತಿಗಳು ಕನ್ನಡದಲ್ಲಿ ವೈಜ್ಞಾನಿಕ ಬರಹಗಳ ಕೊರತೆಯನ್ನು ಮನಗಂಡು ಮಕ್ಕಳಿಗೆ, ಹಿರಿಯರಿಗೆ ಹೀಗೆ ನಾನಾ ವಯೋಮಾನದವರಿಗೆ ಸುಲಭವಾಗಿ ದಕ್ಕುವಂತಹ ಹಲವು ಪುಸ್ತಕಗಳನ್ನು ಕನ್ನಡದಲ್ಲಿ ಹೊರತಂದಿರುವುದು ಗಮನಾರ್ಹ. ಆದರೆ ಈ ಶತಮಾನದ ಆರಂಭದ ಕಥೆ, ಕಾದಂಬರಿ, ಕಾವ್ಯ ಮೊದಲಾದ ಸಾಹಿತ್ಯ ಪ್ರಕಾರಗಳಿಗೆ ಹೋಲಿಸಿದಾಗ ಈ ಹೊತ್ತಿನ ಸಾಹಿತ್ಯ ಹೇಗೆ ಹಲವು ಪ್ರಯೋಗಗಳನ್ನು ಕಂಡು ವೈವಿಧ್ಯಮಯವಾದ ಬೆಳವಣಿಗೆಯನ್ನು ಪಡೆದಿದೆಯೋ ಅದೇ ಮಟ್ಟದಲ್ಲಿ ವಿಜ್ಞಾನ ಸಾಹಿತ್ಯ ಪ್ರಗತಿಯನ್ನು ಹೊಂದಿಲ್ಲದಿರುವುದು ಆಶ್ಚರ್ಯಕರ. ಅಂದರೆ ಈ ಶತಮಾನದ ಆರಂಭದ ವೈಜ್ಞಾನಿಕ ಸಾಹಿತ್ಯದಲ್ಲಿನ ಪ್ರಯತ್ನ- ಪ್ರಯೋಗಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡಾಗ, ಈ ದಿನದವರೆಗೆ ನಾವು ಕ್ರಮಿಸಿರುವ ದೂರ ಅತ್ಯಲ್ಪ ಎಂದೇ ಹೇಳಬಹುದು. ಇದಕ್ಕೆ ಕಾರಣವೆಂದರೆ, ನಮ್ಮಲ್ಲಿ ವಿಜ್ಞಾನಿಗಳೇ ಸೃಷ್ಟಿಸುವ ವೈಜ್ಞಾನಿಕ ಸಾಹಿತ್ಯ ತೀರಾ ಕಡಿಮೆ. ಸಾಹಿತಿಗಳಿಂದ ಸೃಷ್ಟಿಯಾದ ವೈಜ್ಞಾನಿಕ ಸಾಹಿತ್ಯದ ಪ್ರಮಾಣವೇ ಅಧಿಕವಾಗಿರುವುದು.

ತೇಜಸ್ವಿಯಂತಹ ಗಂಭೀರ ಸಾಹಿತಿಗಳು ತಮ್ಮ ಆಸಕ್ತಿಯ ಫಲವಾಗಿ ಕನ್ನಡದಲ್ಲಿ ಸೃಷ್ಟಿಸಿರುವ ವಿಜ್ಞಾನ ಸಾಹಿತ್ಯ, ಸಾಹಿತ್ಯ - ವಿಜ್ಞಾನಗಳ ನಡುವಣ ಗೆರೆಯನ್ನು ಅಳಿಸಿಹಾಕುವಷ್ಟು ಆಸಕ್ತಿದಾಯಕವಾಗಿದೆ. ಹಾರುವ ಹಕ್ಕಿಯಿಂದ ಹಿಡಿದು, ಹಾರುವ ತಟ್ಟೆಗಳವರೆಗಿನ ತೇಜಸ್ವಿಯವರ ಸಾಹಿತ್ಯಸೃಷ್ಟಿ ಬೆರಗು ಹುಟ್ಟಿಸುವಂಥದ್ದು, ವಿಜ್ಞಾನಕ್ಕೆ ಅಂಟಿದ 'ಒಣ' ಎನ್ನುವ ಅಪಖ್ಯಾತಿಯನ್ನು ತೇಜಸ್ವಿ ಬಹಳ ಸಮರ್ಥವಾಗಿ ಅಳಿಸಿಹಾಕಿರುವುದು ಗಮನಾರ್ಹ. ವಿಜ್ಞಾನದಲ್ಲಿ ರಸಸೃಷ್ಟಿ ಮಾಡುವ ಈ ಕಲೆಯನ್ನು ಕನ್ನಡಕ್ಕೆ ಮೊದಲು ಕಲಿಸಿದವರು ಡಾ. ಬಿ. ಜಿ. ಎಲ್. ಸ್ವಾಮಿ.

ಕನ್ನಡದಲ್ಲಿ ಈಹೊತ್ತು ವೈಜ್ಞಾನಿಕ ಬರಹಗಳ ಕೊರತೆ ಇದೆ ಎಂದು ಹೇಳಲಾಗದಿದ್ದರೂ 'ಆರೋಗ್ಯ' 'ಯೋಗ'ದಂತಹ ವಿಚಾರಗಳಿಗೆ ಸಂಬಂಧಿಸಿದ ಲೇಖನಗಳು ಪುಸ್ತಕಗಳೇ ಅಪಾರ. ನಮ್ಮ ನಿಯತಕಾಲಿಕೆಗಳಲ್ಲಂತೂ ಈ ವಿಷಯಗಳದ್ದೆ ಕಾರುಬಾರು. ವೈಜ್ಞಾನಿಕ ಪತ್ರಿಕೆಗಳಲ್ಲಿ ವಿಭಿನ್ನ ಆಸಕ್ತಿಯ ಲೇಖನಗಳು ಬಂದಿರುವುದು ಸಮಾಧಾನಕರ. ೯೪ರಲ್ಲಿ ಬಂದಿರುವ ವಿಜ್ಞಾನ ಸಾಹಿತ್ಯದ ಪುಸ್ತಕಗಳಲ್ಲೂ ಜನಪ್ರಿಯ ಪುಸ್ತಕಗಳ ಗುಂಪಿಗೆ ಸೇರಿಸಬಹುದಾದಂಥವೇ ಹೆಚ್ಚು. ವಿಜ್ಞಾನಿಸಾಹಿತಿಗಳಿಗಿಂತ ಸಾಹಿತಿ ವಿಜ್ಞಾನಿಗಳ ಬರಹಗಳೇ ಅಧಿಕ. ಆದ್ದರಿಂದ ಸಹಜವಾಗಿ ಸಂಶೋಧನಾತ್ಮಕ ಎನ್ನಬಹುದಾದವುಗಳ ಸಂಖ್ಯೆ ಕಡಿಮೆ. ಜಿ. ಟಿ. ನಾರಾಯಣ್‌ರಾವ್, ಜೆ. ಆರ್. ಲಕ್ಷ್ಮಣರಾವ್, ನಾಗೇಶ್ ಹೆಗಡೆಯಂತಹ ಲೇಖಕರು ಬಹುಮಟ್ಟಿಗೆ ಈ ಕೊರತೆಯನ್ನು ನೀಗಿಸಿರುವರಾದರೂ, ಅನುವಾದದ ನೆರವಿಲ್ಲದೆ ವಿಜ್ಞಾನ ಸಾಹಿತ್ಯ ಕನ್ನಡದಲ್ಲೇ ಸೃಷ್ಟಿಯಾಗುವುದು ಹೆಚ್ಚು ಆರೋಗ್ಯಕರ.

ಕನ್ನಡದಲ್ಲಿ ಕಾಶಿಯವರಿಂದ ಆರಂಭವಾದ ವೈದ್ಯಕೀಯ ಸಾಹಿತ್ಯ ಈಹೊತ್ತು ಉಚ್ಛ್ರಾಯ ಸ್ಥಿತಿಯಲ್ಲಿದೆ. ಡಾ. ಅನುಪಮಾ ನಿರಂಜನರಿಂದ ಮುಂದುವರಿದುಕೊಂಡು ಬಂದ ಪರಂಪರೆಯನ್ನು ಈ ಸಂದರ್ಭದಲ್ಲಿ ಡಾ. ಸಿ. ಆರ್. ಚಂದ್ರಶೇಖರ್, ಡಾ. ಸಿ. ಅನ್ನಪೂರ್ಣಮ್ಮ, ಡಾ. ಚಂದ್ರಪ್ಪಗೌಡ, ಡಾ. ಪಿ. ಎಸ್. ಶಂಕರ್, ಡಾ. ನಾಗಲೋಟಿಮಠ ಮೊದಲಾದ ವೈದ್ಯರು ನಡೆಸಿಕೊಂಡು ಹೋಗುತ್ತಿದ್ದಾರೆ. ಹಲವಾರು ನಿಯತಕಾಲಿಕೆಗಳಲ್ಲಿ ಸಾಮಾನ್ಯ ಆರೋಗ್ಯಕ್ಕೆ ಸಂಬಂಧಿಸಿದಂತೆ ಮಾಹಿತಿಪೂರ್ಣವಾಗಿ ಬರೆಯುವುದರಲ್ಲಿ ಡಾ. ಸಿ. ಅನ್ನಪೂರ್ಣಮ್ಮನವರ ಹೆಸರು ಪ್ರಧಾನ. 'ಸ್ವಾಸ್ಥ್ಯ ಶೃತಿ' ಪುಸ್ತಕ ಸಾಮಾನ್ಯ ಆರೋಗ್ಯಕ್ಕೆ ಸಂಬಂಧಿಸಿದಂತೆಯೇ ಮಾಹಿತಿ ನೀಡುವ ಉದ್ದೇಶ ಹೊಂದಿದ್ದರೂ, ಅನ್ನಪೂರ್ಣಮ್ಮನವರು ಸ್ತ್ರೀರೋಗ ಹಾಗೂ ಪ್ರಸೂತಿ ತಜ್ಞೆಯಾದ ಕಾರಣ ಆ ಕಡೆಗೇ ವಾಲುವುದು ಸಹಜವಾಗಿದೆ. 'ಸ್ವಾಸ್ಥ ಶೃತಿ'ಯಲ್ಲಿ 'ದೇಹದೇಗಲದ ಭದ್ರತಾ ಪಡೆಗಳು' 'ಪೌಷ್ಟಿಕ ಆಹಾರ' ಹೀಗೆ ಲೇಖನಗಳು ಆರಂಭವಾದರೂ ಹಠಾತ್ತನೆ ಅವು 'ತಾಯ್ತನ' 'ಸ್ತನ್ಯಪಾನ'ಗಳತ್ತ ಹೊರಳಿಬಿಟ್ಟಿವೆ. ಸಾಮಾನ್ಯ ಆರೋಗ್ಯಕ್ಕೆ ಸಂಬಂಧಿಸಿದಂತೆ ಈ ಲೇಖನಗಳನ್ನು ಸೇರಿಸಿದೆ ಪ್ರತ್ಯೇಕ ಪುಸ್ತಿಕೆಯಾಗಿ ಪ್ರಕಟಿಸಿದ್ದರೆ ಚೆನ್ನಾಗಿರುತ್ತಿತ್ತೇನೋ. ''ಹಲ್ಲುಜ್ಜು'' ಎನ್ನುವ ಸರಳ ಶಬ್ದ ಕನ್ನಡದಲ್ಲಿ ಇರುವಾಗ ಡಾ. ಅನ್ನಪೂರ್ಣಮ್ಮನವರು ''ದಂತಧವನ'' ಎನ್ನುವ ಅನಗತ್ಯ ಕ್ಲಿಷ್ಟ ಸಂಸ್ಕೃತ ಶಬ್ದಗಳನ್ನು ಸೇರಿಸಿ ಬರೆಯುವುದನ್ನು ಕೈಬಿಡಬಹುದು. ಸ್ತ್ರೀ ಸಮಸ್ಯೆಗೆ ಸಂಬಂಧಿಸಿದ ಇತರ ಲೇಖನಗಳಲ್ಲಿ ಡಾ. ಅನುಪಮಾ ಅವರ ಛಾಯೆಯನ್ನು ಗುರುತಿಸಬಹುದಾದರೂ, ಡಾ. ಅನ್ನಪೂರ್ಣಮ್ಮ ಶಕ್ತವಾಗಿ ಕನ್ನಡದಲ್ಲಿ ಬರೆಯಬಲ್ಲರು.

ಮಹಾಬಲೇಶ್ವರ ಕಾಟ್ರಹಳ್ಳಿಯವರ ''ನಿಗೂಢ ನಿಸರ್ಗ'' ಕೃತಿಯು ಹೆಸರೇ ಸೂಚಿಸುವಂತೆ ವಿಶ್ವದ ನಿಗೂಢತೆಯನ್ನು ಕುರಿತ ಜಿಜ್ಞಾಸೆಯನ್ನು ಹೊಂದಿದೆ. ವಿಶ್ವಸೃಷ್ಟಿಯ ನಿಗೂಢವನ್ನು ಕುರಿತ ಲೇಖನದಿಂದ ಆರಂಭವಾಗುವ ಈ ಪುಸ್ತಕ

ವಿಶ್ವದಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚು ನಿಗೂಢವಾದ ಮನಸ್ಸಿನ ವಿಶ್ಲೇಷಣೆಯೊಂದಿಗೆ ಮುಕ್ತಾಯವಾಗಿದೆ. ವಿಜ್ಞಾನದ ಆರಂಭಿಕ ವಿದ್ಯಾರ್ಥಿಗಳಿಗೆ ಹೆಚ್ಚು ಉಪಯುಕ್ತವಾಗಬಲ್ಲ ಈ ಪುಸ್ತಕವು ಈಗಾಗಲೇ ಬಂದಿರುವ ಈ ಬಗೆಯ ಪುಸ್ತಕಗಳ ಸಾಲಿನಲ್ಲಿ ನಿಲ್ಲಬಹುದು. ''ಹಳ್ಳಿಯ ಜಲಶಿಲ್ಪಿಗಳು'' ಎನ್ನುವ ಲೇಖನ ಕಡ್ಡಿ ಹಿಡಿದು ಜಲದ ಸ್ಥಾನ ಗುರುತಿಸುವ ಹಳ್ಳಿಯ ಅನಕ್ಷರಸ್ಥ 'ಜಿಯಾಲಜಿಸ್ಟರ್' ಬಗ್ಗೆ ವಸ್ತುನಿಷ್ಠವಾಗಿ ಬರೆಯುವ ಒಂದು ಒಳ್ಳೆಯ ಲೇಖನವಾಗಿತ್ತು. ನೀರಾವರಿಗಾಗಿ ಹಾತೊರೆಯುವ ರೈತ ನೀರುಬಾರದೆ ಸಾಲದಲ್ಲಿ ಮುಳುಗುವ ಪಡಿಪಾಟಲನ್ನು ಸಮರ್ಥವಾಗಿ ಲೇಖಕರು ಚಿತ್ರಿಸಿದ್ದಾರೆ. ಕನ್ನಡ ಪುಸ್ತಕಗಳು ದುಬಾರಿ ಎಂಬ ಕೂಗಿಗೆ ಇಂಬುಕೊಡುವಂತೆ ಈ ಪುಸ್ತಕಕ್ಕೆ ೩೦.೦೦ ರೂಪಾಯಿ ನಿಗದಿ ಪಡಿಸಿರುವುದು ತೀರಾ ಹೆಚ್ಚೆನಿಸುತ್ತದೆ.

ಹಲವು ವಿಜ್ಞಾನ ಪತ್ರಿಕೆಗಳಲ್ಲಿ ವಿಭಿನ್ನ ಆಸಕ್ತಿಯ ಲೇಖನಗಳನ್ನು ಪ್ರಕಟಿಸಿರುವ ಕೈವಾರ ಗೋಪಿನಾಥರ ''ಸಂಶೋಧನೆಯ ಜಗತ್ತು'' ವಿದ್ಯಾರ್ಥಿಗಳಿಗೆ ಅದರಲ್ಲೂ ಕ್ವಿಜ್‌ನಲ್ಲಿ ಪಾಲ್ಗೊಳ್ಳುವ ವಿದ್ಯಾರ್ಥಿಗಳಿಗೆ ಹೇಳಿ ಬರೆಯಿಸಿದಂತಿರುವ ಪುಸ್ತಕ. ಥಾಮಸ್ ಆಲ್ವ ಎಡಿಸನ್‌ನಿಂದ ಹಿಡಿದು ಬಾಹ್ಯಾಕಾಶದ ಅನ್ವೇಷಣೆಯವರೆಗೆ ಹಲವು ಬಗೆಯ ಚಿತ್ರ ವಿಚಿತ್ರ ಸಂಶೋಧನೆ, ಸಂಶೋಧಕರ ಕುರಿತ ಬರಹದ ತುಣುಕುಗಳು ವಿಜ್ಞಾನಬರಹದ ಅಪ್ಪಟಶೈಲಿಯಲ್ಲಿವೆ. ಕುತೂಹಲದಿಂದ ಕೈಗೆತ್ತಿಕೊಂಡರೆ ಕೊನೆಯವರೆಗೂ ಧಾರಾಳವಾಗಿ ಓದಬಹುದಾದ ಈ ಪುಸ್ತಕದ ಒಂದೇ ಕೊರತೆಯೆಂದರೆ, ಸಣ್ಣ ಅಕ್ಷರಗಳು. ದಪ್ಪ, ಸ್ಫುಟ ಅಕ್ಷರಗಳು ಕಿರಿಯ ಓದುಗರನ್ನು ಆಕರ್ಷಿಸುವಷ್ಟು ಸಣ್ಣ ಅಕ್ಕಿಕಾಳಿನ ಅಕ್ಷರಗಳು ಆಕರ್ಷಿಸಲಾರವು.

ವೃತ್ತಿಯಿಂದ ವೈದ್ಯರಾದ ಡಾ. ಕೆ. ಎಚ್. ಕೃಷ್ಣಮೂರ್ತಿಯವರ ''ದೃಷ್ಟಿ ಪರಿಚಯ'' ನ್ಯಾಷನಲ್ ಬುಕ್ ಟ್ರಸ್ಟ್‌ನ ಜನಪ್ರಿಯ ವಿಜ್ಞಾನ ಮಾಲೆಯಡಿ ಪ್ರಕಟವಾಗಿರುವ ಒಂದು ಉಪಯುಕ್ತ ಪುಸ್ತಕ. ಕಣ್ಣಿನ ಸಮಗ್ರ ಪರಿಚಯ ಮಾಡಿಕೊಡುವ ಈ ಪುಸ್ತಕ ಸಚಿತ್ರವೂ ಆಗಿರುವ ಕಾರಣ ಸುಲಭಗ್ರಾಹ್ಯ. ಕೆಲವೊಂದು ಪಾರಿಭಾಷಿಕ ಪದಗಳನ್ನು ಮನನ ಮಾಡಿಕೊಂಡುಬಿಟ್ಟರೆ ಈ ಪುಸ್ತಕದ ಗ್ರಹಿಕೆ ಸುಲಭ. ಆಪ್ಥಮಾಲಜಿ ವಿದ್ಯಾರ್ಥಿಗಳಿಂದ ಹಿಡಿದು ಕಣ್ಣಿನ ಬಗ್ಗೆ ಆಸಕ್ತಿ ಇರುವ ಯಾರಿಗೇ ಆದರೂ ಈ ಪುಸ್ತಕ ಉಪಯುಕ್ತ.

ಇಂಗ್ಲಿಷಿನಲ್ಲಿ ಎಮ್. ಆಯ್. ಎಚ್. ಫಾರೂಕಿ ರಚಿಸಿರುವ ''Plants of Quron'' ನ ಕನ್ನಡದ ಅನುವಾದವೇ ಮುಲ್ಲಾ ಮೆಹಬೂಬರ ''ಕುರ ಆನ್‌ನ ಸಸ್ಯಗಳು - ಒಂದು ವೈಜ್ಞಾನಿಕ ಸಮೀಕ್ಷೆ ''. ಧಾರ್ಮಿಕ ಕೃತಿಯೊಂದರಲ್ಲಿರುವ ವೈಜ್ಞಾನಿಕ ಮಾಹಿತಿಗಳನ್ನು ಹೆಕ್ಕಿ ತೆಗೆದಿರುವ ಈ ಪುಸ್ತಕವು, ಹಲವು ಬಗೆಯ ಸಸ್ಯಗಳ ಹಾಗೂ ಫಲಗಳ ವೈಜ್ಞಾನಿಕ ವಿಶ್ಲೇಷಣೆಯನ್ನು ಅಚ್ಚುಕಟ್ಟಾಗಿ ಮಾಡಿದೆ. ಧಾರ್ಮಿಕ ಆಸಕ್ತಿಯಿಂದ, ವೈಜ್ಞಾನಿಕ ಆಸಕ್ತಿಯಿಂದ ಓದಬಹುದಾದ ಪುಸ್ತಕ ಇದು.

ಬಹಳಷ್ಟು ಪತ್ರಿಕೆಗಳಿಗೆ ನಿಯತವಾಗಿ ಬರೆಯುವ ಪ್ರಮುಖ ವೈದ್ಯಕೀಯ ಸಾಹಿತಿಗಳಲ್ಲೊಬ್ಬರಾದ ಡಾ. ಸಿ. ಆರ್. ಚಂದ್ರಶೇಖರರ ``ನರಮಂಡಲದ ರೋಗಗಳು'' ಸಾಮಾಜಿಕ ಕಾಳಜಿಯಿಂದ ಬರೆದಿರುವ ವೈದ್ಯಕೀಯ ಕೃತಿ. ಮಾತುಮಾತಿಗೂ ದೆವ್ವ, ಭೂತ, ಮಂತ್ರ, ತಂತ್ರವೆಂದು ದೈಹಿಕ ಹಾಗೂ ಮಾನಸಿಕ ಬೇನೆಗಳಿಗೆ ಅಭೌತಿಕ ಕಾರಣಗಳನ್ನು ಕೊಟ್ಟು, ಮೂಢನಂಬಿಕೆಗಳನ್ನು ಪೋಷಿಸುವ ಜನರಿಗೆ ಉತ್ತಮ ಮಾರ್ಗದರ್ಶಕವಾಗಬಲ್ಲ ಕೃತಿಯಿದು. ಚಂದ್ರಶೇಖರರು ರಾಶಿಯವರಂತೆ ಕಥಾನಕದ ಮೂಲಕ ರೋಗ ಪರಿಚಯವನ್ನು ಮಾಡಿಕೊಡುವುದರಿಂದ, ಇದು ಒಣ ವೈದ್ಯಕೀಯ ಸಿದ್ಧಾಂತದ ಪುಸ್ತಕವಾಗದೆ ತನ್ನ ಓದಿಸಿಕೊಳ್ಳುವ ಗುಣದಿಂದಲೇ ಗಮನ ಸೆಳೆಯುತ್ತದೆ. ಲಕ್ವ, ಮೂರ್ಛೆ, ಪಾರ್ಕಿನ್‌ಸನ್ ಹಾಗೂ ಇತರ ನರಬೇನೆಗಳ ಕಾರ್ಯ ಕಾರಣಗಳನ್ನು ಸರಳವಾಗಿ ವಿವರಿಸುವ ಈ ಪುಸ್ತಕವು, ತಲೆಯಬಗ್ಗೆ ತಲೆಕೆಡಿಸಿಕೊಳ್ಳುವ ಯಾರಿಗಾದರೂ ಉಪಯುಕ್ತ ಮಾಹಿತಿ ನೀಡಬಲ್ಲದಾಗಿದೆ.

ನಮ್ಮ ಮತ್ತೊಬ್ಬ ಮಹತ್ವದ ವೈದ್ಯಕೀಯ ಬರಹಗಾರರಾದ ಡಾ. ಎಚ್. ಡಿ. ಚಂದ್ರಪ್ಪಗೌಡರು ಬರೆದಿರುವ ಪುಸ್ತಕ `ಅಪೆಂಡಿಸೈಟಿಸ್'. ಅವರೇ ಶೀರ್ಷಿಕೆಯಲ್ಲಿ ತಿಳಿಸಿರುವಂತೆ ಈ ರೋಗದ ಪೂರ್ವೋತ್ತರ ಕಥೆಯನ್ನು ಬಿಚ್ಚಿಡುತ್ತದೆ. ಗಾಂಧಿ, ವಿಕ್ಟೋರಿಯ ರಾಜಕುಮಾರಿಯರನ್ನು ಕಾಡಿಸಿ ಕಂಗೆಡಿಸಿದ ಈ ವಿಶ್ವವ್ಯಾಪಿ ಕಾಯಿಲೆಯ ಬಗ್ಗೆ ಸಮಗ್ರ ಮಾಹಿತಿ ಈ ಪುಸ್ತಿಕೆಯಲ್ಲಿದೆ. ಒಬ್ಬ ಶಸ್ತ್ರಚಿಕಿತ್ಸಕನಿಂದ ಹಿಡಿದು ಆಸಕ್ತಿಯಿರುವ ಸಾಮಾನ್ಯನವರೆಗೆ ಯಾರೇ ಆದರೂ ಒಂದೇ ಬೈಠಕ್ಕಿನಲ್ಲಿ ಓದಿ ಮುಗಿಸಬಹುದಾದ ಈ ಪುಸ್ತಕದಲ್ಲಿ, ಕೃತಿಕಾರರು ಪಾರಿಭಾಷಿಕ ಪದಗಳನ್ನು ಪಾರಿಭಾಷಿಕ ಶಬ್ದಕೋಶದಿಂದ ನೇರವಾಗಿ ತೆಗೆದುಕೊಂಡಂತೆ ಕಾಣುತ್ತದೆ. ಪಾರಿಭಾಷಿಕ ಪದಗಳಿಗೆ ಒಂದಿಷ್ಟು ಹೊಂದಿಕೊಂಡರೆ ಇದನ್ನು ಓದುವುದರಲ್ಲಿ ತೊಡಕೇನು ಇಲ್ಲ.

ಕಳೆದ ವರ್ಷ ಲಾತೂರ್, ಕಿಲಾರಿಗಳಲ್ಲಿ ಸಹಸ್ರ ಸಹಸ್ರ ಜನರನ್ನು ನುಂಗಿದ, ಅದಕ್ಕೂ ಮೊದಲು ಉತ್ತರಕಾಶಿಯಲ್ಲಿ ಜನರನ್ನು ಥರಗುಟ್ಟಿಸಿದ ಈಚೆಗೆ, ರಷ್ಯಾವನ್ನು ಅಲುಗಾಡಿಸಿರುವ ಭೂಕಂಪದ ಬಗ್ಗೆ ಜನ ಇತ್ತೀಚೆಗೆ ತುಂಬ ತಲೆಕೆಡಿಸಿಕೊಳ್ಳಲು ತೊಡಗಿದ್ದಾರೆ. ಲಾತೂರ್‌ನಲ್ಲಿ ಭೂಮಿ ನಡುಗಿದ ಹೊತ್ತು ಬೆಂಗಳೂರಿನಲ್ಲಿ ಇದ್ದಕ್ಕಿದ್ದಂತೆ ಅಪಾರ್ಟ್‌ಮೆಂಟ್‌ಗಳಿಗೆ ಬೇಡಿಕೆ ಕಡಿಮೆಯಾಗಿಬಿಟ್ಟಿತ್ತು. ಇದರಿಂದ ಭೂಕಂಪ ಜನರ ಮನಸ್ಸಿನ ಮೇಲೆ ಎಂಥ ವ್ಯವಹಾರಿಕ ಒತ್ತಡ ನಿರ್ಮಾಣ ಮಾಡಿತ್ತೆಂಬುದನ್ನು ಊಹಿಸಿಕೊಳ್ಳಬಹುದು. ಈ ಬಗ್ಗೆ ಬಹುಪಾಲು ಎಲ್ಲಾ ನಿಯತಕಾಲಿಕೆಗಳಲ್ಲಿ ಬಹಳಷ್ಟು ಬರಹಗಳು ಬಂದಿದ್ದರೂ ಟಿ. ಆರ್. ಅನಂತರಾಮುರವರ ``ಭೂಕಂಪಗಳು'' ಈ ಬಗ್ಗೆ ಸಮಗ್ರ ಮಾಹಿತಿಗಳನ್ನು ಒಳಗೊಂಡಿರುವ ಒಂದು ಹೊತ್ತಿಗೆ. ಇದು ಒಂದು ನೈಸರ್ಗಿಕ ವಿಕೋಪವೇ ಆಗಿದ್ದರೂ ಅಪಾಯಕಾರಿಯಾಗಿ ನಗರಗಳು ಬೆಳೆಯುತ್ತಿರುವುದು ಹೇಗೆ ಭೂಕಂಪಗಳನ್ನು ಪ್ರೇರೇಪಿಸಬಲ್ಲದು ಎಂಬ ವಿಚಾರದ ಚರ್ಚೆಯೂ ಇದೆ. ಸೂಕ್ತ ಅಂಕಿ ಅಂಶಗಳಿಂದ

ರಚಿಸಿರುವ ಈ ಪುಸ್ತಕ ವಿಶೇಷವಾಗಿ ವಿದ್ಯಾರ್ಥಿಗಳಿಗೆ ಹೆಚ್ಚು ಉಪಯುಕ್ತ. ಕನ್ನಡ ಪುಸ್ತಕಗಳನ್ನು ಕೊಂಡು ಓದುವವರ ಸಂಖ್ಯೆ ಕಡಿಮೆ ಇದ್ದಾಗ 'ಭೂಕಂಪ' ದಂತಹ ಸೀಮಿತ ಆಸಕ್ತಿಯುಳ್ಳವರ ಪುಸ್ತಕಕ್ಕೆ ನಲವತ್ತೈದು ರೂಪಾಯಿ ಬೆಲೆ ಇಡುವುದು, ಕೊಳ್ಳುವವರಿಗೆ ಕಂಪನವನ್ನು ಉಂಟುಮಾಡಿದೆ?

'ಮ್ಯಾಗ್ಸೆಸೆ' ಪ್ರಶಸ್ತಿ ಪಡೆದ ಜಪಾನಿನ 'ಕೃಷಿಋಷಿ' ಮಸನೊಬಾ ಪುಕುವೊಕಾ ತರಹ ಸಹಜಕೃಷಿ ನಡೆಸುತ್ತಿರುವ ಜಿ. ಶಿವನಂಜಯ್ಯನವರು ಸಹಜಕೃಷಿ ಎಂಬ ಉಪಯುಕ್ತ ಪುಸ್ತಕವನ್ನು ಬರೆದಿದ್ದಾರೆ. ( ಪ್ರಕಾಶಕರು : ಓರಿಯೆಂಟ್ ಲಾಂಗ್‌ಮನ್ ಲಿಮಿಟೆಡ್, ಬೆಂಗಳೂರು) ಈ ಪುಸ್ತಕದಲ್ಲಿ ಸರಳ ಬೇಸಾಯ ಕ್ರಮದ ಬಗ್ಗೆ ಉಪಯುಕ್ತ ಮಾಹಿತಿ ಸಹ ಇದೆ ಹಾಗೂ ಜಪಾನಿನ ಪುಕುವೊಕಾ ಅವರ ಸಂದರ್ಶನವು ಇದೆ. ಈ ಪುಸ್ತಕದಲ್ಲಿ ಸಾವಯವ ಬೇಸಾಯಕ್ರಮ ಹಾಗೂ ರಾಸಾಯನಿಕ ಬೇಸಾಯಕ್ರಮದ ಬಗ್ಗೆ ಬಹಳ ಒಳ್ಳೆಯ ವಿವರಣೆ ಇದೆ. ಸಾಂಪ್ರದಾಯಿಕ ಬೇಸಾಯ ಕ್ರಮವು ಸ್ಥಳೀಯ ಮೂಲ ತಳಿಗಳನ್ನು ಆಧರಿಸಿ ನೆಲ, ಜಲದ ಲಭ್ಯತೆಯ ತೆಕ್ಕೆಯಲ್ಲಿ ಜನರ ಆಹಾರಕ್ರಮದ ಅಗತ್ಯಗಳಿಗೆ ಅನುಗುಣವಾಗಿ ಈ ನೆಲದಲ್ಲಿಯೇ ಅವಿಷ್ಕಾರಗೊಂಡ ವಿಧಾನ. ಆದರೆ ರಾಸಾಯನಿಕ ಬೇಸಾಯ ಕ್ರಮವು ಈ ಮೇಲಿನ ಯಾವ ಸಂಗತಿಗಳನ್ನು ಗಣನೆಗೆ ತೆಗೆದು ಕೊಳ್ಳದೆ, ಬಹುರಾಷ್ಟ್ರೀಯ ಕಂಪನಿಗಳು ನಮ್ಮ ಹೆಗಲ ಮೇಲೆ ಹೇರಿದ ಪಶ್ಚಿಮದಿಂದ ಆಮದಾದ ಕೃತಕ, ಜೀವಮಾರಕಕ್ರಮ ಎಂಬುದನ್ನು ಉದಾಹರಣೆ ಸಹಿತ ವಿವರಿಸಿದ್ದಾರೆ. ಸಂಕರ ತಳಿಗಳ ಪೇಟೆಂಟ್, ಇಂದಿನ ರೈತನ ಪರಿಸ್ಥಿತಿ , ಅಸಹಾಯಕತೆ ಎಲ್ಲದರ ಬಗ್ಗೆ ಮಾಹಿತಿಯನ್ನು ಲೇಖಕರು ಇದರಲ್ಲಿ ನೀಡಿದ್ದಾರೆ. ಸ್ವಂತ ಸಹಜ ಕೃಷಿಕರಾದ ಶಿವನಂಜಯ್ಯನವರ ಪುಸ್ತಕ ಸಹಜ ಕೃಷಿಯನ್ನು ಪರಿಚಯಿಸುವಲ್ಲಿ ಒಂದು ಒಳ್ಳೆಯ ಪ್ರಯತ್ನ ಹಾಗೂ ಪ್ರಸ್ತುತ.

'ಮಂಗಳ' ಎಂಬ ವಾರಪತ್ರಿಕೆಯಲ್ಲಿ ಹಲವಾರು ರೋಗ ಸಮಸ್ಯೆಗಳಿಗೆ ಉತ್ತರ ರೂಪವಾಗಿ ಮೂಡಿಬಂದ ಲೇಖನಗಳ ಮಾಲೆಯನ್ನು ಒಟ್ಟುಗೂಡಿಸಿ, 'ಆರೋಗ್ಯ ಜೀವನ' ಎಂಬ ಪುಸ್ತಕವನ್ನು ಡಾ. ಸಿ. ಅನ್ನಪೂರ್ಣಮ್ಮ ಅವರು ಪ್ರಕಟಿಸಿದ್ದಾರೆ. ಪ್ರಶ್ನೆ ಉತ್ತರದ ರೂಪದಲ್ಲಿರುವ ಈ ಪುಸ್ತಕ ಬಾಣಂತಿಯರ ಮೂಲವ್ಯಾಧಿ, ಸೀಳುತುಟಿ, ಸ್ತನಗಡ್ಡೆ, ಕಣ್ಣಿನ ತೊಂದರೆ, ಗರ್ಭಕೋಶದ ಕ್ಯಾನ್ಸರ್, ಹಿಮೋಫಿಲಿಯಾ ಅಂಡಾಶಯದ ಇನ್ನೂ ಮುಂತಾದ ಅನೇಕ ಈ ರೀತಿಯ ಪ್ರಶ್ನೆಗಳಿಗೆ ಉತ್ತರರೂಪದಲ್ಲಿ ಸಮಂಜಸವಾಗಿ ವಿವರಿಸಿದ್ದಾರೆ.

'ಇಸ್ರೇಲ್ ಕೃಷಿದರ್ಶನ' ಎಂಬ ಪುಸ್ತಕವನ್ನು ವಿಲಾಸರಾವ್ ಶಂಕರಪ್ಪ ಶಾಹಿ ಅವರು ಬರೆದಿದ್ದಾರೆ. ಶ್ರೀಯುತರು ಸುಮಾರು ೧೫ ದಿನಗಳ ಕಾಲ ಇಸ್ರೇಲಿನಲ್ಲಿ ಪ್ರವಾಸಮಾಡಿ ಈ ಪುಸ್ತಕವನ್ನು ಬರೆದಿದ್ದಾರೆ. ೪ಲ ಪುಟಗಳ ಈ ಕಿರುಹೊತ್ತಿಗೆಯಲ್ಲಿ 'ಇಸ್ರೇಲ್ ದರ್ಶನ, ಇಸ್ರೇಲ್ ಬಗೆಗಿನ ಅಂಕಿ ಅಂಶಗಳು , ಇತಿಹಾಸ ಹಾಗೂ ಕೃಷಿ ಬಗ್ಗೆ ಪರಿಚಯ ಮಾಡಿದ್ದಾರೆ. ಇಸ್ರೇಲ್ ರೈತರ ಕೃಷಿಪದ್ಧತಿಯಲ್ಲಿ ನೀರಿನ ಮಿತ ಬಳಕೆ ಇವೆಲ್ಲವನ್ನು ಪರಿಚಯಿಸಿದ್ದಾರೆ.

'ಯೋಗಸಂಜೀವಿನಿ' ಈ ಪುಸ್ತಕದಲ್ಲಿ ಯೋಗಾಸನಗಳು ಪ್ರಾಣಾಯಾಮ, ಧ್ಯಾನ, ಸೂರ್ಯ ನಮಸ್ಕಾರ ಹಾಗೂ ಇನ್ನಿತರ ದೇಹ ಕ್ರಿಯೆಗಳ ಬಗ್ಗೆ ಮಾಹಿತಿ ಇದೆ. ಈ ಪುಸ್ತಕದ ಲೇಖಕರು ಬಿ. ಎಸ್. ಸುರೇಶ್ ಕುಮಾರ್. ೪೦.೦೦ ರೂ ಬೆಲೆಯ ಈ ಪುಸ್ತಕದಲ್ಲಿ ಯೋಗಾಸನದ ಬಗ್ಗೆ ಮಾಹಿತಿ ಇದೆ. ಸಂಯುಕ್ತ ಕರ್ನಾಟಕ, ಕಸ್ತೂರಿ, ಕನ್ನಡಮ್ಮ, ತರಂಗ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳನ್ನು ಆರೋಗ್ಯ ಸಮಸ್ಯೆಗಳೆಂದು ಪುಸ್ತಕರೂಪದಲ್ಲಿ ಡಾ. ವಿಲಾಸ್ ನಾಯಕವಾಡಿ ಅವರು ಹೊರತಂದಿದ್ದಾರೆ. ಈ ಪುಸ್ತಕದಲ್ಲಿ ಶಾಲಾ ಪೂರ್ವಮಕ್ಕಳಲ್ಲಿ ಪುಷ್ಟಿಹೀನತೆ ರಕ್ತಹೀನತೆಯಿಂದ ಹಿಡಿದು ಭಾರತದಲ್ಲಿ ಪ್ರಾಥಮಿಕ ಆರೋಗ್ಯ ಸೇವೆಯವರಿಗೆ ಲೇಖನಗಳಿವೆ. ಪುಸ್ತಕ ರೂಪದಲ್ಲಿ ಇವುಗಳನ್ನು ಹೊರತರುವಾಗ ಲೇಖಕರು ಎಡಿಟಿಂಗ್ ಬಗ್ಗೆ ಗಮನಹರಿಸಿದ್ದರೆ ಚೆನ್ನಾಗಿತ್ತು.

ವಿಜ್ಞಾನ ಪುಸ್ತಕಗಳ ಬೆಲೆ ವಿಫಲವಾಗಿಯೇ ಇದ್ದರೂ ಒಂದೇ ವಿಷಯಗಳ ಬಗ್ಗೆ ಹಲವು ಪುಸ್ತಕಗಳು ಬಂದಿರುವುದರಿಂದ ಒಂದೊಂದು ಪ್ರಮುಖವೆನ್ನಬಹುದಾದ ಪುಸ್ತಕಗಳನ್ನು ಮಾತ್ರ ಪರಾಮರ್ಶಿಸುವುದು ಸಾಧ್ಯವಾಗಿದೆ. ಅಲ್ಲದೆ ಕೆಲವೊಂದು ಪ್ರಮುಖ ಪುಸ್ತಕಗಳು ಹಲವಾರು ಕಾರಣಕ್ಕೆ ಇಲ್ಲಿ ಕೈಬಿಟ್ಟು ಹೋಗಿರುವ ಸಾಧ್ಯತೆಗಳಿವೆ.

# ಅಭಿನಂದನ -ಸಂಸ್ಮರಣ ಗ್ರಂಥಗಳು

*ಸಿ. ಆರ್. ಗೋವಿಂದರಾಜು*

ವ್ಯಕ್ತಿಗಳ ಸಂಘ-ಸಂಸ್ಥೆಗಳ ಸಾರ್ವಜನಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ಗಮನದಲ್ಲಿಟ್ಟುಕೊಂಡು ಅಭಿನಂದನ ಸಂಸ್ಮರಣ ಗ್ರಂಥಗಳನ್ನು ಪ್ರಕಟಿಸಲಾಗುತ್ತದೆ. ಪ್ರತಿ ವರುಷವೂ ಇಂಥ ಸಾಹಿತ್ಯ ಪ್ರಕಾರಕ್ಕೆ ಅನೇಕಾನೇಕ ಕೃತಿಗಳು ಸೇರುತ್ತಲೇ ಇರುತ್ತವೆ. ಆದರೆ ಅವುಗಳ ಪ್ರಮಾಣ ವರುಷದಿಂದ ವರುಷಕ್ಕೆ ಹೆಚ್ಚೂ -ಕಡಿಮೆ ಆಗುತ್ತಿರುತ್ತದೆ. ಅಂತೆಯೇ ಕಳೆದ ವರುಷಕ್ಕೆ ಹೋಲಿಕೆ ಮಾಡಿದರೆ ಈ ಬಾರಿ ಅವುಗಳ ಪ್ರಮಾಣ ಕಡಿಮೆಯೆ.

**ಸುದರ್ಶನ**

ಎಪ್ಪತ್ತರ ತುಂಬು ಜೀವನ ನಡೆಸುತ್ತಿರುವವರು ವಿಧ್ವಾನ್ ಶ್ರೀ ಪೆರ್ಲ ಕೃಷ್ಣಭಟ್ಟರು. ವಿಭಿನ್ನ ನೆಲೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಶ್ರದ್ಧೆ, ಶಿಸ್ತು ಹಾಗೂ ಪ್ರಯತ್ನಶೀಲತೆಗಳನ್ನು ಮೇಳವಿಸಿಕೊಂಡ ಇಂಥ ವ್ಯಕ್ತಿತ್ವಕ್ಕೆ ಸಹೃದಯ ಸ್ನೇಹಿತರು, ಅಭಿಮಾನಿಗಳು ಸಲ್ಲಿಸಿರುವ ಅಭಿನಂದನ ಗ್ರಂಥವೇ 'ಸುದರ್ಶನ'. ಇದರ ಪ್ರಧಾನ ಸಂಪಾದಕ ಶ್ರೀ ಜಿ. ಶಂಕರ ಭಟ್ ಅವರು.

'ಸುದರ್ಶನ' ವು ವ್ಯಕ್ತಿದರ್ಶನ, ಕಲಾದರ್ಶನ ಹಾಗೂ ವೈವಿಧ್ಯದರ್ಶನಗಳೆಂಬ ಮೂರು ಭಾಗಗಳನ್ನೊಳಗೊಂಡ ಲೇಖನಗಳ ಸಂಪುಟ. ಕಾಸರಗೋಡಿನ ಪೆರ್ಲಗ್ರಾಮದ ಕೃಷ್ಣಭಟ್ಟರು ಯಕ್ಷಗಾನಕ್ಕಾಗಿಯೇ ಪರಿಪೂರ್ಣವಾಗಿ ತೊಡಗಿಸಿಕೊಂಡವರು. ಅದರಲ್ಲೂ ಮುಖ್ಯವಾಗಿ ಯಕ್ಷಗಾನದ ಅರ್ಥಗಾರಿಕೆಗೆ . ಇವರಿಗೆ ಅರ್ಪಿಸಿರುವ ಈ ಗ್ರಂಥಕ್ಕೆ ಖ್ಯಾತ ವಿದ್ವಾಂಸರು ಒಳ್ಳೆಯ ಲೇಖನಗಳನ್ನು ಬರೆದುಕೊಟ್ಟು ಗೌರವಿಸಿದ್ದಾರೆ.

ಈ ಕೃತಿಯ 'ವ್ಯಕ್ತಿದರ್ಶನ'ದ ಭಾಗದಲ್ಲಿ ಮೂವತ್ತಕ್ಕೂ ಹೆಚ್ಚಿನ ಲೇಖನಗಳಿವೆ. ಇವೆಲ್ಲವೂ ಕೃಷ್ಣಭಟ್ಟರ ವ್ಯಕ್ತಿತ್ವದ ದರ್ಶನ ಮಾಡಿಸುವಂಥವು. ಬಹಳ ಸನಿಹದಿಂದ ಬಲ್ಲ ಸ್ನೇಹಿತರು, ಅಭಿಮಾನಿಗಳು ಇವರನ್ನು ಸಹಜವಾಗಿ ಚಿತ್ರಿಸಿದ್ದಾರೆ. ಶ್ರೀ. ಎಂ. ಪ್ರಭಾಕರ ಜೋಶಿಯವರ ಲೇಖನ ಹಾಗೂ ಸಂದರ್ಶನಗಳು ಪೆರ್ಲರನ್ನು ಅರಿಯಲು ಅನುವು ಮಾಡಿಕೊಟ್ಟಿವೆ. ಇಲ್ಲಿ ಜೋಶಿ ಅವರ ಪ್ರಶ್ನೆಗಳಿಗೆ ಪೆರ್ಲ ಅವರು ಸಮಂಜಸ ಉತ್ತರಗಳನ್ನು ನೀಡಿದ್ದಾರೆ. ಪೆರ್ಲರು ತಮ್ಮ ಒಟ್ಟು ಬದುಕಿನ ಸಿಂಹಾವಲೋಕನವನ್ನು ''ಒಟ್ಟು ಬದುಕಿನಲ್ಲಿ ಕಷ್ಟ - ಸುಖ, ನಿರಾಸೆ, ತೃಪ್ತಿ, ವಿಲಾಸ

-ವಿರಕ್ತಿಗಳು ಬೆರೆತುಬಂದಿವೆಯಾದರೂ ಕಷ್ಟ ಕಾರ್ಪಣ್ಯಗಳಿಗಿಂತ ಸುಖ ಸಂತೋಷಗಳ ಪಾಲು ಹೆಚ್ಚಿಗೆ ಎಂದು ನನ್ನ ಎಣಿಕೆ.'' ಎನ್ನುವುದರ ಮೂಲಕ ಸಮೀಕ್ಷಿಸಿಕೊಂಡಿದ್ದಾರೆ. ಭಟ್ಟರ ಶ್ರೀಮತಿ ಹಾಗೂ ತಂಗಿ ಅವರುಗಳನ್ನೊಳಗೊಂಡಂತೆ ಹಲವು ಆತ್ಮೀಯರು ಇಲ್ಲಿ ತಮ್ಮ ಅನಿಸಿಕೆಗಳನ್ನು ಮುಕ್ತವಾಗಿ ಹಂಚಿಕೊಂಡಿದ್ದಾರೆ.

ಈ ಸಂಪುಟದ ಎರಡನೆಯ ಭಾಗವಾಗಿ 'ಕಲಾದರ್ಶನ' ರೂಪುಗೊಂಡಿದೆ. ಇಲ್ಲಿ ಯಕ್ಷಗಾನ ಕಲೆಗೆ ಸಂಬಂಧಿಸಿದಂತೆ ವಿದ್ವಾಂಸರ ಮೌಲಿಕವಾದ ಚಿಂತನೆಯನ್ನು ನೋಡಬಹುದು. ಯಕ್ಷಗಾನ, ತಾಳಮದ್ದಳೆಗೆ ಸಂಬಂಧಪಟ್ಟ ಹಾಗೆ ಹದಿನೈದು ಲೇಖನಗಳನ್ನೊಗೊಂಡ ಈ ಭಾಗ ನಿಜಕ್ಕೂ ಕಲೆಯ ದರ್ಶನ ಮೂಡಿಸುತ್ತದೆ. ಇಲ್ಲಿ ಕಲೆಗಾಗಿ ಚಿಂತನೆಗೈದ ಚಿಂತಕರು ಹಲವು ನಿಟ್ಟಿನಲ್ಲಿ ಇತಿ - ಮಿತಿಗಳನ್ನೂ ಸಹ ಗುರುತಿಸುತ್ತಾರೆ. ಉದಾಹರಣೆಗೆ ಶ್ರೀ ಅಮೃತ ಸೋಮೇಶ್ವರ ಅವರು- ''ಯಕ್ಷಗಾನ ಕಲೆಯಲ್ಲಿ ವೈಚಾರಿಕ ಸೌಂದರ್ಯವನ್ನು ಇನ್ನಷ್ಟು ಪ್ರಮಾಣದಲ್ಲಿ ಹೆಚ್ಚಿಸುವ ಶ್ರದ್ಧಾಪೂರ್ಣ ಪ್ರಯತ್ನಗಳು ನಡೆಯಬೇಕಾಗಿವೆ'' ಎನ್ನುತ್ತಾ ಕಲೆ ಮತ್ತು ಕಲಾವಿದನ ವಿಕಾಸದ ಕಡೆಗೂ ಗಮನ ಸೆಳೆದಿದ್ದಾರೆ. ತಾಳ ಮದ್ದಳೆಯನ್ನು ಕುರಿತಂತೆ ತುದಿಯಡ್ಕ ವಿಷ್ಣ್ವಯ್ಯ ಅವರು ಉತ್ತಮ ಒಳನೋಟಗಳನ್ನು ನೀಡುವುದರ ಜೊತೆ ಜೊತೆಗೆ, ಅದರ ಹಿಂದಿನ ಹಾಗೂ ಇಂದಿನ ಸ್ಥಿತಿಗತಿಗಳನ್ನು ಪ್ರಸ್ತಾಪಿಸಿರುವುದು ಗಮನಾರ್ಹ. ಇಂದು ತಾಳಮದ್ದಳೆ ಎದುರಿಸುತ್ತಿರುವ ಸಮಸ್ಯೆಗಳ ಕಡೆಗೆ ಗಮನ ಸೆಳೆಯಲಾಗಿದೆ. ತಮ್ಮ ಮಾತುಗಾರಿಕೆಯ ಮೂಲಕವೇ ಶ್ರೋತೃಗಳನ್ನು ತಲ್ಲೀನರನ್ನಾಗಿಸಿ ಮನರಂಜಿಸುವ ಈ ತಾಳಮದ್ದಳೆಯ ಹಲವು ಸನ್ನಿವೇಶಗಳನ್ನು ಶೇಣಿ ಗೋಪಾಲ ಕೃಷ್ಣ ಭಟ್ ಅವರು ಉದಾಹರಿಸಿದ್ದಾರೆ.

ಪಡುವಲಪಾಯಕ್ಕೆ ಸೇರಿದ ತೆಂಕುತಿಟ್ಟು ಯಕ್ಷಗಾನ ಪ್ರದರ್ಶನವನ್ನು ಗಮನದಲ್ಲಿಟ್ಟುಕೊಂಡು, ಪ್ರದರ್ಶನ ವಿಶ್ಲೇಷಣೆಯ ತಾತ್ವಿಕ ನೆಲೆಗಳನ್ನು ರೂಪಿಸಲು ಡಾ. ಪುರುಷೋತ್ತಮ ಬಿಳಿಮಲೆ ತಮ್ಮ ಲೇಖನದಲ್ಲಿ ಯತ್ನಿಸಿದ್ದಾರೆ. ಯಕ್ಷಗಾನವು ಪ್ರದರ್ಶನ ಸಿದ್ಧಾಂತದಿಂದ ಹೇಗೆ ಪ್ರಭಾವಿತವಾಗಿದೆ ಎಂಬುದರ ಬಗ್ಗೆ ಇವರ ಟಿಪ್ಪಣಿಗಳು ಕೆಲವು ಒಳನೋಟಗಳನ್ನು ನೀಡುತ್ತವೆ. ವಾಣಿಜ್ಯೀಕರಣದ ಜಾಲದಲ್ಲಿ ಸಿಲುಕಿರುವ ಯಕ್ಷಗಾನ ಮತ್ತು ತುಳುತಿಟ್ಟಿನ ಬಗ್ಗೆ ಡಾ. ಚಂದ್ರಶೇಖರ ದಾಮ್ಲೆ ಹಾಗೂ ಜನ ಜೀವನದ ಮೇಲೆ ಯಕ್ಷಗಾನದ ಪ್ರಭಾವ ಎಂಥದ್ದು ಎಂಬುದರ ಬಗ್ಗೆ ಶ್ರೀ ಎಚ್. ಶ್ರೀಧರ್ ಹಂದೆ ಅವರುಗಳು ನಡೆಸಿರುವ ವೈಚಾರಿಕ ಚಿಂತನೆ ತೀರ ಪ್ರಸ್ತುತವಾಗಿದೆ.

'ಸುದರ್ಶನ'ದ ಮೂರನೆಯ ಭಾಗವೇ 'ವೈವಿಧ್ಯದರ್ಶನ'. ಇಲ್ಲಿ ವಿವಿಧ ವಿಷಯುಗಳನ್ನೊಳಗೊಂಡ ಹನ್ನೆರಡು ಲೇಖನಗಳನ್ನು ನೋಡಬಹುದು. ಇವು ಸಾಹಿತ್ಯ, ವಿಮರ್ಶೆ, ಭಾಷೆ, ವ್ಯಾಕರಣ, ಸಂಸ್ಕೃತಿ ಮೊದಲಾದ ವಿಷಯುಗಳಿಗೆ ಸಂಬಂಧಪಟ್ಟವೆ. ಅಲ್ಲದೆ ಕಾಸರಗೋಡಿನ ಕನ್ನಡ ಹವ್ಯಾಸಿ ರಂಗಭೂಮಿ ಬಗೆಗಿನ ಪ್ರೊ|| ವೇಣುಗೋಪಾಲ ಹಾಗೂ ತಮಿಳು ನಾಡಿನ ಕನ್ನಡ ಚಟುವಟಿಕೆಗಳ ಬಗೆಗಿನ ಶ್ರೀ ಕೃಷ್ಣಭಟ್ ಅರ್ತಿಕಜೆ ಅವರುಗಳ ಲೇಖನಗಳು ಸದ್ಯದ ಸ್ಥಿತಿಗತಿಗಳನ್ನು

ಪರಿಚಯಿಸುತ್ತವೆ. ಪೆರ್ಲರ ಬಗ್ಗೆ ಸ್ಥೂಲ ಪರಿಚಯ ಮಾಡಿಕೊಟ್ಟಿದ್ದಾರೆ ಶ್ರೀ ಎಸ್. ಈಶ್ವರ್ ಭಟ್ ಅವರು. ಒಟ್ಟಾರೆ ಈ ಭಾಗ ವೈವಿಧ್ಯದಿಂದ ಕೂಡಿದೆ.

**ರಂಗಾಭಿನಂದನ**

ವಿದ್ವಾನ್ ಶ್ರೀ ಎನ್. ರಂಗನಾಥ ಶರ್ಮಾ ಅವರು ವ್ಯಾಕರಣಶಾಸ್ತ್ರದ ವಿದ್ವಾಂಸರು. ಶ್ರೀಯುತರು ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಸರಿಸಮಾನವಾದ ಪ್ರಬುದ್ಧತೆಯನ್ನು ಸಂಪಾದಿಸಿದ್ದಾರೆ. ಶರ್ಮಾ ಅವರಿಗೆ ಇದೀಗ ಎಪ್ಪತ್ತೈದು ವರ್ಷಗಳು. ಶರ್ಮಾರ ವಿದ್ವತ್ ಸಾಧನೆಯನ್ನು ಗಮನದಲ್ಲಿಟ್ಟುಕೊಂಡು ಅವರ ಶಿಷ್ಯ -ಮಿತ್ರ -ಅಭಿಮಾನಿವಲಯ 'ರಂಗಾಭಿನಂದನ'ದ ಮುಖೇನ ಗೌರವಿಸಿದೆ. ಈ ಗ್ರಂಥವನ್ನು ಸಂಸ್ಕೃತ ಹಾಗೂ ಕನ್ನಡ ಲೇಖನಗಳನ್ವಯ ಎರಡು ಪ್ರತ್ಯೇಕ ಕೃತಿಗಳಾಗಿ ಪ್ರಕಟಿಸಲಾಗಿದೆ.

ಕಾವ್ಯಮೀಮಾಂಸೆ, ವ್ಯಾಕರಣ, ಶ್ರೀ ಮದ್ರಾಮರಾಯಣಗಳಲ್ಲಿ ಇವರಿಗೆ ಹೆಚ್ಚಿನ ಆಸಕ್ತಿ. ಆದ್ದರಿಂದಲೇ ಈ ಮೂರೂ ಕ್ಷೇತ್ರಗಳಿಗೆ ಸಂಬಂಧಪಟ್ಟ ಲೇಖನ ಹಾಗೂ ಪ್ರಬಂಧಗಳನ್ನು ಸಂಪಾದಕ ಮಂಡಲಿ ಇಲ್ಲಿ ಸಂಪಾದಿಸಿಕೊಟ್ಟಿದೆ. ಅಭಿನಂದನಾ ಸಮಿತಿಯ ಅಧ್ಯಕ್ಷರಾದ ಮಾಜಿ ನ್ಯಾಯಮೂರ್ತಿ ಶ್ರೀ ಇ. ಎಸ್. ವೆಂಕಟರಾಮಯ್ಯ ಅವರು, ಶರ್ಮಾರ ವ್ಯಕ್ತಿತ್ವವನ್ನು ತಮ್ಮ 'ಸಮರ್ಪಣೆ' ಯಲ್ಲಿ ಸ್ಥೂಲವಾಗಿ ಪರಿಚಯಿಸಿದ್ದಾರೆ. ಇವರ ''ವಿನಯ, ಸೌಜನ್ಯ, ಸಹೃದಯತೆಗಳು ಅವರ ಪಾಂಡಿತ್ಯಕ್ಕೆ ಭೂಷಣಗಳಾಗಿವೆ'' - ಅನ್ನುವ ಮಾತು ಶರ್ಮಾರಿಗೆ ಒಪ್ಪುವಂಥವು.

ಈ ಕೃತಿಯಲ್ಲಿ ಒಟ್ಟು ಇಪ್ಪತ್ತಾರು ಲೇಖನಗಳಿವೆ. ಅಲ್ಲದೆ ಶರ್ಮಾರ ವ್ಯಕ್ತಿತ್ವವನ್ನು ಚಿತ್ರಿಸುವ ಏಳು ಲೇಖನಗಳನ್ನೂ ಸಹ ನೋಡಬಹುದು. ಇವುಗಳಲ್ಲಿ ಡಿ. ವಿ. ಗುಂಡಪ್ಪನವರದೂ ಒಂದು. ಮಗಳಾದ ಎನ್. ಆರ್. ಜಯಶ್ರೀ ಹಾಗೂ ಡಿ. ವಿ. ರಾವ್ ಅವರುಗಳು ನೀಡಿರುವ ಶರ್ಮಾರ ವ್ಯಕ್ತಿತ್ವದ ಚಿತ್ರಣ ಸುಂದರವಾಗಿ ಮೂಡಿಬಂದಿದೆ. ಶ್ರೀ ಡಿ. ವಿ. ರಾವ್ ಅವರು ಶರ್ಮಾರ ಮೂವತ್ತೈದು ವರುಷಗಳ ಅಧ್ಯಾಪಕ ವೃತ್ತಿಯಲ್ಲಿನ ಅನುಭವ ಹಿನ್ನಲೆಯಲ್ಲಿ ಕೇಳಿರುವ ಪ್ರಶ್ನೆಗಳು ಪುಸ್ತಕವಾಗಿವೆ. ಶೈಕ್ಷಣಿಕ ವ್ಯವಸ್ಥೆ -ಪದ್ಧತಿ, ಪಠ್ಯಕ್ರಮಗಳ ಬಗೆಗಿನ ಶರ್ಮಾರ ಉತ್ತರಗಳು ಅಷ್ಟೇ ಸಮಂಜಸವಾದುವು.

'ರಂಗಾಭಿನಂದನ'ದ ಲೇಖನಗಳನ್ನು ಕುರಿತು ಹೇಳುವುದಾದರೆ, ನಾಡಿನ ಖ್ಯಾತ ವಿದ್ವಾಂಸರ, ಕವಿಗಳ, ಚಿಂತಕರ ಲೇಖನಗಳು ಗಮನಸೆಳೆಯುತ್ತವೆ. ಡಾ. ಕೆ. ಕೃಷ್ಣಮೂರ್ತಿ ಅವರು 'ಧ್ವನಿ ವಿರೋಧಿ ಪ್ರಸ್ಥಾನಗಳು - ಒಂದು ಸಮೀಕ್ಷೆ' ಎಂಬ ತಮ್ಮ ಲೇಖನದಲ್ಲಿ ''.... ಧ್ವನಿ ವಿರೋಧ ವಾದಗಳನ್ನ ಕೂಲಂಕುಷವಾಗಿ ಪರಿಶೀಲಿಸಿ ನಿರಾಶೆ ಮಾಡುವವರೆಗೆ 'ಧ್ವನಿ'ಯ ನಿಜಸ್ವರೂಪ ತಿಳಿಯುವುದೇ ಕಡುಕಷ್ಟ'' ಎಂದಿರುವುದು ಧ್ವನಿಕಾರನೊಬ್ಬನ ಮೌಲಿಕ ಚಿಂತನೆಗೆ ಪ್ರಾಶಸ್ತ್ಯದ ಅಗತ್ಯತೆಯ ಬಗ್ಗೆ ಹೇಳುವಂಥದ್ದು. ಅಂತೆಯೇ ಟಿ. ಕೇಶವ ಭಟ್ಟ, ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ,

ಪ್ರೊ|| ಸಾ. ಕೃ. ರಾಮಚಂದ್ರರಾವ್, ಪು. ತಿ. ನರಸಿಂಹಾಚಾರ್ ಮೊದಲಾದವರ ಲೇಖನಗಳೂ ಸಹ ಗಮನಾರ್ಹವಾದುವು.

ರಂಗನಾಥ ಶರ್ಮಾರಿಗೆ ವಾಲ್ಮೀಕಿ ರಾಮಾಯಣವೆಂದರೆ ಬಲು ಪ್ರೀತಿ. ಬಹುಶಃ ಆದಕ್ಕಾಗಿಯೇ ಈ ಸಂಪುಟದಲ್ಲಿ ರಾಮಾಯಣವನ್ನು ಕುರಿತಂತೆ ಐದು ಲೇಖನಗಳಿರುವುದು ಅನ್ನಿಸುತ್ತದೆ. ಇವುಗಳಲ್ಲಿ ಡಾ. ಪು. ತಿ. ನ ಅವರು ತಮ್ಮ 'ಪಟ್ಟಾಭಿರಾಮಧ್ಯಾನ'ದ ಮೂಲಕ ವಿಶ್ಲೇಷಿಸಿದ್ದಾರೆ. ಇವರು ತಮ್ಮ ಆಶಯವಾದಂಥ ''ಪ್ರೀತಿವರ್ಧಕವಾದ ಗುಣಗಳನ್ನು ಬೆಳೆಸಿಕೊಂಡು ಸ್ವತಂತ್ರ ರಾಷ್ಟ್ರದ ರಾಷ್ಟ್ರಕರಾಗಿ ಮೆರೆಯುವ '' ಇಂಗಿತವನ್ನು ಅಭಿವ್ಯಕ್ತಿಸಿದ್ದಾರೆ. ಒಟ್ಟಿನಲ್ಲಿ ಶರ್ಮಾರ ಸಹೃದಯತೆಯ ಪ್ರತೀಕ ಈ ಸಂಪುಟ. ಡಿ. ವಿ. ಜಿ. ಅವರು ಶರ್ಮಾರನ್ನು ಕುರಿತು - ''ಸಾಹಿತ್ಯದಲ್ಲಿ ಅವರು ಸಹೃದಯರಾಗಿ ಶೋಧನಶೀಲರಾಗಿ ಕಾವ್ಯಮರ್ಮವನ್ನು ಕಂಡು ತೋರಿಸಬಲ್ಲವರು. ಅವರು ಸದಾನಿಷ್ಠರು, ಸರಳರು''- ಎಂದಿರುವ ಮಾತುಗಳು ನಿಜಕ್ಕೂ ಅವರ ವ್ಯಕ್ತಿತ್ವಕ್ಕೆ ಒಪ್ಪುವಂಥವು.

**ರಂಗ ತರಂಗ**

ರಾಯಚೂರು ಜಿಲ್ಲೆಯ ಯಲಬುರ್ಗಿ ತಾಲೂಕಿನ 'ರಂಗಣ್ಣ ಮಾಸ್ತರ್' ಎಂದೇ ಖ್ಯಾತರಾದ ಶ್ರೀ ರಂ. ರಾ. ನಿಡಗುಂದಿ ಅವರ ಅಭಿನಂದನಾ ಗ್ರಂಥವೇ 'ರಂಗ - ತರಂಗ'. ಡಾ. ಸಿದ್ಧಯ್ಯ ಪುರಾಣಿಕರು ಪ್ರಧಾನ ಸಂಪಾದಕರಾಗಿರುವ ಈ ಸಂಪುಟಕ್ಕೆ ಮಾಸ್ತರರ ಅಭಿಮಾನಿ -ಶಿಷ್ಯ ವೃಂದದ ಪ್ರಯತ್ನವೇ ಕಾರಣ. ಅಕ್ಕರೆಯಿಂದ ಸಲ್ಲಿಸಿರುವ ಈ ಗ್ರಂಥದಲ್ಲಿ ಹೈದ್ರಾಬಾದ್ -ಕರ್ನಾಟಕದ ವಿದ್ವಾಂಸರ ಲೇಖನಗಳಿವೆ. ಯಲಬುರ್ಗಿ ತಾಲೂಕು ಕುಲಕನೂರಿನ ವಿದ್ಯಾನಂದ ಗುರುಕುಲ ಶಾಲೆಯಿಂದ ಹೊರಬಂದ ಹಲವು ವಿದ್ಯಾರ್ಥಿಗಳು ರಂಗಣ್ಣನವರ ಶಿಷ್ಯರು. ಮಾಸ್ತರರನ್ನು ಹಾಗೂ ಅವರ ಊರನ್ನು ಹತ್ತಿರದಿಂದ ಕಂಡಿರುವ ಇವರು ಲೇಖನಗಳನ್ನು ಬರೆದುಕೊಟ್ಟು ಸನ್ಮಾನಿಸಿದ್ದಾರೆ. ಗುರುವಿನ ಬಗ್ಗೆ ಇರುವಂಥ ಭಕ್ತಿ - ಭಾವವನ್ನು ತಮ್ಮ ಕಾವ್ಯದ ಮೂಲಕ ಕೆಲವು ಶಿಷ್ಯರು ಅಭಿವ್ಯಕ್ತಿಸಿದ್ದಾರೆ. ಇವೆಲ್ಲದರಿಂದ ನಿಡಗುಂದಿ ಅವರ ವ್ಯಕ್ತಿತ್ವದ ಚಿತ್ರಣ ಹೊರಹೊಮ್ಮಿದೆ.

ನಿಡಗುಂದಿ ಅವರ ಸಹೋದ್ಯೋಗಿಗಳು, ಮಿತ್ರರು, ಮಾಸ್ತರರ ಜೀವನ, ವೈಚಾರಿಕ ಚಿಂತನೆ, ಶಿಸ್ತು - ಸ್ನೇಹ, ಸರಳತೆ, ಸಹಜತೆಗಳ ಕಡೆಗೆ ಗಮನ ಸೆಳೆಯುತ್ತಾರೆ. ಅವರ ಬದುಕು ಹಾಗೂ ಸಾಹಿತ್ಯಕ್ಕೆ ಸಂಬಂಧಿಸಿದಂತೆ ರಂಗಣ್ಣನವರೆ ಖುದ್ದು ಬರೆದ ಸಂಕ್ಷಿಪ್ತ ಜೀವನ ಚರಿತ್ರೆ ಈ ಕೃತಿಯಲ್ಲಿರುವುದು ಒಂದು ವಿಶೇಷ. ಅಲ್ಲದೆ ಚೆನ್ನವೀರ ಕಣವಿ, ವಾಮನ ಬೇಂದ್ರೆ, ಪ್ರೊ. ವಸಂತ ಕುಷ್ಟಗಿ, ಡಾ. ಕೆ ರಾಘವೇಂದ್ರರಾವ್, ಎನ್ನೆ. ಶ್ರೀವಿರೂಪಾಕ್ಷಪ್ಪ ಅಬ್ಬಿಗೇರಿ. ಡಾ. ಮಂದಾಕಿನಿ ರಾಯಚೂರ. ಲಕ್ಷ್ಮಣ ಆಳವಂಡಿ, ಕಾರ್ನಾಡ ಪ್ರೊ. ಆರ್. ಜಿ. ಕುಲಕರ್ಣಿ ಅವರುಗಳು ರಂಗಣ್ಣನವರ ಸಾಹಿತ್ಯವನ್ನು ವಿಮರ್ಶಿಸಿ ವಿಶ್ಲೇಷಿಸಿದ್ದಾರೆ. ಸಮಾಜ, ನಾಡು, ದೇಶ, ಜನ, ಶಿಕ್ಷಣ ಮೊದಲಾದ

ವಿಚಾರಗಳ ಬಗ್ಗೆ ಚಿಂತಿಸಿದ ನಿಡಗುಂದಿ ಮಾಸ್ತರರ ಚಿಂತನೆ ಚೆನ್ನಾಗಿ ಅಭಿವ್ಯಕ್ತವಾಗಿದೆ. ಇವರು ಕವಿಯಾಗಿ, ಅನುವಾದಕರಾಗಿ ತಮ್ಮ ಛಾಪನ್ನು ಒತ್ತಿರುವುದರ ಬಗ್ಗೆ ಇಲ್ಲಿ ಮೂರು ಕವಿತೆಗಳನ್ನು ಉದಾಹರಿಸಲಾಗಿದೆ. ಚೈನಾದೊಡನೆ ಯುದ್ಧ ನಡೆಯುವಾಗ ದೇಶ ಪ್ರೇಮಿಗಳನ್ನು ಹುರಿದುಂಬಿಸಲು ಬರೆದ 'ಏಳಿ ಏದ್ದೇಳಿ' ವೀರಗಾಥೆ ಹುರುಪು ತುಂಬಿದ ಜನಪ್ರಿಯ ನೀಳ್ಗವಿತೆ. ಮಹಿಳೆಯ ವರದಕ್ಷಿಣೆಯ ಶೋಷಣೆಗೆ ಸಂಬಂಧಿಸಿದ 'ಅಹಹ..... ವರದಕ್ಷಿಣೆ' ಆರ್ಥಿಕ ಪ್ರಗತಿಯ ದೌರ್ಬಲ್ಯಗಳನ್ನು ಕುರಿತ ' ಓಹೊಹೊ .... ಪ್ರಗತಿ' ದೇಶದ ಹೀನ ಸ್ಥಿತಿಗತಿಗಳನ್ನು ಅರಿತು ಗಾಂಧೀಜಿಯವರಿಗೆ ಮೊರೆ ಇಡುವ ' ತಾತಾ ಬರ್ರೆ' ಮೊದಲಾದ ಕೃತಿಗಳು ಮಾಸ್ತರರ ಸಾಹಿತ್ಯಸಾಕ್ಷಿಯಾಗಿ ನಿಲ್ಲುವಂಥವು. ಆರು ಭಾಗಗಳನ್ನೊಳಗೊಂಡ ಈ ಕೃತಿ ಮಾಸ್ತರರ ಅರವತ್ತೈದನೆಯ ವರುಷದ ಹುಟ್ಟುಹಬ್ಬಕ್ಕೆ ಶಿಷ್ಯರ ಅಕ್ಕರೆಯ ಕಾಣಿಕೆ.

**ಸಾಶಿಮ ಬದುಕು ಬರಹ**

ಶ್ರೀ ಆರ್. ಬಸವರಾಜ್ ಅವರ ಈ ಕೃತಿಯು ಡಾ. ಸಾ. ಶಿ. ಮರುಳಯ್ಯನವರ ಸಮಗ್ರ ಸಾಹಿತ್ಯವನ್ನು ಸ್ಥೂಲವಾಗಿ ಪರಿಚಯಿಸುವ ಪ್ರಯತ್ನವಾಗಿದೆ. ಮರುಳಯ್ಯನವರ ಅರವತ್ತಮೂರನೆಯ ವರುಷದ ಹುಟ್ಟುಹಬ್ಬದ ಸಂದರ್ಭದಲ್ಲಿ ಈ ಕೃತಿ ಬಿಡುಗಡೆ ಆಗಿದೆ. ಡಾ. ಹಾ. ಮಾ. ನಾಯಕ ಅವರು ತಮ್ಮ 'ಕೆಳನುಡಿ'ಯಲ್ಲಿ ಡಾ. ಸಾ. ಶಿ. ಮರುಳಯ್ಯನವರೊಂದಿಗಿನ ತಮ್ಮ ಜೀವನ ಸಂಬಂಧದ ನೆನಪುಗಳನ್ನು ಮೆಲಕುಹಾಕಿದ್ದಾರೆ. ನಾಯಕರು ''ಡಾ. ಸಾ. ಶಿ. ಮರುಳಯ್ಯನವರು ಎಲೆ ಮರೆಯ ಕಾಯಿ. ಚಂಡೆಮದ್ದಳೆ ಬಾರಿಸದೆಯೆ ತಮ್ಮ ಪಾಲಿನ ಕೆಲಸವನ್ನು ಮಾಡುತ್ತಿದ್ದಾರೆ!'' ಎಂದಿದ್ದಾರೆ.

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಮರುಳಯ್ಯನವರು ತಮ್ಮ ಪ್ರೌಢಿಮೆಯನ್ನು ತೋರಿಸಿದ್ದಾರೆ. ಕಾವ್ಯ, ಕತೆ, ಕಾದಂಬರಿ, ನಾಟಕ, ಜೀವನ ಚರಿತ್ರೆ, ವ್ಯಕ್ತಿಚಿತ್ರ, ಸಂಶೋಧನೆ, ಸಂಪಾದನೆ, ವಿಮರ್ಶೆ, ಲೇಖನ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿನ ಅವರ ಕೃತಿಗಳು ವಿಪುಲವಾಗಿವೆ. ಈ ಕೃತಿಯಲ್ಲಿ ಶ್ರೀಯುತರ ಸಾಹಿತ್ಯ ಹಾಗೂ ಜೀವನಕ್ಕೆ ಸಂಬಂಧಿಸಿದಂತೆ ಒಟ್ಟು ಹದಿನಾರು ಅಧ್ಯಾಯಗಳನ್ನು ನೋಡಬಹುದು. ಬಸವರಾಜ್ ಅವರು ಮರುಳಯ್ಯನವರ ಎಲ್ಲ ಕೃತಿಗಳ ಪರಿಚಯಾತ್ಮಕ ಸಮೀಕ್ಷೆ ನಡೆಸಿದ್ದಾರೆ.

**ಅರ್ಪಣ**

ಕರ್ನಾಟಕದ ಪ್ರಮುಖ ವೀರಶೈವ ಮಠಗಳಲ್ಲಿ ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠವೂ ಸಹ ಒಂದು. ಪ್ರಾಚೀನ ಗುರು ಪರಂಪರೆಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬರುತ್ತಿರುವ ಸಂಸ್ಥೆ. ಇದು ೧೯೬೫ರ ಡಿಸೆಂಬರ್ ೧೨ ರಂದು 'ಶ್ರೀ ಕುಮಾರೇಶ್ವರ ಶಿವಯೊಗಿ ಸಂಘ' ಎಂಬ ಹೆಸರಿನಿಂದ ಆರಂಭ ಆಯಿತು. ಇಂಥ ಸಂಘವೊಂದರ ಇಪ್ಪತ್ತೈದು ವರುಷಗಳ ಸಾಧನೆಗಳನ್ನು ನೆನಪಿನಲ್ಲಿಟ್ಟುಕೊಂಡು 'ಅರ್ಪಣ' ಎಂಬ ಸಂಸ್ಮರಣ ಗ್ರಂಥವನ್ನು ಪ್ರಕಟಿಸಲಾಗಿದೆ. ಇದರ ಪ್ರಧಾನ

ಸಂಪಾದಕರು ಶ್ರೀ ರುದ್ರಮುನಿ ದೇವರು. 'ಅರ್ಪಣ'ದಲ್ಲಿ ಒಟ್ಟು ಮೂರು 'ಎಸಳು' ಗಳಿವೆ. ನಾಡಿನ ವಿದ್ವಾಂಸರ, ಲೇಖಕರ ಹಾಗೂ ಕವಿಗಳ ಬರೆಹಗಳನ್ನು ಇಲ್ಲಿ ನೋಡಬಹುದು.

ಕೃತಿಯ ಮೊದಲ ಭಾಗವಾದ 'ಅರ್ಪಣ'ದಲ್ಲಿ ಈ ಮಠಕ್ಕೆ ಸಂಬಂಧಿಸಿದಂತೆ ಲೇಖನಗಳಿವೆ. ಸಂಘದ ಸ್ಥಾಪನೆ ಹಾಗೂ ಬೆಳೆದುಬಂದ ಹಾದಿಯ ಬಗ್ಗೆ ಮೊದಲ ಲೇಖನ ಪರಿಚಯಿಸಿಕೊಡುತ್ತದೆ. ಉಳಿದಂತೆ ಶ್ರೀ ಕುಮಾರ ಶಿವಯೋಗಿಗಳ ವ್ಯಕ್ತಿತ್ವ, ಸಾಧನೆ ಬಗ್ಗೆ ಹಾಗೂ ಸಂಘದಿಂದ ತರಬೇತಿ ಪಡೆದ ಸಾಧಕರ ಪಾತ್ರವನ್ನು ವಿಶ್ಲೇಷಿಸುವ ಲೇಖನಗಳೇ ಹೆಚ್ಚು. ವಿಶ್ವಮಾನವ ಧರ್ಮ ಹಾಗೂ ಬಸವಣ್ಣನವರನ್ನು ಶಿವಶರಣೆಯರು ಕಂಡುಕೊಂಡ ಬಗೆಯನ್ನು ಹೇಳುವ ಪ್ರಬಂಧಗಳು ಗಮನಸೆಳೆಯುತ್ತದೆ. 'ಕಾವ್ಯಶ್ರೀ' ಕೃತಿಯ ಎರಡನೆಯ ಭಾಗ. ಇಲ್ಲ ಕಾವ್ಯವನ್ನು ಸಂಪಾದಿಸಲಾಗಿದೆ. ಇದು 'ಪೂರ್ಣಜ್ಞ' ವಚನಗಳಿಂದ ಆರಂಭಿಸಿ ತಾಳೀಕೋಟಿ ಬಸವ ಪ್ರಭುದೇವ ಅವರ 'ಶ್ರೀ ಕುಮಾರ ಜ್ಯೋತಿ' ವರೆಗೆ ವಚನ - ಕಾವ್ಯವನ್ನು ಒಳಗೊಂಡಿದೆ. ಕವಿ ಚನ್ನವೀರ ಕಣವಿ ಅವರ 'ಬೆಳ್ಳಿ ದೀಪ - ಬಂಗಾರ ಬೆಳಕು' ಹಾಗೂ ಸಿದ್ಧಯ್ಯ ಪುರಾಣಿಕರ 'ಬಾಳು ಚಿಗುರು ನಗುತಲಿರಲಿ' ಎಂಬ ಕವನಗಳಿದ್ದು ಚಿಂತನೆಗೆ ಒಳ್ಳೆಯ ಅಭಿವ್ಯಕ್ತಿಯಾಗಿ ಮೂಡಿವೆ. 'ಚೇತನ' ವೆಂಬುದು ಕೃತಿಯ ಮೂರನೆಯ ಭಾಗವಾಗಿದೆ. ಇಲ್ಲಿ ಸಂಘದಿಂದ ಪ್ರೇರಣೆಪಡೆದ, ಅಭ್ಯಸಿಸಿದ ಹಿರಿ - ಕಿರಿಯ ಸಾಧಕರ ಪರಿಚಯವನ್ನು ನೋಡಬಹುದು. ಅಲ್ಲದೆ ಸಂಘ ಜೀವನದ ಅನುಭವಗಳು ಹಾಗೂ ನಮ್ರವಾದ ನೆನಕೆಗಳು ವ್ಯಕ್ತವಾಗಿವೆ. ಒಟ್ಟಾರೆ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಇತರೆ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಒಂದು ಧಾರ್ಮಿಕ ಸಂಸ್ಥೆಯ ಪಾತ್ರ ಯಾವ ರೀತಿಯದು ಎಂಬುದನ್ನು ಈ ಗ್ರಂಥ ಪರಿಚಯಿಸುತ್ತದೆ.

## ಪ್ರಣಾಮ

ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಶ್ರೀ ಪುರವರ್ಗ ಕಟ್ಟಿಮನೆ ಮಠದ ಅಧ್ಯಕ್ಷರು. ಶ್ರೀಯುತರು ಹದಿಮೂರನೆಯ ಪಟ್ಟಾಧ್ಯಕ್ಷರಾಗಿದ್ದು ೧೯೬೭ರಿಂದಲೂ ಗುರುಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವರ ಈ ಪೀಠಾರೋಹಣದ ರಜತ ಮಹೋತ್ಸವದ ಸಲುವಾಗಿ ಸಲ್ಲಿಸಿರುವ ಸಂಸ್ಮರಣ ಗ್ರಂಥವೇ 'ಪ್ರಣಾಮ' ಇದಕ್ಕೆ ಶ್ರೀ ಅ. ಸಿ. ಹಿರೇಮಠರು ಪ್ರಧಾನ ಸಂಪಾದರಾಗಿದ್ದಾರೆ. 'ಪ್ರಣಾಮ'ದಲ್ಲಿ ವ್ಯಕ್ತಿದರ್ಶನ, ಚಿತ್ರದರ್ಶನ ಹಾಗೂ ಸಾಹಿತ್ಯದರ್ಶನ ಎಂಬ ಮೂರು ಭಾಗಗಳಿವೆ. ಮೊದಲನೆಯ ಭಾಗವು ಗುರುಪರಂಪರೆ, ಮಠಾಧೀಶರರ, ಅಭಿಮಾನಿಗಳ ಅಭಿಪ್ರಾಯಗಳು ಹಾಗೂ ಕವನಗಳನ್ನು ಒಳಗೊಂಡಿದೆ. 'ಚಿತ್ರದರ್ಶನದಲ್ಲಿ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳ ಜೀವನ ಪರಿಚಯದ ಛಾಯಚಿತ್ರಗಳಿವೆ. 'ಸಾಹಿತ್ಯದರ್ಶನ' ಎಂಬ ಮೂರನೆಯ

ಭಾಗದಲ್ಲಿ ನಾಡಿನ ಹೆಸರಾಂತ ಸಾಹಿತಿ, ಸಂಶೋಧಕ, ಲೇಖಕ ಸಮುದಾಯದ ಪ್ರಬುದ್ಧ ಲೇಖನಗಳನ್ನು ನೋಡಬಹುದು. ಇದರಲ್ಲಿನ ಬಹುಪಾಲು ಲೇಖನಗಳು ವೀರಶೈವ ಧರ್ಮ, ವಚನಕಾರರ ಚಿಂತನೆ, ಅನುಭವ, ಆಧ್ಯಾತ್ಮಿಕ ಒಲವುಗಳಿಗೆ ಸಂಬಂಧಪಟ್ಟವು.

**ನವರಾತ್ರಿ**

'ನವರಾತ್ರಿ' ೧೯೯೪ರ ದಸರಾ ಮಹೋತ್ಸವದ ಸವಿಸಂಚಿಕೆ. ಕರ್ನಾಟಕ ಸರ್ಕಾರವು ಡಾ. ಸಿ. ಪಿ. ಕೃಷ್ಣಕುಮಾರ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿ ಈ ಸಂಚಿಕೆಯನ್ನು ಪ್ರಕಟಿಸಲು ಅನುವು ಮಾಡಿಕೊಟ್ಟಿದೆ. ಇದರಲ್ಲಿ ನಾಡಿನ ವಿದ್ವಾಂಸರ ಹತ್ತು ಪ್ರಬಂಧಗಳಿವೆ.

ನವರಾತ್ರಿ ಹಬ್ಬಕ್ಕೇ ಮೀಸಲಾದ ಈ ಕೃತಿಯಲ್ಲಿ ಅದರ ಸ್ವರೂಪ, ವಿಕಾಸ, ವೈವಿಧ್ಯ, ಚರಿತ್ರೆಯನ್ನೊಳಗೊಂಡ ಪ್ರಬಂಧಗಳನ್ನು ನೋಡಬಹುದು. ಇದರಲ್ಲಿ ಡಾ. ಎನ್. ಎಸ್. ತಾರಾನಾಥ, ಡಾ. ಚನ್ನಬಸಪ್ಪ. ಎಸ್ ಪಾಟೀಲ ಹಾಗೂ ಶ್ರೀ ನಿರ್ಮಲ್ ರಾಜು ಅವರುಗಳು ಬರೆದಿರುವ ಈ ಹಬ್ಬದ ಹುಟ್ಟು, ಪ್ರಾಚೀನತೆ, ಆಚರಣೆಯ ಸ್ವರೂಪಕ್ಕೆ ಸಂಬಂಧಿಸಿದಂಥ ಪ್ರಬಂಧಗಳಿವೆ. ಶ್ರೀ ಎಂ. ಎಲ್. ಶಿವಶಂಕರ್ ಅವರು ಮೈಸೂರಿನ ಅರಮನೆಯ ಕಲ್ಯಾಣ ಮಂಟಪದ ಭಿತ್ತಿಚಿತ್ರಗಳಲ್ಲಿನ ನವರಾತ್ರಿ ಚಿತ್ರಗಳನ್ನು ಮೊದಲಬಾರಿಗೆ ಛಾಯಾಚಿತ್ರಗಳ ಮೂಲಕ ದಾಖಲಿಸಿದ್ದಾರೆ. ಇಲ್ಲಿನ ಛಾಯಾಚಿತ್ರಗಳು ಮನಮುಟ್ಟುವಂಥವು. ಅನಂತರದ ಮೂರು ಲೇಖನಗಳಲ್ಲಿ ಕನ್ನಡ ಭಾಷೆಯ ಪ್ರಾಚೀನ, ಆಧುನಿಕ ಮತ್ತು ಜನಪದ ಸಾಹಿತ್ಯದಲ್ಲಿನ ನವರಾತ್ರಿ ಉಲ್ಲೇಖಗಳನ್ನು ವಿಶ್ಲೇಷಿಸಲಾಗಿದೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ಇರುವ ನವರಾತ್ರಿ ಹಬ್ಬಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಎರಡು ಲೇಖನಗಳು ತೆರೆದಿಡುತ್ತವೆ. ಕೊನೆಯ ಎರಡು ಲೇಖನಗಳಲ್ಲಿ ಮಹಿಷಮರ್ದಿನಿ ಶಿಲ್ಪಗಳನ್ನು ಹಾಗೂ ಚಾಮುಂಡೇಶ್ವರಿಯನ್ನು ಕುರಿತ ಲೇಖನಗಳನ್ನು ನೋಡಬಹುದು. ಡಾ. ಎಂ. ಎಸ್. ಕೃಷ್ಣಮೂರ್ತಿ ಅವರ ಲೇಖನದ ಮಹಿಷಮರ್ದಿನೀ ಶಿಲ್ಪಗಳ ಛಾಯಚಿತ್ರಗಳು, ರೇಖಾಚಿತ್ರಗಳು ಸೊಗಸಾಗಿವೆ. ಒಟ್ಟಾರೆ 'ನವರಾತ್ರಿ' ಸವಿಸಂಚಿಕೆ ಉತ್ತಮ ರೀತಿಯಲ್ಲಿ ಪ್ರಕಟವಾಗಿದೆ.

**ಹೊನ್ನಸಿರಿ**

'ಹೊನ್ನಸಿರಿ' ರಾಯಚೂರು ಜಿಲ್ಲಾ ಮೂರನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸವಿನೆನಪಿನ ಸಂಚಿಕೆ. 'ಹೊನ್ನಸಿರಿ'ಯ ಪ್ರಧಾನ ಸಂಪಾದಕರು ಶಾಶ್ವತಸ್ವಾಮಿ ಮುಕ್ಕುಂದಿಮಠ ಅವರು. ಈ ಸಂಪುಟವನ್ನು ಒಟ್ಟು ಆರುಭಾಗಗಳಾಗಿ ವಿಭಜಿಸಿಕೊಳ್ಳಲಾಗಿದೆ. ಮೊದಲನೆಯ ಭಾಗ ಸಮ್ಮೇಳನ, ಅಧ್ಯಕ ಭಾಷಣಗಳಿಗೆ ಸಂಬಂಧಿಸಿದ್ದು. ಎರಡನೆಯದರಲ್ಲಿ ಜಿಲ್ಲೆಯ ಸಾಹಿತ್ಯವನ್ನು ಕುರಿತ ಹನ್ನೆರಡು ಲೇಖನಗಳಿವೆ. ಇಲ್ಲಿ ಪ್ರಾಚೀನ, ಮಧ್ಯಕಾಲೀನ, ದಾಸ-ವಚನ, ಜಾನಪದ,

ನವೋದಯ, ಬಂಡಾಯ ಎಲ್ಲ ಪ್ರಕಾರಗಳಿಗೂ ಸಂಬಂಧಪಟ್ಟಹಾಗೆ ವಿದ್ವಾಂಸರಿಂದ ಲೇಖನಗಳನ್ನು ಬರೆಸಲಾಗಿದೆ. ಮೂರನೆಯ ಭಾಗವು ಜಿಲ್ಲೆಯ ಸಂಪ್ರದಾಯ ಹಾಗೂ ಜೀವನ ವಿಧಾನವನ್ನು ಕುರಿತು ಹೇಳುವಂಥದ್ದು. ಇಲ್ಲಿ ಏಳುಜನ ವಿದ್ವಾಂಸರು ಸಮಾಜದ ವಿವಿಧ ಸ್ತರದ ಜನಜೀವನವನ್ನು ವಿಶ್ಲೇಷಿಸಿದ್ದಾರೆ. ಐತಿಹಾಸಿಕ ಸಂಶೋಧನೆ, ಶಾಸನಗಳಿಗೆ ಸಂಬಂಧಿಸಿದಂತೆ ನಾಲ್ಕನೆಯ ಭಾಗವು ಮೂರು ಲೇಖನಗಳನ್ನೊಳಗೊಂಡಿದೆ. ಐದನೆಯ ಭಾಗವು ಜಿಲ್ಲೆಯ ಕೃಷಿ ಮತ್ತು ಸಮೂಹ ಮಾಧ್ಯಮವನ್ನು ಕುರಿತದ್ದು. ಇಲ್ಲಿ ಒಟ್ಟು ಐದು ಲೇಖನಗಳಿವೆ. ಕೊನೆಯದಾಗಿ ಜಿಲ್ಲೆಯ ಕವಿ - ಸಾಹಿತಿ - ಸಂಗೀತ ಕಲಾವಿದರನ್ನು ಕುರಿತ ಆರನೆಯ ಭಾಗವನ್ನು ನೋಡಬಹುದು. ವಿಭಿನ್ನ ಕ್ಷೇತ್ರಗಳಲ್ಲಿ ತಮ್ಮ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಗುರುತಿಸಿಕೊಂಡಿರುವ ಜಿಲ್ಲೆಯ ಹದಿನೈದಕ್ಕೂ ಹೆಚ್ಚಿನ ವ್ಯಕ್ತಿಗಳನ್ನು ಇಲ್ಲಿ ಪರಿಚಯಿಸಿಕೊಡಲಾಗಿದೆ.

### ಗ್ರಂಥಾಲಯ ರಜತದೀಪ್ತಿ

ಕರ್ನಾಟಕ ಸರಕಾರದ ಸಾರ್ವಜನಿಕ ಗ್ರಂಥಾಲಯ ಇಲಾಖೆಯು ತನ್ನ ಬೆಳ್ಳಿಹಬ್ಬದ ಸವಿನೆನಪಿಗಾಗಿ ಹೊರತಂದ ''ಗ್ರಂಥಾಲಯ ರಜತ ದೀಪ್ತಿ'' ಒಂದು ಬೃಹತ್ ಸಂಪುಟವಾಗಿದೆ. ಕೆ. ಎಸ್. ದೇಶಪಾಂಡೆಯವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟವಾದ ಈ ಕೃತಿಯಲ್ಲಿ ಏಳು ಪ್ರಮುಖ ಭಾಗಗಳಿದ್ದು, ಗ್ರಂಥ, ಗ್ರಂಥಾಲಯ ಹಾಗೂ ಗ್ರಂಥೋದ್ಯಮಕ್ಕೆ ಸಂಬಂಧಪಟ್ಟಂತೆ ವಿವಿಧ ವಿದ್ವಾಂಸರು ಬರೆದ ಒಟ್ಟು ೮೭ ವಿದ್ವತ್ಪೂರ್ಣ ಲೇಖನಗಳಿವೆ. ಮೊದಲ ಭಾಗದಲ್ಲಿ ಗ್ರಂಥ ಮತ್ತು ಗ್ರಂಥಾಲಯಗಳಿಗೆ ಸಂಬಂಧಿಸಿದ 'ಸಾಮಾನ್ಯ' ಸಂಗತಿಗಳಿವೆ. ಎರಡನೆಯ ಭಾಗದ ಲೇಖನಗಳು 'ಗ್ರಂಥಾಲಯ ಸಮಸ್ಯೆ'ಗಳ ಕುರಿತು ಚರ್ಚಿಸುತ್ತವೆ. ಮೂರನೆಯ ಮತ್ತು ನಾಲ್ಕನೆಯ ಭಾಗದ ಲೇಖನಗಳಲ್ಲಿ ಅನುಕ್ರಮವಾಗಿ ಕರ್ನಾಟಕ ಹಾಗೂ ಭಾರತವನ್ನು ದೃಷ್ಟಿಯಲ್ಲಿರಿಸಿಕೊಂಡು ಗ್ರಂಥಾಲಯಗಳ ಉಗಮ-ವಿಕಾಸವನ್ನು ಚರ್ಚಿಸಲಾಗಿದೆ. ಐದನೆಯ ಭಾಗದ ನಾಲ್ಕು ಲೇಖನಗಳು 'ಕನ್ನಡ ಪುಸ್ತಕೋದ್ಯಮ'ಕ್ಕೆ ಸಂಬಂಧ ಪಟ್ಟವಾಗಿವೆ. ಆರನೆಯ ಭಾಗದಲ್ಲಿ 'ಗ್ರಂಥಾಲಯಗಳ ಆಧುನೀಕರಣ'ಕ್ಕೆ ಸಂಬಂಧಪಟ್ಟ ಆರು ಲೇಖನಗಳಿವೆ. ಏಳನೆಯ ಭಾಗದಲ್ಲಿ ''ನಗರ ಮತ್ತು ಜಿಲ್ಲಾ ಕೇಂದ್ರ ಗ್ರಂಥಾಲಯಗಳ ಪಕ್ಷಿನೋಟ'' ಇದೆ. ಗ್ರಂಥಾಲಯ ವಿಜ್ಞಾನದ ಅಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ, ಗ್ರಂಥಪಾಲಕರಿಗೆ, ಗ್ರಂಥಾಲಯ ಆಡಳಿತಾಧಿಕಾರಿಗಳಿಗೆ, ಅದೇ ರೀತಿ ಸಾಮಾನ್ಯ ಓದುಗರಿಗೆ ಪ್ರಯೋಜನಕಾರಿಯಾಗಬಲ್ಲಂತಹ ಮೌಲಿಕ ಸಂಪುಟವಿದು.

# ಸಂಕೀರ್ಣ

*ಸುಬ್ಬಣ್ಣ ರೈ. ಏವುಂಜೆ*

---

ಹೊಸಗನ್ನಡದ ಸಂದರ್ಭದಲ್ಲಿ ಹುಲುಸಾಗಿ ಹುಟ್ಟಿ ಬಂದ ವಿವಿಧ ರೂಪಗಳ ಸಾಹಿತ್ಯ ಕೃತಿಗಳನ್ನು ಬೇರೆ ಬೇರೆ 'ಪ್ರಕಾರ'ಗಳಾಗಿ ಗುರುತಿಸಿ, ಅಧ್ಯಯನ ನಡೆಸುವ ಪ್ರವೃತ್ತಿಯು ನಮ್ಮಲ್ಲಿಬೆಳೆಯಿತು. ಕಾಲಾನುಕ್ರಮದಲ್ಲಿ ಇನ್ನಷ್ಟು ಹೊಸ ರೂಪದ ಸಾಹಿತ್ಯ ಕೃತಿಗಳು ಹುಟ್ಟಿಕೊಂಡಾಗ ಅವುಗಳು 'ಪ್ರಕಾರ ವಿಮರ್ಶೆ' ಯಲ್ಲಿ ಅಷ್ಟೊಂದು ಮಹತ್ವದ ಸ್ಥಾನವನ್ನು ಪಡೆದುಕೊಳ್ಳಲಿಲ್ಲ. ಸಂಖ್ಯಾ ದೃಷ್ಟಿಯಿಂದ ಕಡಿಮೆ ಇದ್ದುವೆಂಬ ಕಾಣಕ್ಕಾಗಿಯೋ ಅಥವಾ ಓದುಗರಿಂದ ಮೆಚ್ಚುಗೆ-ಜನಪ್ರಿಯತೆಯನ್ನು ಗಳಿಸಲಿಲ್ಲವೆಂಬ ಕಾರಣಕ್ಕಾಗಿಯೋ - ಅವುಗಳಿಗೆ ನಮ್ಮ ವಿಮರ್ಶೆಯಲ್ಲಿ ಪ್ರತ್ಯೇಕ ಪ್ರಕಾರಗಳೆನಿಸುವ ಭಾಗ್ಯ ದಕ್ಕಲಿಲ್ಲ. ಹಾಗಾಗಿಯೇ ಅಂಥ ಕೃತಿಗಳನ್ನೆಲ್ಲಾ 'ಸಂಕೀರ್ಣ'ವೆಂಬ ಗುಂಪಿನೊಳಗಡೆ ಸಮಾವೇಶಗೊಳಿಸಿ ಅಧ್ಯಯನ ನಡೆಸಬೇಕಾದ ಅನಿವಾರ್ಯ ಸ್ಥಿತಿ ಒದಗಿ ಬಂದಿದೆ. ಮುಂದೆ ಇವುಗಳೂ ಸ್ವತಂತ್ರ ಪ್ರಕಾರಗಳಾಗಿ ಅಸ್ತಿತ್ವವನ್ನು ಪಡೆದುಕೊಳ್ಳಬಹುದಾದ ಕಾಲ ಬಂದರೂ ಬರಬಹುದು. ಆದರೆ ಇನ್ನೊಂದು ಬಗೆಯ ಕೃತಿಗಳು ಎಂದಿಗೂ 'ಸಂಕೀರ್ಣ'ಗಳಾಗಿಯೇ ಉಳಿದುಬಿಡುತ್ತವೆ. ಅನೇಕ ಪ್ರಕಾರಗಳಿಗೆ ಸೇರಿದ ಬಿಡಿ ಬಿಡಿ ಬರಹಗಳು ಒಂದು ಸಂಪುಟವಾಗಿ ಪ್ರಕಟವಾದಾಗ ಅದು ಈ ಅರ್ಥದಲ್ಲಿ ಒಂದು ಸಂಕೀರ್ಣ ಕೃತಿಯೆನಿಸುತ್ತದೆ. ಹೀಗೆ 'ಸಂಕೀರ್ಣ ವೆಂಬುದು ಅದರಷ್ಟಕ್ಕೇ ಒಂದು ನಿರ್ದಿಷ್ಟ ಸಾಹಿತ್ಯ ಪ್ರಕಾರವಲ್ಲದಿದ್ದರೂ ಅದರ ಹರಹು ಬಹಳ ವಿಶಾಲವಾದುದು. ಈಗಾಗಲೇ ಪ್ರಚಲಿತವಿರುವ ಯಾವುದೇ ಸಾಹಿತ್ಯ ಪ್ರಕಾರಕ್ಕೂ ಸೇರದ ಕೃತಿಗಳೆಲ್ಲಾ ಸಹಜವಾಗಿಯೇ ಸಂಕೀರ್ಣ ಕೃತಿಗಳಾಗಿ ಬಿಡುತ್ತವೆ.

ಸ್ವತಂತ್ರ ಪ್ರಕಾರಗಳೆಂಬ ಅಸ್ತಿತ್ವವನ್ನು ಪಡೆದುಕೊಂಡಿಲ್ಲವಾದರೂ ಸಾಹಿತ್ಯಿಕ ಮೌಲ್ಯದ ದೃಷ್ಟಿಯಿಂದ ಈ ಬಗೆಯ ಕೆಲವು ಕೃತಿಗಳು ಗಮನಾರ್ಹವೆನಿಸಿವೆ. ಇತ್ತೀಚಿನ ದಿನಗಳಲ್ಲಂತೂ ಮೌಲಿಕವೆನ್ನಬಹುದಾದ 'ಸಂಕೀರ್ಣ' ಕೃತಿಗಳು ಕನ್ನಡದಲ್ಲಿ ಹೊರಬರುತ್ತಲಿವೆ. ಅವುಗಳನ್ನು ಮುಖ್ಯವಾಗಿ ಕೋಶಗಳು, ಪತ್ರಿಕಾ ಸಾಹಿತ್ಯ, ಪತ್ರ ಸಾಹಿತ್ಯ, ಆಡಳಿತ - ಕಾನೂನು ಸಾಹಿತ್ಯ, ಅಪರಾಧ ಶಾಸ್ತ್ರ, ಕೃತಿಸೂಚಿ, ನೆನಪಿನ ಸಂಪುಟ, ಶಿಕ್ಷಣ ಸಾಹಿತ್ಯ- ಇತ್ಯಾದಿಯಾಗಿ ವರ್ಗೀಕರಿಸಿಕೊಳ್ಳಬಹುದಾಗಿದೆ. ಈಗಾಗಲೇ ಗಮನಿಸಿದಂತೆ ಈ ರೀತಿಯ ವರ್ಗೀಕರಣಕ್ಕೆ ಒಳಪಡದಂತಹ ಕೃತಿಗಳೂ ಇಲ್ಲಿವೆ. ಅವುಗಳು ನಿಜವಾದ ಅರ್ಥದಲ್ಲಿ ಸಂಕೀರ್ಣ ಕೃತಿಗಳೆನಿಸುತ್ತವೆ. ಹೆಚ್ಚು ಕಡಿಮೆ ಈ ಎಲ್ಲಾ ಮಾದರಿಯ ಸಂಕೀರ್ಣ ಕೃತಿಗಳು ೧೯೯೪ ರಲ್ಲಿ ಪ್ರಕಟವಾಗಿವೆ.

**೧. ಕೋಶಗಳು:**

ಎಲ್. ಎಸ್. ಶೇಷಗಿರಿರಾಯರ ಪ್ರಧಾನ ಸಂಪಾದಕತ್ವದಲ್ಲಿ ಕನ್ನಡ ವಿಶ್ವವಿದ್ಯಾಲಯವು 'ಕಿರಿಯರ ಕರ್ನಾಟಕ' ವೆಂಬ ಮಹತ್ವದ ಕೋಶವೊಂದನ್ನು ಈ ವರ್ಷ ಪ್ರಕಟಿಸಿದೆ. ಹೆಸರೇ ಸೂಚಿಸುವಂತೆ ೧೨ ರಿಂದ ೧೭ರ ವರೆಗಿನ ವಯೋಮಾನದ ಕಿರಿಯರಿಗೆ ಕರ್ನಾಟಕದ ಸಮಗ್ರ ಪರಿಚಯವನ್ನು ಮಾಡಿಕೊಡುವ ಸಚಿತ್ರ ಕೋಶವಿದು. ಕನ್ನಡ ನಾಡಿನ ಇತಿಹಾಸ, ಭಾಷೆ, ಸಾಹಿತ್ಯ, ಜಾನಪದ ಶಿಕ್ಷಣ, ಸಂಸ್ಕೃತಿ, ಸಾಂಸ್ಕೃತಿಕ ಗಣ್ಯರು, ಚಲನಚಿತ್ರ, ಪತ್ರಿಕೋದ್ಯಮ, ಕೈಗಾರಿಕೆ, ಕೃಷಿ, ಉದ್ಯೋಗ, ಆಧುನಿಕ ತಂತ್ರಜ್ಞಾನ - ಮುಂತಾದ ವಿವಿಧ ವಿಷಯಗಳ ಬಗೆಗೆ ಸರಳ ಶೈಲಿಯಲ್ಲಿ ಬರೆದ ಸುಮಾರು ೫೦೦ ರಷ್ಟು ನಮೂದುಗಳು ೭೦೦ ಪುಟಗಳಲ್ಲಿ ಹರಡಿಕೊಂಡಿವೆ. ಇಲ್ಲಿನ ವರ್ಣಮಯ ಚಿತ್ರಗಳು ಕರ್ನಾಟಕದ ವೈವಿಧ್ಯಪೂರ್ಣ ಬದುಕನ್ನು ಕಣ್ಣಮುಂದೆ ತಂದು ನಿಲ್ಲಿಸುತ್ತವೆ. ಒಟ್ಟಿನಲ್ಲಿ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರು ಹೇಳುವಂತೆ ''ನಮ್ಮ ನಿನ್ನೆಗಳು ಹೇಗಿದ್ದುವೆಂಬ ತಿಳುವಳಿಕೆ ಮತ್ತು ಇಂದು ಹೇಗಿದೆ ಎಂಬ ಮಾಹಿತಿಗಳನ್ನು ಕೊಡುವುದಲ್ಲದೆ ನಮ್ಮ ನಾಡಿನ ಬದುಕು ಮುಂದೆ ಹೇಗಿರಬೇಕು ಎಂಬ ಕನಸು - ಆದರ್ಶಗಳನ್ನು ಪ್ರೇರಿಸುವುದೂ ಈ ಕೋಶದ ಉದ್ದೇಶ'' (ನಿಮ್ಮೊಡನೆ) ಕಿರಿಯರಿಗೆ ಮಾತ್ರವಲ್ಲದೆ ಆಸಕ್ತ ಹಿರಿಯರಿಗೂ ಪ್ರಸ್ತುತ ಕೋಶವು ಆಕರ ಗ್ರಂಥವಾಗಬಲ್ಲುದು.

**೨. ಪತ್ರಿಕಾ ಸಾಹಿತ್ಯ:**

ಬೇರೆ ಬೇರೆ ಪತ್ರಿಕೆಗಳಿಗೆ ಕಾಲಕಾಲಕ್ಕೆ ಬರೆದ ಅಂಕಣ ಬರಹಗಳೂ, ಸಂಪಾದಕೀಯಗಳೂ ಇಂದು ಸಂಕಲನಗೊಂಡು ಪುಸ್ತಕರೂಪದಲ್ಲಿ ಪ್ರಕಟವಾಗತೊಡಗಿವೆ. ಇಂತಹ ಬರಹಗಳಲ್ಲಿ ಸಮಕಾಲೀನ ರಾಜಕೀಯ ವಿದ್ಯಮಾನಗಳ ಬಗೆಗಿನ ವಿಮರ್ಶೆಯಿರುತ್ತದೆ. ಸಾಮಾಜಿಕ ಸಮಸ್ಯೆಯನ್ನು ಕುರಿತ ವೈಚಾರಿಕ ಚಿಂತನೆಯಿರುತ್ತದೆ. ಸಾಹಿತ್ಯಿಕ ಚರ್ಚೆಯಿರುತ್ತದೆ; ವ್ಯಕ್ತಿ ಚಿತ್ರವಿರುತ್ತದೆ. ಎಲ್ಲಕ್ಕಿಂತಲೂ ಮುಖ್ಯವಾಗಿ ವಿನೋದಪೂರ್ಣ ಶೈಲಿಯ ಓದಿಸಿಕೊಂಡು ಹೋಗುವ ನಿರೂಪಣೆಯಿರುತ್ತದೆ. ಓದುತ್ತಾ ಹೋದಂತೆ ಸಹೃದಯರನ್ನು ಚಿಂತನೆಗೆ ಹಚ್ಚುವ ಗುಣವೂ ಅಲ್ಲಿರುತ್ತದೆ. ೧೯೯೪ ರಲ್ಲಿ ಪ್ರಕಟವಾದ ಕು.ಶಿ. ಹರಿದಾಸಭಟ್ಟರ 'ಲೋಕಾಭಿ ರಾಮ-ಸಂಪುಟ ೫' ಮತ್ತು ಮಹಾಬಲೇಶ್ವರ ಕಾಟ್ರಹಳ್ಳಿಯವರ 'ದೃಷ್ಟಿ' ಈ ನಿಟ್ಟಿನಲ್ಲಿ ಗಮನಿಸಬೇಕಾದ ಕೃತಿಗಳು.

**(i) ಲೋಕಾಭಿರಾಮ - ೫:**

ಕು.ಶಿ. ಹರಿದಾಶ ಭಟ್ಟರು ಹೊಸಗನ್ನಡದ ಶ್ರೇಷ್ಠ ಗದ್ಯಕಾರರಲ್ಲೊಬ್ಬರೆಂಬ ಕೀರ್ತಿಗೆ ಪಾತ್ರರಾಗಿದ್ದಾರೆ. ಅದೇ ರೀತಿ ಕನ್ನಡದ ಅಂಕಣ ಸಾಹಿತ್ಯದಲ್ಲೂ ಅವರಿಗೆ ಒಳ್ಳೆಯ ಹೆಸರಿದೆ. ಕು. ಶಿ. ಅವರ ಅಂಕಣ ಬರಹಗಳನ್ನು ಓದುವುದರಲ್ಲಿ ಒಂದು ರೀತಿಯ ಖುಷಿಯಿರುತ್ತದೆ. ಅವರು ೧೯೮೭ ರಿಂದ ೯೩ರ ವರೆಗೆ 'ಲೋಕಾಭಿರಾಮ' ಎಂಬ ಶೀರ್ಷಿಕೆಯಿಂದ 'ಉದಯವಾಣಿ' ದೈನಿಕಕ್ಕೆ ಬರೆದ ಅಂಕಣ ಬರಹಗಳಲ್ಲಿ ಎಪ್ಪತ್ತನ್ನು

ಆಯ್ದು ಇಲ್ಲಿ ಪುಸ್ತಕ ರೂಪದಲ್ಲಿ ಸಂಕಲಿಸಲಾಗಿದೆ. ಇಲ್ಲಿನ ಬರಹಗಳೆಲ್ಲಾ ಸಕಾಲಿಕವಾಗಿರುವುದರ ಜತೆಗೆ ಸಾರ್ವಕಾಲಿಕ ಮೌಲ್ಯಗಳನ್ನು ಹೊಂದಿವೆ. ಇದು ಅಂಕಣ ಬರಹಕ್ಕಿರಬೇಕಾದ ಬದ್ಧತೆಯೂ ಹೌದು. ಸಾಹಿತ್ಯ, ಸಮಾಜ, ಪರಿಸರ, ಸಂಸ್ಕೃತಿ, ಕಲೆ, ಜಾನಪದ, ವಿಜ್ಞಾನ, ಶಿಕ್ಷಣ, ರಾಜಕೀಯ, ಆಡಳಿತ, ಪ್ರಜಾಪ್ರಭುತ್ವ ಮುಂತಾದ ವಿವಿಧ ಕ್ಷೇತ್ರಗಳ ಬಗೆಗೆ, ಆ ಕ್ಷೇತ್ರಗಳಲ್ಲಿ ದುಡಿದ ಮಹನೀಯರು ಮತ್ತು ಮಹಿಳೆಯರ ಬಗೆಗೆ, ತತ್ಸಂಬಂಧವಾದ ಸಂಸ್ಥೆಗಳ ಬಗೆಗೆ ಕಾಲಕಾಲಕ್ಕೆ ತಮಗನಿಸಿದ್ದನ್ನು ಭಟ್ಟರಿಲ್ಲಿ ಪ್ರಾಮಾಣಿಕವಾಗಿ ಹೇಳಿಕೊಂಡಿದ್ದಾರೆ. ತಾವು ಓದಿದ ಮಹತ್ವದ ಹೊಸ ಪುಸ್ತಕಗಳನ್ನು ವಸ್ತುನಿಷ್ಠವಾಗಿ ಸಮೀಕ್ಷಿಸಿದ್ದಾರೆ. ಅಮೆರಿಕಾಕ್ಕೆ ಹೋದಾಗಿನ ತಮ್ಮ ಪ್ರವಾಸಾನುಭವವನ್ನು ಚಿಕಿತ್ಸಕ ದೃಷ್ಟಿಯಿಂದ ಸೋದಾಹರಣವಾಗಿ ವಿವರಿಸಿದ್ದಾರೆ. 'ಅಟ್ಟಪಾಡಿಯ ಕರುಣ ಕಥೆ' ಎಂಬ ಲೇಖನದಲ್ಲಿ ಬುಡಕಟ್ಟು ಜನರ ಸಮಸ್ಯೆಗಳ ಬಗೆಗೆ ಗಂಭೀರ ಪ್ರಶ್ನೆಗಳನ್ನೆತ್ತಿದ್ದಾರೆ.

ಸಮಕಾಲೀನ ರಾಜಕೀಯ ವಿದ್ಯಮಾನಗಳ ಬಗೆಗೆ ಸಾಮಾಜಿಕ ಸಮಸ್ಯೆ-ಅಸ್ವಾಸ್ಥ್ಯಗಳ ಬಗೆಗೆ ಬರೆಯುವಾಗ ಭಟ್ಟರು ತಮಗನಿಸಿದ್ದನ್ನು ನಿರ್ದುಷ್ಟವಾಗಿ, ಎಗ್ಗಿಲ್ಲದೆ ಹೇಳಿಕೊಳ್ಳುತ್ತಾರೆ. ಉದಾಹರಣೆಗೆ ರಾಮಜನ್ಮಭೂಮಿ-ಬಾಬ್ರಿ ಮಸೀದಿ ಸಮಸ್ಯೆಯನ್ನು ದೃಷ್ಟಿಯಲ್ಲಿರಿಸಿಕೊಂಡು ಬರೆದಿರುವ 'ಸಾಕೇತವೆಂಬ ಅಯೋಧ್ಯೆ', 'ಸಬ್‌ಕೋ ಸನ್ಮತಿ ದೇ ಭಗವಾನ್' - ಇತ್ಯಾದಿ ಲೇಖನಗಳನ್ನು ಗಮನಿಸಬಹುದು. ಇಲ್ಲಿ ಮಂದಿರ-ಮಸೀದಿ ವಿವಾದವನ್ನವರು ಅಮರ್ತ್ಯ ಸೇನ್ ಚಿತ್ರಿಸಿದ ಜಾಗತಿಕ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿಟ್ಟು ಪರಿಭಾವಿಸುತ್ತಾರೆ. ''ಊರಿಗುಪಕಾರ ಮಾಡುವ ನಾಯಕ ಶಿಖಾಮಣಿಗಳೇ, ಬಸವಣ್ಣನವರು ನಿಮಗಾಗಿಯೇ ಹೇಳಿದ್ದು, 'ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ' ಎಂದು. ಇದನ್ನು ನಿಮ್ಮ ನಿಮ್ಮ ಗುಡಿಸಲಿನ ಪೂಜಾಗೃಹದಲ್ಲಿಯೇ ಮಾಡಲು ಬರುತ್ತದೆ. ನಿಮ್ಮ ನಿಮ್ಮ ಮನಸ್ಸನ್ನು ನಿಯಂತ್ರಣದಲ್ಲಿರಿಸಿಕೊಳ್ಳಲು ಆಗದವರು ಊರನ್ನು, ರಾಜ್ಯವನ್ನು, ರಾಷ್ಟ್ರವನ್ನು, ಧಾರಣ ಮಾಡಲು ಸಾಧ್ಯವೇ?'' (ಪು. ೧೬೩)- ಎಂಬುದಾಗಿ ಇಂದಿನ ಸ್ವಾರ್ಥ ರಾಜಕಾರಣಿಗಳಿಗೆಸೆಯುವ ಸವಾಲಿನಲ್ಲಿ ಭಟ್ಟರ ಛಾತಿ ಎದ್ದು ಕಾಣುತ್ತದೆ. ಪತ್ರಿಕೆಯೊಂದರ ಅಂಕಣಕಾರನಿಗಿರಬೇಕಾದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೂ ಇದು ಕನ್ನಡಿ ಹಿಡಿಯುತ್ತದೆ.

ಹೀಗೆ ''ಆಡು ಮುಟ್ಟದ ಸೊಪ್ಪಿಲ್ಲ'' ಎಂದಂತೆ ಭಟ್ಟರು ಇಲ್ಲಿ ಸ್ಪರ್ಶಿಸದ ವಸ್ತು- ವಿಷಯವಿಲ್ಲವೆನ್ನಬಹುದು. ಅವರ ಬರವಣಿಗೆಯಲ್ಲಿ ಆತ್ಮೀಯತೆಯಿದೆ; ವಿಡಂಬನೆಯಿದೆ; ವಿನೋದ ಪ್ರಜ್ಞೆಯಿದೆ; ವೈಚಾರಿಕ ನಿಲುವಿದೆ; ಅವೆಲ್ಲವುಗಳ ಹಿನ್ನೆಲೆಯಲ್ಲಿ ಸಮಾಜದ ಸ್ವಾಸ್ಥ್ಯದ ಬಗೆಗೆ ಅವರಿಗಿರುವ ಅತೀವ ಕಾಳಜಿ ಬಿಂಬಿತವಾಗಿದೆ. ಇಲ್ಲಿನ ಅನೇಕ ವ್ಯಕ್ತಿ ಚಿತ್ರಗಳು ಬರಿಯ ಪ್ರಶಂಸಾ ಬರಹಗಳಾಗದೆ

ಆ ವ್ಯಕ್ತಿಗಳ ಬಗೆಗಿನ ವಸ್ತುನಿಷ್ಠ ಪರಿಭಾವನೆಗಳಾಗಿವೆ. ಭಾಷೆ-ನಿರೂಪಣಾ ವಿಧಾನದ ದೃಷ್ಟಿಯಿಂದ ಇಲ್ಲಿನ ಬರಹಗಳಲ್ಲಿ ಓದಿಸಿಕೊಂಡು ಹೋಗುವ ಗುಣವಿದೆ. ನವಿರಾದ ವಿಡಂಬನೆ, ವಿನೋದ ಪ್ರಜ್ಞೆಗಳು ಅದಕ್ಕೆ ಪೂರಕ ಅಂಶಗಳೆನಿಸಿವೆ. `ಲೋಕಾಭಿರಾಮ'ದ ೪ನೆಯ ಸಂಪುಟಕ್ಕೆ ಹಿನ್ನುಡಿ ಬರೆಯುತ್ತಾ ಮುರಳೀಧರ ಉಪಾಧ್ಯ ಹಿರಿಯಡ್ಕ ಅವರು ''ಅವರ (ಕು.ಶಿ. ಯವರ) ವೈಚಾರಿಕ ನಿಲುವುಗಳು ಭಾಷೆ, ಪ್ರದೇಶ, ಪಕ್ಷ, ಜಾತಿಗಳ ಕೂಪಗಳಿಂದ ಪಾರಾಗಿವೆ. ಸಾಂಸ್ಕೃತಿಕ ವಿಕೇಂದ್ರಿಕರಣಕ್ಕಾಗಿ ವಿಧಾಯಕ ಪ್ರಯತ್ನ, ಅಲಕ್ಷಿತ ದೇಸಿ ಪರಂಪರೆಗಳತ್ತ ದೃಷ್ಟಿಕೇಂದ್ರ, ವಿದೇಶೀ ಮಾಯಾಮೃಗವನ್ನು ಕುರಿತ ಅನುಮಾನ-ಇವು ಕು.ಶಿ.ಯವರ ವೈಚಾರಿಕತೆಯ ಗಮನಾರ್ಹ ಅಂಶಗಳು'' ಎಂದಿದ್ದಾರೆ. ಅವರ ಪ್ರಸ್ತುತ ಸಂಪುಟದ ಮಟ್ಟಿಗೂ ಈ ಮಾತುಗಳು ಅಕ್ಷರಶಃ ಅನ್ವಯವಾಗುತ್ತವೆ.

ಒಟ್ಟಿನಲ್ಲಿ ಹೇಳುವುದಾದರೆ ಉತ್ತಮ ಗುಣಮಟ್ಟದ ಲಲಿತ ಪ್ರಬಂಧ, ಪ್ರವಾಸ ಕಥನ, ವ್ಯಕ್ತಿಚಿತ್ರ, ವೈಚಾರಿಕ ಬರೆಹ, ಪುಸ್ತಕ ಸಮೀಕ್ಷೆ- ಇವೆಲ್ಲವುಗಳನ್ನೊಳಗೊಂಡ ಒಂದು ಸಂಕೀರ್ಣ ಸಂಪುಟವಾಗಿ `ಲೋಕಾಭಿರಾಮ-೫' ಗಮನ ಸೆಳೆಯುತ್ತದೆ. ಮುರುಳೀಧರ ಕು.ಶಿ.ಯವರ ಮೌಲಿಕ ಬರಹಗಳನ್ನೇ ಆಯ್ದು ಇಲ್ಲಿ ಸಂಕಲಿಸಿದ್ದಾರೆ. ಆದರೆ ಕಮಲಾದೇವಿ ಚಟ್ಟೋಪಾಧ್ಯಾಯರ ಕುರಿತು ಅವರು ಬರೆದಿರುವ ಎರಡು ಬೇರೆ ಬೇರೆ ಲೇಖನಗಳನ್ನು (ಪದ್ಮವಿಭೂತೆ ಕಮಲಾದೇವಿ, ಒಂದು ಧೀರೋದಾತ್ತ ಚೇತನ) ಇಲ್ಲಿ ನೀಡಿರುವುದರ ಔಚಿತ್ಯ ಸ್ಪಷ್ಟವಾಗುತ್ತಿಲ್ಲ.

**(ii) ದೃಷ್ಟಿ:**

ಮಹಾಬಲೇಶ್ವರ ಕಾಟ್ರಹಳ್ಳಿಯವರ ''ದೃಷ್ಟಿ'' ಇನ್ನೊಂದು ಗಮನಾರ್ಹವಾದ ಅಂಕಣ ಬರಹಗಳ ಸಂಕಲನವಾಗಿದೆ. ಪ್ರಪಂಚ, ವಿಶ್ವವಾಣಿ, ಕನ್ನಡ ಪ್ರಭ, ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಮುಂಗಾರು, ಕರ್ನಾಟಕ ಮಲ್ಲ, ಉದಯದೀಪ, ಕಸ್ತೂರಿ, ಸಂಕ್ರಮಣ, ಸುದ್ದಿಸಂಗಾತಿ, ಅಭಿಮಾನಿ, ಲಂಕೇಶ್ ಪತ್ರಿಕೆ, ಸುಧಾ, ಸಾಕ್ಷಿ ಮುಂತಾದ ಪತ್ರಿಕೆಗಳಿಗೆ ಕಾಟ್ರಹಳ್ಳಿಯವರು ಆಗಾಗ ಬರೆಯುತ್ತಿದ್ದ ಅಂಕಣ ಬರಹಗಳೂ, ಇನ್ನಿತರ ಸಾಹಿತ್ಯಿಕ ಲೇಖನಗಳೂ ಇಲ್ಲಿ ಸಂಕಲನಗೊಂಡಿವೆ. ಬದುಕು ಚಿಂತೆ, ರಾಜಕೀಯ ವಿದ್ಯಮಾನ, ಸಮಾಜ- ಸಂಸ್ಕೃತಿ ಸಮಸ್ಯೆ, ಮಾನವೀಯ ಆಸಕ್ತಿ, ಸಾಹಿತ್ಯ-ಸಿನಿಮಾ-ಸಂಗೀತ ಇತ್ಯಾದಿ, ಜಾಗತಿಕ ವಿದ್ಯಮಾನ ಎಂಬ ಆರು ವಿಭಾಗಗಳಡಿಯಲ್ಲಿ ಒಟ್ಟು ೪೬ ಲೇಖನಗಳಿವೆ. ವಿಭಾಗಗಳ ಶೀರ್ಷಿಕೆಗಳೇ ಇಲ್ಲಿನ ಬರಹಗಳ ವಸ್ತು ವೈವಿಧ್ಯವನ್ನು ಸೂಚಿಸುತ್ತವೆ. ಇಲ್ಲಿನ ಬಹುಪಾಲು ಬರಹಗಳು ಸುತ್ತಮುತ್ತಲಿನ ಸಮಸ್ಯೆಗಳಿಗೆ ಪ್ರತಿಸ್ಪಂದಿಸಿ ಬರೆದಂಥವುಗಳು. ರಾಜಕೀಯ ವಿದ್ಯಮಾನ ಹಾಗೂ ಸಾಮಾಜಿಕ ಸಮಸ್ಯೆಗಳ ಕುರಿತು ಬರೆಯುವಾಗ ಅಲ್ಲಿರುವ ಅವ್ಯವಸ್ಥೆಗಳನ್ನು ಲೇಖಕರು ಮಾರ್ಮಿಕವಾಗಿ ವಿಮರ್ಶಿಸುತ್ತಾರೆ. ಬರವಣಿಗೆಯಲ್ಲಿ

ವಿಡಂಬನೆ, ವಿನೋದ ಪ್ರಜ್ಞೆಗಳಿದ್ದರೂ ಅವು ಇಲ್ಲಿ ಅಷ್ಟೊಂದು ಮಹತ್ವವನ್ನು ಪಡೆದುಕೊಂಡಿಲ್ಲ. ತಮ್ಮ ಸ್ವಂತ ಊರಿನ ಬಗೆಗೆ ಬರೆಯುವಾಗಲೂ ಕಾಟ್ರಹಳ್ಳಿಯವರು ಯಾವುದೇ ರೀತಿಯ ಮುಲಾಜು, ಪಕ್ಷಪಾತಗಳನ್ನು ಇರಿಸಿಕೊಳ್ಳುವುದಿಲ್ಲ. ಉದಾಹರಣೆಗಾಗಿ ''ಇಲ್ಲಿ ಬೀಚಿ ಬೆಳೆದರು!'' ಎಂಬ ಲೇಖನವನ್ನೇ ಗಮನಿಸಬಹುದು. ಒಂದು ಕಾಲಕ್ಕೆ ರಾಜಾ ಸೋಮಶೇಖರ ನಾಯಕನಂಥ ಪಾಳೆಯಗಾರರು ಆಳಿದ, ಬೀಚಿಯಂಥ ಪ್ರಖ್ಯಾತ ಸಾಹಿತಿಗಳು ಹುಟ್ಟಿ ಬೆಳೆದ, ಎಸ್. ನಿಜಲಿಂಗಪ್ಪನವರಂಥ ಪ್ರಬುದ್ಧ ರಾಜಕಾರಣಿಗಳ ಹುಟ್ಟೂರಾದ ಹರಪನಹಳ್ಳಿಯು, ಇಂದು ದೇವೇಂದ್ರಪ್ಪನಂಥ ಪ್ರಸಿದ್ಧ ತೊಗಲು ಬೊಂಬೆಯಾಟದ ಕಲಾವಿದರನ್ನು, ಮುದೇನೂರು ಸಂಗಣ್ಣನವರಂಥ ಸಹೃದಯ ಬರಹಗಾರರನ್ನು ಹೊಂದಿದ್ದೂ ಶಿಕ್ಷಣದ ಮಾರಾಟ ಕೇಂದ್ರವಾಗಿರುವುದನ್ನು, ಅವ್ಯವಸ್ಥೆಗಳ ಆಗರವಾಗಿರುವುದನ್ನು, ಕೊಳಚೆ ಗುಂಡಿಯಾಗಿರುವುದನ್ನು ನೇರವಾಗಿ ಟೀಕಿಸುತ್ತಾರೆ. ಆದರೆ ಇಲ್ಲಿ ಆಗಿ ಹೋದ ಕವಯತ್ರಿ ಹರಪನಹಳ್ಳಿ ಭೀಮವ್ವನ ಬಗ್ಗೆ ಪ್ರಸ್ತಾಪಿಸಲು ಲೇಖಕರು ಮರೆತಿದ್ದಾರೆನ್ನಬಹುದು. ಅದೇನಿದ್ದರೂ ಲೇಖನಕ್ಕೆ ಪೂರಕ ಅಂಶವಷ್ಟೆ. ಲೇಖನದ ಒಟ್ಟು ಆಶಯಕ್ಕೆ ಅದರಿಂದೇನೂ ಭಂಗ ಬಂದಿಲ್ಲ.

ಇಲ್ಲಿನ ಬರೆಹಗಳೆಲ್ಲಾ ವೈಚಾರಿಕ ಚಿಂತನೆಗಳಿಂದ ಪರಿಪ್ಲುತವಾಗಿದೆ. ಅವುಗಳ ಹಿನ್ನೆಲೆಯಲ್ಲಿ ಸಮಾಜದ ಸ್ವಾಸ್ಥ್ಯದ ಬಗೆಗೆ ಲೇಖಕರಿಗಿರುವ ಕಾಳಜಿ ಎದ್ದುಕಾಣುತ್ತದೆ. ಕೆಲವೆಡೆಗಳಲ್ಲಿ ವಸ್ತು- ವಿಷಯ-ಸಮಸ್ಯೆಗಳ ಕುರಿತ ತಾತ್ವಿಕ ಚಿಂತನೆಗಳೂ ಪ್ರತಿಪಾದಿತವಾಗಿವೆ. ''ಹರೆಯದ ಪ್ರೇಮ-ಕಾಮ'' ಎಂಬ ಲೇಖನದಲ್ಲಿ ಹದಿಹರೆಯದ ಗಂಡು-ಹೆಣ್ಣುಗಳು ಪರಸ್ಪರ ಆಕರ್ಷಣೆಗೊಳಗಾಗುವುದು ಸರ್ವೇ ಸಾಮಾನ್ಯವೆನ್ನುವ ಲೇಖಕರು ಇಂದಿನ ಪರಿಸರ ಮತ್ತು ಶಿಕ್ಷಣಗಳೂ ಅದಕ್ಕೆ ಪೂರಕವಾಗಿವೆಯೆನ್ನುತ್ತಾರೆ. ಅದರಿಂದಾಗಬಹುದಾದ ಅನಾಹುತಗಳನ್ನು ತಪ್ಪಿಸಲು ಯೋಗ್ಯವಾದ ಸಹಶಿಕ್ಷಣ ಅಗತ್ಯವೆನ್ನುತ್ತಾರೆ. ಪ್ರಸ್ತುತ ಲೇಖನದಲ್ಲಿನ ಚಿಂತನೆಯ ಧಾಟಿ ಕೆಲವೊಮ್ಮೆ ಪ್ರತಿಗಾಮಿ ನಿಲುವಿನದಾಗಿಯೂ ಕೆಲವೊಮ್ಮೆ ದ್ವಂದ್ವ ಪೂರ್ಣವಾಗಿಯೂ ಕಂಡರೆ ಆಶ್ಚರ್ಯವಿಲ್ಲ. ಕೆಲವೆಡೆ ಪುರಾಣದ ಸಂಗತಿಗಳನ್ನು ಉಲ್ಲೇಖಿಸುವಾಗ ಲೇಖಕರು ತಪ್ಪು ಮಾಹಿತಿಯನ್ನು ನೀಡಿರುವುದೂ ಇದೆ. ಉದಾಹರಣೆಗೆ ''ಎಲ್ಲಿ ಮನ ಭಯಶೂನ್ಯ'' ಎಂಬ ಲೇಖನದಲ್ಲಿ ಕೃಷ್ಣನ ಬಗ್ಗೆ ಪ್ರಸ್ತಾಪಿಸುತ್ತಾ ''ಸೂರ್ಯನನ್ನು ಕ್ಷಣಹೊತ್ತು ಕಾಣದಂತೆ ಮಾಡಿ ಭೀಷ್ಮನ ಅಂತ್ಯಕ್ಕೆ ನೆರವಾದ'' ಎನ್ನುತ್ತಾರೆ. ವಾಸ್ತವವಾಗಿ ಕೃಷ್ಣನು ತನ್ನ ಸುದರ್ಶನವನ್ನು ಅಡ್ಡ ಹಿಡಿದು, ಸೂರ್ಯನನ್ನು ಮರೆಮಾಡಿ ನೆರವಾದುದು ಸೈಂಧವನ ವಧೆಗೆ, ಹೊರತು ಭೀಷ್ಮನ ಅಂತ್ಯಕ್ಕಲ್ಲ. ಇಂತಹ ಸಣ್ಣಪುಟ್ಟ ದೋಷ, ಮಿತಿಗಳೇನೇ ಇದ್ದರೂ ಅವುಗಳು ಲೇಖಕರ -ಲೇಖನದ ಒಟ್ಟು ಆಶಯಕ್ಕೆಂದೂ ಬಾಧಕವೆನಿಸುವುದಿಲ್ಲ.

**೩. ಪತ್ರ ಸಾಹಿತ್ಯ:**

ಪತ್ರ ಸಾಹಿತ್ಯವು ಇನ್ನೊಂದು ಪ್ರಮುಖ ಪ್ರಕಾರವಾಗಿ ಗಮನ ಸೆಳೆಯುತ್ತದೆ. ಶ್ರೇಷ್ಠ ಸಾಹಿತಿಗಳ ಪತ್ರಗಳಲ್ಲಿ ವಿಶೇಷವಾದ ಸಾಹಿತ್ಯಿಕ ಮೌಲ್ಯವಿರುತ್ತದೆ. 'ಪತ್ರಗಳು ಚಿತ್ರಿಸಿದ ಗೋವಿಂದ ಪೈ' ಯಂತಹ ಕೃತಿಗಳು ಈ ನಿಟ್ಟಿನಲ್ಲಿ ಈಗಾಗಲೇ ಹೆಸರು ಪಡೆದಿವೆ. ಇದೀಗ ಇನ್ನೊಂದು ಮೌಲಿಕ ಕೃತಿಯು ಕನ್ನಡದ ಪತ್ರಿಕಾ ಸಾಹಿತ್ಯಕ್ಕೆ ಸೇರ್ಪಡೆಯಾಗಿದೆ. ''ನಾಡಿ'' ಎಂಬ ಅರ್ಥಪೂರ್ಣ ಶೀರ್ಷಿಕೆಯಿಂದ ಪ್ರಕಟವಾಗಿರುವ ಈ ಕೃತಿಯಲ್ಲಿ ಕನ್ನಡದ ಹೆಸರಾಂತ ಸಾಹಿತಿ ನಿರಂಜನರ ಆಯ್ದ ಪತ್ರಗಳಿವೆ. ಅವರ ಮಕ್ಕಳಾದ ಸೀಮಂತಿನಿ ಮತ್ತು ತೇಜಸ್ವಿನಿಯರು ಇಲ್ಲಿನ ಪತ್ರಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಕಾಲ ಕಾಲಕ್ಕೆ ನಿರಂಜನರು ಬರೆದ ಪತ್ರಗಳಲ್ಲಿ ಕೆಲವನ್ನಷ್ಟೆ ಆಯ್ದು ಇಲ್ಲಿ 'ಸಾಧನಾ', 'ಪಯಣ', 'ಕವಿ ಕಲ್ಪನೆಯ ಪುನರುತ್ಥಾನ', 'ಹೆಜ್ಜೆ' ಮತ್ತು 'ಅದೂ ಇದೂ' ಎಂಬ ಐದು ವಿಭಾಗಗಳಲ್ಲಿ ಜೋಡಿಸಲಾಗಿದೆ. ಅನುಬಂಧದಲ್ಲಿ ನಿರಂಜನರ ಸಾಹಿತ್ಯ ಗ್ರಂಥಸೂಚಿಯನ್ನೂ, ಜೀವನದ ಪ್ರಮುಖ ಘಟ್ಟಗಳನ್ನೂ, ನೀಡಲಾಗಿದೆ.

ಪತ್ರಗಳೆಂದಾಕ್ಷಣ ಇವೆಲ್ಲಾ ಬಂಧುಗಳಿಗೋ, ಮಿತ್ರರಿಗೋ, ಕಛೇರಿಗೋ ಬರೆದು ರವಾನಿಸಿದ ವ್ಯಾವಹಾರಿಕ ಇಲ್ಲವೇ ಖಾಸಗಿ ಪತ್ರಗಳೆಂದು ತಿಳಿದರೆ ತಪ್ಪಾಗುತ್ತದೆ. ಅಂತಹ ಪತ್ರಗಳು ಇಲ್ಲಿ ಇಲ್ಲವೆಂದು ಇದರ ಅರ್ಥವಲ್ಲ. ಮೊದಲ ಭಾಗವಾದ ''ಸಾಧನಾ''ದಲ್ಲಿ ನಿರಂಜನರು ''ಉಷಾ'' ಮತ್ತು ''ಜನಪ್ರಗತಿ'' ಪತ್ರಿಕೆಗಳಿಗೆ ಪತ್ರರೂಪದಲ್ಲಿ ಬರೆಯುತ್ತಿದ್ದ ಅಂಕಣ ಬರಹಗಳನ್ನು ಆಯ್ದು ಕೊಡಲಾಗಿದೆ. ಮೇಲು ನೋಟಕ್ಕೆ ಇವುಗಳು ನಿರಂಜನರು ತಮ್ಮ ಪ್ರಿಯತಮೆ ಅನುಪಮರನ್ನುದ್ದೇಶಿಸಿ ಬರೆದ ಖಾಸಗಿ ಪತ್ರಗಳೆಂದು ಭಾಸವಾದರೂ, ಇವುಗಳ ವೈಶಿಷ್ಟ್ಯವಿರುವುದು ಮೌಲಿಕವೂ, ಅಪೂರ್ವವೂ ಆದ ಸಾಹಿತ್ಯಿಕ ಚರ್ಚೆಗಳನ್ನು ನಡೆಸುವುದರಲ್ಲಿ. ಹಾಗಾಗಿ ಎರಡು ಅಂಶಗಳಿಂದ ಇವು ವಿಶಿಷ್ಟವೆನಿಸಿವೆ. ಒಂದು- ಅಂಕಣ ಬರಹವನ್ನು ಪತ್ರ ರೂಪದಲ್ಲಿ. - ಅದೂ ಪ್ರಿಯತಮೆಯನ್ನುದ್ದೇಶಿಸಿ- ಬರೆದಿರುವುದು; ಇನ್ನೊಂದು - ಪತ್ರ ಮಾಧ್ಯಮದ ಮೂಲಕ ಮಹತ್ವದ ಸಾಹಿತ್ಯಿಕ ಚರ್ಚೆಯನ್ನು ನಡೆಸಿರುವುದು ಇಲ್ಲಿನ ಪತ್ರಗಳಲ್ಲಿ ನಿರಂಜನರು ಅನುಪಮಾರನ್ನು ಸಂದರ್ಭೋಚಿತವಾಗಿ ಸಂಬೋಧಿಸುವ ರೀತಿ ಅನನ್ಯವೂ, ಅರ್ಥಪೂರ್ಣವೂ ಆಗಿದೆ. ಸ್ವಾತಂತ್ರ್ಯ ದಿನದಂದು ಬರೆಯುವಾಗ ' ಪ್ರಿಯ ಸ್ವತಂತ್ರೆ' ಎಂಬುದಾಗಿ ಸಂಬೋಧಿಸಿದರೆ ಪ್ರಗತಿಶೀಲ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ' ಪ್ರೀತಿಯ ಪಗತಿಶೀಲೆ' ಎಂದು ಪ್ರಾರಂಭಿಸುತ್ತಾರೆ. ನ್ಯಾಯಾನ್ಯಾಯಗಳ ಸಮಸ್ಯೆಗಳಿಗೆ ದೃಷ್ಟಾರರಾಗಿ ಬರೆಯುವಾಗ 'ನ್ಯಾಯಪ್ರಿಯಳೆ' ಎಂಬುದಾಗಿ ಸಂಬೋಧಿಸುತ್ತಾರೆ.

ಇಂತಹ ವಿಶಿಷ್ಟ ರೀತಿಯ ಅಂಕಣ ಬರಹ ಮತ್ತು ಕೆಲವು ಅಪೂರ್ವ ಪತ್ರಗಳ ಜತೆಗೆ ೧೯೭೭ ರಲ್ಲಿ ದಾವಣಗೆರೆಯಲ್ಲಿ ನಡೆದ ಪ್ರಗತಿಪಂಥದ ಅಧ್ಯಕ್ಷ ಭಾಷಣದಿಂದ

ಆಯ್ದ ಭಾಗವನ್ನೂ ಇಲ್ಲಿ ಕೊಡಲಾಗಿದೆ. ಆದುದರಿಂದಲೇ ಇಲ್ಲಿರುವವುಗಳೆಲ್ಲಾ 'ಸಂಕೀರ್ಣ' ಅರ್ಥದ ಪತ್ರಗಳು.

'ನಾಡಿ'ಯ ಐದು ಭಾಗಗಳಲ್ಲಿನ ಪತ್ರಗಳು ಇಲ್ಲವೇ ಬರಹಗಳು ಸಮಕಾಲೀನ ಸಾಹಿತ್ಯದ ಕುರಿತಂತೆ ಬಹು ಮುಖ್ಯ ಚರ್ಚೆಗಳನ್ನೊಳಗೊಂಡಿವೆ. 'ಹೆಜ್ಜೆ' ಭಾಗದ ಪತ್ರಗಳಂತೂ ಅತ್ಯಂತ ಮೌಲಿಕವೆನಿಸುತ್ತವೆ. ನಿರಂಜನರು ಕೊನೆಗೂ ಬರೆಯದೆ ಉಳಿದ ಅವರ ಕನಸಿನ ಕಾದಂಬರಿ' ಪ್ರಾಗ್ಭಾರತ ಕಥಾ' ಅಥವಾ 'ಹೆಜ್ಜೆ'ಯ ಬಗೆಗಿನ ಕೆಲವು ಬಿಡಿ ಬಿಡಿ ವಿವರಗಳು ಇಲ್ಲಿನ ಪತ್ರಗಳಲ್ಲಿ ಲಭ್ಯವಾಗುತ್ತವೆ. ಜತೆಗೆ ತುಳುನಾಡಿನ ಸಂಸ್ಕೃತಿ, ಆಚಾರ-ವಿಚಾರಗಳನ್ನು ಕುರಿತ ಸಂಶೋಧನಾತ್ಮಕ ಹೊಳಹುಗಳೂ ಇಲ್ಲಿವೆ. ಉದಾಹರಣೆಗಾಗಿ ನಿರಂಜನರು ದಿನಾಂಕ ೧೫.೮.೧೯೭೪ ರಂದು ಅಮೃತ ಸೋಮೇಶ್ವರರಿಗೆ ಬರೆದಿದ್ದ ಪತ್ರವೊಂದರ ಸಾಲುಗಳನ್ನು ಗಮನಿಸಬಹುದು.... ''ಈ ಮಧ್ಯೆ ಕಾಡುತ್ತಿದ್ದ ಒಂದೆರಡು ಸಂದೇಹಗಳ ನಿವಾರಣೆಗಾಗಿ ಪಶ್ಚಿಮ ಸಮುದ್ರ ದಾಟಿ ಆಫ್ರಿಕದತ್ತ ಹೋಗಬೇಕಾಯಿತು. ಅಳಿಯ ಸಂತಾನ ಪದ್ಧತಿ ಇರುವ ಮತ್ತು ಭೂತಾರಾಧನೆ ಇರುವ ಬುಡಕಟ್ಟುಗಳನ್ನು ಕಂಡೆ. ಬಂಟು ಮತ್ತು ತಿರಿಕಿ ಬಂಟು ಬಣಗಳು. ಬಂಟು- ಎತ್ತರ ಶರೀರ, brown ಬಣ್ಣ. ಕೋಳಿಗೆ ಇಲ್ಲಿ ಮಹತ್ವ. ತಾವು ಜೋರಿನಿಂದಿದ್ದು ಕಪ್ಪು ಜನರನ್ನು ದುಡಿಸುವವರು. ಅಧ್ಯಯನ ಇನ್ನೂ ಪೂರ್ಣವಾಗಿಲ್ಲ. ಇದು ಅದ್ಭುತ- ಎಂದಷ್ಟೇ ಈಗ ಹೇಳಬಲ್ಲೆ. ಆರ್ಯರ ಪ್ರವೇಶ (ಪರಶುರಾಮ ಸೃಷ್ಟಿ- ೧೦೦೦ BC)ಕ್ಕಿಂತಲೂ ಮುಂಚೆಯೇ ಬಂಟ ಸಮಾಜದ ರಚನೆ ತುಳುನಾಡಿನಲ್ಲಿ ಆಗಿತ್ತು. ಇದು ಮಾತ್ರ ಖಚಿತ (ಪು. ೭೩) ಇಂತಹ ಮೌಲಿಕ ವಿಚಾರಗಳನ್ನೊಳಗೊಂಡ ಅನೇಖ ಪತ್ರಗಳು 'ಹೆಜ್ಜೆ' ಭಾಗದಲ್ಲಿವೆ. ಇಲ್ಲಿನ ಪತ್ರಗಳನ್ನೆಲ್ಲಾ ಕಾಲಾನುಕ್ರಮದಲ್ಲಿ ಜೋಡಿಸಿದ್ದರೆ ಚೆನ್ನಾಗಿತ್ತೇನೋ! ಎಂದೆನಿಸುತ್ತದೆ. ಒಟ್ಟಿನಲ್ಲಿ ''ಪತ್ರಗಳನ್ನು ದೈನಂದಿನ ಬದುಕಿನ ಆಗುಹೋಗುಗಳ ಪಟ್ಟಿಯಾಗಿ ಕಾಣುವುದಕ್ಕಿಂತ ಹಲವು ವರ್ಷಗಳ ಅವಧಿಯನ್ನು ವ್ಯಾಪಿಸುವ ವೈಯಕ್ತಿಕ ' ದಾಖಲೆಗಳಾಗಿ' ನೋಡಿದರೆ ಆ ವ್ಯಕ್ತಿಯ ಜೀವನ ವಿಚಾರಗಳ ಹೊಳಹು ಖಂಡಿತವಾಗಿಯೂ ದೊರೆಯುತ್ತದೆ. ಒಂದು ಬಗೆಯ ಆತ್ಮಕಥನವೇ ಈ ಮೂಲಕ ಸೃಷ್ಟಿಯಾಗುವುದು ಸಾಧ್ಯ'' (ಪು. i) ಎಂಬ ಸಂಪಾದಕರ ಮಾತು ನಿರಂಜನರ ಪತ್ರಗಳ ಮಟ್ಟಿಗೆ ಅಕ್ಷರಶಃ ಸತ್ಯವೆನಿಸುತ್ತದೆ.

**೪. ಕಾನೂನು ಸಾಹಿತ್ಯ:**

ಕನ್ನಡದ ಹಲವು ನಿಯತಕಾಲಿಕೆಗಳು ಹೊಸ ಹೊಸ ಸಾಹಿತ್ಯರೂಪಗಳನ್ನು ಬೆಳಕಿಗೆ ತರುವಲ್ಲಿ ಮಹತ್ತರವಾದ ಪಾತ್ರವಹಿಸುತ್ತವೆ. ಅದರಂತೆ ಪ್ರಶ್ನೋತ್ತರ ರೂಪದಲ್ಲೋ, ಸಲಹೆಯ ರೂಪದಲ್ಲೋ, ಲೇಖನದ ರೂಪದಲ್ಲೋ ಕಾನೂನು ಹಾಗೂ ಆರೋಗ್ಯ ವಿಚಾರಗಳು ಇಂದು ಕನ್ನಡದ ಅನ್ಯಾನ್ಯ ಪತ್ರಿಕೆಗಳಲ್ಲಿ

ಪ್ರಕಟವಾಗುತ್ತಿವೆ. ಓದುಗರಿಂದ ಬರುವ ಇತ್ಯಾತ್ಮಕ ಪ್ರತಿಕ್ರಿಯೆಗಳ ಫಲವಾಗಿ ಅವು ಮುಂದೆ ಪುಸ್ತಕ ರೂಪದಲ್ಲೂ ಪ್ರಕಟವಾಗುತ್ತವೆ. ಹಾಗಾಗಿಯೇ ನಾವಿಂದು ಕಾನೂನು ಸಾಹಿತ್ಯ, ವೈದ್ಯವಿಜ್ಞಾನದಂತಹ ನವೀನ ಮಾದರಿಯ ಕೃತಿಗಳನ್ನು ಕಾಣಲು ಸಾಧ್ಯವಾಗಿದೆ.

ತೀರಾ ಇತ್ತೀಚಿನವರೆಗೆ ನ್ಯಾಯಾಲಯದ ವಾದ, ಪ್ರತಿವಾದ, ತೀರ್ಪು, ಆದೇಶಗಳೆಲ್ಲ ಆಂಗ್ಲ ಭಾಷೆಯಲ್ಲೇ ಇರುತ್ತಿದ್ದವು. ತತ್ಸಂಬಂಧವಾದ ಗ್ರಂಥಗಳೂ ಆಂಗ್ಲ ಭಾಷೆಯಲ್ಲೇ ರಚನೆಯಾಗುತ್ತಿದ್ದುವು. ಸಾಮಾನ್ಯ ಕಕ್ಷಿಗಾರ ತಮ್ಮೆದುರು ನ್ಯಾಯಾಲಯದಲ್ಲಿ ನಡೆಯುವ ವಿದ್ಯಮಾನಗಳಿಗೆಲ್ಲಾ ಮೂಕ ಪ್ರೇಕ್ಷಕರಾಗಿ ನಿಲ್ಲಬೇಕಾದ ಪರಿಸ್ಥಿತಿಯಿತ್ತು. ಆದರೆ ಈಗ ಸರಕಾರದ ಘೋಷಣೆಯ ಫಲವಾಗಿ ನ್ಯಾಯಾಲಯದ ವ್ಯವಹಾರಗಳೆಲ್ಲಾ ಸಾಧ್ಯವಾದಷ್ಟೂ ಮಟ್ಟಿಗೆ ಕನ್ನಡದಲ್ಲೇ ನಡೆಯುವಂತಾಗಿದೆ. ಕಾನೂನು ಸಂಬಂಧಿಯಾದ ಗ್ರಂಥಗಳೂ ಕನ್ನಡದಲ್ಲಿ ರಚನೆಯಾಗ ತೊಡಗಿವೆ. ಈ ನಿಟ್ಟಿನಲ್ಲಿ ಎಸ್. ನಾರಾಯಣ ಮೂರ್ತಿಯವರ 'ಕಾನೂನು ಪಥ' ಒಂದು ಉಪಯುಕ್ತ ಕೃತಿಯಾಗಿದೆ. ಉದಯವಾಣಿ, ಯುಗಪುರುಷ, ತರಂಗ, ಸುಧಾ, ಕಸ್ತೂರಿ, ಕರ್ಮವೀರ, ಸುಗುಣಮಾಲಾ, ಕಾನೂನು ಪ್ರಪಂಚ, ಬೆಂಗಳೂರು ಪೋಲಿಸ್ ಜರ್ನಲ್ ಮುಂತಾದ ಪತ್ರಿಕೆಗಳಲ್ಲಿ ಲೇಖಕರು ಕಾಲಕಾಲಕ್ಕೆ ಬರೆದ ಒಟ್ಟು ೨೯ ಲೇಖನಗಳನ್ನು ಇಲ್ಲಿ ಸಂಕಲಿಸಲಾಗಿದೆ. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಾಗಿ ನಿವೃತ್ತರಾದ ನಾರಾಯಣ ಮೂರ್ತಿಯವರ ವ್ಯಾಪಕವಾದ ಸೇವಾ ಅನುಭವದ ಫಲವಾಗಿ ಇಲ್ಲಿನ ಪ್ರತಿಯೊಂದು ಲೇಖನಗಳೂ ಮೂಡಿ ಬಂದಿವೆ.

ವಾಸ್ತವವಾಗಿ ಕಾನೂನೆಂಬುದು ಶಾಸ್ತ್ರ ಸಂಬಂಧಿಯಾದುದು. ಶಾಸ್ತ್ರ ಗ್ರಂಥವೆಂದಾಕ್ಷಣ ಮೂಗು ಮುರಿಯುವ ಮಂದಿ ನಮ್ಮಲ್ಲಿ ಅನೇಕರಿದ್ದಾರೆ. ಆದರೆ ಪ್ರಸ್ತುತ 'ಕಾನೂನು ಪಥ' ಅಂಥ ಕೃತಿಯಲ್ಲ. ಶಾಸ್ತ್ರ ವಿಷಯವನ್ನು ಆಕರ್ಷಕವಾಗಿ, ಓದುಗರ ಮನಸ್ಸಿಗೆ ನಾಟುವಂತೆ ಪರಿಣಾಮಕಾರಿಯಾಗಿ ಇಲ್ಲಿ ನಿರೂಪಿಸಲಾಗಿದೆ. ಕಾನೂನಿನ ಅಂಶಗಳನ್ನು, ನ್ಯಾಯಾಲಯಗಳ ವಿಧಿನಿಯಮಗಳನ್ನು ಪ್ರತಿಪಾದಿಸಲು ಅವುಗಳಿಗೆ ಪೂರಕವಾದ ಸ್ವಾರಸ್ಯಕರ ಘಟನೆಗಳನ್ನು ಹಿನ್ನೆಲೆಯಾಗಿ ನೀಡಲಾಗಿದೆ. ಸತ್ರನ್ಯಾಯಾಲಯ, ಉಚ್ಚನ್ಯಾಯಾಲಯ ಹಾಗೂ ಸರ್ವೋಚ್ಚ ನ್ಯಾಯಾಲಯಗಳ ಪ್ರಕರಣಗಳನ್ನು ಉದಾಹರಿಸುತ್ತಾ, ಅಲ್ಲಿನ ವಾದವೈಖರಿ, ಆದೇಶ, ತೀರ್ಪುಗಳನ್ನು ಮನದಟ್ಟು ಮಾಡಿಕೊಡಲಾಗಿದೆ. ಹಾಗಾಗಿ ಇಲ್ಲಿನ ಯಾವ ಲೇಖನವೂ ನೀರಸವೆನಿಸುವುದಿಲ್ಲ; ಕುತೂಹಲಕರವಾಗಿ ಓದಿಸಿಕೊಂಡು ಹೋಗುತ್ತದೆ. ಭಾಷೆಯೂ ಸರಳವಾಗಿದೆ. ಇಲ್ಲಿ ಪ್ರತಿಪಾದಿಸಿರುವ ವಿಚಾರಗಳಾಗಲಿ, ಪ್ರಕರಣಗಳಾಗಲಿ ಸಾಮಾನ್ಯ ಜನರಿಗೂ ಅರ್ಥವಾಗುವ ರೀತಿಯಲ್ಲಿವೆ. ಕೌಟುಂಬಿಕ, ಸಾಮಾಜಿಕ ನ್ಯಾಯ ತೀರ್ಮಾನಗಳು ಆಯಾ ಮತ-ಧರ್ಮಗಳ ಧಾರ್ಮಿಕ ಇಲ್ಲವೆ ಸಾಂಪ್ರದಾಯಿಕ

ವಿಧಿ-ವಿಧಾನಗಳನ್ನು ಅವಲಂಭಿಸಿರುತ್ತವೆ ಎಂಬ ಅಂಶ ಇಲ್ಲಿಯ ಕೆಲವು ಬರಹಗಳಿಂದ ಸ್ಪಷ್ಟವಾಗುತ್ತದೆ ''ಹಿಂದೂ ವಿವಾಹದಲ್ಲಿ ಸಪ್ತಪದಿ'', '' ಏನೀ ವಿಚಿತ್ರ ವಿವಾಹ!'' ಇತ್ಯಾದಿ ಲೇಖನಗಳನ್ನು ಇಲ್ಲಿ ಉದಾಹರಿಸಬಹುದು. ಒಟ್ಟಿನಲ್ಲಿ ನಿತ್ಯ ಜೀವನದ ಮುಖ್ಯ ಆಗುಹೋಗುಗಳಿಗೆ ಸಂಬಂಧಪಟ್ಟ ಹಲವು ಮೊಕದ್ದಮೆಗಳನ್ನು ನಾರಾಯಣ ಮೂರ್ತಿಯವರು ಇಲ್ಲಿ ಆರಿಸಿಕೊಂಡಿದ್ದಾರೆ. ಅವುಗಳ ಮೂಲಕ ಬಹು ಮುಖ್ಯವಾದ ಕಾನೂನು ವಿಷಯಗಳನ್ನು ಚರ್ಚಿಸಿದ್ದಾರೆ. ವಿವಾಹದ ಚೌಕಟ್ಟಿನಲ್ಲಿ ಹೆಂಡತಿಯ ಹಕ್ಕು, ಮಗುವಿನ ಹಕ್ಕು, ಗರ್ಭದಲ್ಲಿರುವ ಶಿಶುವಿನ ಹಕ್ಕು, ತಂದೆಯ ಹಕ್ಕು, ತಾಯಿಯ ಹಕ್ಕು, ಆಪಾದಿತನಾಗಿ ಪೋಲಿಸರ ಕೈಗೆ ಸಿಕ್ಕ ಪ್ರಜೆಯ ಹಕ್ಕು, ದಾಂಪತ್ಯಕ್ಕಿರುವ ಕಾನೂನಿನ ಚೌಕಟ್ಟು, ವಿವಾಹ ವಿಚ್ಛೇದ, ನ್ಯಾಯಾಲಯಗಳಲ್ಲಿ ಸಾಕ್ಷಿಗಳ ಪಾತ್ರ - ಮುಂತಾದ ಹತ್ತು ಹಲವು ಅಂಶಗಳು ಕಾನೂನಿನ ಪರಿಧಿಯೊಳಗಡೆ ಚರ್ಚಿತವಾಗಿವೆ. ಸಾಮಾನ್ಯ ಓದುಗರಿಗೂ ನ್ಯಾಯಾನ್ಯಾಯಗಳ ಸೂಕ್ಷ್ಮಗಳನ್ನು ಮನದಟ್ಟು ಮಾಡಿಕೊಡುವ ಒಳ್ಳೆಯ ಕಾನೂನು ಮಾರ್ಗದರ್ಶಿಯಿದು.

**೫. ಅಪರಾಧ ಶಾಸ್ತ್ರ:**

ಈಶ್ವರ ಎಸ್. ಎಣ್ಣೀರ ಅವರ ''ಬೆರಳು ಮುದ್ರೆಗಳು'' (Finger Prints) ಅಪರಾಧ ಶಾಸ್ತ್ರಕ್ಕೆ ಸಂಬಂಧಿಸಿದ ಒಂದು ಪ್ರಮುಖ ಕೃತಿಯಾಗಿದೆ. ಅಪರಾಧವನ್ನು, ಅದೇ ರೀತಿಯಲ್ಲಿ ಅಪರಾಧಿಯನ್ನು ಪತ್ತೆಹಚ್ಚುವಲ್ಲಿ ಬೆರಳು ಮುದ್ರೆಗಳ ಪಾತ್ರವೇನೆಂಬುದನ್ನು ಅದರ ವಿಧಿ-ವಿಧಾನಗಳೊಂದಿಗೆ ವಿವರಿಸುವ ಕೃತಿಯಿದು. ಬೆರಳು ಮುದ್ರೆಗಳ ಐತಿಹಾಸಿಕ ಹಿನ್ನೆಲೆ, ಅಪರಾಧ ನಡೆದ ಸ್ಥಳವೊಂದರಲ್ಲಿ ಮೂಡಿರಬಹುದಾದ ಬೆರಳು ಮುದ್ರೆಗಳನ್ನು ಪತ್ತೆಹಚ್ಚಿ, ಸಂಗ್ರಹಿಸುವ ಬಗೆ, ಸಂಗ್ರಹಿಸಿದ ಮುದ್ರೆಗಳನ್ನು ಸಂರಕ್ಷಿಸಿ ಭದ್ರವಾಗಿ ಪ್ರಯೋಗಾಲಯಕ್ಕೆ ಸಾಗಿಸುವ ವಿಧಾನ, ಅಲ್ಲಿ ಅವುಗಳನ್ನು ಪರೀಕ್ಷೆಗೊಳಪಡಿಸಿ ಯೋಗ್ಯ ಫಲಿತಾಂಶಗಳನ್ನು ಪಡೆಯುವ ಕ್ರಮ-ಇತ್ಯಾದಿ ಅಂಶಗಳನ್ನು ಒಟ್ಟು ೨೩ ಕಿರು ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ತರುಣ ವಕೀಲರಿಗೆ, ಅಪರಾಧ ಶಾಸ್ತ್ರವನ್ನು ಪ್ರಧಾನ ವಿಷಯವಾಗಿ ಅಧ್ಯಯನ ಮಾಡುತ್ತಿರುವ ಕಾನೂನು ವಿದ್ಯಾರ್ಥಿಗಳಿಗೆ, ಪೋಲಿಸ್ ತರಬೇತಿ ಪಡೆಯುತ್ತಿರುವವರಿಗೆ, ಪೋಲಿಸ್ ಇಲಾಖೆಯ ಇತರ ಅಧಿಕಾರಿಗಳಿಗೆ, ಪೇದೆಗಳಿಗೆ - ಹೀಗೆ ಹಲವರಿಗೆ ಈ ಪುಸ್ತಕ ಸಹಕಾರಿಯಾಗಬಲ್ಲುದು. ಆಂಗ್ಲ ಭಾಷೆಯಲ್ಲಿ ತತ್ಸಂಬಂಧವಾದ ಅನೇಕ ಗ್ರಂಥಗಳು ಈಗಾಗಲೇ ರಚನೆಯಾಗಿದ್ದರೂ ಕನ್ನಡದಲ್ಲಿನ್ನೂ ಅದರ ಕೊರತೆಯಿತ್ತು. ಅದನ್ನು ಈಶ್ವರ ಎಸ್. ಎಣ್ಣೀರ ಅವರು ಪ್ರಸ್ತುತ ಕೃತಿಯ ಮೂಲಕ ತುಂಬಿಕೊಟ್ಟಿದ್ದಾರೆ. ಹಾಗಾಗಿ ಐತಿಹಾಸಿಕ ದೃಷ್ಟಿಯಿಂದ ಈ ಗ್ರಂಥಕ್ಕೆ ವಿಶಿಷ್ಟವಾದ ಸ್ಥಾನವಿದೆ. ಸ್ವತಃ ಬೆರಳು ಮುದ್ರೆ ತಜ್ಞರಾದ ಎಣ್ಣೀರ ಅವರ ವ್ಯಾಪಕವಾದ

ಸ್ವಾನುಭವದ ಫಲವಾಗಿ ಹುಟ್ಟಿಕೊಂಡ ಈ ಕೃತಿಗೆ ವೈಜ್ಞಾನಿಕ ಮಹತ್ವವೂ ಇದೆ. ಪೋಲಿಸ್ ಇಲಾಖೆಯಲ್ಲಿರುವುದರಿಂದಲೋ ಏನೋ!- ಲೇಖಕರ ಬರವಣಿಗೆಯ ಭಾಷೆ ಇನ್ನಷ್ಟು ಪರಿಷ್ಕಾರಗೊಳ್ಳಬೇಕಾದ ಅಗತ್ಯವನ್ನು ಕೃತಿಯು ಎತ್ತಿತೋರಿಸುತ್ತದೆ. ಆದರೂ ತಾಯ್ನುಡಿಯಲ್ಲಿ ಇಂಥದೊಂದು ಕೃತಿಯನ್ನು ರಚಿಸಬೇಕೆಂಬ ಲೇಖಕರ ಉತ್ಸಾಹ, ಪ್ರಯತ್ನಗಳು ಪ್ರಶಂಸನೀಯವಾಗಿವೆ. ಅನೇಕ ಸಂದರ್ಭಗಳಲ್ಲಿ ಈ ರೀತಿಯ ಶಾಸ್ತ್ರಗ್ರಂಥಗಳ ರಚನೆಯಲ್ಲಿ ವಿಷಯ ಪ್ರತಿಪಾದನೆ ಮುನ್ನೆಲೆಗೆ ನಿಂತು ಭಾಷೆಯು ಕೇವಲ ಮಾಧ್ಯಮವಾಗಿ ಹಿನ್ನೆಲೆಗೆ ಸರಿಯುತ್ತದೆ. ಪ್ರಸ್ತುತ ''ಬೆರಳು ಮುದ್ರೆಗಳು'' ಕೂಡ ಇದೇ ಸಾಲಿಗೆ ಸೇರಿದುದಾಗಿದೆ. ಎಂತಿದ್ದರೂ ಅಪರಾಧಶಾಸ್ತ್ರಕ್ಕೆ ಸಂಬಂಧಪಟ್ಟ ಕನ್ನಡ ಕೃತಿಗಳ ಗುಂಪಿಗೆ ಇದೊಂದು ಮೌಲಿಕ ಸೇರ್ಪಡೆಯೆನ್ನಬಹುದು.

**೬. ಕೃತಿ ಸೂಚಿ:**

ಕನ್ನಡದ ಹೆಸರಾಂತ ಸಾಹಿತಿ, ವಿದ್ವಾಂಸ, ಜಾನಪದ ತಜ್ಞ, ಅನುವಾದಕ ಹಾಗೂ ಪ್ರಾಧ್ಯಾಪಕರಾಗಿರುವ ಡಾ. ಸಿ.ಪಿ.ಕೆ ಯವರ ಸಮಗ್ರ ಕೃತಿಗಳ ಸೂಚಿಯೊಂದು ೧೯೯೪ ರಲ್ಲಿ ಪ್ರಕಟವಾಗಿದೆ. ''ಸಿ.ಪಿ.ಕೆ: ೧೨೫'' ಎಂಬ ಹೆಸರಿನ ಈ ಸೂಚಿಯಲ್ಲಿ ಸಿ.ಪಿ.ಕೆ. ಯವರು ರಚಿಸಿದ ವಿವಿಧ ಪ್ರಕಾರಗಳ ಒಟ್ಟು ೧೨೫ ಕೃತಿಗಳ ಪಟ್ಟಿಯಿದೆ. ಜತೆಗೆ ಕನ್ನಡದ ಹಲವು ಗಣ್ಯರು ಸಿ.ಪಿ.ಕೆ. ಯವರ ಬಗ್ಗೆ, ಅವರ ಕೃತಿಗಳ ಬಗ್ಗೆ ಅಲ್ಲಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳ ಆಯ್ದ ಭಾಗಗಳನ್ನೂ ಕೊಡಲಾಗಿದೆ. 'ಸಂವಹನ, ಮೈಸೂರು' ಪ್ರಕಟಿಸಿದ ಪ್ರಸ್ತುತ ಕೃತಿಸೂಚಿಯು, ಸಿ.ಪಿ.ಕೆ. ಯವರ ಬಗ್ಗೆ ತಿಳಿದುಕೊಳ್ಳಬಯಸುವವರಿಗೆ ಒಂದು ಉಪಯುಕ್ತ ಕೈಪಿಡಿಯಾಗಿದೆ.

**೭. ಇತರ ಕೃತಿಗಳು:**

ಇದುವರೆಗೆ ಪರಾಮರ್ಶಿಸಿದ ಕೃತಿಗಳನ್ನೆಲ್ಲಾ 'ಪ್ರಕಾರ' ಗಳನ್ನು ಹೋಲುವ ಸಾಹಿತ್ಯದ ಬೇರೆ ಬೇರೆ ರೂಪಗಳಾಗಿ ವರ್ಗೀಕರಿಸಲು ಸಾಧ್ಯವಾಗುತ್ತದೆ. ಆದರೆ ಇನ್ನೂ ಕೆಲವನ್ನು ನಿರ್ದಿಷ್ಟ ಸ್ವರೂಪದ ಕೃತಿಗಳಾಗಿ ಗುರುತಿಸುವುದು ಸ್ವಲ್ಪ ಕಷ್ಟ ಸಾಧ್ಯವೆನಿಸುತ್ತದೆ. ಎಂ. ಶಿವಕುಮಾರ್ ಅವರ ''ಸೈಕಲ್ ವಾಲ'' ದಂತಹ ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು. ಒಂದರ್ಥದಲ್ಲಿ ಇದು ಪ್ರಬಂಧಸಾಹಿತ್ಯದ ಸಾಲಿಗೆ ಸೇರಬಹುದಾದ ಕೃತಿ. ಸೈಕಲ್‌ನ ಹುಟ್ಟು-ಬೆಳವಣಿಗೆಗಳನ್ನೊಳಗೊಂಡ ಜೀವನ ಚರಿತ್ರೆಯನ್ನು ಲೇಖಕರಿಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ. ಜತೆಗೆ ತಾನು ಸೈಕಲ್‌ನೊಂದಿಗಿನ ಸಂಬಂಧದಲ್ಲಿ ಪಡೆದ ರೋಚಕ ಅನುಭವಗಳನ್ನೂ ರಸವತ್ತಾಗಿ ನಿರೂಪಿಸಿದ್ದಾರೆ. ಹಾಗಾಗಿ ಇದು ನಿಜವಾದ ಅರ್ಥದಲ್ಲಿ ಒಂದು ಸಂಕೀರ್ಣ ಕೃತಿಯೆನಿಸುತ್ತದೆ. ಏಕಕಾಲಕ್ಕೆ ಒಂದು 'ಗಂಭೀರ ಪ್ರಬಂಧ'ವಾಗಿಯೂ, 'ಲಲಿತ ಪ್ರಬಂಧ' ವಾಗಿಯೂ 'ಸೈಕಲ್‌ವಾಲ'' ಗಮನ ಸೆಳೆಯುತ್ತದೆ.

**ಸಮಾಪನ**

ಹೀಗೆ ಸಂಕೀರ್ಣದ ಪರಿಧಿಯೊಳಗಡೆ ಸಮಾವೇಶಗೊಳಿಸಬಹುದಾದ ಹಲವು ವೈವಿಧ್ಯಮಯ ಕೃತಿಗಳು ಪ್ರಸ್ತುತ ವರ್ಷದಲ್ಲಿ ಬೆಳಕು ಕಂಡಿವೆ. ಅಂಥವುಗಳಲ್ಲಿ ಕೆಲವು ಸಕಾಲದಲ್ಲಿ ಲಭಿಸದೆ ಹೋದುದರಿಂದಲೂ, ಇನ್ನು ಕೆಲವು ಸಾಹಿತ್ಯಿಕ ಮೌಲ್ಯದ ದೃಷ್ಟಿಯಿಂದ ಅಷ್ಟೇನೂ ಮಹತ್ವದವುಗಳಾಗಿ ಕಂಡುಬಾರದ್ದರಿಂದಲೂ ಅವೆಲ್ಲವುಗಳ ಕುರಿತು ಇಲ್ಲಿ ಪ್ರಸ್ತಾಪಿಸಲಾಗಿಲ್ಲ. ಏನೇ ಇದ್ದರೂ ಒಂದು ಕೃತಿಯನ್ನು ಬೆಲೆಗಟ್ಟಲಿರುವ ಮಾನದಂಡವು ಆಯಾ ಓದುಗರ ಅಭಿರುಚಿ, ಸಂಸ್ಕಾರಗಳ ಹಿನ್ನೆಲೆಯಲ್ಲಿ ರೂಪುಗೊಂಡುದಾಗಿರುತ್ತದೆ. ಒಬ್ಬಾತನಿಗೆ ಮೆಚ್ಚಿಕೆಯಾದ ಕೃತಿಯು ಇನ್ನೊಬ್ಬಾತನಿಗೆ ಮೆಚ್ಚಿಗೆಯಾಗಬೇಕೆಂದಿಲ್ಲ. ಹಾಗಾಗಿ ಸಾಹಿತ್ಯದಲ್ಲಿಂದು ಎಷ್ಟೇ ವೈಚಾರಿಕ ಅಂಶಗಳಿರಲಿ, ಮನವನ್ನು ತಟ್ಟಬಲ್ಲಂತಹ ಚಿಂತನೆಗಳಿರಲಿ, ಅಲ್ಲಿನ ಮೌಲ್ಯಗಳನ್ನು ಒಪ್ಪದಂತಹ ಒಂದು ಓದುಗ ವರ್ಗವಂತೂ ಎಂದೆಂದಿಗೂ ಇದ್ದೇ ಇರುತ್ತದೆ. ಇಂದು ಕನ್ನಡದಲ್ಲಿ ಪ್ರಕಟವಾಗುತ್ತಿರುವ ಎಲ್ಲಾ ಕೃತಿಗಳಿಗೂ ಈ ಮಾತು ಅನ್ವಯವಾಗುತ್ತದೆ. ಹಾಗೆಂದು ಸರ್ವರಿಂದಲೂ ಮೆಚ್ಚುಗೆಯನ್ನು ಗಳಿಸಬಲ್ಲಂತಹ ಕೃತಿ ಮಾತ್ರ ಸರ್ವಶ್ರೇಷ್ಠವಾದುದು ಎಂಬ ಗ್ರಹಿಕೆಯಲ್ಲಿ ಅರ್ಥವಿಲ್ಲ.

# ಅನುವಾದ ಸಾಹಿತ್ಯ

*ಎಚ್. ಎಸ್. ಶ್ರೀಮತಿ*

ಈ ವರ್ಷ ಕನ್ನಡಕ್ಕೆ ಸುಮಾರು ಎಪ್ಪತ್ತೆರಷ್ಟು ಕೃತಿಗಳು ವಿವಿಧ ಭಾಷೆಗಳಿಂದ ಅನುವಾದಗೊಂಡು ಬಂದಿವೆ. ಭಾಷೆ, ಸಾಹಿತ್ಯ, ಸಂಸ್ಕೃತಿ ಹಾಗೂ ಮಾಹಿತಿ ಜ್ಞಾನಗಳ ವಿಕಾಸದಲ್ಲಿ ಅನುವಾದಗಳು ವಹಿಸುವ ಪಾತ್ರ ಪ್ರಮುಖವಾದುದು. ಅನುವಾದಗಳು ಹೇಗಿರಬೇಕು ಎಂಬ ಬಗ್ಗೆ ಬಹುದೀರ್ಘವಾದ ಚರ್ಚೆಗಳು ನಡೆದಿವೆ. ಮೂಲಕೃತಿಯೊಂದಿಗಿನ ಅದರ ಸಂಬಂಧದ ಸ್ವರೂಪವನ್ನು ಒಂದೇ ಮಾತಿನಲ್ಲಿ ವಿವರಿಸುವುದು ಕಷ್ಟಸಾಧ್ಯ. ಮೂಲಕ್ಕೆ ಸಮಿಪವಾಗಿರುವುದು, ನಿಷ್ಠವಾಗಿರುವುದು ಎಂಬ ಮಾತುಗಳನ್ನು ಮತ್ತೆ ಮತ್ತೆ ವಿವಿಧ ಆಯಾಮಗಳಲ್ಲಿ ವಿವರಿಸಿಕೊಳ್ಳುವ ಅಗತ್ಯ ತಲೆದೋರುತ್ತದೆ. ಏಕೆಂದರೆ, ಈ ಸಾಮಿಪ್ಯ ಅಥವಾ ನಿಷ್ಠತೆಯ ಹೆಸರಿನಲ್ಲಿ ಬರುವ ಎಷ್ಟೋ ಪದಶಃ ಅನುವಾದಗಳು ಕನಿಷ್ಟ ಓದಿಸಿಕೊಂಡು ಹೋಗುವ ಗುಣವನ್ನು ಪಡೆಯಲಾರದೆ ಹೋಗುತ್ತವೆ. ಹಾಗೆಂದು ಓದಿಸಿಕೊಂಡು ಹೋಗುವ ಗುಣವೊಂದನ್ನು ಪ್ರಧಾನವೆಂದು ಪರಿಗಣಿಸುವ ಅನುವಾದಗಳು, ಮೂಲದ ಪರಿಚಯ ಹಾಗೂ ಅನುಭವಗಳನ್ನು ಕೊಡುವಲ್ಲಿ ವಿಫಲವಾಗುವ ಮೂಲಕ ಅನುವಾದಗಳ ಉಪಯುಕ್ತತೆಯನ್ನೇ ಪ್ರಶ್ನಿಸುತ್ತವೆ. ಈ ಎರಡು ಅತಿರೇಕಗಳನ್ನು ಗೆಲ್ಲುವುದು ಹೇಗೆ ಎಂಬುದೇ ಅನುವಾದಗಳಿಗಿರುವ ದೊಡ್ಡ ಸವಾಲು. ಸಫಲ ಅನುವಾದಗಳು ಇಂತಹದೊಂದು ಮಾರ್ಗವನ್ನು ಆಯಾ ಕೃತಿಗೆ ಸಂಬಂಧಿಸಿದಂತೆ ವಿಶಿಷ್ಟವಾಗಿ ರೂಪಿಸಿಕೊಳ್ಳುತ್ತವೆ. ಶಾಸ್ತ್ರಸಾಹಿತ್ಯವನ್ನು ನಿರ್ವಹಿಸುವಾಗ ಪಾರಿಭಾಷಿಕ ಪದಗಳು ಮುಖ್ಯ ಸವಾಲಾಗುತ್ತವೆ. ಹೊಸ ಪದಗಳನ್ನು ಸೃಷ್ಟಿಸಿ ಚಲಾವಣೆಗೆ ತರುವ ಸಾಮರ್ಥ್ಯವನ್ನೂ ಒಳಗೊಂಡಂತೆ ಶಾಸ್ತ್ರ ಭಾಷೆಯ ನಿರ್ಮಾಣದ ಹಲವು ಸಮಸ್ಯೆಗಳು ಅನುವಾದಕರ ಮುಂದೆ ಬರುತ್ತವೆ. ಈ ಭಾಷಿಕ ಸಾಮರ್ಥ್ಯದ ಜೊತೆಗೆ ಅನುವಾದಕರಿಗೆ ಆ ಶಾಸ್ತ್ರದ ಮೇಲೂ ಸಾಕಷ್ಟು ಒಳ್ಳೆಯ ಹಿಡಿತವಿದ್ದಾಗ ಮಾತ್ರ ಸುಸಂಗತವೂ, ಸುಸಂಬದ್ಧವೂ, ಸ್ಪಷ್ಟವೂ, ಸರಳವೂ ಆದ ಅನುವಾದ ಸಾಧ್ಯವಾಗುತ್ತದೆ. ವಿಷಯ ಪ್ರವೇಶವಿಲ್ಲದೆ ಶಾಸ್ತ್ರಸಾಹಿತ್ಯಗಳ ಅನುವಾದಕ್ಕೆ ತೊಡಗಿದಾಗ ಮಾನವಾತೀತವಾದೊಂದು ಭಾಷೆಯಲ್ಲಿ ಕೃತಿ ಮೂಡಿದಂತಿರುತ್ತದೆ. ಸೃಜನಶೀಲ ಕೃತಿಯೊಂದರ ಅನುವಾದದ ಸಮಸ್ಯೆ ಇದಕ್ಕಿಂತ ತೀರಾ ಭಿನ್ನವಾದುದು. ಸೃಜನಶೀಲ ಸಾಹಿತ್ಯವು ತನ್ನೊಳಗೆ ತನಗೆ ಮಾತ್ರವೇ ವಿಶಿಷ್ಟವಾದ ಅನೇಕಾನೇಕ ಅಂಶಗಳನ್ನು ಹುದುಗಿಸಿಕೊಂಡಿರುತ್ತದೆ. ಆ ಭಾಷೆ, ಆ ಸಂಸ್ಕೃತಿ, ಆ ಸಮಾಜ ಮಾತ್ರವೇ ಅಲ್ಲದೆ ಆ ಸಾಹಿತಿಯ ವೈಯಕ್ತಿಕ ವೈಶಿಷ್ಟ್ಯಗಳನ್ನು ಒಳಗೊಂಡು ಬರುವ ಕಲಾಕೃತಿ ತನ್ನೆಲ್ಲವನ್ನೂ

ಅನುವಾದದಲ್ಲಿ ಬಿಟ್ಟು ಕೊಡುವುದು ತೀರಾ ಕಷ್ಟಸಾಧ್ಯದ ಮಾತು. ಅದರಲ್ಲೂ ಆ ಕೃತಿ ಅಪರಿಚಿತವೂ ವಿದೇಶೀಯವೂ ಆದ ಭಾಷೆ, ಸಂಸ್ಕೃತಿ, ಸಮಾಜಗಳಿಗೆ ಸಂಬಂಧಿಸಿದ್ದಾದರಂತೂ ಎಷ್ಟು ದಕ್ಕಿದರೆ ಅಷ್ಟೇ ಪುಣ್ಯ. ಮಹಾನ್ ಸಾಹಿತಿಗಳ ಕೃತಿಗಳು ಮತ್ತೆ ಮತ್ತೆ ಅನುವಾದ ಪ್ರಯೋಗಗಳಿಗೆ ಒಳಗಾಗುವುದು ಈ ಅಗತ್ಯದಿಂದಾಗಿಯೇ.

* * * * *

ಅನುವಾದ ಕ್ರಿಯೆಯನ್ನು ಕುರಿತು ಇಷ್ಟೊಂದು ದೀರ್ಘ ವಿವರಣೆ ನೀಡಲು ಕಾರಣವಿದೆ. ಇಡೀ ವರ್ಷದಲ್ಲಿ ಅನುವಾದಗೊಂಡು ಬಂದಿರುವ ಕೃತಿಗಳಲ್ಲಿ ಮೂರನೆಯ ಎರಡು ಭಾಗವನ್ನು ಸುಮ್ಮನೆ ಪಕ್ಕಕ್ಕೆ ಸರಿಸಿಬಿಡಬಹುದು. ಭಿನ್ನ ಭಾಷಾ ಸಂಸ್ಕೃತಿಗಳ ನಡುವಣ ಕೊಡುಕೊಳ್ಳುವಿಕೆಯಲ್ಲಿ ಅತ್ಯಂತ ಮುಖ್ಯ ಪಾತ್ರವನ್ನು ವಹಿಸುವ ಅನುವಾದ ಪ್ರಯತ್ನಗಳು ಇಷ್ಟೊಂದು ಸಂಖ್ಯೆಯಲ್ಲಿ ನಿರರ್ಥಕವೆನಿಸುವುದೇಕೆ ಎನ್ನುವುದನ್ನು ಪರೀಕ್ಷಿಸುವ ಅಗತ್ಯವಿದೆ. ಬೇರೊಂದು ಭಾಷೆ, ಸಂಸ್ಕೃತಿ, ಸಮಾಜಗಳಿಗೆ ವಿಶಿಷ್ಟವಾದುದೇನನ್ನಾದರೂ ಕೊಡುವ ಅಂತಃಸತ್ವ ಅನುವಾದಗೊಳ್ಳಬೇಕಾದ ಕೃತಿಗೆ ಇರಬೇಕಾದ್ದು ಮೊದಲನೆಯ ಮುಖ್ಯ ಅಂಶ. ಇಂತಹುದೊಂದು ಕೃತಿಯನ್ನು ಗುರುತಿಸಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದಿಸಲು ಹೊರಡುವುದು ವಿಶಿಷ್ಟ ಹೊಣೆಗಾರಿಕೆಯ ಹಾಗೂ ಸೃಜನಾತ್ಮಕವಾದ ಸವಾಲು. ಹಾಗಿಲ್ಲದೆ ಕೇವಲ ಜನಪ್ರಿಯತೆಯನ್ನೇ ಮುಖ್ಯ ಗುರಿಯಾಗಿಸಿಕೊಂಡಾಗ ಯಾವ ವಿಶೇಷವನ್ನೂ ಹೊಂದಿರದ ಕೃತಿಗಳು ಅನುವಾದಗೊಳ್ಳುತ್ತವೆ. ಇದರ ಉಪಯುಕ್ತತೆಯನ್ನು ಸಮರ್ಥಿಸಲು ಕಷ್ಟವಾಗುತ್ತದೆ. ತೆಲುಗಿನಿಂದ ಬಂದಿರುವ ಹತ್ತಾರು ಇಂತಹ ಅನುವಾದಗಳನ್ನು ಈ ಪಟ್ಟಿಯಲ್ಲಿ ಸೇರಿಸಬಹುದು.

ಈ ಎಲ್ಲ ಕಾರಣಗಳಿಂದಾಗಿಯೇ ಒಟ್ಟಾರೆ ಬಂದಿರುವ ಎಪ್ಪತ್ತಕ್ಕಿಂತಲೂ ಹೆಚ್ಚಿನ ಅನುವಾದಗಳಲ್ಲಿ ಕೆಲವನ್ನು ಮಾತ್ರವೇ ಆಯ್ದು ಪರಿಶೀಲಿಸಲಾಗಿದೆ. ವಿಷಯ, ಭಾಷೆ, ಪ್ರಸ್ತುತತೆ ಮುಂತಾದ ನೆಲೆಗಳಿಂದ ಗಮನಿಸಬೇಕಾದ ಕೃತಿಗಳು ಎಂದು ಇವನ್ನು ಆಯ್ಕೆ ಮಾಡಲಾಗಿದೆ. ಮನರಂಜನೆ ಹಾಗೂ ಓದಿಸಿಕೊಂಡು ಹೋಗುವ ಗುಣಗಳಷ್ಟರಿಂದಲೇ ಜನಪ್ರಿಯವಾಗುವ ಸಾಮಾನ್ಯ ಅಭಿರುಚಿಯ ಕತೆ ಕಾದಂಬರಿಗಳು, ಕನ್ನಡಕ್ಕೆ ಯಾವ ವಿಧದಿಂದಲೂ ವಿಶೇಷವೇನನ್ನೂ ತಂದು ಕೊಡಲಾರದ ಚರ್ವಿತಚರ್ವಣ ವಸ್ತುಗಳನ್ನು ಅತಿಸಾಮಾನ್ಯ ರೀತಿಯಲ್ಲಿ ಹೇಳುವ ಪ್ರಚಾರ ಸಾಹಿತ್ಯ ಮಾದರಿಯ ಕೃತಿಗಳು- ಇಂಥವನ್ನು ಇಲ್ಲಿ ಪರಿಶೀಲಿಸಿಲ್ಲ. ಆಯಾ ಕೃತಿಗಳ ವಿಷಯ, ಕೃತಿಕಾರರು ಹಾಗೂ ಅನುವಾದಕರ ಬೇರೆ ಕೃತಿಗಳ ಹಿನ್ನೆಲೆ- ಈ ಎರಡು ಅಂಶಗಳನ್ನು ಗಮನಿಸಿದಾಗ ಪರಿಶೀಲಿಸುವ ಅಗತ್ಯವಿತ್ತು ಎನಿಸುವ ಕೆಲವು ಕೃತಿಗಳಿವೆ. ಆ ಪೈಕಿ ಕೆಲವು ವಿಜ್ಞಾನ ಕೃತಿಗಳು, ದೇವಿ ಪ್ರಸಾದ ಚಟ್ಟೋಪಾಧ್ಯಾಯರ 'ಭಾರತೀಯ ದರ್ಶನಗಳು' (ಅನು. ಬಿ. ವಿ. ಕಕ್ಕಿಲಾಯ), ಶರದ್ ಪಾಟೀಲರ 'ಭಾರತದ ಜಾತಿ ಹೋರಾಟಗಳು' (ಅನು. ಗಂಗಾಧರ ಮೂರ್ತಿ), ಮಹಮದ್ ಯೂಸುಫ್ ಇಸ್ಲಾಹೀ ಅವರ 'ಇಸ್ಲಾಮಿನಲ್ಲಿ' ಜಾನಪದ ಶಿಷ್ಟಾಚಾರಗಳು ( ಅನು.

ಇಬ್ರಾಹಿಂ ಸಯಿದ್), ರುಸ್ತುಂ ಭರೂಚ ಅವರ 'ಕನ್ಹಯ್ಯಲಾಲ್ ರಂಗಭೂಮಿ' (ಅನು. ಟಿ. ಆರ್. ವೆಂಕಟರಮಣ ಐತಾಳ), ಆಸ್ಟಿನ್ ವಾಕಿನ್ 'ಸಾಹಿತ್ಯ ತತ್ತ್ವ' (ಅನು. ಸಿಪಿಕೆ), ಮುಪ್ಪಾಳ ರಂಗ ನಾಯಕಮ್ಮ ಅವರ 'ಇದೇ ರಾಮಾಯಣ' (ಅನು. ಬಂಜಗೆರೆ) ಮುಂತಾದವುಗಳ ಅಲಭ್ಯತೆ ಅವುಗಳನ್ನು ಈ ಪರಿಶೀಲನೆಯಲ್ಲಿ ಕೈ ಬಿಡಲು ಕಾರಣವಾಗಿದೆ.

ಹೀಗೆ ಪರಿಶೀಲನೆಯ ಅಂತಿಮ ಪಟ್ಟಿಯಲ್ಲಿ ಉಳಿದ ಕೃತಿಗಳಲ್ಲಿ ಕತೆ, ಕಾದಂಬರಿ, ಕಾವ್ಯ, ನಾಟಕಗಳಂತಹ ಸೃಜನಶೀಲ ಪ್ರಕಾರಗಳು ಹಾಗೂ ಧರ್ಮ, ಸಮಾಜಶಾಸ್ತ್ರ, ಜಾನಪದಗಳಂತಹ ಶಾಸ್ತ್ರಪ್ರಕಾರಗಳು ಎಂದು ವಿಂಗಡಣೆ ಮಾಡಿಕೊಳ್ಳಬಹುದು.

**ಸಮಾಜ ಶಾಸ್ತ್ರ, ಜಾನಪದ, ವಿಚಾರ ಸಾಹಿತ್ಯ**

ಅನುವಾದಗೊಂಡು ಬಂದಿರುವ ಶಾಸ್ತ್ರಗ್ರಂಥಗಳ ಪೈಕಿ ಸಮಾಜಶಾಸ್ತ್ರ ಸಂಬಂಧೀ ಕೃತಿಗಳೇ ಹೆಚ್ಚು. ಈ ಶಾಸ್ತ್ರದೊಂದಿಗೇ ಸೇರಿಸಬಹುದಾದ ಜಾನಪದ ಅಧ್ಯಯನಗಳು ಕೆಲವು. ಎಲ್ಲೋ ಅಪರೂಪಕ್ಕೆ ವಿಚಾರ ಸಾಹಿತ್ಯದ ಕೃತಿಗಳು. ಇಷ್ಟನ್ನು ಬಿಟ್ಟರೆ ಉಳಿದ ಜ್ಞಾನಶಿಸ್ತುಗಳಿಗೆ ಸಂಬಂಧಿಸಿದ ಕೃತಿಗಳು ಕನ್ನಡಕ್ಕೆ ಬರುತ್ತಿರುವುದು ಅಪರೂಪವೇ. ಹಾಗೆ ನೋಡಿದರೆ ಮಾಹಿತಿಜ್ಞಾನದ ದೃಷ್ಟಿಯಿಂದ ವಿವಿಧ ಜ್ಞಾನ ಕ್ಷೇತ್ರಗಳಲ್ಲಿ ಅಪಾರವಾಗಿ ಲಭ್ಯವಿರುವ ಕೃತಿಗಳು ಕನ್ನಡದಲ್ಲೂ ಅಭಿವೃದ್ಧಿಗೊಳ್ಳಬೇಕಾದರೆ ಅಂತಹ ಸಾಹಿತ್ಯವನ್ನು ಅನುವಾದಿಸಿಕೊಳ್ಳುವುದೂ ಒಂದು ಮುಖ್ಯ ಮಾರ್ಗವೇ. ಇದನ್ನು ಗಮನಿಸಿದಾಗ ಇಂತಹ ಅನುವಾದ ಸಾಹಿತ್ಯದ ಕೊರತೆ ಎದ್ದು ಕಾಣುವಂತಹುದಾಗಿದೆ.

**ಭಾರತ ಸಮಾಜಕಾರ್ಯ ವಿಶ್ವಕೋಶ**

Encyclopedia of social work in india ದ ಕನ್ನಡ ಆವೃತ್ತಿ ಕನ್ನಡ ವಿಶ್ವವಿದ್ಯಾಲಯವು ಹೊರತಂದಿರುವ ಉಪಯುಕ್ತ ಮಾಹಿತಿಗ್ರಂಥ. ''ಸರಕಾರ ಮತ್ತು ಸರಕಾರೇತರ ಸಂಘಟನೆಗಳು ಸಮಾಜಕಾರ್ಯವನ್ನು ವ್ಯಾಪಕವಾಗಿ ಕೈಗೊಂಡಿರುವುದರಿಂದ ಕಾರ್ಯಕರ್ತರು, ಧೋರಣೆಯ ರೂವಾರಿಗಳು, ಆಡಳಿತಾಧಿಕಾರಿಗಳು, ಫಲಾನುಭವಿಗಳು ಮತ್ತು ಸಾರ್ವಜನಿಕರು ಸಮಾಜಕಾರ್ಯದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಆಸಕ್ತರಾಗಿದ್ದಾರೆ. ಇವರೆಲ್ಲರಿಗೆ ಅವರವರ ಭಾಷೆಯ ಮೂಲಕವೇ ಸಮಾಜಕಾರ್ಯ ವಿಶ್ವಕೋಶವು ಮೊಟ್ಟ ಮೊದಲಿಗೆ ಪ್ರಕಟವಾಗುತ್ತಿರುವುದು ಕನ್ನಡದಲ್ಲಿಯೇ'' ಎಂದು ಹೇಳುವಾಗ, ಕನ್ನಡ ಆವೃತ್ತಿಯ ಪ್ರಧಾನ ಸಂಪಾದಕರಾದ ಡಾ. ಚಂದ್ರಶೇಖರ ಕಂಬಾರರು, ಅನುವಾದಿತವಾಗುತ್ತಿರುವ ಕೃತಿಯ ಮಹತ್ವ ಹಾಗೂ ಅನುವಾದದ ಹಿರಿಮೆ ಎರಡನ್ನೂ ಗುರುತಿಸಿದ್ದಾರೆ. ಈ ಕನ್ನಡ ಆವೃತ್ತಿಯ ಸಂಪಾದಕರು ಡಾ. ಎಚ್. ಎಂ. ಮರುಳಸಿದ್ಧಯ್ಯನವರು. ಕನ್ನಡ

ಆವೃತ್ತಿಯನ್ನು ಸಿದ್ಧಪಡಿಸುವಾಗ ಕನ್ನಡಿಗರಿಗೆ ಸಮಾಜಕಾರ್ಯ ವಿಷಯಗಳನ್ನು ಪರಿಚಯಿಸುವುದು ಮಾತ್ರವೇ ಉದ್ದೇಶವಾಗಿರದೆ, ಕನ್ನಡ ಭಾಷೆಯಲ್ಲಿ ಸಮಾಜಕಾರ್ಯ ಪರಿಭಾಷೆಯ ನಿರ್ಮಾಣವೂ ಆಗಬೇಕು ಎಂಬುದು ಬಹುಮುಖ್ಯ ಉದ್ದೇಶವಾಗಿದೆ ಎಂದು ಹೇಳಿಕೊಂಡಿದ್ದಾರೆ. ಇಂಗ್ಲಿಷ್ ಮೂಲದಲ್ಲಿ ನೂರಾ ಮೂವತ್ತೆಂಟು ನಮೂದುಗಳಿವೆ. ಕನ್ನಡ ಆವೃತ್ತಿಯ ಈ ಮೊದಲ ಸಂಪುಟದಲ್ಲಿ ನಲವತ್ತು ನಮೂದುಗಳನ್ನು ವಿವಿಧ ಅನುವಾದಕರು ಅನುವಾದಿಸಿದ್ದಾರೆ. ಈ ವಿವಿಧ ಅನುವಾದಗಳನ್ನು ಮೂಲ ಲೇಖನಗಳೊಡನೆ ಹೋಲಿಸಿ ಆದಷ್ಟು ನಿಖರವಾದ ಪಠ್ಯವಿರುವಂತೆ ನೋಡಿಕೊಂಡಿರುವುದಾಗಿ ಸಂಪಾದಕರು ಹೇಳಿಕೊಂಡಿದ್ದಾರೆ. ಒಂದು ಅನುವಾದಿತ ಕೃತಿ ಮುಖ್ಯವಾಗುವುದು ಅದು ಹೊರಗಿನ ಒಂದು ಭಾಷೆಯಿಂದ ಒದಗಿಸುತ್ತಿರುವ ವಿಶೇಷ ಸಂಗತಿ ಏನು ಎಂಬುದರಿಂದಾಗಿಯೇ ಎನ್ನುವುದು ವಿವಾದಾತೀತ. ಈ ಕೃತಿಗೆ ಸಂಬಂಧಿಸಿದಂತೆ ಕನ್ನಡ ಆವೃತ್ತಿಗೆ ಬಲವಾದ ಸಮರ್ಥನೆ ಇರುವುದೂ ನಿಜ. ಆದರೆ ಅನುವಾದವೆಂದು ಸಫಲವಾಗುವುದು ಹೇಗೆ ಎಂಬುದೂ ಅಷ್ಟೇ ಮುಖ್ಯವಾದ ಪ್ರಶ್ನೆ. ಈ ಸಫಲತೆಗೆ ಡಾ. ಮುರುಳಸಿದ್ಧಯ್ಯನವರು ಹಲವು ಸೂತ್ರಗಳನ್ನು ಹಾಕಿಕೊಂಡಿರುವುದಾಗಿ ಹೇಳಿದ್ದಾರೆ. 'ಈ ಅನುವಾದ ಭಾವಾನುವಾದವಲ್ಲ, ಸಾರಾಂಶೀಕರಣವಲ್ಲ, ಪ್ರತಿಯೊಂದು ವಾಕ್ಯವೂ ಇಡಿಯಾಗಿ ಅನುವಾದಗೊಳ್ಳಬೇಕು. ವಾಕ್ಯದಲ್ಲಿನ ಯಾವುದೇ ಮಹತ್ತ್ವದ ಶಬ್ದವನ್ನು ಕಡೆಗಣಿಸುವಂತಿಲ್ಲ' ಇವು ಮುಖ್ಯ ಸೂತ್ರಗಳು. ಸಮಾಜ ಕಾರ್ಯ ಪರಿಭಾಷೆಯನ್ನು ಕನ್ನಡದಲ್ಲಿ ಈ ಮೂಲಕ ಅಭಿವೃದ್ಧಿಪಡಿಸಬಹುದೆಂಬ ಆಶಯವನ್ನು ವ್ಯಕ್ತಮಾಡಿದ್ದಾರೆ.

ಇದನ್ನಾಧರಿಸಿ ವಿವಿಧ ಅನುವಾದಗಳನ್ನು ಪರಿಷ್ಕರಿಸಿರುವುದಾಗಿ ಹೇಳಿದ್ದಾರೆ. ಕೋಶದ ಮುನ್ನುಡಿಯ ಈ ಮಾತುಗಳ ಹಿನ್ನೆಲೆಯಲ್ಲಿಯೇ ಈ ಕೃತಿಯ ಒಟ್ಟು ಅನುವಾದಗಳ ಬಗ್ಗೆ ಅಭಿಪ್ರಾಯಗಳನ್ನು ಬೆಳೆಸಬೇಕಾಗಿದೆ. ಇಂಗ್ಲಿಷ್ ಭಾಷೆಯಲ್ಲಿ ಅತ್ಯಂತ ಸಹಜವಾಗಿ ಹಾಗೂ ಸಮರ್ಥವಾಗಿ ತೋರುವ ಉದ್ದುದ್ದನೆಯ ಸಂಕೀರ್ಣ ವಾಕ್ಯರಚನೆಗಳು ಕನ್ನಡಕ್ಕೆ ಇಡಿಯಾಗಿ ಬರಬೇಕೆಂಬ ಹಠದೊಂದಿಗೆ ಅನುವಾದ ಗೊಂಡಾಗ ಕನ್ನಡದ ಸಹಜತೆ ಬರಲಾರದು. ಅಷ್ಟೇ ಅಲ್ಲದೆ, ಸಮಾಜಕಾರ್ಯದಲ್ಲಿ ನಿರತರಾದ ವಿದ್ವಾಂಸರಿಗಷ್ಟೇ ಅಲ್ಲದೆ ಸಾಮಾನ್ಯ ಕಾರ್ಯಕರ್ತರಿಗೂ ವಿಷಯಗಳ ಅರಿವು ಮೂಡಿಸಬೇಕೆಂಬ ಘನ ಉದ್ದೇಶದ ಅನುವಾದಗಳು ಸಂವಹನದಲ್ಲಿ ಸರಳತೆ ತರುವುದು ಆವಶ್ಯಕವಾಗುತ್ತದೆ. ಇದನ್ನು ಸಾಧಿಸುವಲ್ಲಿ ಮೂಲ ಇಂಗ್ಲಿಷ್ ವಾಕ್ಯಗಳಿಗೆ ತೋರಬೇಕಾದ ನಿಷ್ಠತೆಯಲ್ಲಿ ಕೆಲಮಟ್ಟಿನ ರಾಜಿ ಅನಿವಾರ್ಯ. ಹಾಗೆಂದು ಇಂತಹ ರಾಜಿಯಿಂದ ಹೊಸ ಪರಿಭಾಷೆಯ ಸೃಷ್ಟಿಯಲ್ಲಿ ತೊಡರು ಸಂಭವಿಸಬೇಕೆಂದೇನೂ ಇಲ್ಲ. ಇಲ್ಲಿ ಬೇಕಾಗಿರುವುದು ಮೂಲಕೃತಿಯ ವಸ್ತುವಿನ ಬಗೆಗೆ ನಿಷ್ಠೆಯೇ ಹೊರತು

ಭಾಷೆಯ ಬಗೆಗಿನ ನಿಷ್ಠೆಯಲ್ಲ. ಮೂಲವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವಲ್ಲಿ ನೆರವಾಗುವ ರಾಜಿ ಸ್ವಾಗತಾರ್ಹವೇ, ಸಂಪಾದಕರು ಮೂಲಕೃತಿಯ ಬಗೆಗಿನ ನಿಷ್ಠೆ ಎಂಬುದನ್ನು ಅತಿರೇಕಕ್ಕೆ ಎಳೆದು ಸೂತ್ರಗಳನ್ನು ಕಠಿಣವಾಗಿ ಅನ್ವಯಿಸಿದ್ದಾರೆ. ಹಲವು ಕಡೆ ಇಲ್ಲಿನ ಕನ್ನಡವು ಕಬ್ಬಿಣದ ಕಡಲೆಯಾಗಿದೆ. ಅತ್ಯಂತ ಉಪಯುಕ್ತ ಮಾಹಿತಿಕೋಶವೊಂದರಲ್ಲಿ 'ಸಂವಹನ' ಅತ್ಯಂತ ಮುಖ್ಯವಾದ ಅಂಶ ಎಂಬುದನ್ನು ಸೂಚಿಸಲೇಬೇಕಾಗಿದೆ.

**ಭಾರತೀಯ ಸಮಾಜ**

ವಿವಿಧ ಅಧ್ಯಯನ ಕ್ಷೇತ್ರಗಳನ್ನಾಧರಿಸಿ ಮಾಹಿತಿಗಳನ್ನು ವಿಶ್ಲೇಷಿಸುತ್ತಾ ಭಾರತದ ಸಾಮಾಜಿಕ ವಾಸ್ತವತೆಯನ್ನು ಬೆಳಕಿಗೆ ತರುವ ಯತ್ನ ಈ ಕೃತಿಯಲ್ಲಿ ಕಾಣುತ್ತದೆ. ಪ್ರೊ ಶ್ಯಾಮಚರಣ ದುಬೆಯವರ ಈ ವಿಶ್ಲೇಷಣೆ ಮುಂದೆ ನಮ್ಮ ಸಮಾಜದಲ್ಲಿ ಬರಲಿರುವ ಬದಲಾವಣೆಗಳ ಸೂಚಿಯೂ ಆಗಿದೆ. ವಿಷಯವನ್ನು ತೊಡಕಾಗಿಸಬಲ್ಲ ಪಾರಿಭಾಷಿಕ ಶಬ್ದಗಳ ಬಗೆಗೆ ವಿಶೇಷ ಎಚ್ಚರ ವಹಿಸಿ ಸರಳ ಶೈಲಿಯೊಂದನ್ನು ರೂಪಿಸಿಕೊಂಡಿದ್ದಾರೆ. ಆರ್. ಎಲ್. ಅನಂತರಾಮಯ್ಯನವರ ಕನ್ನಡ ಅನುವಾದವೂ ಸರಳವಾಗಿದೆ. ವಿಷಯ ನಿರೂಪಣೆಯನ್ನು ಸಹಜವಾಗಿ ಹಿಡಿಯುವಲ್ಲಿ ಯಶಸ್ವಿಯಾಗಿದೆ.

**ತಮಿಳುನಾಡಿನ ಜಾನಪದ**

ವಿವಿಧ ಪ್ರಾದೇಶಿಕ ಜಾನಪದ ಅಧ್ಯಯನ ವಿಶೇಷಗಳನ್ನು ಗ್ರಹಿಸುವ ಮೂಲಕ, ನಮ್ಮ ಜಾನಪದ ಅಧ್ಯಯನಗಳಲ್ಲಿ ಹೊಸ ಮಾದರಿಗಳನ್ನು ರೂಪಿಸಿಕೊಳ್ಳುವ ಸಾಧ್ಯತೆ ಇದೆ. ಈ ಹಿನ್ನೆಲೆಯಲ್ಲಿ ಬೇರೆ ಬೇರೆ ಭಾಷೆಗಳಲ್ಲಿ ನಡೆಯುತ್ತಿರುವ ಜಾನಪದ ಅಧ್ಯಯನಗಳನ್ನು ಕನ್ನಡಕ್ಕೆ ತರುವ ಪ್ರಯತ್ನ ಸ್ವಾಗತಾರ್ಹ. ನ್ಯಾಷನಲ್ ಬುಕ್ ಟ್ರಸ್ಟ್ ಇಂತಹ ಹಲವು ಕೃತಿಗಳನ್ನು ಹೊರತಂದಿದೆ. ಈ ಮಾಲೆಯಲ್ಲಿ ಲಕ್ಷ್ಮಣನ್ ಚೆಟ್ಟಿಯಾರ್ ಅವರ 'ತಮಿಳು ನಾಡಿನ ಜಾನಪದ' ವನ್ನು ಕನ್ನಡಕ್ಕೆ ತಂದಿರುವವರು ಕನ್ನಡದ ಖ್ಯಾತ ಜಾನಪದ ವಿದ್ವಾಂಸ ಜೀಶಂಪ ಅವರು. ಕೃತಿಯ ಗದ್ಯಭಾಗದ ಅನುವಾದದಲ್ಲಿ ಸಾಧಿತವಾಗಿರುವ ಸಹಜತೆ, ಪದ್ಯ ಭಾಗದಲ್ಲಿ ಆಗಿಲ್ಲ. 'ಜೇನಿನಲ್ಲಿ ಹಾಲು ತಾ ಬೆರೆತು ಇಬ್ಬಗೆಯ ರುಚಿಯನ್ನು ತೋರುವಂತೆ' ಎಂಬಂತಹ ಅನುವಾದವು ಜಾನಪದ ಹಾಡುಗಳ ಸ್ವರೂಪವನ್ನು ಪರಿಚಯಿಸಲಾರವು.

**ರಾಮನಿಗೆ ಸೀತೆ ಏನಾಗಬೇಕು?**

ಯಾವುದೇ ಮಹಾಕಾವ್ಯವನ್ನು ಕೇವಲ ಪೂಜ್ಯಭಾವದೊಂದಿಗೆ ಗ್ರಹಿಸುವುದು ಒಂದು ಭಕ್ತಿಮಾರ್ಗ. ಅದನ್ನೇ ಆಲೋಚನಾ ಪರಿಧಿಯನ್ನು ವಿಸ್ತರಿಸಿಕೊಳ್ಳುವ ಸಾಧನವಾಗಿ ಪರಿಗಣಿಸಿ ಅಧ್ಯಯನ ಮಾಡಿದಾಗ ಅದು ಜ್ಞಾನಮಾರ್ಗ. ಪ್ರಶ್ನಿಸಿದ

ಮಾತ್ರಕ್ಕೆ ಅನಾದರ, ಜುಗುಪ್ಸೆಗಳನ್ನು ತೋರಿದಂತೆ ಆಗಬೇಕಿಲ್ಲ. ಆದರೆ, ಅತ್ಯಂತ ವಸ್ತುನಿಷ್ಠವಾಗಿ ನಡೆಯಬೇಕಾದ ಈ ವಿಶ್ಲೇಷಣೆಗೆ ಸೂಕ್ಷ್ಮಾತಿಸೂಕ್ಷ್ಮವಾದ ಎಚ್ಚರ ಅಗತ್ಯ. ಇಂತಹುದೊಂದು ವಿಶ್ಲೇಷಣೆ ಖಂಡಿತವಾಗಿಯೂ ಅತ್ಯಂತ ಗೌರವಾನ್ವಿತವಾದ ವಿದ್ವತ್ ಪ್ರಯತ್ನವಾಗುತ್ತದೆ. ಯಾವ ಕೊಂಕು, ವ್ಯಂಗ್ಯಗಳಿಗೂ ಅವಕಾಶವಿಲ್ಲದ ಇಂತಹ ವಿಶ್ಲೇಷಣೆ ಬಹುಶ್ರುತತೆಯಿಂದ ಮಾತ್ರ ಸಾಧಿತವಾಗುವಂತಹುದು. ತೆಲುಗಿನಲ್ಲಿ ಡಾ|| ಆರುದ್ರ ಅವರು, ರಾಮಾಯಣವನ್ನು ಕುರಿತು ನಡೆಸಿರುವ ಇಂತಹ ಒಂದು ಅತ್ಯಂತ ಕುತೂಹಲಕಾರಿ ಚಿಂತನೆಯನ್ನು ಡಾ. ಕೆ. ಎಲ್. ಗೋಪಾಲಕೃಷ್ಣಯ್ಯನವರು ಸಮರ್ಥವಾಗಿ ಕನ್ನಡಕ್ಕೆ ತಂದಿದ್ದಾರೆ.

**ನಾಟಕ, ಕವನ, ಕತೆ, ಕಾದಂಬರಿ**

ಸೃಜನ ಸಾಹಿತ್ಯದ ಅನುವಾದದಲ್ಲಿ ವಿಷಯ ಸಂವಹನವೊಂದೇ ಪ್ರಧಾನ ಎನ್ನಲಾಗದು. ಭಾಷೆ, ಸಂಸ್ಕೃತಿ, ಸಮಾಜ ಮೊದಲಾದ ಭಾವನಾತ್ಮಕ ಅಂಶಗಳೂ ಪ್ರಧಾನವೇ. ಹಾಗಾಗಿ ಈ ಪ್ರಕಾರದ ಸಾಹಿತ್ಯದ ಅನುವಾದ ಕಷ್ಟಸಾಧ್ಯವೇ ಹೌದು.

**ಷೇಕ್ಸ್ ಪಿಯರನ ಎರಡು ನಾಟಕಗಳು**

ಷೇಕ್ಸ್‌ಪಿಯರನ Ṭiman of Athens ಹಾಗೂ Merchant of Venice ನಾಟಕಗಳು ಕ್ರಮವಾಗಿ ಕೆ. ವಿ. ಸುಬ್ಬಣ್ಣ ಹಾಗೂ ಡಿ. ಆರ್. ಶಶಿಧರ ಅವರಿಂದ ಕನ್ನಡಕ್ಕೆ ಅನುವಾದಗೊಂಡು ಬಂದಿವೆ. ಷೇಕ್ಸ್‌ಪಿಯರ್ ನಂತಹ ಮಹಾನ್ ನಾಟಕಕಾರನನ್ನು ಅನುವಾದಿಸುವುದು ಒಂದು ವಿಶಿಷ್ಟ ಸವಾಲೇ ಸರಿ. ಅವನನ್ನು ಅನುವಾದಿಸುವ ಪ್ರಯತ್ನಗಳು ಕನ್ನಡದಲ್ಲಿ ನಡೆಯುತ್ತಲೇ ಬಂದಿವೆ. ಕೆ. ವಿ. ಸುಬ್ಬಣ್ಣನವರ 'ಅಥೆನ್ಸಿನ ಅರ್ಥವಂತ' ರಂಗಪ್ರಯೋಗವನ್ನೇ ಮುಖ್ಯಗುರಿಯನ್ನಾಗಿಸಿಕೊಂಡ ಅನುವಾದ. ಶಶಿಧರ ಅವರ 'ವೆನಿಸಿನ ವರ್ತಕ' ಓದನ್ನು ಪರಿಗಣಿಸಿ ಅನುವಾದಗೊಂಡದ್ದು. ಇಬ್ಬರು ಅನುವಾದಕರೂ ತಮ್ಮ ತಮ್ಮ ಮುನ್ನುಡಿಗಳಲ್ಲಿ ಹೇಳಿರುವ ಮಾತುಗಳಲ್ಲಿ ಇದು ವ್ಯಕ್ತವಾಗಿದೆ. ಷೇಕ್ಸ್‌ಪಿಯರ್‌ನ ಅನುವಾದಗಳಲ್ಲಿ ಗಮನಾರ್ಹ ಹಾಗೂ ಆನಂದದಾಯಕವಾದವು ಎಂದು ಕೆ. ವಿ. ಸುಬ್ಬಣ್ಣ ಹಾಗೂ ಡಿ. ಆರ್. ಶಶಿಧರ ಅವರ ಕೃತಿಗಳನ್ನು ಖಂಡಿತವಾಗಿ ಪರಿಗಣಿಸಬಹುದು.

**ಹದಿನೆಂಟನೆಯ ಅಕ್ಷರೇಖೆ**

ಅಶೋಕ ಮಿತ್ರನ 'ಪದಿನೆಟ್ಟಾವದು ಅಕ್ಷರೋಡು' ಎಂಬ ತಮಿಳು ಕಾದಂಬರಿಯು ನಿಜಕ್ಕೂ ಸತ್ವಶಾಲಿಯಾದ ಕೃತಿ ಎಂದು ಅನಿಸುತ್ತದೆ. ತಮಿಳು ಹುಡುಗನೊಬ್ಬ, ತಂದೆಯ ಉದ್ಯೋಗದ ಕಾರಣವಾಗಿ, ಹೈದರಾಬಾದಿನಲ್ಲಿ ಬೆಳೆಯಬೇಕಾದ ಸಂದರ್ಭ ಆ ಹೈದರಾಬಾದ್ ನಿಜಾಮರ ಆಳ್ವಿಕೆ, ಬ್ರಿಟಿಷ್ ವಸಾಹತುಶಾಹಿ ಆಡಳಿತ ಮೊದಲಾದ ಕಾರಣಗಳಿಂದಾಗಿ ಉರ್ದು ಮಾತನಾಡುವ

ಮುಸ್ಲಿಂ ಹಾಗೂ ಕ್ರಿಶ್ಚಿಯನ್ ಗೆಳೆಯರನ್ನು ಅವನಿಗೆ ಕೊಟ್ಟಿತು. ಜೊತೆಗೆ ಸ್ವಾತಂತ್ರ್ಯ ಸಂಗ್ರಾಮದ ಕಿಡಿಗಳು ಹಬ್ಬುತ್ತಿದ್ದ ಕಾಲ. ಇಂತಹುದೊಂದು ಪರಿಸರದಲ್ಲಿ ಯುವ ಮನಸ್ಸಿನ ಸಂವೇದನೆ ಹೇಗೆ ರೂಪುಗೊಂಡು ವ್ಯಕ್ತವಾಗಬಹುದು ಎಂಬುದನ್ನು ಗ್ರಹಿಸುವುದು ಮನುಷ್ಯ ಸಂಬಂಧಗಳನ್ನು ಅರ್ಥ ಮಾಡಿಕೊಳ್ಳುವ ಒಂದು ಸಾಧನವೂ ಹೌದು. ಇಂತಹುದೊಂದು ಕೃತಿಯ ಕನ್ನಡ ಅನುವಾದವನ್ನು ನ್ಯಾಷನಲ್ ಬುಕ್ ಟ್ರಸ್ಟಿಗಾಗಿ ತಂದಿರುವವರು ಶೇಷನಾರಾಯಣ ಅವರು. ಇವರು ಬಹು ದೀರ್ಘಕಾಲ ತಮಿಳುನಾಡಿನಲ್ಲೇ ಇದ್ದವರು. ಕನ್ನಡದಲ್ಲಿ ಸಮರ್ಥ ಹಾಗೂ ಜನಪ್ರಿಯ ಕಥಾಸಾಹಿತ್ಯವನ್ನು ಕೃಷಿಮಾಡಿದವರೂ ಆದ ಶೇಷನಾರಾಯಣ ಅವರ ಅನುವಾದ ಮಾತ್ರ ಸಹಜತೆಯನ್ನು ತರುವಲ್ಲಿ ಸೋತಿರುವುದೇಕೆ ಎಂಬ ಪ್ರಶ್ನೆ ಏಳುತ್ತದೆ. ''ಏನು ಇವನು ಹಾಡಿಗೆ ಸೆಂಟ್ ಬೆರೆಸಿ ಕೀರ್ತನೆಗಳು ಎಲ್ಲವನ್ನೂ ಕೋಲಾಟದ ಹಾಡುಗಳ ರೀತಿ ಮಕ್ಕಳಿಗೆ ಕಲಿಸಿಕೊಟ್ಟರೆ ಅವು ಹೋಗುವ ದಾರಿ ಯಾವುದು?'' ಎಂಬಂತಹ ವಾಕ್ಯಗಳನ್ನು ಕನ್ನಡವೆಂದು ಹೇಗೆ ಗ್ರಹಿಸುವುದು? ತಮಿಳಿನಂತಹ ಸೋದರ ಭಾಷೆಯಿಂದ ಬರುವ ಅನುವಾದದಲ್ಲಿ ಅಸಹಜತೆ ಅನಿವಾರ್ಯವಲ್ಲ ಎನಿಸುತ್ತದೆ. ಮಹತ್ವದ ಕೃತಿಯೊಂದು ಕೆಟ್ಟ ಅನುವಾದದಿಂದಾಗಿ ಓದಿಸಿಕೊಳ್ಳುವ ಗುಣದಿಂದ ವಂಚಿತವಾಗಿದೆ.

**ಇಪ್ಪತ್ತೊಂದು ಬಂಗಾಳೀ ಕಥೆಗಳು**

ಆಧುನಿಕ ಬಂಗಾಳಿ ಸಾಹಿತ್ಯದ ಕಥಾ ಪ್ರಕಾರದ ಹರಹನ್ನು ಪರಿಚಯಿಸುವಂತೆ, ವಿವಿಧ ಕಾಲಘಟ್ಟಗಳಲ್ಲಿ ಬಂದ ಹಲವು ಮುಖ್ಯ ಕತೆಗಾರರ ಕತೆಗಳನ್ನು ಒಳಗೊಂಡ ಈ ಕೃತಿಯನ್ನು ನ್ಯಾಷನಲ್ ಬುಕ್ ಟ್ರಸ್ಟ್ ಹೊರತಂದಿದೆ. ಎಸ್. ವಿ. ಶ್ರೀನಿವಾಸರಾವ್ ಅವರೇ ಎಲ್ಲ ಕಥೆಗಳನ್ನು ಅನುವಾದಿಸಿದ್ದಾರೆ. ಕತೆಗಳನ್ನು ಓದುವಲ್ಲಿ ಅನುವಾದ ಎಲ್ಲೂ ತೊಡಕಾಗಿ ನಿಲ್ಲುವುದಿಲ್ಲ.

**ಚಿದಂಬರಂ**

ಮಲಯಾಳದ ಪ್ರಖ್ಯಾತ ಕತೆಗಾರರಾದ ಶ್ರೀ .ಸಿ. ವಿ. ಶ್ರೀರಾಮನ್‌ರ ಕತೆಗಳನ್ನು ಕನ್ನಡಕ್ಕೆ ಡಾ || ಅಶೋಕ್ ಕುಮಾರ್ ತಂದಿದ್ದಾರೆ. 'ನವಕರ್ನಾಟಕ ಪ್ರಕಾಶನ' ದವರು, ತಮ್ಮ ಪ್ರಕಟಣೆಗಳು ಹೊಸತನ್ನು ಹೇಳುವಂತಹವೂ, ಸಾಮಾಜಿಕವಾಗಿ ಪ್ರಸ್ತಾಪವಾದ ವಸ್ತುವುಳ್ಳವೂ ಆಗಿರಬೇಕೆಂಬ ಪ್ರಯತ್ನದಲ್ಲಿ ತೊಡಗಿದವರು. ಅವರ ಈ ಪ್ರಯತ್ನವೂ ಇದಕ್ಕೆ ಬದ್ಧವಾಗಿಯೇ ಇದೆ.

**ಉಚಲ್ಯಾ**

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದ ಮರಾಠಿ ಕಾದಂಬರಿ 'ಉಚಲ್ಯಾ' ದ ಕನ್ನಡ ಅನುವಾದವು 'ನವಕರ್ನಾಟಕ ಪ್ರಕಾಶನ' ದಿಂದಲೇ ಹೊರಬಂದಿದೆ. ಲಕ್ಷ್ಮಣ ಗಾಯಕವಾಡರ ಮೂಲಕೃತಿಯನ್ನು ಕನ್ನಡಿಸಿದವರು

ಚಂದ್ರಕಾಂತ ಪೋಕಳೆ. ಲಕ್ಷ್ಮಣ ಗಾಯಕವಾಡರ ಆತ್ಮಕಥನ 'ಉಚಲ್ಯಾ' ವನ್ನು ಸಾಹಿತ್ಯಕೃತಿಯಾಗಿ ಮಾತ್ರವೇ ನೋಡಿದಾಗ ಯಾವ ಸೌಂದರ್ಯದ ರಸಾನುಭವವನ್ನೂ ನೀಡಲಾರದ ಒಣಗದ್ಯವೆನಿಸಬಹುದಿತ್ತೇನೋ. ಆದರೆ, ತನ್ನೊಳಗಿನ ಸೋಗಿಲ್ಲದ ಪ್ರಾಮಾಣಿಕ ವಸ್ತುವಿನಿಂದಾಗಿಯೇ ಹೃದಯವನ್ನು ತಟ್ಟುವ ಕೃತಿ ಮಹತ್ವದ್ದೆನಿಸಿದೆ. ಬ್ರಿಟಿಷರಿಂದ 'ಕ್ರಿಮಿನಲ್ ಟ್ರೈಬ್' ಎಂಬ ಹಣೆಪಟ್ಟಿಯನ್ನು ಅಂಟಿಸಿಕೊಂಡು 'ಉಚಲ್ಯ' ಬುಡಕಟ್ಟಿನ ವಾಸ್ತವ ಬದುಕು ಈ ಕೃತಿಯಲ್ಲಿ ತೆರೆದುಕೊಂಡಿರುವ ಸಹಜತೆ ಎಂತಹವರನ್ನು ಬೆಚ್ಚಿ ಬೀಳಿಸುತ್ತದೆ. ಲೇಖಕನ ಬದುಕೇ ಬರೆಹವಾಗಿ ಮೂಡಿ ಬಂದಿದೆಯಾಗಿ, ಇಡೀ 'ಉಚಲ್ಯಾ' ಬುಡಕಟ್ಟಿನ ಅಧ್ಯಯನಕ್ಕೆ ಇದೊಂದು ಅಧಿಕೃತ ಮಾಹಿತಿಯೂ ಹೌದು. ಕೇವಲ ನಗಣ್ಯವಾದ ಇಂತಹ ಒಂದು ಜಾತಿಯಲ್ಲಿ ಹೀನಾತಿಹೀನವೆನಿಸುವಂತೆ ಹುಟ್ಟಿದ ಲೇಖಕ ತನ್ನೆಲ್ಲ ಅನುಭವಗಳನ್ನು ಒಟ್ಟುಗೂಡಿಸುತ್ತಾ ಪಡೆದಿರುವ ಜೀವನದರ್ಶನ ಅದ್ಭುತವಾದದ್ದು. ತನ್ನನ್ನು ತಾನು ಅತ್ಯಂತ ನಿಷ್ಠುರವಾದ ಪ್ರಾಮಾಣಿಕತೆಯಿಂದ ನೋಡಿಕೊಳ್ಳುವ ಪರಿ ಅನನ್ಯವಾದುದು. ಸತತವಾಗಿ ಈ ನಾಗರಿಕ ವ್ಯವಸ್ಥೆಯೊಂದಿಗೆ ನಡೆಸಬೇಕಾಗಿ ಬಂದ ಸಂಘರ್ಷವನ್ನು ಕುರಿತು ಬರೆಯುವಾಗ ಅದು ಅತಿಸುಂದರವಾದ ಬರಹವಾಗಿಲ್ಲದಿರಬಹುದು. ತನಗೆ ದೊರೆತ ಕೇವಲ ಕನಿಷ್ಠ ಶಿಕ್ಷಣ ಸಂಸ್ಕಾರದಲ್ಲೂ ಇಂತಹ ಒಂದು ಶಕ್ತಿಕೃತಿಯನ್ನು ಕೊಡುವುದು ಲೇಖಕನಿಗೆ ಸಾಧ್ಯವಾಗಿದ್ದರೆ, ಅದು ಕೃತಿಗೆ ಒದಗಿ ಬಂದಿರುವ ವಸ್ತುವಿನ ಕಾರಣವಾಗಿಯೇ ಆಗಿದೆ. ಭಾಷೆಯ ಸೋಗಿನ ಅಗತ್ಯವಿಲ್ಲದ ಕೃತಿ ಅನುವಾದದಲ್ಲೂ ಅಷ್ಟೇ ಸರಳವಾಗಿ ಮೂಡಿ ಬಂದಿದೆ.

**ದೀಪ ಧ್ವನಿ**

ಭಾರತದ ಬಹುಮುಖೀ ಸಂಸ್ಕೃತಿಯನ್ನು ರೂಪಿಸುವಲ್ಲಿ ವಿವಿಧ ಧರ್ಮಗಳ ಕೊಡುಗೆ ತುಂಬ ಮಹತ್ವದ್ದು. ಈ ವಿವಿಧ ಧರ್ಮಗಳ ಸಹಬಾಳ್ವೆ ಹಾಗೂ ಕೊಡು ಪಡೆಗಳಿಂದ ರೂಪುಗೊಂಡ ಜೀವನಕ್ರಮವನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಜಗತ್ತಿನ ವಿವಿಧ ಧರ್ಮಗಳನ್ನು ಮತ್ತು ವಿಚಾರಧಾರೆಗಳನ್ನು ತೆರೆದ ಮನಸ್ಸಿನಿಂದ ತಿಳಿದುಕೊಳ್ಳುವುದನ್ನು ಗೌರವಿಸುವುದನ್ನೂ ಸಹಿಸುವುದನ್ನೂ ನಮ್ಮನಮ್ಮ ಅಂತರಾಳಗಳಲ್ಲಿ ಅರಗಿಸಿಕೊಳ್ಳುವುದು ಇದಕ್ಕಿರುವ ಸರಿಯಾದ ಮಾರ್ಗ. 'ಸಂಪಾದಕರ ಈ ನಿಲುವನ್ನು ಪ್ರತಿಪಾದಿಸುವ 'ಕೈಪಿಡಿ' ಯಾಗಿ ಈ 'ದೀಪಧ್ವನಿ' ಮೂಡಿ ಬಂದಿದೆ. ವೇದ, ಕುರಾನ್, ಬೈಬಲ್‌ಗಳಂತಹ ಅನೇಕ ಮೂಲಗಳಿಂದ, ನಮ್ಮ ಪರಿಸರದ ಅನೇಕ ಸಂತ ಕವಿಗಳ ಹಾಗೂ ವಿಚಾರವಂತರ ವಾಣಿಗಳಿಂದ ಆಯ್ದ ಭಾಗಗಳನ್ನು ಕನ್ನಡಕ್ಕೆ ತಂದು, ಒಂದು, ನಿರ್ದಿಷ್ಟವಾದ ಆಲೋಚನಾ ಸರಣಿಯನ್ನು ನಿರೂಪಿಸುವ ಪ್ರಯತ್ನ

ಇಲ್ಲಿದೆ. ಈ ತತ್ತ್ವ ಜಿಜ್ಞಾಸೆಯಲ್ಲಿ ಪರಿನಿಷ್ಠ ನಿಲುವಿಗಿಂತ, ಈ ಲೋಕದಲ್ಲಿ ಮನುಷ್ಯರಾಗಿ ಬಾಳಬೇಕಾದ ಅಗತ್ಯದ ಕಡೆ ಒಲವು ಇದೆ. ಮನುಷ್ಯ ಸಂಬಂಧಗಳ ಬಗೆಗಿನ ಕಾಳಜಿ ವ್ಯಕ್ತವಾಗಿದೆ. ಸಂಪಾದಕರ ಮಾತಿನಲ್ಲೇ ಹೇಳುವುದಾದರೆ, ಜಗತ್ತಿನಲ್ಲಿ ಬೆಳಕನ್ನು ಕಂಡವರು ಹಾಗೂ ಪಡೆದವರು ನಮ್ಮ 'ದೀಪ'ಗಳು. ಇವರು ಆಡಿದ ಮಾತೇ 'ಧ್ವನಿ'. ಈ ' ದೀಪಧ್ವನಿ' ಗಳನ್ನು ಕನ್ನಡದ ಖ್ಯಾತ ಕವಿ ಜಿ. ಎಸ್. ಶಿವರುದ್ರಪ್ಪನವರು ಸಮರ್ಥವಾಗಿ ಕನ್ನಡ ಜನತೆಗೆ ಕೇಳಿಸಿದ್ದಾರೆ. ಈ ಕಾರ್ಯದಲ್ಲಿ ಅವರ ಜೊತೆ ನಿಂತವರು ಡಾ. ಶ್ರೀ ರಾಮಭಟ್ಟ ಹಾಗೂ ಮಾಹೆರ್ ಮನ್ಸೂರ್ ಅವರು. 'ದೀಪಧ್ವನಿ'ಯಲ್ಲಿ ಕನ್ನಡದ ಮೂಲ ಸಂಗತಿಗಳು ಇವೆ. ವಿವಿಧ, ಭಾಷೆಗಳಿಂದ ಅನುವಾದಗೊಂಡು ಬಂದವೂ ಇವೆ. ಗದ್ಯವೂ ಇದೆ; ಪದ್ಯವೂ ಇದೆ. ಎಲ್ಲವೂ ಸುಮಧುರ ಧ್ವನಿಗಳಾಗಿ ಮೂಡಿಬಂದಿವೆ.

# ಕುವೆಂಪು

*ಓ. ಎಲ್. ನಾಗಭೂಷಣಸ್ವಾಮಿ*



ಈ ಶತಮಾನದ ಕನ್ನಡ ಬದುಕನ್ನು ತಿದ್ದಿ ರೂಪುಕೊಟ್ಟ ಪ್ರಮುಖರಲ್ಲಿ ಕುವೆಂಪು ಒಬ್ಬರು. ಕುವೆಂಪು ಅವರನ್ನು ಓದುವುದು ಮತ್ತು ಅರಿಯುವುದೆಂದರೆ ಕನ್ನಡ ಸಂಸ್ಕೃತಿಯನ್ನು ಅರಿಯುವ ಕೆಲಸವೂ ಆಗುತ್ತದೆ. ಕನ್ನಡ ಬದುಕಿನ ಚರಿತ್ರೆ ಮತ್ತು ಸಾಮಾಜಿಕ ವೈಚಾರಿಕ ಬದಲಾವಣೆಗಳನ್ನು ತಿಳಿಯುವುದಕ್ಕೆ ಕುವೆಂಪು ಸಾಹಿತ್ಯ ಒಂದು ಮುಖ್ಯ ಆಕರವಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಕುವೆಂಪು ಸಾಹಿತ್ಯವು 'ಈ ಬದುಕು ಬದುಕಲು ಅರ್ಹ' ಎಂಬ ವಿಶ್ವಾಸವನ್ನು ಓದುಗರಲ್ಲಿ ಮೂಡಿಸುತ್ತದೆ.

ಕುವೆಂಪು ಅವರ ಬಗ್ಗೆ ಬರೆಯುವುದು ಕಷ್ಟದ ಕೆಲಸ. ಅವರನ್ನು ಶ್ಲಾಘಿಸುವ ಮತ್ತು ನಿಂದಿಸುವ, ಮೆಚ್ಚುವ ಮತ್ತು ಟೀಕಿಸುವ, ಅತಿರೇಕದ ನಿಲುವುಗಳನ್ನು ವ್ಯಕ್ತಪಡಿಸಲು ಕನ್ನಡ ಭಾಷೆಯನ್ನೇ ದುಂದು ಮಾಡಲಾಗಿದೆ. ನಮ್ಮ ಕಾಲಕ್ಕೆ ತೀರ ಸಮೀಪವಿರುವ ಇಂಥ ಮಹತ್ವದ ಲೇಖಕನ ಬಗ್ಗೆ ನಮ್ಮ ನಮ್ಮ ವೈಯಕ್ತಿಕ ಪಕ್ಷಪಾತ, ಪೂರ್ವಗ್ರಹಗಳನ್ನು ಮರೆತು ಮಾತನಾಡುವುದೇ ಅಸಾಧ್ಯವಾಗಿದೆ. ಕುವೆಂಪು ಸಾಹಿತ್ಯದ ಬಗ್ಗೆ ಯಾರಾದರೂ ಏನನ್ನಾದರೂ ಹೇಳುತ್ತಿದ್ದರೆ ಅವರು, 'ತಮ್ಮ' ದೃಷ್ಟಿ ಧೋರಣೆಗಳ ಬಗ್ಗೆಯೇ ಹೇಳಿಕೊಳ್ಳುತ್ತಿದ್ದಾರೆ ಅನ್ನಿಸುತ್ತದೆ.

ಹೀಗೆ ಒಬ್ಬ ಲೇಖಕನ ಸಾಹಿತ್ಯದ ಬಗ್ಗೆ ಮಾತನಾಡುವುದೆಂದರೆ, ನಮ್ಮ ಬಗ್ಗೆಯೇ ಮಾತನಾಡಿಕೊಂಡಂತಾಗಿಬಿಡುವುದು ನಿಜಕ್ಕೂ ಆ ಲೇಖಕನ ಸಾಂಸ್ಕೃತಿಕ ಮಹತ್ವವನ್ನು ಸೂಚಿಸುತ್ತದೆ. ಈ ಶತಮಾನದ ಆರಂಭದಲ್ಲಿ ಕುಪ್ಪಳಿಯಂಥ ಒಳ ಮಲೆನಾಡಿನೊಳಗಿನ ಒಂದು ಮನೆಯ ಊರಲ್ಲಿ ಹುಟ್ಟಿ (೧೯೦೪) ಮೈಸೂರು ವಿಶ್ವವಿದ್ಯಾಲಯದ ಕುಲಪತಿಯಾದ, ತನ್ನ ಸಾಹಿತ್ಯಕ್ಕೆ ಜ್ಞಾನಪೀಠ ಪ್ರಶಸ್ತಿ ಪಡೆದ ವ್ಯಕ್ತಿಯ ಬದುಕಿನ ಕಥೆಯು, ಕೇವಲ ಕುವೆಂಪು ಬದುಕಿನ ಕಥೆ ಮಾತ್ರ ಅಲ್ಲ: ಅದು ಹೊಸ ಶಿಕ್ಷಣ ಪಡೆದು, ನಗರಕ್ಕೆ ಬಂದು, ಶಿಕ್ಷಣಕೊಟ್ಟಂಥ ಸ್ವಾತಂತ್ರ್ಯ

-ಸವಲತ್ತುಗಳನ್ನೆಲ್ಲ ಯಶಸ್ವೀ ಬದುಕಿನ ಮೆಟ್ಟಿಲುಗಳನ್ನಾಗಿ ಮಾಡಿಕೊಂಡ 'ಮೊದಲ ತಲೆಮಾರಿನ' ಕನ್ನಡ ವಿದ್ಯಾವಂತರ 'ಕಥೆ'ಯೂ ಹೌದು. ಕುವೆಂಪು ಲೌಕಿಕ ಹಾಗೂ ಸಾರ್ವಜನಿಕ ಬದುಕಿನಲ್ಲಿ ಪಡೆದ ಯಶಸ್ಸು ಕೇವಲ ಅವರದು ಮಾತ್ರ ಆಗಿರಲಿಲ್ಲ. ಅದು ಒಂದು 'ಸಾಂಸ್ಕೃತಿಕ ಸಂಕೇತ'ವಾಗಿ ಪರಿವರ್ತನೆ ಹೊಂದಿಬಿಟ್ಟಿತು. ಅಕ್ಷರಸ್ಥ ದಲಿತರು ಹೆಮ್ಮೆಪಡುವ, ಆರಾಧಿಸುವ, ಗುರುತಿಸಿಕೊಳ್ಳಬಯಸುವ ಸಂಕೇತವಾಯಿತು. ಕುವೆಂಪು ಹಾಗೆ ಒಂದು ' ಸಂಕೇತ'ವಾದ್ದರಿಂದಲೇ ಅವರನ್ನು ಇಡಿಯಾಗಿ ಒಪ್ಪಬೇಕು ಅಥವಾ ಸಂಕೇತದ ಅರ್ಥಗಳನ್ನು ಬಿಡಿಸಿ, ಸೀಳಿ, ಛಿದ್ರ ಮಾಡಬೇಕು ಎಂಬ ಪರ -ವಿರೋಧ ಅಪೇಕ್ಷೆಗಳು ಕೂಡ ಹುಟ್ಟಿಕೊಂಡವು.

ಕುವೆಂಪು ಕೇವಲ ನೆನಪಾಗಿ ಉಳಿದಿರುವ ಈ ಹೊತ್ತಲ್ಲಿ ಅನ್ನಿಸುತ್ತದೆ: ಅವರ ಬಗ್ಗೆ ಬಂದ ತೀವ್ರ ಭಿನ್ನಾಭಿಪ್ರಾಯಗಳು ನಮ್ಮ ಬದುಕನ್ನು ಅವ್ಯಕ್ತವಾಗಿ ರೂಪಿಸುತ್ತಿರುವ ಶಕ್ತಿಗಳ ಪ್ರಕಟರೂಪವೆಂದು. ಕುವೆಂಪು ಬಗ್ಗೆ ಆರಾಧನೆ ಹುಟ್ಟಿದ್ದಕ್ಕೆ ಅಥವಾ ವಿರೋಧ ಹುಟ್ಟಿದ್ದಕ್ಕೆ, ಕಾರಣಗಳನ್ನು ಈಗ ಸ್ವಲ್ಪ ಪ್ರಾಮಾಣಿಕ ಧೈರ್ಯವಹಿಸಿ ಕಟ್ಟಿಕೊಂಡರೂ ಸಾಕು, ಈ ಶತಮಾನದ ಕನ್ನಡ ಬದುಕಿನ ಬಹುಮುಖ್ಯ ಅಂಶವೊಂದನ್ನು ತಿಳಿಯಲು ಸಾಧ್ಯವಾಗುತ್ತದೆ. ಅದು ನಮ್ಮ ನಮ್ಮ ಲೋಕದೃಷ್ಟಿಗಳನ್ನು, ಅನುಭವದ ಸ್ವರೂಪಗಳನ್ನು ಹಾಗೂ ಯೋಚಿಸುವ ವಿಧಾನಗಳನ್ನು ತಿದ್ದುತ್ತಾ ಬಂದಿರುವ 'ಜಾತಿ'ಯ ವಾಸ್ತವಗಳು ಮತ್ತು ಎಲ್ಲ ಕಟ್ಟುಗಳನ್ನು ಇಲ್ಲವಾಗಿಸಿ ವಿಶ್ವದ ಮನುಷ್ಯರಾಗಬೇಕೆಂಬ ಹಂಬಲ, ದರ್ಶನಗಳ ನಡುವೆ ಬಾಯ್ದೆರೆದಿರುವ ಕಂದಕ. ಕುವೆಂಪು ಸಾಹಿತ್ಯದ ಮುಖ್ಯಭಾಗವೆಂದರೆ, ಮನುಷ್ಯನಾಗಿರುವುದರ ವಾಸ್ತವವನ್ನು ಚಿತ್ರಿಸುತ್ತಿರುವಾಗಲೇ ತಾನೇ ವಿಶ್ವವಾಗಿ ಬಿಡುವ ಅಥವಾ ವಿಶ್ವವೇ ತಾನಾಗಿಬಿಡುವ ಆದರ್ಶವನ್ನು ಕಟ್ಟಿಕೊಡುವ ಭಾಗಗಳು. ಈಗ ನಾವು ಆದರ್ಶದ ಬಗ್ಗೆ ಜಗಳ ತೆಗೆಯಬಹುದು. ವಾಸ್ತವ ಇದಲ್ಲ ಇನ್ನೂ ಬೇರೆ ಥರ ಇದೆ ಅನ್ನಬಹುದು. ಹೀಗೆಲ್ಲ ಅನ್ನುವುದೇ ಸಂಸ್ಕೃತಿಯ ಸಂವಾದವಾಗಿ ಬೆಳೆಯುತ್ತದೆ.

ಕುವೆಂಪು ಸಾಹಿತ್ಯವನ್ನು ಓದಿದವರಿಗೆ ಗೊತ್ತಾಗುತ್ತದೆ ಅವರ ಒಟ್ಟು ಬರವಣಿಗೆಯಲ್ಲಿ ಇಡೀ ಕನ್ನಡ ಸಾಹಿತ್ಯದ ಮುಖ್ಯ ಘಟ್ಟಗಳೆಲ್ಲ ಪುನರಭಿನಯಗೊಂಡಿವೆ ಎಂದು. ಅವರ ಸಾಹಿತ್ಯ ಕನ್ನಡ ಸಂಸ್ಕೃತಿ ರೂಪಿಸಿದ ಶಿಶು. ಅದು ಓದುಗರ ಮನದಲ್ಲಿ ಬೆಳೆಯುತ್ತ ಸಂಸ್ಕೃತಿಯನ್ನೇ ರೂಪಿಸಿದ ಶಕ್ತಿಯೇ ಆಗಿಬಿಟ್ಟಿತು. ಈ ರೂಪಿಸುವಿಕೆ ಮುಂದೆಯೂ ನಡೆಯುವಂಥದ್ದು. ಸುಮ್ಮನೆ ಕಥೆಗಾಗಿ ಓದಿದರೂ ಕುವೆಂಪು ಕಾದಂಬರಿಗಳು ಓದುಗರಿಗೆ ಸಶಕ್ತ ಉಲ್ಲಾಸವನ್ನು ನೀಡುತ್ತವೆ. ಬದುಕಿನ ಬಗ್ಗೆ ಪ್ರೀತಿ ಹುಟ್ಟಿಸುತ್ತವೆ; ನಮ್ಮ ಸುತ್ತಲೂ ನಡೆಯುತ್ತಿರುವ ಲೋಕವ್ಯಾಪಾರವನ್ನು ಇನ್ನಷ್ಟು ಸೂಕ್ಷ್ಮವಾಗಿ ಗಮನಿಸುವಂತೆ ಮಾಡುತ್ತವೆ. ಸಂತೋಷದ ಹಿಗ್ಗನ್ನೂ ಅರಿವಿನ ಹಿಗ್ಗುವಿಕೆಯನ್ನೂ ತರುತ್ತವೆ. ಅವರ ಕಾದಂಬರಿಗಳನ್ನು ಓದಿದ ಮೇಲೆ ನಾವು ಸ್ವಲ್ಪವಾದರೂ ಹೊಸದಾದ ಮನುಷ್ಯರಾಗುತ್ತೇವೆ. ಏಕೆಂದರೆ

ಅವರ ಕಾದಂಬರಿಗಳಲ್ಲಿ ಇದೇ ಈಗ ಆದ ಅನುಭವಗಳನ್ನು ಇದೇ ಈಗ ಹೇಳುತ್ತಿರುವಷ್ಟು ಹೊಸತನ ಕಾಣುತ್ತದೆ. ಹೊಸತನವೆಂಬುದು ಕೇವಲ ತುಡಿತವಲ್ಲ ಹೊಸತನವೆಂಬುದು ತನ್ನಷ್ಟಕ್ಕೇ ಮಹತ್ವದ್ದೂ ಅಲ್ಲ. ಕುವೆಂಪು ಕಾದಂಬರಿಗಳಲ್ಲಿ ಹೊಸತನದೊಡನೆಯೇ ಪ್ರಬುದ್ಧ ಮನಸ್ಸಿನ ಚಿಂತನೆ ಮತ್ತು ಧ್ಯಾನಶೀಲತೆಗಳೂ ಇವೆ.

ಕುವೆಂಪು ಸಾಹಿತ್ಯ ನಾವು ಬೆಳೆದು ಬದಲಾದಂತೆಲ್ಲ ತಾನೂ ಬೆಳೆದು ಬದಲಾಗುವಂತೆ ಕಾಣುತ್ತದೆ. ಕುವೆಂಪು ಬರೆದದ್ದನ್ನು ಕೇವಲ ಭಾಷೆಯೆಂದು ಪರಿಗಣಿಸಿ ನಾವು ಕಲಿಯಬಹುದು ಅಥವಾ ಬರೆಯಬೇಕಾದ್ದು ಹೀಗಲ್ಲ ಅಂತ ಜಗಳವಾಡಬಹುದು. ಅವರು ತೋರುವ ನೋಟಗಳನ್ನು ನೋಡಿ ಹಿಗ್ಗಬಹುದು ಅಥವಾ ಅವರು ತೋರಿದ ನೋಟವನ್ನು ಬೇರೆ ದೃಷ್ಟಿ ಕೋನದಿಂದ ನೋಡಲು ಸಾಧ್ಯವಿತ್ತೆಂದು ವಾಗ್ವಾದ ಹೂಡಬಹುದು. ಅವರು ಬರೆದ ವಿಷಯವನ್ನೇ ಇಟ್ಟುಕೊಂಡು ನಮ್ಮ ನಾಡಿನ ಚರಿತ್ರೆ, ಸಮಾಜಗಳ ಕಥೆಯನ್ನು ನಮಗೆ ಬೇಕಾದಂತೆ ಕಟ್ಟಿಕೊಳ್ಳಬಹುದು. ಹೀಗೆ ನಾವು ನಮ್ಮ ಏಳಿಗೆಗೆ ಬೇಕಾದಂತೆ ಬಳಸಿಕೊಳ್ಳಬಹುದಾದ ಆಸ್ತಿಯನ್ನು ಕುವೆಂಪು ನಮಗೆ, ಕನ್ನಡಿಗರಿಗೆ ಬಿಟ್ಟು ಹೋಗಿದ್ದಾರೆ. ಇದು ಸಣ್ಣ ಸಂಗತಿಯಲ್ಲ.

ಕುವೆಂಪು ಅವರಿಗೆ ನಾಡು ನೀಡಿರುವ ಮನ್ನಣೆ ಅಭೂತಪೂರ್ಣವಾದದ್ದು. 'ಜ್ಞಾನಪೀಠ'ದಿಂದ 'ಪಂಪ ಪ್ರಶಸ್ತಿ'ವರೆಗೆ ಎಷ್ಟೆಲ್ಲ ಪ್ರಶಸ್ತಿಗಳು ಅವರ ಕಾಲಬುಡಕ್ಕೆ ಬಂದು ಬಿದ್ದವು. ಅವರು ಬರೆದ ಕೃತಿಗಳನ್ನೆಲ್ಲ ಪಟ್ಟಿಮಾಡುವುದಾಗಲಿ, ಅವರಿಗೆ ಸಂದ ಮನ್ನಣೆಗಳ ಲೆಕ್ಕ ಹಿಡಿಯುವುದಾಗಲಿ, ಯಾಂತ್ರಿಕವಾಗಿ ಬಿಡುತ್ತದೆ. ಅವರು ತೀರಿಕೊಂಡ ನಂತರ ಅವರ ನೆನಪಿನಲ್ಲಿ ನಡೆದ ನಡೆಯುತ್ತಿರುವ ಅಸಂಖ್ಯಾತ ಕಾರ್ಯಕ್ರಮಗಳನ್ನು ಗಮನಿಸಿದರೆ ಕುವೆಂಪು ನಾಡಿನ ದಿನನಿತ್ಯದ ಬದುಕಿನಲ್ಲಿ ಹೇಗೆ ಸೇರಿಹೋಗಿದ್ದಾರೆ ಎಂದು ತಿಳಿಯುತ್ತದೆ. ಕುವೆಂಪು ಹೆಸರಿನ ರಸ್ತೆ, ಬಡಾವಣೆ, ಪ್ರಶಸ್ತಿ, ಸ್ಪರ್ಧೆ, ಕಾಲೇಜು, ವಿಶ್ವವಿದ್ಯಾಲಯ ಏನೆಲ್ಲವನ್ನು ಕಲ್ಪಿಸಿಕೊಂಡಿದ್ದೇವೆ. ನಾಡಿನ ದೈನಿಕ ಬದುಕಿನ ಭಾಗವೇ ಆಗಿಹೋಗುವ ಭಾಗ್ಯ ಎಲ್ಲ ಕವಿಗಳಿಗೂ ದೊರೆಯಲಾರದು.

ವೈಚಾರಿಕತೆ, ಆಧ್ಯಾತ್ಮ, ವಿಜ್ಞಾನ, ಭಾಷೆ, ಸಾಹಿತ್ಯ, ಸಾರ್ವಜನಿಕ ಜೀವನ ಇವುಗಳ ವೈವಿಧ್ಯಮಯ ನೇಯ್ಗೆ ಕುವೆಂಪು. ಅವರ ಕೃತಿಗಳನ್ನು ವ್ಯಾಖ್ಯಾನಿಸುವ, ವಿಮರ್ಶಿಸುವ ಬೆಲೆಕಟ್ಟುವ ಕೆಲಸ ನಮ್ಮ ಬದುಕನ್ನು, ಸಂಸ್ಕೃತಿಯನ್ನು ಅರಿಯುವ ಕೆಲಸವೂ ಹೌದು. ಅವರು ಬರೆದದ್ದನ್ನು ಓದದೆ ಇದ್ದರೆ, ಕನ್ನಡದಲ್ಲಿ ಅಕ್ಷರ ಬಲ್ಲವರ ಬದುಕೇ ಅಪೂರ್ಣ ಅನ್ನಿಸುವಂತಹ ಕೃತಿಗಳನ್ನು ಕುವೆಂಪು ಕೊಟ್ಟಿದ್ದಾರೆ. ಅವರಿಗೆ ನಮಸ್ಕಾರ.

# ಎಂ.ಕೆ. ಇಂದಿರಾ

*ಲಕ್ಷ್ಮೀದೇವಿ. ಎಲ್.*



ಎಂ.ಕೆ. ಇಂದಿರಾ ಹೊಸಗನ್ನಡ ಸಾಹಿತ್ಯದ ಬಹುಮುಖ್ಯ ಲೇಖಕಿಯರಲ್ಲಿ ಒಬ್ಬರು. ಮಹಿಳಾ ಸಾಹಿತ್ಯಕ್ಕೆ ಇವರ ಕೊಡುಗೆ ಅಮೂಲ್ಯವಾದದ್ದು. ಪ್ರಮುಖ ಕಾದಂಬರಿಕಾರ್ತಿಯಾಗಿ ಪರಿಚಿತರಾಗಿರುವ ಇಂದಿರಾ ಅವರು, ತಮ್ಮ ಎಲ್ಲ ಕೃತಿಗಳಲ್ಲೂ ಮಾನವೀಯ ಮೌಲ್ಯಗಳ ಹುಡುಕಾಟ ನಡೆಸಿದವರು. ಮನುಷ್ಯನ ನೋವು-ನಲಿವುಗಳನ್ನು ಕೌಟುಂಬಿಕ ನೆಲೆಗಳ ಮತ್ತು ಸಾಮಾಜಿಕ ಇತಿ-ಮಿತಿಗಳ ಮೂಲಕ ಚಿತ್ರಿಸಿದವರು. ಬದುಕಿನ ಏಳು-ಬೀಳುಗಳಿಗೆ ಸಾಹಿತ್ಯಕ ಅಭಿವ್ಯಕ್ತಿ ಮತ್ತು ಕಲಾಪಂತಿಕೆಯ ಮೆರುಗು ನೀಡಿ ಓದುಗರನ್ನು ಆಕರ್ಷಿಸಿದ್ದ ಇವರು, ೧೯೯೪ರ ಮಾರ್ಚ್ ೧೫ರಂದು ಈ ಲೋಕ ತ್ಯಜಿಸಿದರು.

ತಮ್ಮ ೪೬ನೆಯ ವಯಸ್ಸಿನಲ್ಲಿ ಸಾಹಿತ್ಯಕ ಬರವಣಿಗೆ ಆರಂಭಿಸಿದ ಇಂದಿರಾ ಅವರು ಜನಿಸಿದ್ದು ೧೯೧೭ ಜನವರಿ ೫ರಂದು. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಇವರ ಹುಟ್ಟೂರು. ತಂದೆ ಸೂರ್ಯನಾರಾಯಣರಾವ್, ತಾಯಿ ಬನಶಂಕರಮ್ಮ. ಎರಡನೆಯ ತರಗತಿಯವರೆಗೆ ಮಾತ್ರ ಓದಿದ್ದ ಇಂದಿರಾ ಅವರು ೧೯೨೯ರಲ್ಲಿ ಮಂಡಗದ್ದೆಯ ಕೃಷ್ಣರಾಯರೊಡನೆ ಮದುವೆಯಾದರು. ಆಗ ಇಂದಿರಾರ ವಯಸ್ಸು ಕೇವಲ ೧೨ವರ್ಷ. ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಮತ್ತು ಮಲೆನಾಡಿನ ಮಡಿಲಲ್ಲಿ ಬೆಳೆದ ಇವರಿಗೆ ಆ ಪರಿಸರ - ವಾತಾವರಣಗಳ ಅನುಭವಗಳು ಪಕ್ವವಾಗಿಸಿದವು. ಸರ್ಕಾರಿ ಉದ್ಯೋಗಿಯಾಗಿದ್ದ ಪತಿಯಿಂದ ಅನೇಕ ಊರುಗಳಲ್ಲಿ ಸಂಸಾರ ಹೂಡುವುದು ಇಂದಿರಾ ಅವರಿಗೆ ಅನಿವಾರ್ಯವಾಗಿತ್ತು. ಇದು ಕೂಡ ಲೇಖಕಿಯ ಸೃಜನಶೀಲತೆಗೆ ಆಯಾಮ ಒದಗಿಸಿದ ಅಂಶವಾಯಿತು.

ಇಂದಿರಾ ಸುಮಾರು ೪೮ ಕಾದಂಬರಿಗಳನ್ನೂ ೧೫ ಕಥಾ ಸಂಕಲನಗಳನ್ನೂ ಬರೆದಿರುವರಲ್ಲದೆ, ಜೀವನ ಚಿತ್ರ, ಲಲಿತ ಪ್ರಬಂಧ, ಹರಟೆ ಇತ್ಯಾದಿ ಪ್ರಕಾರಗಳಲ್ಲೂ ಬರೆದಿದ್ದಾರೆ. ಅನುಭವಕ್ಕೆ ಬಂದ ವಾಸ್ತವ ಅಂಶಗಳನ್ನು ಹಾಗೂ ಕಂಡು-ಕೇಳಿದ ಸತ್ಯಘಟನೆಗಳನ್ನು ಆಧರಿಸಿಯೇ ಇವರು ಸಾಹಿತ್ಯ ನಿರ್ಮಿಸಿದರು. ವ್ಯಕ್ತಿ, ಕುಟುಂಬ ಮತ್ತು ಸಮಾಜದ ಸಂಬಂಧಾಂತರಗಳನ್ನು ವಿಶ್ಲೇಷಿಸಿಯೇ ಇವರ ಕೃತಿಗಳು

ರೂಪಿತವಾಗಿವೆ. ಪ್ರತ್ಯೇಕ ಘಟಕಗಳಾಗಿ ಪ್ರಾಮುಖ್ಯ ಪಡೆದ ಕೃತಿಗಳಲ್ಲಿಯೂ ವ್ಯಕ್ತಿ, ಕುಟುಂಬ ಅಥವಾ ಸಮಾಜ ಕೇಂದ್ರವಾಗುತ್ತವೆ.

ತಲೆಮಾರಿನ ಅಂತರದಲ್ಲಿ ಬದುಕಿನ ಮೌಲ್ಯಗಳಲ್ಲಾಗುವ ಬದಲಾವಣೆಗಳ ಸುಳಿವುಗಳನ್ನು ಇಂದಿರಾ ಅವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ. 'ಗಿರಿಬಾಲೆ', 'ಆತ್ಮಸುಖಿ', 'ತಗ್ಗಿನಮನೆ ಸೀತೆ', 'ಗುಂಡ', 'ಕೂಚುಭಟ್ಟ' ಇಂಥ ಕಾದಂಬರಿಗಳು ವ್ಯಕ್ತಿಯ ತ್ಯಾಗ, ಸಹನೆ ಮತ್ತು ತಳಮಳಗಳನ್ನು ವೈಭವೀಕರಿಸುವಂತಿವೆ. ಕೌಟುಂಬಿಕ ನೆಲೆಗಳ ಸ್ಥಿತಿಗಳನ್ನೊಳಗೊಂಡ ಬದುಕಿನ ವಿಶ್ಲೇಷಣೆಯನ್ನು 'ತುಂಗಭದ್ರ', 'ರಸವಾಹಿನಿ', 'ಮನ ತುಂಬಿದ ಮಡದಿ', 'ಶಾಂತಿಧಾಮ' ಇತ್ಯಾದಿ ಕಾದಂಬರಿಗಳು ಬಿಂಬಿಸುತ್ತವೆ. ಮೇಲಿನ ಎರಡು ಮಾದರಿಗಳಿಗಿಂತ ಭಿನ್ನವಾದ ಮತ್ತೊಂದು ಮಾದರಿಯ ಕಾದಂಬರಿಗಳು, ಸಾಮಾಜಿಕ ಪರಿಸ್ಥಿತಿಗಳ ಸ್ಥಿತಿ-ಗತಿ ಸಮಸ್ಯೆಗಳು ಮತ್ತು ಗೊಂದಲಗಳನ್ನು ಚಿತ್ರಿಸುತ್ತವೆ. ಅವು 'ಸದಾನಂದ' 'ಗೆಜ್ಜೆಪೂಜೆ' 'ಫಣಿಯಮ್ಮ' ಹಾಗೂ 'ಜಾತಿಕೆಟ್ಟವಳು' ಮುಂತಾದ ಕೃತಿಗಳು. ಇವುಗಳಲ್ಲಿ ವಿಧವಾ ಸಮಸ್ಯೆ, ವೇಶ್ಯಾಸಮಸ್ಯೆಯಂತಹ ಸಾಮಾಜಿಕ ಕ್ರೌರ್ಯಗಳ ಚಿತ್ರಣವಿದೆ.

ಸಮಕಾಲೀನ ಕನ್ನಡ ಲೇಖಕಿಯರ ಪರಂಪರೆಯಲ್ಲಿ ಎಂ.ಕೆ. ಇಂದಿರಾ ಅವರು ವಿಭಿನ್ನರಾಗಿ ಕಾಣಿಸಿಕೊಂಡಿದ್ದಾರೆ. ಮಹಿಳಾವಾದಿ ಚಿಂತನೆ ಮತ್ತು ಧೋರಣೆಯನ್ನು ಇವರ ಕೃತಿಗಳಲ್ಲಿ ಪ್ರತ್ಯಕ್ಷವಾಗಿ ಕಾಣಲಾಗುವುದಿಲ್ಲ. ಈ ಲೇಖಕಿಯ ನಿಲುವಿನಲ್ಲಿ ಕ್ರಾಂತಿಕಾರಿ ಮನೋಭಾವಕ್ಕಿಂತ ಸುಧಾರಣಾತ್ಮಕ ಸ್ವಭಾವದ ಎಳೆಗಳಿವೆ. ಇವರು ಚಿತ್ರಿಸಿರುವ ಸ್ತ್ರೀಪಾತ್ರಗಳಿಗೆ ಶೋಷಣೆಯ ಅರಿವಿದ್ದರೂ, ಅವು ಪ್ರತಿಭಟಿಸಲಾರದೆ ಸಮಾಜದ ಬದ್ಧತೆಯನ್ನು ಒಪ್ಪಿಕೊಳ್ಳುವ ಅಸಹಾಯಕ ಸ್ಥಿತಿಯನ್ನು ಹೇಳುತ್ತವೆ. ಇಂಥದಲ್ಲಿ ಲೇಖಕಿ ಮಾನವೀಯ ಮೌಲ್ಯಗಳಿಗೆ ಹೆಚ್ಚಿನ ಗಮನ ನೀಡಿ ತ್ಯಾಗದ ಪ್ರತೀಕಗಳನ್ನಾಗಿಸುತ್ತಾರೆ. 'ಗೆಜ್ಜೆಪೂಜೆ' ಮತ್ತು 'ಫಣಿಯಮ್ಮ'ನಂತಹ ಇವರ ಪ್ರಸಿದ್ಧ ಕಾದಂಬರಿಗಳಲ್ಲಿಯೂ ಪ್ರಶ್ನಿಸುವ ಪ್ರಜ್ಞೆ ಕಂಡುಬರುವುದಿಲ್ಲ. ಮಹಿಳೆಯ ಬದುಕಿನ ವಿವಿಧ ಮಗ್ಗುಲುಗಳಾದ ಸಹಜ ಪ್ರೀತಿ, ಅನನ್ಯವಾದ ಜೀವನಪರತೆ ಮತ್ತು ಸಂವೇದನಶೀಲ ಮನಸ್ಸುಗಳು ಇಲ್ಲಿ ಮುಖ್ಯವಾಗುತ್ತದೆ.

೧೯೬೩ರಲ್ಲಿ ಪ್ರಕಟಗೊಂಡ ಇವರ ಪ್ರಥಮ ಕಾದಂಬರಿ 'ತುಂಗಭದ್ರ' ಆ ಕಾಲಕ್ಕೆ ಸಾಕಷ್ಟು ಪ್ರಸಿದ್ಧಿಯನ್ನು ಪಡೆಯಿತು. ಹಸ್ತಪ್ರತಿ ಕಳೆದುಹೋದುದರಿಂದ ಮತ್ತೆ ನೆನಪಿನ ಮೂಲಕ ರಚಿಸಿದ ಈ ಕೃತಿಯು, ಇಂದಿರಾ ಅವರನ್ನು ಉತ್ತಮ ಕಾದಂಬರಿಕಾರ್ತಿಯನ್ನಾಗಿ ನಿರೂಪಿಸಿತು. 'ಸದಾನಂದ' 'ನವರತ್ನ' 'ಫಣಿಯಮ್ಮ' ಈ ಕೃತಿಗಳು ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದಿವೆ. 'ಗೆಜ್ಜೆಪೂಜೆ' 'ಸದಾನಂದ' 'ಹೂಬಾಣ' 'ಫಣಿಯಮ್ಮ' ಮತ್ತು 'ಗಿರಿಬಾಲೆ 'ಈ ಕೃತಿಗಳು ಚಲನಚಿತ್ರಗಳಾದುವಲ್ಲದೆ, 'ಗೆಜ್ಜೆಪೂಜೆ' ಮತ್ತು 'ಫಣಿಯಮ್ಮ'ಗಳ ಚಿತ್ರಕಥೆಗಳಿಗೆ ರಾಷ್ಟ್ರಪ್ರಶಸ್ತಿ ಲಭಿಸಿದೆ.

ಇಂದಿರಾರವರ ಕೃತಿಗಳು ಇತರ ಭಾಷೆಗಳಿಗೂ ಅನುವಾದಗೊಂಡಿವೆ. 'ತುಂಗಭದ್ರ' ಮತ್ತು 'ಗೆಜ್ಜೆಪೂಜೆ' ಕಾದಂಬರಿಗಳು ತೆಲಗು ಹಾಗೂ ಗುಜರಾತಿ ಭಾಷೆಗಳಿಗೆ ಅನುವಾದಗೊಂಡಿವೆಯಾದರೆ, 'ಫಣಿಯಮ್ಮ' ಇಂಗ್ಲೀಷ್ ಹಾಗೂ ಮಲಯಾಳಂಗೆ ಭಾಷಾಂತರಗೊಂಡಿದೆ. ತಮ್ಮ ಸಾಹಿತ್ಯ ಸಾಧನೆಯ ಮೂಲಕ ಗಣ್ಯ ಲೇಖಕಿಯೆನಿಸಿಕೊಂಡ ಎಂ.ಕೆ. ಇಂದಿರಾರವರ ಕೃತಿಗಳು, ಅಸಂಖ್ಯಾತ ಓದುಗರ ಮನದಲ್ಲಿ ಶಾಶ್ವತ ಜಾಗವನ್ನು ಪಡೆದಿದೆ.

V V V

# ಡಾ. ಎಚ್. ತಿಪ್ಪೇರುದ್ರಸ್ವಾಮಿ

*ಸಿ. ಮಹಾದೇವ*



ಆಧುನಿಕ ಕನ್ನಡದ ಪ್ರಮುಖ ಲೇಖಕರಲ್ಲಿ ಒಬ್ಬರಾಗಿದ್ದ, ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ವೈಚಾರಿಕವೂ ಹಾಗೂ ಸಂಶೋಧನಾತ್ಮಕವೂ ಆದ ಬರವಣಿಗೆಯನ್ನು ಮಾಡಿದವರು; ಶರಣರ ಜೀವನವನ್ನು ಕುರಿತು ಕಾದಂಬರಿಗಳನ್ನು ಬರೆದವರು; ಸಾಹಿತ್ಯ ವಿಮರ್ಶೆ - ಕಾವ್ಯಮೀಮಾಂಸೆಗಳ ಕ್ಷೇತ್ರಗಳಲ್ಲಿ ದುಡಿದವರು.

೧೯೨೮ರ ಫೆಬ್ರವರಿ ೩ನೇ ದಿನಾಂಕದಂದು ಶಿವಮೊಗ್ಗ ಜಿಲ್ಲೆಯ ಹೊನ್ನಾಳಿಯಲ್ಲಿ ಜನಿಸಿದ ಡಾ. ತಿಪ್ಪೇರುದ್ರಸ್ವಾಮಿಯವರ ತಂದೆತಾಯಿಗಳು ಚೆನ್ನಮಲ್ಲಯ್ಯ ಮತ್ತು ಬಸಮ್ಮ. ಹುಟ್ಟಿದ ಮೂರು ತಿಂಗಳಲ್ಲೇ ತಾಯಿ ಕಳೆದುಕೊಂಡು ತಬ್ಬಲಿಯಾದ ಶ್ರೀಯುತರು ನಂತರ ಅಜ್ಜಿಯ ಆಶ್ರಯದಲ್ಲಿ ಬೆಳೆದರು. ಅಜ್ಜಿಯ ಆಚಾರ ವಿಚಾರಗಳು ತಿಪ್ಪೇರುದ್ರಸ್ವಾಮಿಯವರ ಮೇಲಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಪ್ರಭಾವಗಳಿಗೆ ಕಾರಣವಾದವು. ಇವರ ವಿದ್ಯಾಭ್ಯಾಸವು ಹೊನ್ನಾಳಿ, ಶಿರಾಳಕೊಪ್ಪ, ಆನವಟ್ಟಿ, ಶಿವಮೊಗ್ಗ, ತೀರ್ಥಹಳ್ಳಿ ಮತ್ತು ಮೈಸೂರುಗಳಲ್ಲಿ ನಡೆಯಿತು. ಆ ವೇಳೆಗಾಗಲೇ ಇವರ ಮೇಲೆ ಕುವೆಂಪು ಅವರ ಕೃತಿಗಳು ಪ್ರಭಾವ ಬೀರಿ, ಸಾಹಿತ್ಯದತ್ತ ವಾಲುವಂತೆ ಮಾಡಿದ್ದವು. ಇದರ ಪರಿಣಾಮವಾಗಿ ತಿಪ್ಪೇರುದ್ರಸ್ವಾಮಿಯವರು ಕುವೆಂಪು ಅವರ ಶಿಷ್ಯರಾಗುವ ದೃಢ ನಿರ್ಧಾರ ಮಾಡಿದರು.

ಮೈಸೂರಿನಲ್ಲಿ ಕುವೆಂಪು ಅವರನ್ನು ಭೇಟಿ ಮಾಡಿ ಕನ್ನಡ ಆನರ್ಸ್ ತರಗತಿಗೆ ಪ್ರವೇಶ ಪಡೆದ ಮೇಲೆ, ಇದನ್ನು ೧೯೫೧ರಲ್ಲಿ ಮುಗಿಸಿ, ಪ್ರಥಮದರ್ಜೆ ಮತ್ತು ರ್‍ಯಾಂಕ್ ಪಡೆದರು. ಎಂ.ಎ. ಮುಗಿಸಿದ ನಂತರ ಹಾಸನದ ಸರ್ಕಾರಿ ಕಾಲೇಜಿಗೆ ಅಧ್ಯಾಪಕರಾಗಿ ನೇಮಕಗೊಂಡರು. ನಂತರ ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು. ೧೯೬೨ರಲ್ಲಿ ಸ.ಸ. ಮಾಳವಾಡ ಅವರ ಮಾರ್ಗದರ್ಶನದಲ್ಲಿ 'ಶರಣರ ಅನುಭಾವ ಸಾಹಿತ್ಯ' ಎಂಬ ವಿಷಯದ ಮೇಲೆ

ಸಂಶೋಧನೆ ನಡೆಸಿ, ಪಿಎಚ್.ಡಿ ಪದವಿ ಗಳಿಸಿದರು. ಇದೇ ವರ್ಷ ಅವರು ಬರೆದ 'ಪರಿಪೂರ್ಣದೆಡೆಗೆ' ಎಂಬ ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರೆಯಿತು. ಮೈಸೂರಿನ ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು. ಮೈಸೂರು ವಿ.ವಿ. ಯ ಸ್ನಾತಕೋತ್ತರ ಕೇಂದ್ರವಾದ ಬಿ. ಆರ್. ಪ್ರಾಜೆಕ್ಟ್‌ನ ಕನ್ನಡ ವಿಭಾಗದ ಹಾಗೂ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದರು. ಈ ನಡುವೆ ಡಾ. ತಿಪ್ಪೆರುದ್ರಸ್ವಾಮಿಯವರು, ತಮ್ಮ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಎಂಬ ಗ್ರಂಥಕ್ಕೆ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಗಳಿಸಿದರು. ೧೯೮೫ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಇವರಿಗೆ ಗೌರವ ಪ್ರಶಸ್ತಿ ನೀಡಿತು.

ತಿಪ್ಪೇರುದ್ರಸ್ವಾಮಿಯವರ ಇತರ ಕೆಲವು ಮುಖ್ಯ ಕೃತಿಗಳೆಂದರೆ, 'ಜಡದಲ್ಲಿ ಜಂಗಮ', 'ಜ್ಯೋತಿ ಬೆಳಗುತಿದೆ' 'ಪರಿಪೂರ್ಣದೆಡೆಗೆ', 'ಕದಳಿಯ ಕರ್ಪೂರ', 'ಕರ್ತಾರನ ಕಮ್ಮಟ' ಮೊದಲಾದವು. ಇವು ಶಿವಶರಣರ ಜೀವನವನ್ನು ಕುರಿತ ಕಾದಂಬರಿಗಳು. ಅಲ್ಲಮನನ್ನು ನಾಯಕನಾಗಿಯುಳ್ಳ ' ಪರಿಪೂರ್ಣದೆಡೆಗೆ' ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನವನ್ನು ಪಡೆಯಿತು. ಶ್ರೀಯುತರು ಕಾವ್ಯಮೀಮಾಂಸೆಯ ಕ್ಷೇತ್ರದಲ್ಲಿ ಮಾಡಿದ ಕೆಲಸಕ್ಕೆ 'ತೌಲನಿಕ ಕಾವ್ಯ ಮೀಮಾಂಸೆ' ಕೃತಿಯು ಸಾಕ್ಷಿಯಾಗಿದೆ. ತಿಪ್ಪೇರುದ್ರಸ್ವಾಮಿಯವರು, ಮೈಸೂರು ವಿಶ್ವವಿದ್ಯಾಲಯ ಗಾಂಧಿಭವನದ ನಿರ್ದೇಶಕರಾಗಿಯೂ ದುಡಿದಿದ್ದರು. ಅಕ್ಟೋಬರ್ ೨೮ರಂದು ಕೊನೆಯುಸಿರೆಳೆದಾಗ ಡಾ. ತಿಪ್ಪೇರುದ್ರಸ್ವಾಮಿ ಅವರಿಗೆ ೬೬ ವರ್ಷ ವಯಸ್ಸು. ತಮ್ಮ ಜೀವಿತ ಕಾಲದಲ್ಲಿ ಕನ್ನಡಕ್ಕೆ ಅನೇಕ ಬಗೆಯಲ್ಲಿ ಸೇವೆ ಸಲ್ಲಿಸಿದ ಶ್ರೀಯುತರು 'ಶರಣ ಸಾಹಿತ್ಯ' ಅಧ್ಯಯನದ ಅನೇಕ ಯೋಜನೆಗಳಲ್ಲಿ ತಮ್ಮನ್ನು ಕೊನೆತನಕವೂ ತೊಡಗಿಸಿಕೊಂಡಿದ್ದರು.

V V V

# ಡಾ. ಸಿದ್ಧಯ್ಯ ಪುರಾಣಿಕ

*ಎಫ್.ಟಿ. ಹಳ್ಳಿಕೇರಿ*



'ಕಾವ್ಯಾನಂದ' ಎಂಬ ಹೆಸರಿನಿಂದ ಚಿರಪರಿಚಿತರಾದ ಡಾ. ಸಿದ್ಧಯ್ಯ ಪುರಾಣಿಕ ಅವರು ಕರ್ನಾಟಕದ ಸಾಂಸ್ಕೃತಿಕ ಚಿಂತಕರಲ್ಲಿ ಒಬ್ಬರು. ವೃತ್ತಿಯಲ್ಲಿ ಕ್ರಿಯಾಶೀಲ ಅಧಿಕಾರಿ, ಪ್ರವೃತ್ತಿಯಲ್ಲಿ ಸೃಜನಶೀಲ ಲೇಖಕರಾಗಿದ್ದ ಪುರಾಣಿಕರು ಹುಟ್ಟಿದ್ದು (೧೮-೬-೧೯೧೮) ಹೈದ್ರಾಬಾದ ಕರ್ನಾಟಕದ ರಾಯಚೂರು ಜಿಲ್ಲೆಯ 'ದ್ಯಾಂಪುರ' ಎಂಬ ಹಳ್ಳಿಯಲ್ಲಿ. ಅಜ್ಜಂದಿರಾದ ಚೆನ್ನಕವಿಗಳು ಕಾವ್ಯ ರಚನೆಯಲ್ಲಿ ನಿಸ್ಸೀಮರು. ತಂದೆ ಶ್ರೀಪಂಡಿತ ಕಲ್ಲಿನಾಥ ಶಾಸ್ತ್ರಿಗಳು ಪುರಾಣ ಪ್ರವಚನಕಾರರು. ಇಂಥ ಸುಸಂಸ್ಕೃತ ಸಾರಸ್ವತ ಮನೆತನದಲ್ಲಿ ಬೆಳೆದ ಪುರಾಣಿಕರು, ವಿದ್ಯಾರ್ಥಿ ದೆಸೆಯಿಂದಲೇ ಕವನ ರಚಿಸುವುದರ ಮೂಲಕ ಕವಿಯಾಗಿ ಗುರುತಿಸಿಕೊಂಡವರು. ಬಿ.ಎ., ಎಂ.ಎ. ಪದವಿ ಪಡೆದು ತಹಶೀಲ್ದಾರ, ಜಿಲ್ಲಾಧಿಕಾರಿ, ಕಾರ್ಮಿಕ ಕಮೀಷನರ್, ಸಾರಿಗೆ ಕಮೀಷನರ್ ಮುಂತಾದ ಸರಕಾರದ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿದರು. ಹೀಗೆ ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡೂ ಸಾಹಿತ್ಯಕ್ಷೇತ್ರದಲ್ಲಿ ಅನನ್ಯವಾದ ಸಾಧನೆಗೈದ ಪುರಾಣಿಕರು, ಕನ್ನಡ ನಾಡು ನುಡಿಗಳಿಗಾಗಿ ಅವಿರತವಾಗಿ ಹೋರಾಡಿದ್ದಾರೆ.

ಕವನ, ಕಥೆ, ನಾಟಕ, ಕಾದಂಬರಿ, ವಚನ, ಮಕ್ಕಳ ಸಾಹಿತ್ಯ ಮುಂತಾದ ಪ್ರಕಾರಗಳಲ್ಲಿ ಪುರಾಣಿಕರು ಕೃಷಿಗೈದು, ಸುಮಾರು ಮೂವತ್ತೈದು ಕೃತಿಗಳನ್ನು ರಚಿಸಿದ್ದಾರೆ. 'ಜಲಪಾತ', 'ಕರುಣಾಶ್ರಾವಣ', 'ಮಾನಸ ಸರೋವರ', 'ಮೊದಲು ಮಾನವನಾಗು', 'ಕಲ್ಲೋಲ ಮಾಲೆ' 'ಚರಗ' ಇವರ ಕವನ ಸಂಕಲನಗಳು. ನವೋದಯ ಮಾರ್ಗದಲ್ಲಿ ಬರೆದ ಪುರಾಣಿಕರ ಕವನಗಳು ಕುವೆಂಪು, ಬೇಂದ್ರೆ, ಕರ್ಕಿ ಮೊದಲಾದವರ ಮೆಚ್ಚುಗೆಯನ್ನು ಪಡೆದುಕೊಂಡಿವೆ. ತಾತ್ವಿಕತೆ, ವೈಚಾರಿಕತೆ,

ಹೃದಯವಂತಿಕೆಯಿಂದ ಕೂಡಿದ ಇವರ ಕವನಗಳು ಸಹಜವಾಗಿ ಓದುಗರನ್ನು ಬಹುಬೇಗನೆ ಆಕರ್ಷಿಸುತ್ತವೆ.

ವಚನ ರಚನೆಯು ಪುರಾಣಿಕರ ವಿಶಿಷ್ಟತೆಗಳಲ್ಲಿ ಒಂದು. ಸ್ವತಂತ್ರ ಧೀರ ಸಿದ್ಧೇಶ್ವರ ಎಂಬ ಅಂಕಿತದ ಮೂಲಕ ಹಲವು ವಚನಗಳನ್ನು ರಚಿಸಿದ್ದಾರೆ. ಅವು 'ವಚನೋದ್ಯಾನ', 'ವಚನ ನಂದನ' ಎಂಬ ಸಂಕಲನಗಳಲ್ಲಿ ಸಮಾವೇಶಗೊಂಡಿವೆ. ಮಾನವ ಸಂಸ್ಕೃತಿಯ ಸಂಹಿತೆಗಳಿಗೆ ಬರೆದ ವ್ಯಾಖ್ಯಾನದಂತೆ ಈ ವಚನಗಳು ಸೊಗಸಾಗಿ ಮೂಡಿ ಬಂದಿವೆ. 'ತುಪ್ಪಾ ರೊಟ್ಟಿ ಗೇ ಗೇ ಗೇ', 'ಗಿಲ್ ಗಿಲ್ ಗಿಲಗಚ್ಚಿ'- ಮೊದಲಾದ ಮಕ್ಕಳ ಪದ್ಯಗಳನ್ನೂ ಹೃದ್ಯವಾಗುವಂತೆ ರಚಿಸಿದ್ದಾರೆ. ಹಲವಾರು ಶರಣರ ಜೀವನ ಸಾಧನೆಯನ್ನು ಸಾಮಾನ್ಯರಿಗೂ ತಿಳಿಯುವಂತೆ ಸರಳವಾಗಿ 'ಶರಣ ಚರಿತಾಮೃತ' ವೆಂಬ ಕೃತಿಯ ಮೂಲಕ ಹೇಳಿದ್ದಾರೆ. ಆರನೆಯ ವಿಕ್ರಮಾದಿತ್ಯನನ್ನು ಕುರಿತಂತೆ 'ತ್ರಿಭುವನಮಲ್ಲ' ಎಂಬ ಐತಿಹಾಸಿಕ ಕಾದಂಬರಿಯನ್ನೂ, 'ಭಾರತವೀರ', 'ಆತ್ಮಾರ್ಪಣೆ' ಎಂಬ ನಾಟಕಗಳನ್ನು ಪುರಾಣಿಕರು ಬರೆದಿದ್ದಾರೆ. 'ತುಷಾರಹಾರ', 'ಕಥಾಮಂಜರಿ', ಕಥಾ ಸಂಕಲನಗಳು. ಅವರ ಬಹುತೇಕ ಕೃತಿಗಳಲ್ಲಿ ದೇಶೀಯ ಸೊಗಡಿನಿಂದ ಕೂಡಿದ ಭಾಷೆಯು ಬಳಕೆಗೊಂಡಿದೆ.

ಪುರಾಣಿಕರ ಸಾಹಿತ್ಯ, ಸಾಮಾಜಿಕ ಸೇವೆಯನ್ನು ಗಮನಿಸಿ ಹಲವಾರು ಸಂಘ ಸಂಸ್ಥೆಗಳು ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ. ಕಲ್ಕತ್ತೆಯ ಭಾರತೀಯ ಭಾಷಾ ಪರಿಷತ್ತಿನ ಭಿಲ್ವಾರ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮಾಳವಾಡ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿಗಳು ಇವರಿಗೆ ಸಂದಿವೆ. ಗುಲಬರ್ಗಾದಲ್ಲಿ ನಡೆದ ೫೮ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ (೧೯೮೭) ಅಧ್ಯಕ್ಷರಾಗಿ ಪುರಾಣಿಕರು ಸಮ್ಮಾನಿತರಾಗಿದ್ದಾರೆ.

ಕನ್ನಡ ಕರ್ನಾಟಕದ ಭವಿಷ್ಯದ ಬಗೆಗೆ ಕಾಳಜಿಯನ್ನು ಹೊಂದಿದ್ದ ಸಿದ್ಧಯ್ಯ ಪುರಾಣಿಕರು ೫.೯.೧೯೯೪ ರಂದು ನಿಧನರಾದರು. ಅವರ ಸಾಹಿತ್ಯಕ, ಸಾಧನೆಗಳನ್ನು ಕನ್ನಡಿಗರು ಸದಾ ಸ್ಮರಿಸುತ್ತಾರೆ.

V V V

# ಜೋಳದರಾಶಿ ದೊಡ್ಡನ ಗೌಡ

*ಮಲ್ಲಿಕಾರ್ಜುನ ವಣೇನೂರು*



ಬಳ್ಳಾರಿ ಜಿಲ್ಲೆಯ 'ಜೋಳದ ರಾಶಿ'ಯಲ್ಲಿ ೨೭.೭.೧೯೧೦ರಲ್ಲಿ ಜನಿಸಿದ ಶ್ರೀ ದೊಡ್ಡನ ಗೌಡರು ಮೂಲತಃ ನಟರಾದರೂ ತಮ್ಮನ್ನು ಗುರುತಿಸಿಕೊಂಡು ಪ್ರಸಿದ್ಧರಾದುದು ಗಮಕ ಕಲೆಯ ಮೂಲಕ. ಸ್ವಾತಂತ್ರ್ಯ ಪೂರ್ವದ ಆಧುನಿಕತೆಯ ಗಾಳಿಯೂ ಇಲ್ಲದ ಹಳ್ಳಿಯೊಂದರಲ್ಲಿ ಹುಟ್ಟಿ ಬೆಳೆದ ಗೌಡರು, ಗುಡಿ ಗುಂಡಾರದೊಳಗೆ ಮರಳಲ್ಲಿ ಅಕ್ಷರ ತಿದ್ದುವ ಕ್ರಮದಿಂದ ಓದಲು ಕಲಿತರು. ಬಾಲ್ಯದಲ್ಲಿಯೇ ಕೇಳಿ, ಮನನ ಮಾಡಿದ ರಾಮಾಯಣ, ಭಾರತ ಕಾವ್ಯಗಳು ಮತ್ತು ಅವೇ ಕಥೆಗಳನ್ನಾಧರಿಸಿದ ಬಯಲಾಟಗಳ ಮೂಲಕ ಕಲೆಯಲ್ಲಿ ಆಸಕ್ತಿ ಮೂಡಿಸಿಕೊಂಡರು. ಆರಂಭದಲ್ಲಿ ತಮ್ಮ ನಟನೆ ಮತ್ತು ಕಲಾಭಿರುಚಿಯಿಂದ 'ನಟ'ರಾಗಿ ಗುರುತಿಸಿಕೊಳ್ಳುತ್ತಾ, ಪ್ರಖ್ಯಾತ ರಂಗನಟ ಬಳ್ಳಾರಿ ರಾಘವರ ನಿಕಟವರ್ತಿಗಳೂ ಆದರು. ಆ ಕಾಲಕ್ಕೆ ಭಕ್ತ ಕನಕದಾಸ, ಕ್ರಾಂತಿ ಪುರುಷ ಬಸವಣ್ಣ, ಕಲಹಪ್ರಿಯ ನಾರದ, ಭಕ್ತ ಕಬೀರ, ಶ್ರೀಕೃಷ್ಣ, ಕುರುಡು ಭಿಕ್ಷುಕ - ಇವು ಅವರು ಅಭಿನಯಿಸಿದ ಆಕರ್ಷಕ ಪಾತ್ರಗಳಾಗಿದ್ದವು. ನಾಟಕಗಳಲ್ಲಿ ಪಾತ್ರವಹಿಸುವಾಗಲೇ ಗಾಯನ ಕಲೆಯತ್ತ ವಿಶೇಷವಾಗಿ ಆಕರ್ಷಿತರಾದ ಗೌಡರು 'ಶೂನ್ಯಸಂಪಾದನೆ' 'ಶ್ರೀ ರಾಮಾಯಣ ದರ್ಶನಂ', 'ಕುಮಾರವ್ಯಾಸ ಭಾರತ', 'ಜೈಮಿನಿ ಭಾರತ', 'ಹರಿಶ್ಚಂದ್ರ ಕಾವ್ಯ', 'ಪ್ರಭುಲಿಂಗ ಲೀಲೆ', 'ಬಸವಪುರಾಣ', ಮೊದಲಾದ ಕಾವ್ಯಗಳನ್ನು 'ಗಮಕ'ದಲ್ಲಿ ಹಾಡುತ್ತ ವಿಶೇಷ ಜನಮನ್ನಣೆಗಳಿಸಿದರು. ಇವರ ಗಮಕಕಲೆಯ ಪರಿಪೂರ್ಣತೆಗೊಂದು ನಿದರ್ಶನವೆಂದರೆ, ಬಳ್ಳಾರಿಯಲ್ಲಿ ಶ್ರೀ ಕುವೆಂಪು ಅವರ ಸತ್ಕಾರ ಸಮಾರಂಭದಲ್ಲಿ 'ಶಬರಿಗಾದನು ಅತಿಥಿ ದಾಶರಥಿ' ವಾಚನ ಮಾಡಿದಾಗ, ಕುವೆಂಪುರವರು "ಶ್ರೀ ದೊಡ್ಡನ ಗೌಡರು ವಾಚನ ಮಾಡುವಾಗ ನಾವು ಕಿಷ್ಕಿಂಧೆಯ ಹತ್ತಿರ ಆ ತ್ರೇತಾಯುಗಕ್ಕೆ ಹೋಗಿದ್ದೆವು" ಎಂಬುದಾಗಿ ಸಂತಸ ವ್ಯಕ್ತಪಡಿಸಿದ್ದು ಧಾರವಾಡದ ಶ್ರೀ ಮೃತ್ಯುಂಜಯ ಸ್ವಾಮಿಗಳ ಪ್ರೇರಣೆಯಿಂದ ನಾಡಿನ ಹಲವೆಡೆ

'ಶೂನ್ಯಸಂಪಾದನೆ'ಯ ಪ್ರವಚನಕಾರರಾಗಿ ವಚನಗಳ ಕಾಲದ ಆಶಯ, ಅವುಗಳ ತಾತ್ವಿಕತೆ, ಜನಪರ ನಿಲುವುಗಳನ್ನು ಅಸಂಖ್ಯಾತರಿಗೆ ತಲುಪಿಸಲು ಗೌಡರು ಯತ್ನಿಸಿದರು. ಇದರ ಜೊತೆಗೆ ಗೌಡರು ತಮ್ಮನ್ನು ನಾಟಕಕಾರರನ್ನಾಗಿಯೂ ಕವಿಗಳನ್ನಾಗಿಯೂ ರೂಪಿಸಿಕೊಂಡರು. ಇವೆಲ್ಲಕ್ಕಿಂತ ಮುಖ್ಯವಾಗಿ ಶೂನ್ಯಸಂಪಾದನೆಯ ವ್ಯಾಖ್ಯಾನವಾದ 'ಬಯಲು ಗಳಿಕೆಯ ಬೆಳಕು' ಮತ್ತು 'ನಂದೇ ನಾನೋದಿದೆ' ಆತ್ಮಕಥೆಗಳು ಮುಖ್ಯವೆನಿಸುತ್ತವೆ. ಸಾಹಿತ್ಯಿಕವಾಗಿ ಇವರ ಮತ್ತೊಂದು ಗಮನಾರ್ಹವಾದ ಕೆಲಸವೆಂದರೆ, ಬಸವಾದಿ ಶರಣರ ವಚನಗಳನ್ನು ಮತ್ತು 'ಶೂನ್ಯ ಸಂಪಾದನೆ'ಯನ್ನು ತೆಲುಗಿಗೆ ಅನುವಾದಿಸಿದುದು.

ದಿನಾಂಕ ೧೧.೫.೯೪ರಂದು ಈ ಲೋಕದ ವ್ಯಾಪಾರ ಮುಗಿಸಿದ ಗೌಡರು, ಮೂಲತಃ ಧಾರ್ಮಿಕ ವ್ಯಕ್ತಿಗಳಾಗಿದ್ದರು. ವರ್ತಮಾನದ ವಿಷಮತೆಗಳ ನಡುವೆಯೂ ಶರಣರ ಕಾಲದ ಮೌಲ್ಯಗಳನ್ನು ವ್ಯಕ್ತಿತ್ವದೊಂದಿಗೆ ಬೆಸೆದುಕೊಳ್ಳಲು ಪ್ರಯತ್ನಿಸುತ್ತ ಮತೀಯ ಚೌಕಟ್ಟನ್ನು ಮೀರಲು ಅವರು ಯತ್ನಿಸಿದರು. ಒಂದು ರೀತಿಯಲ್ಲಿ ಇಂತಹ ಪ್ರಯತ್ನವೇ ಎಲ್ಲಾ ಮಾತು ಬರಹಗಳಿಗಿಂತ ಅರ್ಥಪೂರ್ಣವಾದುದು ಮತ್ತು ಸಾರ್ಥಕ್ಯದಿಂದ ಕೂಡಿದುದಾಗಿದೆ. ಆಧುನಿಕತೆಯ ಗೊಂದಲಗಳ ಮತ್ತು ಅಸಂದಿಗ್ಧತೆಯ ನಡುವೆ ನಮ್ಮ ಪರಂಪರೆಯತ್ತ ದೇಶೀಯವಾದದ್ದರ ಕಡೆಗೆ ಹುಡುಕು ನೋಟ ಬೀರುವ ಯಾರಿಗಾದರೂ, ಹಿರಿಯ ತಲೆಮಾರಿನ ಇಂತಹ ಚೇತನಗಳು ನಂಬಿಕೊಂಡು ಬಂದ ಜೀವನ ಮೌಲ್ಯಗಳಿಂದ, ಬದುಕಿನ ವಿಧಾನದಿಂದ, ಅರಿಯಬಹುದಾದ್ದು, ಪ್ರೇರಣೆ ಪಡೆಯಬಹುದಾದದ್ದು ಸಾಕಷ್ಟಿದೆ ಅನ್ನಿಸುತ್ತದೆ.

## ಪರ್ವತವಾಣಿ

*ಸಿ. ಆರ್. ಗೋವಿಂದರಾಜು*



ಹಾಸ್ಯಮಯಿ, ಸ್ನೇಹಜೀವಿ, ನಿಗರ್ವಿ, ಉತ್ಸಾಹಿ ಮೊದಲಾದ ವಿಶೇಷಣಗಳಿಂದ ಪರ್ವತವಾಣಿ ಅವರ ವ್ಯಕ್ತಿತ್ವವನ್ನು ಬಣ್ಣಿಸಲಾಗುತ್ತದೆ. ನಟ-ನಾಟಕಕಾರ-ನಿರ್ದೇಶಕರಾಗಿ ಕನ್ನಡ ರಂಗಭೂಮಿಯಲ್ಲಿ ಜೀವಮಾನವನ್ನೆಲ್ಲ ಕಳೆದ ಪರ್ವತವಾಣಿಯವರು, ೧೯೧೧ರ ಸೆಪ್ಟೆಂಬರ್ ೨ ರಂದು ಬೆಂಗಳೂರಿನಲ್ಲಿ ಹುಟ್ಟಿದವರು. ಇವರ ನಿಜವಾದ ಹೆಸರು ಪರ್ವತವಾಡಿ ನರಸಿಂಗರಾವ್. ನರಸಿಂಗರಾಯರು ಮುಂದೆ ವಿ.ಕೃ.ಗೋಕಾಕರ ಸಲಹೆಯ ಮೇರೆಗೆ 'ಪರ್ವತ ವಾಣಿ' ಎಂಬಸಾಹಿತ್ಯ ನಾಮದಿಂದ ಗುರುತಿಸಿಕೊಂಡರು. ತಂದೆ ಗೋಪಾಲರಾಯರು; ತಾಯಿ ರುಕ್ಮಿಣಿಯಮ್ಮ. ಇವರು ಮೂಲತಃ ತಮಿಳುನಾಡಿನ ಬಡಕಾಂಡಪುಟ್ಟಿ ಬಳಿಯ ಪರ್ವತವಾಡಿ ಗ್ರಾಮಕ್ಕೆ ಸೇರಿದವರು. ಪರ್ವತವಾಣಿ ಅವರ ಶಿಕ್ಷಣವು ತುಮಕೂರು, ಮದ್ರಾಸ್, ಬೆಂಗಳೂರು ಮತ್ತು ಮೈಸೂರುಗಳಲ್ಲಿ ಆಯಿತು. ವಿದ್ಯಾರ್ಥಿಯಾಗಿದ್ದಾಗಲೇ (೧೯೩೦ರಲ್ಲಿ) ಶೆಟ್ಟಿಹಳ್ಳಿಯ ಕಮಲ ಅವರನ್ನು ಶ್ರೀಯುತರು ತಮ್ಮ ಬಾಳಸಂಗಾತಿಯನ್ನಾಗಿಸಿಕೊಂಡರು. ೧೯೩೨ ರಲ್ಲಿ ಬಿ.ಎ. ಆನರ್ಸ್ (ಅರ್ಥಶಾಸ್ತ್ರ) ಪದವಿಯನ್ನು ಮೈಸೂರು ವಿಶ್ವವಿದ್ಯಾನಿಲಯದಿಂದ ಪಡೆದರು. ೧೯೩೪ ರಲ್ಲಿ ಮೈಸೂರು ಅರಣ್ಯ ಇಲಾಖೆಗೆ ಗುಮಾಸ್ತರಾಗಿ ಸೇರಿದ ಶ್ರೀಯುತರು, ಮ್ಯಾನೇಜರ್ ಆಗಿ ನಿವೃತ್ತಿ ಹೊಂದಿದ್ದು ೧೯೬೭ ರಲ್ಲಿ. ರಂಗಭೂಮಿಯನ್ನೇ ತಮ್ಮ ಪ್ರಯೋಗಾಲಯವನ್ನಾಗಿಸಿಕೊಂಡು ಕಾರ್ಯ ನಿರ್ವಹಿಸುತ್ತಿದ್ದ ಪರ್ವತವಾಣಿ ಉರುಫ್ ಪಿ. ನರಸಿಂಗರಾವ್, ೧೯೯೪ರ ಮಾರ್ಚ್ ೧೭ ರಂದು ತೀರಿಕೊಂಡರು.

ಪರ್ವತವಾಣಿಯವರು, ೧೯೩೭ ರಲ್ಲಿ ಬೆಳ್ಳಾವೆ ನರಹರಿಶಾಸ್ತ್ರಿಗಳ 'ಶ್ರೀಕೃಷ್ಣಪಾರಿಜಾತ' ನಾಟಕದಲ್ಲಿ ಕೃಷ್ಣನ ಪಾತ್ರಧಾರಿಯಾಗಿ ರಂಗಪ್ರವೇಶ ಮಾಡಿದರು. ಆದರೆ 'ಉಂಡಾಡಿ ಗುಂಡ' ಇವರಿಗೆ ಹೆಚ್ಚಿನ ಕೀರ್ತಿ ತಂದುಕೊಟ್ಟ

ನಾಟಕವಾಗಿದೆ. ಪರ್ವತವಾಣಿ ಅವರು ಒಟ್ಟು ೮೩ ನಾಟಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚಿನವು ಸ್ವತಂತ್ರ ನಾಟಕಗಳಾಗಿವೆ. ಉಳಿದವು ಭಾಷಾಂತರ ಅಥವಾ ರೂಪಾಂತರ ಎನ್ನಬಹುದಾದುವು. ಶ್ರೀಯುತರು ಶೇಕ್ಸ್‌ಪಿಯರ್, ಇಬ್ಸನ್, ಮೋಲಿಯೇರ್, ಚೆಕಾಫ್, ಗೋರ್ಕಿ, ಗೋಲ್ಡ್‌ಸ್ಮಿತ್ ಮೊದಲಾದವರ ನಾಟಕಗಳನ್ನು ಕನ್ನಡಿಸಿದರು. ಅಲ್ಲದೆ ಶ್ರೀರಂಗ, ಕೈಲಾಸಂ, ಎಂ.ಆರ್. ಶ್ರೀನಿವಾಸಮೂರ್ತಿ, ಎ.ಎನ್. ಮೂರ್ತಿರಾವ್ ಮೊದಲಾದವರ ನಾಟಕಗಳಲ್ಲಿ ನಟಿಸುವುದರ ಜೊತೆಗೆ, ನಿರ್ದೇಶನವನ್ನೂ ಮಾಡಿದರು. ೧೯೮೦ರಲ್ಲಿ 'ನಂಕಂಪ್ನಿ' ಎಂಬ ಸ್ವಂತ ನಾಟಕತಂಡವನ್ನು ಕಟ್ಟಿಕೊಂಡು ಪ್ರದರ್ಶನಗಳನ್ನು ನೀಡಲಾರಂಭಿಸಿದರು. ರಂಗಭೂಮಿ - ರಂಗಸಜ್ಜಿಕೆ ಸಂಗೀತ- ಸಂಭಾಷಣೆ, ಉಡುಪು-ವಿನ್ಯಾಸಗಳ ಮೂಲಕ ಕನ್ನಡ ನಾಟಕಕ್ಷೇತ್ರವನ್ನು ವಿಸ್ತರಿಸಲು ಹೆಣಗಿದವರು ಪರ್ವತವಾಣಿ. ಶ್ರೀಯುತರು ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಚಲನಚಿತ್ರಗಳಲ್ಲಿ ನಟಿಸಿರುವ ಪರ್ವತವಾಣಿ ಶ್ರೀ ಲಂಕೇಶರ ' ಪಲ್ಲವಿ', 'ಅನುರೂಪ' ಚಿತ್ರಗಳಲ್ಲಿ ಮನೋಜ್ಞ ಅಭಿನಯ ನೀಡಿದ್ದಾರೆ. 'ದಂಗೆಯೆದ್ದ ಮಕ್ಕಳು', ' ಭಾಗ್ಯದ ಲಕ್ಷ್ಮಿ ಬಾರಮ್ಮಾ' ಮೊದಲಾದ ಚಿತ್ರಗಳಲ್ಲೂ ನಟಿಸಿದ್ದಾರೆ.

ನಾಡು ಪರ್ವತವಾಣಿ ಅವರ ಪ್ರತಿಭೆಗೆ ಅನೇಕ ಪುರಸ್ಕಾರ-ಪ್ರಶಸ್ತಿಗಳನ್ನು ನೀಡಿ ಗೌರವಿಸಿದೆ. ಅವುಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ (೧೯೭೦), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೭೪), ಕೇಂದ್ರ ಸಂಗೀತ-ನಾಟಕ ಅಕಾಡೆಮಿ ಪ್ರಶಸ್ತಿ (೧೯೮೦), ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ( ೧೯೮೩), ನಾಟಕ ಅಕಾಡೆಮಿ ಪ್ರಶಸ್ತಿ (೧೯೮೫) ಪ್ರಮುಖವಾದವು. ನಾಟಕ ರಚನೆ, ನಿರ್ದೇಶನಗಳಿಂದ ಆಧುನಿಕ ಕನ್ನಡ ರಂಗಭೂಮಿಯ ಚರಿತ್ರೆಯಲ್ಲಿ ಪರ್ವತವಾಣಿಯವರು ತಮ್ಮದೇ ಛಾಪನ್ನು ಉಳಿಸಿಹೋಗಿದ್ದಾರೆ.

V V V

# ಕೋಟ ಲಕ್ಷ್ಮೀನಾರಾಯಣ ಕಾರಂತ

*ಸ. ಬಿ. ರಮೇಶ*



ಸಾಹಿತ್ಯೇತರ ಕ್ಷೇತ್ರದಲ್ಲಿ ಅಪಾರ ಸಾಧನೆ ಮಾಡಿ ಕಣ್ಮರೆಯಾದ ಶ್ರೀ ಕೋಟ ಲಕ್ಷ್ಮೀನಾರಾಯಣ ಕಾರಂತರು ಶಿವರಾಮ ಕಾರಂತರ ಹಿರಿಯ ಅಣ್ಣ. ಕಾರಂತರು ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಬಿ.ಎ. (ಫಿಸಿಕ್ಸ್) ಮಾಡಿ ಊರಿಗೆ ಬಂದು ವಿಜ್ಞಾನದ ಉಪಾಧ್ಯಾಯರಾದರು. ಅವರು ವಿಜ್ಞಾನದ ಪಾಠ ಹೇಳುವ ಕ್ರಮವೇ ವಿಶಿಷ್ಟವಾಗಿ ಆಕರ್ಷಕವಾಗಿದ್ದುದರಿಂದ 'ಸಯನ್ಸ್ ಮಾಸ್ಟರ್'' ಎಂದು ಹೆಸರು ಪಡೆದರು. ಇವರು ಬರೆದ "ಲಘುವಿಜ್ಞಾನ" ಮತ್ತು "ಜನತಾ ಖಗೋಳಶಾಸ್ತ್ರ" ಇದಕ್ಕೆ ಸಾಕ್ಷಿಯಾಗಿವೆ. ಅದರ ಪುಸ್ತಕಕ್ಕೆ ೧೯೫೩ರಲ್ಲಿ ಮದರಾಸು ಸೆನೆಟ್‌ನ ಬಹುಮಾನ ದೊರೆಯಿತು.

ಅನ್ಯಾದೃಶ ಸಸ್ಯಪ್ರೇಮಿಯೂ ಕೃಷಿತಜ್ಞರೂ ಆಗಿದ್ದ ಕಾರಂತರು ಸ್ವಯಂ ಆಸಕ್ತಿಯಿಂದ ತೋಟಗಾರಿಕೆಯನ್ನು ಕೈಗೊಂಡರು. ಅಧ್ಯಾಪಕರಾಗಿದ್ದರೂ ಕೆಲಸದವರೊಡನೆ ಕೆಲಸ ಮಾಡುತ್ತಿದ್ದರು. ವಿವಿಧ ತಳಿಗಳನ್ನು ಕಂಡುಕೊಳ್ಳಲು ಊರೆಲ್ಲ ಸಂಚರಿಸಿ ಸಂಗ್ರಹಿಸುತ್ತಿದ್ದರು. ಸಂಗ್ರಹಿಸಿದ ತಳಿಗಳನ್ನು, ತಮ್ಮ ಜ್ಞಾನದಿಂದ ಅವುಗಳ ಅಗತ್ಯಗಳನ್ನು ಸ್ವತಃ ಗಮನಿಸಿ ಮಕ್ಕಳಂತೆ ಬೆಳೆಸುತ್ತಿದ್ದರು. ಕಾಡುಗಿಡಗಳಿಗೆ ಕಸಿ ಮಾಡಿ ಈ ಪ್ರಯೋಗಗಳಿಂದ ಅದ್ಭುತ ಪರಿಣಾಮಗಳನ್ನು ಕಂಡುಕೊಂಡಿದ್ದರು. ತೋಟಗಾರಿಕೆಯ ನೆಪದಲ್ಲಿ ತಮ್ಮ ಉದ್ಯೋಗಕ್ಕೆ ಎಂದೂ ಎರಡು ಬಗೆಯದೆ, ಬಿಡುವಿನಲ್ಲಿ ತೋಟದ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರು. ಇವರ ತೋಟದ ಮಣ್ಣಿನ ಗುಣದಿಂದಾಗಿ, ಅಲ್ಲಿ ಬೆಳೆಯುವ ಚಿಕ್ಕು ಹಣ್ಣುಗಳು ವಿಶಿಷ್ಟ ರುಚಿಯಿಂದ ಕೂಡಿದ್ದು ಜನ ಬೇಡಿಕೆಯನ್ನು ಪಡೆದಿವೆ.

ಈ ಕರ್ಮಯೋಗಿಯು ಇಳಿವಯಸ್ಸಿನಲ್ಲಿದ್ದಾಗಲೂ, ಅನೇಕ ಜನ ಸಸ್ಯವಿಜ್ಞಾನಿಗಳು, ಪ್ರಾಧ್ಯಾಪಕರು ಮತ್ತು ತೋಟ ಬೆಳೆಸುವ ಆಸಕ್ತರು

ಸಮಾಲೋಚನೆಗಾಗಿ ಬರುತ್ತಿದ್ದರು. ಸಾಮಾಜಿಕ ಕಳಕಳಿಯ ಈ ಧೀಮಂತ ಮಾಡಿದ ಜನಹಿತ ಕಾರ್ಯಗಳು ಹಲವು. ಸುತ್ತಣ ಜನರ ಒಳಿತಿಗಾಗಿ ಬೇಕಾದ ಕಾರ್ಯಗಳನ್ನು ಮಾಡಿಯೇ ಬಿಡುತ್ತಿದ್ದರು. ಈ ಕೆಲಸಗಳಿಗೆ ಹಣವನ್ನು ಎಂದೂ ಯಾರಿಂದಲೂ ಕೇಳಿದವರಲ್ಲ. ಕಾರಂತರು ತಮ್ಮ ನಿಸ್ವಾರ್ಥ ಸಮಾಜ ಸೇವೆಯಿಂದ ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು. ಮಡಿವಂತರ ಕಾಲದಲ್ಲಿಯೇ ಕೊರಗರ ಮಕ್ಕಳಿಗೆ ಶಾಲೆಕಲಿಸುವ ಆಸೆ ಹೊತ್ತು ಮೆರವಣಿಗೆ ಮಾಡಿಸಿದ್ದು, ಇವರ ಸಮಾಜ ಸುಧಾರಣೆಯ ಕಳಕಳಿಗೆ ಸಾಕ್ಷಿಯಾಗಿದೆ.

ಕಾರಂತರು ಕಾಮಾಲೆ, ಕೆಂಗಣ್ಣು, ಇತ್ಯಾದಿ ಕಾಯಿಲೆಗಳಿಗೆ ತಜ್ಞರಿಂದ ಮದ್ದನ್ನು ಕಲಿತು ಈ ಕಾಯಿಲೆಯುಳ್ಳವರಿಗೆ ಉಚಿತವಾಗಿ ಮದ್ದು ಕೊಡುತ್ತಿದ್ದರು. ಪ್ರತಿವರ್ಷ ಇವರ ಮನೆಗೆ ನಾಲ್ಕು ಸಾವಿರಕ್ಕೂ ಹೆಚ್ಚು ಜನರು ಮದ್ದಿಗಾಗಿ ಬರುತ್ತಿದ್ದರು. ಜನರಿಗೆ ಉಪಯೋಗವಾಗಲಿ ಎಂದು ಮದ್ದು ಮಾಡುವ ವಿಧಾನಗಳನ್ನು ಕುರಿತ ಮಾಹಿತಿಯನ್ನು ನಾಲ್ಕು ಸಾವಿರಕ್ಕೂ ಹೆಚ್ಚು ಕರಪತ್ರಗಳನ್ನು ಮಾಡಿ ಹಂಚಿದರು.

ಇವರು ನೆರಳಿಗಾಗಿ ನೆಟ್ಟ ಮರಗಳನ್ನು ಕುಂದಾಪುರದಿಂದ ಬ್ರಹ್ಮಾವರದವರೆಗೆ ನೋಡಬಹುದು. ಕುಂದಾಪುರದ ಬಸ್‌ಸ್ಟ್ಯಾಂಡಿನಲ್ಲಿ ಬೆಳೆಸಿದ ದೇವದಾರು ಮರಗಳು ಇವರ ನೆನಪನ್ನು ಜನಮನದಲ್ಲಿ ಹಚ್ಚಹಸಿರಾಗಿಸಿವೆ. ಅಪಾರ ಜೀವನಾನುಭವಗಳನ್ನು ಪಡೆದುಕೊಂಡ ವಿಚಾರವಾದಿ, ಸಮಾಜವಾದಿ, ಪ್ರಾಮಾಣಿಕ ಆದಮ್ಯ ಚೇತನ, ಕೋ.ಲ. ಕಾರಂತರು ೯೭ ವರ್ಷ ಸಾರ್ಥಕ ಬದುಕನ್ನು ಬದುಕಿ, ಕುಂದಾಪುರದ ತಮ್ಮ ಮನೆಯಲ್ಲಿ ೧೯೯೪ರ ನವೆಂಬರ್ ೧೧ ರಂದು ನಿಧನರಾದರು. ' ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು' ಎಂಬ ಇವರ ಆತ್ಮಕಥನವು ಅವರ ಸಾಮಾಜಿಕ ವ್ಯಕ್ತಿತ್ವದ ಅನೇಕ ಹೊಳಹುಗಳನ್ನು ನೀಡುತ್ತದೆ.

V V V

# ಜಿ.ಎಸ್. ಶೆಣೈ

*ಎನ್. ಮರಿಶಾಮಾಚಾರ್*

---



ಕರ್ನಾಟಕದ ಸಮಕಾಲೀನ ಕಲಾವಿದರಾಗಿ, ಕಲಾ ಚಳುವಳಿಯ ನೇತಾರರಾಗಿ, ಸಂಘಟಕರಾಗಿ ರಾಷ್ಟ್ರ ಮನ್ನಣೆ ಪಡೆದಿದ್ದ ಜಿ.ಎಸ್. ಶೆಣೈಯವರು ೧೬ನೇ ನವೆಂಬರ್ ೯೪ ರಂದು ನಿಧನರಾದರು. ೧೯೩೬ರಲ್ಲಿ ಉಡುಪಿಯಲ್ಲಿ ಜನಿಸಿದ ಶೆಣೈಗೆ ಅಲ್ಲಿನ ಪ್ರಕೃತಿ, ಭೋರ್ಗರೆಯುವ ಕಡಲು, ಹಸಿರು ತುಂಬಿದ ಪಶ್ಚಿಮ ಘಟ್ಟಗಳು ಪ್ರಭಾವ ಬೀರಿದವು. ಪ್ರಾರಂಭದಲ್ಲಿ ಕಲೆ ಕಲಿಯಲು ಮನೆಯವರ ವಿರೋಧವಿದ್ದರೂ, ಕಲಾವಿದನಾಗಬೇಕೆಂಬ ಹಂಬಲದಿಂದ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆ ಸೇರಿದರು. ಅಲ್ಲಿಂದ ಮುಂಬಯಿಗೆ ತೆರಳಿ, ಅಲ್ಲಿ ಸರ್ ಜೆ.ಜೆ. ಕಲಾಶಾಲೆಯನ್ನು ಸೇರಿ, ೧೯೬೩ರಲ್ಲಿ ಚಿತ್ರಕಲೆಯಲ್ಲಿ ಪದವಿ ಪಡೆದರು. ಅಲ್ಲಿದ್ದಾಗ ನೂತನ ಕಲಾಮಂದಿರಕ್ಕೂ ಹೋಗಿ ದಂಡಾವತಿಮಠ ಅವರ ಮಾರ್ಗದರ್ಶನವನ್ನು ಪಡೆಯುತ್ತಿದ್ದರು. ಪ್ರಾರಂಭದಲ್ಲಿ ಎಲ್ಲರಂತೆ ಭಾವಚಿತ್ರ, ಸ್ತಬ್ಧಚಿತ್ರ ಮತ್ತು ಪ್ರಕೃತಿ ಚಿತ್ರಗಳನ್ನು ರಚಿಸುತ್ತಿದ್ದರು. ಅನಂತರ ಪ್ರಕೃತಿ ಚಿತ್ರ ರಚಿಸುವುದನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡರು. ವರ್ಣ ಸಾಮರಸ್ಯವನ್ನು ಚಿತ್ರಿಸುವಲ್ಲಿ ಶೈಣೈ ಸಿದ್ಧಹಸ್ತರಾಗಿದ್ದರು.

ಶೆಣೈ ಹಲವು ಮಾಧ್ಯಮಗಳಲ್ಲಿ ಕಲಾಕೃತಿಗಳನ್ನು ರಚಿಸಿದ್ದಾರೆ. ಜಲವರ್ಣ, ತೈಲವರ್ಣ, ಕೊಲಾಜ್, ಅಲ್ಯೂಮಿನಿಯಂ ತಗಡು ಟೈಲ್ಸ್ ಹಾಗೂ ಭಿತ್ತಿಚಿತ್ರ ಮುಂತಾದ ಮಾಧ್ಯಮಗಳಲ್ಲಿ ಪರಿಣಿತರಾಗಿದ್ದರು. ಇವರ ಒಟ್ಟು ಚಿತ್ರಗಳನ್ನು ಪರಿಶೀಲಿಸಿದಾಗ, ಇವರು ಉಪಯೋಗಿಸುತ್ತಿದ್ದ ವರ್ಣಗಳು ಮತ್ತು ಅವುಗಳನ್ನು ಬಳಸುತ್ತಿದ್ದ ರೀತಿ ನೋಡುಗನನ್ನು ಆಕರ್ಷಿಸುವಂತೆ ಮಾಡುತ್ತಿದ್ದವು. ಇವರ ಮತ್ತೊಂದು ಸಾಧನೆ, ಭಿತ್ತಿಚಿತ್ರಗಳ ರಚನೆಯನ್ನು ಪ್ರಾರಂಭಿಸಿ ಹೊಸ ಹಾದಿಗೆ ಕಾರಣಕರ್ತರಾಗಿದ್ದರು. ರಾಷ್ಟ್ರದ ಪ್ರಮುಖ ಸ್ಥಳಗಳಲ್ಲಿ ತಮ್ಮ ಏಕವ್ಯಕ್ತಿ

ಕಲಾಪ್ರದರ್ಶನಗಳನ್ನು ಏರ್ಪಡಿಸಿದ್ದ ಶೆಣೈ, ಸಿಂಗಾಪೂರ, ಟರ್ಕಿ, ಮ್ಯಾಂಚೆಸ್ಟರ್ ಹಾಗೂ ರಾಷ್ಟ್ರದ ಪ್ರಮುಖ ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿದ್ದರು. ಬಾಂಬೆ ಆರ್ಟ್ ಸೊಸೈಟಿ ಪ್ರಶಸ್ತಿ, ಕರ್ನಾಟಕ ಲಲಿತಕಲಾ ಅಕಾಡೆಮಿಯ ಕಲಾಪ್ರದರ್ಶನಗಳಲ್ಲಿ ಬಹುಮಾನ, ಕರ್ನಾಟಕ ರಾಜ್ಯೋತ್ಸವ ಮತ್ತು ಲಲಿತಕಲಾ ಅಕಾಡೆಮಿಯ ಪ್ರಶಸ್ತಿಗಳಿಗೆ ಶೆಣೈ ಪಾತ್ರರಾಗಿದ್ದರು. ಉಡುಪಿಯಲ್ಲಿ 'ಸೌತ್ ಕೆನರಾ ಆರ್ಟ್ ಕೌನ್ಸಿಲ್'ನ್ನು ಸ್ಥಾಪಿಸಿ ಕಲಾವಿದರ ಸಂಘಟನೆಗೂ ಕಾರಣಕರ್ತರಾಗಿದ್ದರು.

ಕರ್ನಾಟಕ ಕಲಾ ಚಳುವಳಿಯಲ್ಲಿ ಶೆಣೈಯವರ ಪಾತ್ರ ಪ್ರಮುಖವಾದುದು. ಅಕಾಡೆಮಿಯ ಸದಸ್ಯರಾಗಿ, ಅನೇಕ ಸಂಘಸಂಸ್ಥೆಗಳ ಸದಸ್ಯರಾಗಿದ್ದ ಇವರನ್ನು, ಕರ್ನಾಟಕ ಸರ್ಕಾರವು ಮೈಸೂರಿನ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿಗೆ ಡೀನ್ ಆಗಿ ನೇಮಿಸಿತ್ತು. ಜಿ. ಎಸ್. ಶೈಣೈ ಸದಾ ನಗುಮುಖದ ಸ್ನೇಹಜೀವಿ ಹಾಗೂ ಚೈತನ್ಯ ಪೂರ್ಣವಾದ ವ್ಯಕ್ತಿಯಾಗಿದ್ದರು.

V V V

# ಟಿ. ಪಿ. ಅಕ್ಕಿ

*ಎನ್. ಮರಿಶಾಮಾಚಾರ್*



ರಾಜ್ಯದ ಹೆಸರಾಂತ ಕಲಾಗುರುಗಳು ಮತ್ತು ಲಲಿತಕಲಾ ಅಕಾಡೆಮಿಯ ಮಾಜಿ ಅಧ್ಯಕ್ಷರು ಆದ ಟಿ. ಪಿ. ಅಕ್ಕಿಯವರು ೩೧ ನೇ ಮಾರ್ಚ್ ೧೯೯೪ ರಂದು ನಿಧನರಾದರು. ಶ್ರೀಯುತರು ಗದಗಿನಲ್ಲಿ ವಿಜಯ ಕಲಾಮಂದಿರವನ್ನು ಸ್ಥಾಪಿಸಿ ಅನೇಕ ಕಲಾವಿದರನ್ನು ಮತ್ತು ಕಲಾ ಶಿಕ್ಷಕರನ್ನು ತಯಾರು ಮಾಡಿದವರು. ೧೯೦೮ ರಲ್ಲಿ ಲಕ್ಷ್ಮೇಶ್ವರದಲ್ಲಿ ಜನಿಸಿದ ಅಕ್ಕಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣಗಳನ್ನು ಗದಗ ಮತ್ತು ಹುಬ್ಬಳ್ಳಿಯಲ್ಲಿ ಮುಗಿಸಿ, ಮುಂಬಯಿನಲ್ಲಿ ಆರ್ಟ್ ಮಾಸ್ಟರ್‌ನಲ್ಲಿ ಶಿಕ್ಷಣವನ್ನು ಪಡೆದರು. ತಮ್ಮ ಕಲಾ ಶಿಕ್ಷಣವನ್ನು ಪೂರೈಸಿ ನವಸಾರಿ, ವಸಯಿಗಳಲ್ಲಿ ಕೆಲಸ ನಿರ್ವಹಿಸಿದರು. ಅನಂತರ ಗದಗಿನಲ್ಲಿ ಕಲಾಶಾಲೆಯನ್ನು ಸ್ಥಾಪಿಸುವ ನಿರ್ಧಾರವನ್ನು ಕೈಗೊಂಡು, ಮುನಿಸಿಪಲ್ ಪ್ರೌಢಶಾಲೆಯಲ್ಲಿ ಚಿತ್ರಕಲಾ ತರಗತಿಯ ಕೊಠಡಿಯಲ್ಲಿ ಕಲಾಶಾಲೆಯನ್ನು, ೧೯೪೭ ರಲ್ಲಿ ವಿಜಯ ಕಲಾಮಂದಿರವನ್ನು ಪ್ರಾರಂಭಿಸಿದರು. ಕಲಾ ವಿದ್ಯಾರ್ಥಿಗಳಿಗೆ ಚೈತನ್ಯಶಕ್ತಿಯಾಗಿ, ತಮ್ಮ ಸಾಧನೆಯ ಬುನಾದಿಯನ್ನು ಭದ್ರಪಡಿಸಿಕೊಂಡರು. ೧೯೬೦ ರಲ್ಲಿ ಡ್ರಾಯಿಂಗ್ ಶಿಕ್ಷಕರ ತರಬೇತಿ ಹಾಗೂ ಮಣ್ಣಿನ ಪ್ರತಿಮಾ ನಿರ್ಮಾಣ ತರಗತಿಗಳನ್ನು ಪ್ರಾರಂಭಿಸಿದರು. ಅಲ್ಲದೆ ಸಂಗೀತ, ನೃತ್ಯ, ನಾಟಕಗಳಿಗಾಗಿ 'ವಿಜಯ ನಾಟ್ಯ ಸಂಘ'ವನ್ನು ಸ್ಥಾಪಿಸಿದರು.

ಕರ್ನಾಟಕ ರಾಜ್ಯೋದಯಕ್ಕೂ ಮೊದಲು ಹಾಗೂ ಉತ್ತರ ಕರ್ನಾಟಕ ಪ್ರದೇಶವೆಲ್ಲ ಮುಂಬಯಿ ರಾಜ್ಯಾಡಳಿತಕೊಳ್ಳಪಟ್ಟ ಕಾಲದಲ್ಲಿ ಮುಂಬಯಿ ರಾಜ್ಯದ ಕಲಾ ಶಿಕ್ಷಣ ಮಂಡಳಿಯ ಸಲಹಾ ಸದಸ್ಯರಾಗಿ ಶ್ರೀ ಅಕ್ಕಿಯವರು ನಾಲ್ಕು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಕರ್ನಾಟಕ ರಾಜ್ಯದ ಚಿತ್ರಕಲಾ ಶಿಕ್ಷಕರ ಹಾಗೂ ಚಿತ್ರಕಲಾ ಶಿಕ್ಷಣದ ಅಭಿವೃದ್ಧಿಗಾಗಿ ಶ್ರಮಿಸಿದರು. ಅವರ ಕಲಾ ಸೇವೆಗಾಗಿ ಕರ್ನಾಟಕ ಲಲಿತಕಲಾ

ಅಕಾಡೆಮಿಯು ೧೯೬೯-೭೦ ರಲ್ಲಿ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಕರ್ನಾಟಕ ಸರ್ಕಾರವು ೧೯೮೦-೮೧ ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರನ್ನಾಗಿ ನೇಮಿಸಿತು. ಈ ಅವಧಿಯಲ್ಲಿ ಕಲಾ ವಿದ್ಯಾರ್ಥಿಗಳಿಗಾಗಿ ಶಿಬಿರ, ಕಲಾ ವಿದ್ಯಾರ್ಥಿಗಳ ಕಲಾಪ್ರದರ್ಶನ, ರಾಷ್ಟ್ರಮಟ್ಟದಲ್ಲಿ ಕಲಾ ಶಿಕ್ಷಣದ ಬಗ್ಗೆ ವಿಚಾರ ಸಂಕಿರಣ ಹಾಗೂ ಪುಸ್ತಕಗಳ ಪ್ರಕಟಣೆಗಳು- ಬಹುಮುಖ್ಯವಾದ ಕಾರ್ಯಕ್ರಮಗಳಾಗಿದ್ದವು. ಕಲಾವಿದ ಹಾಗೂ ಕಲಾಭಿಮಾನಿಗಳಿಂದ ಬಿರುದು ಪ್ರಶಸ್ತಿಗಳನ್ನು ಪಡೆದ ಅಕ್ಕಿಯವರ ವಿಜಯ ಕಲಾ ಮಂದಿರ ಇಂದು, 'ವಿಜಯ ಲಲಿತಕಲಾ ಕಾಲೇಜು' ಆಗಿದೆ.

V V V

# ಬಿ. ಕೆ. ಸುಂದರೇಶ್

*ಬಿ. ಎಂ. ಪುಟ್ಟಯ್ಯ*



೧೯೯೪ನೇ ವರ್ಷಕ್ಕೆ ೬೫ ಅನ್ನು ಹಡೆಯುವ ಹದವೇರುತ್ತಿದ್ದಾಗಲೇ ಬೆಂಗಳೂರಿನಲ್ಲಿ ಉದ್ಯಾನ್ ಎಕ್ಸ್‌ಪ್ರೆಸ್ ರೈಲು ಅಪಘಾತಕ್ಕೀಡಾಗಿ ಆಘಾತವನ್ನಂಟು ಮಾಡಿತು. ಜಜ್ಜಿಹೋಗಿದ್ದ ಬೋಗಿ ಯೊಂದಕ್ಕೆ ಸಿಕ್ಕಿ ನೇತಾಡುತ್ತಿದ್ದ ವ್ಯಕ್ತಿಯನ್ನು ಗುರುತಿಸಲಾಗಿ ಬಿ. ಕೆ. ಸುಂದರೇಶ್ ಎಂದು ತಿಳಿಯಿತು. ಅವರು ಅಂಗನವಾಡಿ ಕಾರ್ಯಕರ್ತೆಯರ ಸಮಾವೇಶವೊಂದಕ್ಕೆ ಮುಂಬೈಗೆ ಹೋಗಿ, ಹಿಂತಿರುಗಿ ಬರುತ್ತಿದ್ದಾಗ, ಈ ಘಟನೆಯಿಂದಾಗಿ ಮತ್ತೆಂದೂ ಹಿಂತಿರುಗದ ಕಡೆಗೆ ಹೊರಟೇಹೋಗಿದ್ದರು.

ಚಿಕ್ಕಮಗಳೂರು ಜಿಲ್ಲೆಯ, ಮೂಡಿಗೆರೆ ತಾಲೋಕಿನ ಬಕ್ಕಡಿ ಇವರ ಊರು. ಸುಂದರೇಶ್ ವಿದ್ಯಾರ್ಥಿಯಾಗಿದ್ದಾಗಲೇ ಸಂಘಟನೆ, ಚಳುವಳಿಗಳಿಂದ ಆಕರ್ಷಿತರಾದರು. ವಿದ್ಯಾರ್ಥಿ ಚಳುವಳಿಯ ಮೂಲಕ ಸಿ. ಪಿ. ಐ. ಸೇರಿದರು. ಈಚೆಗೆ ಅವರು ಸಿ. ಪಿ. ಐ. ನ ರಾಷ್ಟ್ರಿಯ ಮಂಡಳಿಯ ಸದಸ್ಯರೂ ಆಗಿದ್ದರು.

ಎರಡು ಬಾರಿ ಲೋಕಸಭೆಗೆ ಸ್ಪರ್ಧಿಸಿ ಸುಂದರೇಶ್ ಸೋತಿದ್ದರು. ಕಳೆದ ವಿಧಾನಸಭೆ ಚುನಾವಣೆಯಲ್ಲಿ ಕೇವಲ ೬೩೨ ಮತಗಳಿಂದ ಸೋತಿದ್ದರು. ಭಾರತೀಯ ಜ್ಞಾನ ವಿಜ್ಞಾನ ಜಾಥಾ ಮತ್ತು ಸಾಕ್ಷರತಾ ಅಂದೋಲನಗಳಲ್ಲಿ ಅವರು ಸಕ್ರಿಯ ಕೆಲಸಗಾರರಾಗಿದ್ದರು. ಚಿಕ್ಕಮಗಳೂರು ಜಿಲ್ಲಾ ಲೇಖಕರ ಸಂಘ ಮತ್ತಿತರ ಸಾಹಿತ್ಯ ಮತ್ತು ಪ್ರಗತಿಪರ ಸಂಘ ಸಂಸ್ಥೆಗಳೊಂದಿಗೆ ಒಡನಾಟವಿಟ್ಟುಕೊಂಡಿದ್ದರು. ಹಾಗಾಗಿ ಚಿಕ್ಕಮಗಳೂರಿನ ಜನ ಅವರನ್ನು ಒಬ್ಬ ಸಾಂಸ್ಕೃತಿಕ ರಾಜಕೀಯ ವ್ಯಕ್ತಿಯಾಗಿ ಭಾವಿಸಿದರು. ಜಮೀನ್ದಾರಿ ಜಾತಿ ಸಮುದಾಯದಿಂದ ಬಂದ ಸುಂದರೇಶ್ ಅವರಿಗೆ, ಎಷ್ಟೋ ಸಲ ಚಳುವಳಿಗೆ ಜಾತಿ ಪ್ರಬಲ ಅಡ್ಡಿಯಾಗುತ್ತಿತ್ತು ಅನಿಸುತ್ತದೆ. ಅದು ಭೂಮಾಲೀಕ-ಕೃಷಿ ಕಾರ್ಮಿಕರ ನಡುವಿನ ಪ್ರಕರಣವಿರಲಿ, ಕೊಲೆ, ಹಲ್ಲೆ,

ಅತ್ಯಾಚಾರಗಳಂತಹ ಪ್ರಕರಣಗಳಿರಲಿ, ಅಲ್ಲಿಯ ಸಿ. ಪಿ. ಐ. ನ ಹೋರಾಟದ ಸ್ವರೂಪವು ಅದ್ದಗೋಡೆಯ ಮೇಲೆ ದೀಪವಿಟ್ಟಂತೆ ಇರುತ್ತಿತ್ತು.

ಸುಂದರೇಶ್ ಅವರು ರಷ್ಯಾಕ್ಕೂ ಒಂದು ಸಲ ಹೋಗಿ ಬಂದಿದ್ದರು. ರಷ್ಯಾದಲ್ಲಿ ಸ್ಟಾಲಿನ್ ನಂತರ' ಸಮಾಜವಾದಿ ಸಾಮ್ರಾಜ್ಯಶಾಹಿ'ಬೆಳೆಯುತ್ತಿರುವಾಗಲೇ ಇಲ್ಲಿ ಕಮ್ಯುನಿಸ್ಟ್ ಒಲವನ್ನು ರೂಢಿಸಿಕೊಳ್ಳುತ್ತಿದ್ದವರಲ್ಲಿ ಇವರೂ ಒಬ್ಬರು. ರಷ್ಯಾದಲ್ಲಿ ಕಮ್ಯುನಿಷ್ಟರ ಬಣ್ಣ ಪೂರ್ತಿ ಬಯಲಾದ ಮೇಲೆಯೂ ಪಾರ್ಲಿಮೆಂಟರಿ ಕಮ್ಯುನಿಷ್ಟರ ತತ್ವವನ್ನು ಇವರು ಬಿಟ್ಟುಕೊಟ್ಟಿರಲಿಲ್ಲ. ಬದಲಾಗಿ ವೈಜ್ಞಾನಿಕ ಸಮಾಜವಾದದ ಬಗ್ಗೆ ಮತ್ತೆ ಮತ್ತೆ ಮಾತನಾಡುತ್ತಿದ್ದರು.

ಚಿಕ್ಕಮಗಳೂರಿನ ಕೆಲವು ಕಡೆ ಸಿ. ಪಿ. ಐ. ಬಗ್ಗೆ ಒಂದಿಷ್ಟು ಒಳ್ಳೆಯ ಅಭಿಪ್ರಾಯವಿತ್ತು ನಿಜ. ಆದರೆ ಅದು ಆಳುವ ಸರ್ಕಾರಗಳಿಂದ ಫಲಕಾಣದ ವಂಚಿತ ನೋವಿನಲ್ಲಿತ್ತು. ಏಕೆಂದರೆ ಸುಂದರೇಶ್ ಕೂಡ ಇದಕ್ಕೆ ಹೊರತಾಗಿರಲಿಲ್ಲ. ಅವರು ಒಂದು ಸಲವೂ ಎಂ. ಪಿ. ಅಥವಾ ಎಂ. ಎಲ್. ಎ ಆಗದಿದ್ದುದು ಇದಕ್ಕೆ ಪೂರಕವಾಗಿಯೇ ಇತ್ತು.

ಸಾಮಾನ್ಯ ಎತ್ತರಕ್ಕಿಂತ ಸ್ವಲ್ಪ ಜಾಸ್ತಿಯಿದ್ದು, ಸಣಕಲಾದ ದೇಹವಿದ್ದುದರಿಂದ ಮತ್ತೂ ಎತ್ತರವಾಗಿ ಕಾಣುತ್ತಿದ್ದ ಸುಂದರೇಶ್ ಒಳ್ಳೆಯ ಭಾಷಣಕಾರರು. ಆಕರ್ಷಕವಾದ ಶೈಲಿಯ ಅವರ ಭಾಷಣ ಪರಿಣಾಮಕಾರಿಯೂ ಪ್ರಭಾವಶಾಲಿಯೂ ಆಗಿರುತ್ತಿತ್ತು. ಎಲ್ಲಿರೊಡನೆಯೂ ಬೆರೆತು ಸರಳವಾಗಿ ಬದುಕಿದವರು ಸುಂದರೇಶ್.

# ಬಿ. ಬಿ. ಹೆಂಡಿ

*ಎಫ್. ಟಿ. ಹಳ್ಳಿಕೇರಿ*



ಕನ್ನಡ ಪ್ರಾಧ್ಯಾಪಕರೂ, ಜಾನಪದ ವಿದ್ವಾಂಸರೂ, ದಕ್ಷ ಆಡಳಿತಗಾರರೂ ಆಗಿದ್ದ ಡಾ. ಬಿ. ಬಿ. ಹೆಂಡಿ ಅವರು ಹುಟ್ಟಿದ್ದು (೩೦-೭-೧೯೨೫) ಬಿಜಾಪುರ ಜಿಲ್ಲೆಯ ನಿಡಗುಂದಿಯಲ್ಲಿ. ಬಸಪ್ಪ-ಗೌರಮ್ಮ ಇವರ ತಂದೆತಾಯಿಗಳು. ನಿಡಗುಂದಿ, ಬಿಜಾಪುರ ಬಾಗಲಕೋಟ, ಬೆಳಗಾಂವಗಳಲ್ಲಿ ಶಿಕ್ಷಣವನ್ನು ಪೂರೈಸಿದ ಹೆಂಡಿಯವರು 'ಹರಿಹರನ ವ್ಯಕ್ತಿತ್ವ ಮತ್ತು ಕವಿತ್ವ'ಎಂಬ ವಿಷಯದ ಮೇಲೆ ಸಂಶೋಧನೆ ಕೈಕೊಂಡು ಪಿಎಚ್. ಡಿ. (೧೯೭೧)ಪದವಿ ಪಡೆದರು. ಸುಮಾರು ೩೫ ವರ್ಷಗಳ ಕಾಲ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಅದರ ಸರ್ವಾಂಗೀಣ ಬೆಳವಣಿಗೆಗೆ ಕಾರಣೀಭೂತರಾದವರು. ಅಲ್ಲದೇ ಸಿನೆಟ್, ಸಿಂಡಿಕೇಟ್, ಅಕೆಡೆಮಿಕ್ ಕೌನ್ಸಿಲ್ ಸದಸ್ಯರಾಗಿ, ವಿಶ್ವವಿದ್ಯಾಲಯದ ವಿವಿಧ ಕೋರ್ಸುಗಳ ಪಠ್ಯಕ್ರಮ ರೂಪಿಸುವಲ್ಲಿ ಹೆಂಡಿಯವರ ಪಾತ್ರ ಗಣನೀಯವಾದುದು.

ಹಳಗನ್ನಡ-ಜಾನಪದ ಸಾಹಿತ್ಯ, ಪಾಶ್ಚಾತ್ಯ ಕಾವ್ಯಮೀಮಾಂಸೆಗಳಲ್ಲಿ ವಿಶೇಷ ಆಸಕ್ತಿ ಹೊಂದಿದ್ದ ಹೆಂಡಿಯವರು, ಅಧ್ಯಯನಕ್ಕೆ ಹೆಚ್ಚು ಒತ್ತು ಕೊಡುತ್ತಿದ್ದರು. ಇವರು ಬರೆದದ್ದು ತುಂಬ ಕಡಿಮೆ. ವ್ಯಾಪಕ ಅಧ್ಯಯನ, ವೈಚಾರಿಕತೆ, ಅಕೆಡಮಿಕ್ ಶಿಸ್ತು, ಪರಿಶ್ರಮ - ಮುಂತಾದವುಗಳನ್ನು ಅವರ ಕೃತಿಗಳಲ್ಲಿ ಕಾಣುತ್ತೇವೆ. ವೀರಶೈವ ಸಿದ್ಧಾಂತ ಪ್ರವೇಶ, ಪಾಶ್ಚಾತ್ಯ ಕಾವ್ಯಮೀಮಾಂಸೆ, ಹರಿಹರನು ಚಿತ್ರಿಸಿದ ಶಿವಶರಣೆಯರು, ಬಸವೇಶ್ವರ, ಹರದೇಶಿ-ನಾಗೇಶಿ, ಉತ್ತರ ಕರ್ನಾಟಕದ ಗಾದೆಗಳು, ದೀಕ್ಷಾಬೋಧೆ ಮುಂತಾದ ಹನ್ನೊಂದು ಕೃತಿಗಳನ್ನು ಹೆಂಡಿಯವರು ರಚಿಸಿದ್ದಾರೆ, ಸಂಪಾದಿಸಿದ್ದಾರೆ. ಪ್ಲೇಟೋ, ಅರಿಸ್ಟಾಟಲ್, ಮುಂತಾದ ಮೀಮಾಂಸಕರ ಚಿಂತನೆಗಳನ್ನು ತಮ್ಮ 'ಪಾಶ್ಚಾತ್ಯ ಕಾವ್ಯಮೀಮಾಂಸೆ'ಯಲ್ಲಿ ತುಂಬ ಅಭ್ಯಾಸಪೂರ್ಣವಾಗಿ ವಿವೇಚಿಸಿದ್ದಾರೆ.

ಕೆರೆಯ ಪದ್ಮರಸನ 'ದೀಕ್ಷಾಬೋಧೆ'ಯನ್ನು ನಾಲ್ಕು ಹಸ್ತಪ್ರತಿಗಳ ಸಹಾಯದಿಂದ ವ್ಯವಸ್ಥಿತವಾಗಿ ಸಂಪಾದನೆ ಮಾಡಿದ್ದಾರೆ. ಪಾಠ ನಿರ್ಣಯಿಸುವಲ್ಲಿ ಅವರ ಜಾಣ್ಮೆ ಎದ್ದುಕಾಣುತ್ತದೆ. ವಿದ್ವತ್ಪೂರ್ಣವಾದ ಪ್ರಸ್ತಾವನೆ ಹೆಂಡಿಯವರ ಅಧ್ಯಯನಕ್ಕೆ ಸಾಕ್ಷಿಯಾಗಿದೆ. ಹೆಂಡಿಯವರ ಮತ್ತೊಂದು ಪ್ರೀತಿಯ ಕ್ಷೇತ್ರ ಜಾನಪದ. ಹಳ್ಳಿಯಲ್ಲಿ ನಡೆಯುವ ದೊಡ್ಡಾಟ, ಕುಣಿತ, ಹಾಡುಗಾರಿಕೆ, ಆಚರಣೆಗಳನ್ನು ಸ್ವತಃ ಕಂಡು ಅವುಗಳ ಬಗೆಗೆ ವಿದ್ಯಾರ್ಥಿಗಳಿಗೆ ತರಗತಿಯಲ್ಲಿ ಹೇಳುತ್ತಿದ್ದರು. ಕನ್ನಡ ಪಠ್ಯಕ್ರಮದ ಜೊತೆಗೆ ಜಾನಪದವನ್ನು ಅಳವಡಿಸಿದುದು ಅವರ ವಿಶೇಷ ಕೊಡುಗೆ.

ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ಮಾಳವಾಡ ಪ್ರಶಸ್ತಿಗಳು ಇವರಿಗೆ ಲಭಿಸಿವೆ. ೧೯೮೮ ರಲ್ಲಿ ಸ್ನೇಹಿತರು, ಸಹೋದ್ಯೋಗಿಗಳು, ವಿದ್ಯಾರ್ಥಿಗಳು 'ವಂದನೆ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿ, ಹೆಂಡಿಯವರನ್ನು ಗೌರವಿಸಿದ್ದಾರೆ. ನಿವೃತ್ತಿಯ ನಂತರ ಹೆಂಡಿಯವರು ತಮ್ಮ ಊರಾದ ನಿಡುಗುಂದಿಯಲ್ಲಿಯೇ ನೆಲೆನಿಂತು ಕೃಷಿಯಲ್ಲಿ ನಿರತರಾಗಿದ್ದರು. ೬೯ ವರ್ಷಗಳ ಕಾಲ ಬದುಕಿನ ಡಾ. ಬಿ. ಬಿ. ಹೆಂಡಿಯವರು ೨೮-೧- ೧೯೯೪ ರಂದು ನಿಧನರಾದರು.

# ಅನುಬಂಧ

## ಕನ್ನಡ ವಾರ್ಷಿಕದ ಲೇಖಕರು

ಶ್ರೀ ಜೈನುಲ್ಲಾ ಬಳ್ಳಾರಿ, ಮಾಹಿತಿಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ, ಕಾಮಲಾಪುರ - ೫೮೩ ೨೨೧.

ಡಾ. ಜೆ. ಎಸ್. ಸದಾನಂದ, ರಾಜ್ಯಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ,
ಬಿ. ಆರ್. ಪ್ರಾಜೆಕ್ಟ್ - ೫೭೭ ೫೧೫.

ಶ್ರೀ ಡಿ. ವಿ. ರಾಜಶೇಖರ, ಮುಖ್ಯ ಉಪಸಂಪಾದಕರು, 'ಪ್ರಜಾವಾಣಿ',
ಸಾಪ್ತಾಹಿಕ ಪುರವಣಿ, ಎಂ. ಜಿ. ರಸ್ತೆ, ಬೆಂಗಳೂರು - ೫೬೦ ೦೦೧.

ಶ್ರೀ ಟಿ. ಆರ್. ಚಂದ್ರಶೇಖರ, ಅರ್ಥಶಾಸ್ತ್ರ ವಿಭಾಗ, ವಿಜಯನಗರ ಕಾಲೇಜು,
ಹೊಸಪೇಟೆ - ೫೮೩ ೨೦೧.

ಪ್ರೊ. ಡಿ. ಆರ್. ಬಳೂರಗಿ, ಜವಾಹರ ನಗರ, (ಹೈಸ್ಕೂಲು ಎದುರಿಗೆ),
ರಾಯಚೂರು - ೫೮೪ ೧೦೧.

ಶ್ರೀ ರಾಘವನ್ ನಂಬಿಯಾರ್, ಉಪಸಂಪಾದಕ (ಕ್ರೀಡಾ ವಿಭಾಗ)
'ಉದಯವಾಣಿ' ಪತ್ರಿಕೆ, ಮಣಿಪಾಲ - ೫೭೬ ೧೧೯ (ದ.ಕ.)

ಶ್ರೀ ಗುಡಿಹಳ್ಳಿ ನಾಗರಾಜ, ಪ್ರಜಾವಾಣಿ ವರದಿಗಾರರು, ೨ ನೇ ತಿರುವು,
ಸಿ. ಕೆ. ಪುರ, ಚಿತ್ರದುರ್ಗ - ೫೭೭ ೫೦೧.

ಶ್ರೀ ದೊಡ್ಡಹುಲ್ಲೂರು ರುಕ್ಕೋಜಿ, ೫೩೨/೧೧೬ ನೇ ಮುಖ್ಯರಸ್ತೆ, ಶ್ರೀನಗರ,
ಬೆಂಗಳೂರು - ೫೦.

ಶ್ರೀ ಹನುಮಣ್ಣ ನಾಯಕ ದೊರೆ, ಸಂಗೀತ ಪ್ರಾಧ್ಯಾಪಕರು,
ಶರಣಬಸವೇಶ್ವರ ಕಾಲೇಜು, ಗುಲ್ಬರ್ಗಾ - ೫೮೫ ೧೦೧.

ಡಾ. ಆರ್. ಎನ್. ಶ್ರೀಲತಾ, ೫೮೦, ಪಿ ಅಂಡ್ ಸಿ ಬ್ಲಾಕ್, ಕುವೆಂಪು ನಗರ,
ಮೈಸೂರು - ೫೭೦ ೦೨೩.

ಶ್ರೀ ಜಿ. ಜಯಕುಮಾರ್, ಮುಖ್ಯಸ್ಥರು, ದೃಶ್ಯಕಲಾ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ವಿಶ್ವನಾಥ ಬದಿಕಾನ, ಸಂಶೋಧನ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.

ಶ್ರೀ ಕೇಶವನ್ ಪ್ರಸಾದ್, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಮಾಧವ ಪೆರಾಜೆ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ವಿಠಲರಾವ್ ಗಾಯಕ್ವಾಡ್, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಅಶೋಕ್ ಕುಮಾರ ರಂಜೇರೆ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಕಲವೀರ ಮನ್ವಾಚಾರ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಶಿವಾನಂದ ವಿರಕ್ತಮಠ, ಆಪ್ತಸಹಾಯಕ ಕುಲಪತಿಗಳ ಕಾರ್ಯಾಲಯ,
ಕನ್ನಡ ವಿಶ್ವವಿದ್ಯಾಲಯ - ಹಂಪಿ.

ಶ್ರೀ ಎನ್. ಮರಿಶಾಮಾಚಾರ್, ನಂ. ೮೮, ೧ ನೇ 'ಎ' ಕ್ರಾಸ್, ೭ ನೇ ಮೇನ್,
೨ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೧೧.

ಶ್ರೀ ಗಂಗಾಧರ ದೈವಜ್ಞ, ಸಂಶೋಧನ ಸಹಾಯಕರು, ಕನ್ನಡ ವಿಶ್ವವಿದ್ಯಾಲಯ,
ಹಂಪಿ.

ಶ್ರೀ ಚೆಲುವರಾಜು, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ವೀರೇಶ ಬಡಿಗೇರ, ಸಹಾಯಕ ನಿರ್ದೇಶಕರು, ಪ್ರಸಾರಾಂಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಮಂಜುನಾಥ ಬೇವಿನಕಟ್ಟಿ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ವೆಂಕಟೇಶ ಇಂದ್ವಾಡಿ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಪ್ರೇಮಕುಮಾರ, ಸಂಶೋಧನ ಸಹಾಯಕರು, ಕನ್ನಡ ವಿಶ್ವವಿದ್ಯಾಲಯ,
ಹಂಪಿ.

ಡಾ. ಎಚ್. ಎಸ್. ರಾಘವೇಂದ್ರರಾವ್, ಮುಖ್ಯಸ್ಥರು, ಕನ್ನಡ ಭಾಷೆ ಮತ್ತು
ಸಾಹಿತ್ಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಮೋಹನ್ ಕುಂಟಾರ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ. ಓ. ಎಲ್. ನಾಗಭೂಷಣಸ್ವಾಮಿ, ಮುಖ್ಯಸ್ಥರು, ಭಾಷಾಂತರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಪ್ರಕಾಶ ಗರುಡ, ಸಂಶೋಧನ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶ್ರೀ ಸುಜ್ಞಾನಮೂರ್ತಿ**, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶ್ರೀ ಬಿ. ಎಂ. ಪುಟ್ಟಯ್ಯ**, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶ್ರೀ ಅಮರೇಶ ನುಗಡೋಣಿ**, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶ್ರೀ ಧನ್ಯಕುಮಾರ ಮಿಣಜಗಿ**, ಮುಖ್ಯಗ್ರಂಥಪಾಲಕರು,
ಸಾರ್ವಜನಿಕ ಕೇಂದ್ರ ಗ್ರಂಥಾಲಯ, ಮಡಿಕೇರಿ.

**ಡಾ. ಕರೀಗೌಡ ಬೀಚನಹಳ್ಳಿ**, ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.

**ಶ್ರೀ. ಟಿ. ಎಸ್. ಸತ್ಯನಾಥ**, ಸಂದರ್ಶಕ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ,
ಹಂಪಿ.

**ಶ್ರೀ ಎಸ್. ಎಸ್. ಅಂಗಡಿ**, ಸಂಶೋಧನ ಸಹಾಯಕರು, ಕನ್ನಡ ವಿಶ್ವವಿದ್ಯಾಲಯ,
ಹಂಪಿ.

**ಶ್ರೀ. ಎ. ವಿ. ನಾವಡ**, ರೀಡರ್, ಕನ್ನಡ ವಿಶ್ವವಿದ್ಯಾಲಯ - ಹಂಪಿ.

**ಡಾ. ಪುರುಷೋತ್ತಮ ಬಿಳಿಮಲೆ**, ಮುಖ್ಯಸ್ಥರು, ಜಾನಪದ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶ್ರೀ ಮಲ್ಲೇಪುರಂ ಜಿ. ವೆಂಕಟೇಶ**, ಮುಖ್ಯಸ್ಥರು, ಭಾರತೀಯ ಮತ್ತು ವಿದೇಶೀ
ಭಾಷೆಗಳ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶ್ರೀ. ಹಿ. ಚಿ. ಬೋರಲಿಂಗಯ್ಯ**, ಮುಖ್ಯಸ್ಥರು, ಬುಡಕಟ್ಟುಗಳ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶ್ರೀ ಕೆ. ಜಿ. ವಾಸುಕಿ**, ನಿರ್ದೇಶಕರು, ಮಾಹಿತಿಕೇಂದ್ರ, ಕನ್ನಡ ವಿಶ್ವವಿದ್ಯಾಲಯ -
ಹಂಪಿ.

**ಶ್ರೀಮತಿ ಸಿ. ಎಚ್. ಭಾಗ್ಯ**, ನಂ. ೫೨, ''ಆಶ್ರಮ'', ೪ ನೇ ಅಡ್ಡರಸ್ತೆ;
ಶ್ರೀರಾಮಪುರಂ, ಬೆಂಗಳೂರು -೨೧

**ಶ್ರೀ ಸಿ. ಆರ್. ಗೋವಿಂದರಾಜು**, ಸಂಶೋಧನ ವಿದ್ಯಾರ್ಥಿ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಸುಬ್ಬಣ್ಣ ರೈ ಏವುಂಜೆ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಎಚ್. ಎಸ್. ಶ್ರೀಮತಿ, ಮುಖ್ಯಸ್ಥರು, ಸಂಕಲನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀಮತಿ ಲಕ್ಷ್ಮೀದೇವಿ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಸಿ. ಮಹದೇವ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಎಫ್. ಟಿ. ಹಳ್ಳಿಕೇರಿ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಮಲ್ಲಿಕಾರ್ಜುನ ವಣೇನೂರು, ಸಂಶೋಧನ ವಿದ್ಯಾರ್ಥಿ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀ ಸ. ಚಿ. ರಮೇಶ, ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ರಹಮತ್ ತರೀಕೆರೆ, ರೀಡರ್, ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕನ್ನಡ ವಾರ್ಷಿಕ' ಕರ್ನಾಟಕದ ಆಯಾಯಾ ವರ್ಷದ ಸಾಂಸ್ಕೃತಿಕ ಅಭಿವ್ಯಕ್ತಿ ಹಾಗೂ ಸಾಧನೆಗಳನ್ನು ಕುರಿತ ಸಮೀಕ್ಷೆ. ಇದು ಕೇವಲ ಮಾಹಿತಿಗಳ ವಿವರ ಮಾತ್ರವಾಗದೆ, ಸಾಂಸ್ಕೃತಿಕ ಮೌಲ್ಯಗ್ರಹಿಕೆ ಹಾಗೂ ಸಮೀಕ್ಷೆಗಳನ್ನು ಒಳಗೊಂಡಿರುವುದರಿಂದ ವಿಶಿಷ್ಟ ಮೂಲಕೃತಿಯೊಂದರ ಸ್ವರೂಪ ಅದಕ್ಕೆ ತಾನಾಗಿಯೇ ಪ್ರಾಪ್ತವಾಗಿದೆ. ಕರ್ನಾಟಕದ ಪ್ರಜ್ಞಾವಂತರು ಇಟ್ಟ ಹೆಜ್ಜೆಯನ್ನು, ಸಾಧಿಸಿದ ಸಾಧನೆಗಳನ್ನು ಲೋಕದಲ್ಲಿ ಸಾಂಕೇತಿಕವಾಗಿ ಗೌರವಿಸಿದಾಗ ಅವುಗಳ ಸತ್ವ ಹಾಗೂ ಅರ್ಥವನ್ನು ಹುಡುಕಿ ವಿವರಿಸುವುದು. ಜೊತೆಗೆ ಕರ್ನಾಟಕದಲ್ಲಿ ಆಯಾಯಾ ವರ್ಷ ಸಂಭವಿಸಿದ ಪ್ರಮುಖವಾದ ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳ ವಿಶ್ಲೇಷಣೆ; ವರ್ಷದಲ್ಲಿ ಅಭಿವ್ಯಕ್ತಗೊಂಡ ಕಾವ್ಯ, ನಾಟಕ, ಕತೆ, ಕಾದಂಬರಿ, ವಿಮರ್ಶೆ ಮುಂತಾದ ಸೃಜನಶೀಲ ಅಭಿವ್ಯಕ್ತಿ ಪ್ರಕಾರಗಳ ಪರಿಶೀಲನೆ; ರಾಜಕಾರಣ, ಶಿಕ್ಷಣ, ಸಂಗೀತ, ಕಲೆ, ರಂಗಭೂಮಿ, ಸಿನೆಮಾ, ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ ಮುಂತಾದ ಕ್ಷೇತ್ರಗಳಲ್ಲಿ ಆಗಿರುವ ಬೆಳವಣಿಗೆಗಳ ಸಮೀಕ್ಷೆ; ಕನ್ನಡ ನಾಡು, ನುಡಿ ಹಾಗೂ ಜನರ ಕುರಿತು ನಡೆದಿರುವ ಚರ್ಚೆ, ವಾಗ್ವಾದಗಳ ಸಮೀಕ್ಷೆ - ಹೀಗೆ ಕನ್ನಡ ಸಂಸ್ಕೃತಿಯ ವಿವಿಧ ಸ್ವರೂಪಗಳನ್ನು ಅರಿಯುವ ಪ್ರಯತ್ನ ಕನ್ನಡ ವಾರ್ಷಿಕದ ಪ್ರಧಾನ ಆಶಯವಾಗಿದೆ.

**ಚಂದ್ರಶೇಖರ ಕಂಬಾರ**
ಕುಲಪತಿಯವರು




**ಪ್ರಸಾರಾಂಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ - ೫೮೩ ೨೭೬**